# ಅಬ್ರಹಾಂ ಲಿಂಕನ್

"ಯಾರ ಮೇಲೂ ನಮಗೆ ಅಸೂಯೆ ಬೇಡ; ಎಲ್ಲರ ವಿಷಯದಲ್ಲಿಯೂ ಕನಿಕರವಿರಲಿ. ದೃಢವಾದ ಮನಸ್ಸಿನಿಂದ ನಾವು ನ್ಯಾಯಮಾರ್ಗವನ್ನು ಅನುಸರಿಸೋಣ— ನ್ಯಾಯವಾದ ಮಾರ್ಗವನ್ನು ತಿಳಿಯಲು ದೇವರು ನಮಗೆ ಬುದ್ಧಿಯನ್ನು ಕೊಟ್ಟಿದಾನೆ. ನ್ಯಾಯವಾದ ಮಾರ್ಗದಲ್ಲಿ ನಡೆದು ಹಿಡಿದ ಕೆಲಸವನ್ನು ಮುಗಿಸೋಣ....."



ಬಿ. ಚಂದ್ರಶೇಖರ ಶರ್ಮ.

## ವಿ ಜ್ಞಾ ಪ ನೆ

ಕೇವಲ ಭಾಷಾಂತರವಾದ ಈ ಗ್ರಂಥವನ್ನು ಬಹುಮಾನಪೂರ್ವಕವಾಗಿ ಪುರಸ್ಕರಿಸಿದ ವಿದ್ಯಾಭ್ಯಾಸದ ಇಲಾಖೆಯ ಅಧ್ಯಕ್ಷರಿಗೆ ಅತಿಶಯವಾಗಿ ಕೃತಜ್ಞನಾಗಿದ್ದೇನೆ.

ಈ ಪುಸ್ತಕದಲ್ಲಿ, ಕಮಿಟಿ, ಕಾಂಗ್ರೆಸ್, ಜನರಲ್ (ದಳಪತಿ), ರೈಲ್, ಟ್ರೇನು, ಜಡ್ಜಿ, ಗವರ್ನರ್, ಮೊದಲಾದ ಅನ್ಯಭಾಷೆಯ ಮಾತುಗಳನ್ನು ಅನ್ಯಭಾಷೆಯ ಮಾತುಗಳೆಂದು ಎಣಿಸದೆಯೇ ಉಪಯೋಗಿಸಿದ್ದೇನೆ. ಅದಕ್ಕೆ, ಇಂತಹ ಶಬ್ದಗಳು, ಅನೇಕ ಮುಸಲ್ಮಾನಭಾಷೆಯ ಶಬ್ದಗಳು ಮೈಸೂರ ನವಾಬರ ಕಾಲದಲ್ಲಿ ಬಳಕೆಗೆ ಬಂದು ರೂಢವಾದ ಹಾಗೆ, ನಮ್ಮ ಕಾಲದಲ್ಲಿ ರೂಢವಾಗಿರುವುದೇ ಸಮಾಧಾನ. ಇದೂ ಅಲ್ಲದೆ ಸಮಾಜದಲ್ಲಿಯೂ ರಾಜನೀತಿಯಲ್ಲಿಯೂ ಬದಲಾವಣೆಗಳು ನಡೆದು ಹೊಸದೊಂದು ಸಂಸ್ಫೂರ್ತಿಯು ಉಂಟಾಗಿಯೂ ಉಂಟಾಗುತ್ತಲೂ ಇರುವುದರಿಂದ ಈ ಶಬ್ದಗಳು ಸಹಜವೇ ಆಗುವುವು.

ಅನಿವಾರ್ಯಕಾರಣಗಳಿಂದ ಅಚ್ಚಿನಲ್ಲಿ ತಪ್ಪುಗಳು ಬಿದ್ದಿವೆ. ಅಚ್ಚಿನಲ್ಲಿ ತಪ್ಪಿದ್ದರೆ ಅನ್ನದಲ್ಲಿ ಕಲ್ಲಿದ್ದ ಹಾಗೆ. ಈ ಪುಸ್ತಕವನ್ನು ಓದುವವರು ಓದುವಾಗ ಆ ತಪ್ಪುಗಳಿಗಾಗಿ ನನ್ನನ್ನು ಮನ್ನಿಸಬೇಕೆಂದು ಪ್ರಾರ್ಥಿಸುತ್ತೇನೆ.

ಬೊಂಬಾಯಿ,
16—1—1929.

**ಬಿ. ಚಂದ್ರಶೇಖರ ಶರ್ಮ.**

I acknowledge the courtesy of Lord Charnwood and of Messrs. Constable and Company in generously permitting me to use for purposes of translation their publication, "Abraham Lincoln".

# ಮುನ್ನುಡಿ.

ಪ್ರಪಂಚದ ಇತರ ಎಲ್ಲಾ ವಿಷಯಗಳನ್ನೂ ಬಿಟ್ಟು ಲಿಂಕನ್ನನ ಚರಿತ್ರೆಯನ್ನೇಕೆ ಓದಬೇಕೆಂದಾಗಲೀ ಬರೆಯಬೇಕೆಂದಾಗಲೀ ಕೇಳಬಹುದು. ಅಂತಹ ಪ್ರಶ್ನೆಯು ಬಹಳ ಮಟ್ಟಿಗೆ ಸಂಗತವಾದುದು. ನಿಜ. ಪ್ರಪಂಚದಲ್ಲಿ ಕೋಟ್ಯಂತರ ವಿಷಯ ಗಳಿವೆ. ಅವುಗಳ ನಡುವೆ ಈ ವಿಷಯವು ಜಲರಾಶಿಯ ಮಧ್ಯದಲ್ಲಿ ಒಂದಾನೊಂದು ಜಲಬಿಂದುವಿನಂತೆ. ಲಿಂಕನ್ನನೊಬ್ಬ ಮಹಾತ್ಮನೆಂದೂ ಆತನ ಚರಿತ್ರೆಯನ್ನು ಓದಿ ನಾವು ಫಲಹೊಂದಬೇಕೆಂದೂ ಹೇಳಬಹುದು. ಆದರೆ ಮಹಾತ್ಮರ ವಿಷಯ ವನ್ನು ತಿಳಿಯುವುದಾದರೆ ನಳನಹುಷಾದಿಗಳಿಲ್ಲದಿಲ್ಲ; ರಾಮಕೃಷ್ಣಾದಿಗಳಿಲ್ಲದಿಲ್ಲ. ಅಥವಾ ಪುರಾಣಪುರುಷರಾದ ಇಂಥವರನ್ನು ಬಿಟ್ಟು ಬಿಟ್ಟರೂ ಕೂಡ ನಮಗೆ ತಿಳಿದ ಹಾಗೆ ರಜಪೂತವೀರರಿಲ್ಲದಿಲ್ಲ. ರಾಮದಾಸ ಕಬೀರದಾಸರಿಲ್ಲದಿಲ್ಲ. ವಿವೇಕಾನಂದಾ ದಿಗಳಿಲ್ಲದಿಲ್ಲ. ಅಥವಾ ಮತ್ತಾವುದಾದರೊಂದು ಗುಣದಿಂದ ಮಾಹಾತ್ಮ್ಯವನ್ನು ಪಡೆದು ನಿದರ್ಶನಸ್ವರೂಪರಾಗಿರುವ ಇತರರಿಲ್ಲದಿಲ್ಲ. ಇಷ್ಟೊಂದು ಮಂದಿಯೂ ಇಷ್ಟೊಂದು ವಿಷಯಗಳೂ ಇರುವಾಗ ಲಿಂಕನ್ನನ ಚರಿತ್ರೆಯನ್ನರಿಯಬೇಕೆಂದು ಯೋಚಿಸಲು ಕಾರಣವು ಇದ್ದೇ ಇರಬೇಕೆಂದು ತೋರುತ್ತದೆ.

ಮಹಾಪುರುಷನೊಬ್ಬನ ಚರಿತ್ರೆಯನ್ನೋದುತ್ತಿರುವಾಗ ನಮ್ಮ ಗಮನವು ಎರಡು ಅಂಶಗಳ ಮೇಲೆ ಬೀಳುವುದು. ಆ ಮಹಾಪುರುಷನ ಗುಣವೆಂದೂ ಅವನ ಜೀವಮಾನಕಾಲದಲ್ಲಿನ ಸನ್ನಿವೇಶವೆಂದೂ ಆಯೆರಡು ಅಂಶಗಳನ್ನು ಕರೆಯಬಹು ದು. ನಾವು ಬೆಳೆಯುತ್ತ ಬಂದಹಾಗೆ ನಮ್ಮ ಗುಣಗಳೂ ಬೆಳೆಯುವುವೆಂಬುದೂ ಹಳೆಯ ಗುಣಗಳು ಮಾರ್ಪಡುವುದು ಮಾತ್ರವಲ್ಲದೆ, ಮರೆಯಾಗಿ, ಹೊಸದಾದವು ತಲೆದೋರುವುವೆಂಬುದೂ ಹೊಸವಿಷಯಗಳಲ್ಲ. ಹೀಗೆ ಬದಲಾವಣೆಗಳಾಗಲು ಸನ್ನಿವೇಶವೇ ಕಾರಣ. ಕಾಲಮಹಿಮೆಯೋ ದೇಶಮಹಿಮೆಯೋ ಅಥವಾ ಮತ್ತಾವು ದೋ—ನಾವು ಯಾವುದರ ದೆಸೆಯಿಂದ ಒಬ್ಬ ಮನುಷ್ಯನ ಗುಣವಾಗಲೀ ನಡತೆ ಯಾಗಲೀ ಬದಲಾಯಿಸಿತೆಂದು ಹೇಳುವೆವೋ ಅದನ್ನು ಸನ್ನಿವೇಶವೆಂದು ಕರೆಯ ಬಹುದೆಂದು ತೋರುತ್ತದೆ. ಆ ಸನ್ನಿವೇಶದ ಮಹಿಮೆಯಿಂದಲೇ ನಹುಷನು ಅಗ ಸ್ತ್ಯನ ಮೇಲೆ ದರ್ಪವನ್ನು ತೋರಿಸಿದನು; ಪಾಂಡವರು ವನದಲ್ಲಿ ವಾಸಮಾಡಬೇಕಾ ಯಿತು; ಅಲ್ಪನು ಅರ್ಧರಾತ್ರಿಯಲ್ಲಿ ಕೊಡೆಹಿಡಿಸಿಕೊಂಡನು. ಅಥವಾ ಇನ್ನೊಬ್ಬನು ಇನ್ನೊಂದು ರೀತಿಯಲ್ಲಿ ವ್ಯವಹರಿಸಿದನು. ನಾವು ನಳನಹುಷರಷ್ಟು ದೂರವೂ ಹೋಗಬೇಕಾಗಿಲ್ಲ. ಪ್ರತಿಯೊಬ್ಬ ಮನುಷ್ಯನಲ್ಲಿಯೂ—ರಾಜನಲ್ಲಿ ಹೇಗೋ ಸಾಮಾನ್ಯ ಪ್ರಜೆಯಲ್ಲಿಯೂ ಹಾಗೆಯೇ—ಯಾವುದಾದರೊಂದು ವಿಧದ ಬದಲಾವ ಣೆಯಾಗಲು ಸನ್ನಿವೇಶವೇ ಮುಖ್ಯಕಾರಣ. ಆದರೆ ಅವನ ಗುಣದಿಂದ ಸ್ಥಿತಿಯು ಬದಲಾಯಿಸುವುದಿಲ್ಲವೆಂದಲ್ಲ. ಸ್ಥಿತಿಯು ಹೇಗೋ ಗುಣವೂ ಹಾಗೆ ನಿಮಿತ್ತವಾಗು

ತ್ತದೆ. ಆದರೆ ಅವೆರಡೂ ಪ್ರತ್ಯೇಕವಾಗಿ ಗೋಚರವಾಗುವುದಿಲ್ಲ. ಒಂದಕ್ಕೊಂದು ಹೆಣೆದುಕೊಂಡಿರುತ್ತದೆ. ಅಷ್ಟೇ ಅಲ್ಲ. ಒಂದು ಇನ್ನೊಂದರಂತೆಯೂ ಅನೇಕಾವೃತ್ತಿ ಕಾಣಿಸಿಕೊಳ್ಳುತ್ತದೆ. ಒಂದನ್ನೊಂದು ಹೊಸದಾಗಿ ನಿರ್ಮಿಸುತ್ತದೆ; ಅಥವಾ ಹೊಸದೊಂದು ರೀತಿಯಲ್ಲಿ ರೂಪಗೊಳಿಸುತ್ತದೆ. ಅದು ಹೇಗಾದರೂ ಇರಲಿ, ಯಾವನೊಬ್ಬ ಮಹಾಪುರುಷನ ಚರಿತ್ರೆಯಲ್ಲಿಯೂ ಕೂಡ ಅವೆರಡು ಅಂಶಗಳನ್ನು ನಾವು ಪತ್ತೆಮಾಡಬಹುದು. ಆದರೆ ಮುಖ್ಯವಿಷಯವೇನೆಂದರೆ, ಯಾವುದಾದರೊಂದು ಸ್ಥಿತಿಯಲ್ಲಿ ಆತನು ಹೇಗೆ ಪ್ರವರ್ತಿಸಿದನು, ಅದರಿಂದ ಸ್ಥಿತಿಯು ಹೇಗೆ ಮಾರ್ಪಟ್ಟಿತು, ಆ ಬದಲಾವಣೆಯಿಂದ ಆತನ ಗುಣದಲ್ಲಿ ಯಾವುದಾದರೂ ವ್ಯತ್ಯಾಸ ವುಂಟಾಯಿತೆ—ಎಂಬುವು. ಈ ಅಂಶವನ್ನು ಚರ್ಚಿಸುತ್ತ ಪರಿಶೀಲಿಸುತ್ತ ಹೋದರೆ ಗುಣಕ್ಕೂ ಸನ್ನಿವೇಶಕ್ಕೂ ಕೆಲವು ಸಮಯಗಳಲ್ಲಿ ಹೋಲಿಕೆಯು ಕಂಡುಬರುವುದು. ಕೆಲವು ವೇಳೆ ವಿರೋಧವು ಕಂಡುಬರುತ್ತದೆ. ಹೀಗೆ ವಿರೋಧಬಂದ ಕಾಲದಲ್ಲಿ ಒಬ್ಬಾತನು ಏನುಮಾಡಿದನು; ಏನನ್ನಾದರೂ ಮಾಡಬಲ್ಲವನಾಗಿದ್ದನೆ; ಅಥವಾ ಮಾಡಲಾರದಿದ್ದನೆ, ಅವನು ಮಾಡಿದುದು ಯುಕ್ತವಾದುದೆ, ಅಥವಾ ಅಲ್ಲವೇ? ಅಂದರೆ, ಸ್ಥಿತಿಯು ಅವನ ಕೈಯನ್ನು ಮೀರಿದ್ದಿತೆ, ಅಥವಾ ಅವನಿಗೆ ಅನುಕೂಲವಾಗಿದ್ದಿತೆ, ಎಂಬುವು ವಿಚಾರಣೀಯಾಂಶಗಳಾಗುವುವು. ಇಂಥ ಸಮಯಗಳಲ್ಲಿ ಒಬ್ಬಾತನ ಗುಣದ ಆಧಾರದಿಂದಲೂ ಅದಕ್ಕೆ ಅನುರೂಪವಾದ ಪ್ರವರ್ತನೆಯಿಂದಲೂ ಅವನು ಮಹಾತ್ಮನೇ ಅಲ್ಲವೇ ಎಂಬುದನ್ನು ನಿಷ್ಕೃಷ್ಟರೀತಿಯಿಂದ ನಿರ್ಧರಿಸಬಹುದು.

ಗುಣವು ಬೆಂಬಲವಾಗಿ ನಿಲ್ಲಲಾಗಿ ನಳನು ಮಹಾತ್ಮನೆನ್ನಿಸಿಕೊಂಡನು. ಅವನು ಕಷ್ಟವು ಒಂದರ ಮೇಲೆ ಒಂದು ಬಂದರೂ ಸಗ್ಗಲಿಲ್ಲ. ಸಹನೆಯೂ ಸ್ಥೈರ್ಯವೂ ಸಹಾಯಮಾಡಲಾಗಿ ವಿಶ್ವಾಮಿತ್ರನು ಬ್ರಹ್ಮರ್ಷಿಯಾದನು; ಭಗೀರಥನು ಕೊನೆಯಲ್ಲಿ ಸಫಲಪ್ರಯತ್ನನಾದನು. ಈ ಸನ್ನಿವೇಶಗಳಲ್ಲಿ ಆಯಾ ಪುರುಷನು ಅದದನ್ನು ಜಯಿಸಿ ವಶವರ್ತಿಯಾಗುವಂತೆ ಮಾಡಿಕೊಂಡನೆನ್ನಬಹುದು. ನಹುಷನು ಅದನ್ನು ಜಯಿಸಲಾರದೇ ಹೋದನು. ತನ್ನ ಐಶ್ವರ್ಯದಿಂದಲೂ ಪದವಿಯಿಂದಲೂ ಮರುಳಾಗಿ ಹೆಮ್ಮೆಗೊಂಡನು. ಅದಕ್ಕೆ ತಕ್ಕ ಫಲವನ್ನು ಅನುಭವಿಸಲೇ ಬೇಕಾಯಿತು. ನಳನನ್ನಾಗಲೀ ವಿಶ್ವಾಮಿತ್ರನನ್ನಾಗಲೀ ಭಗೀರಥನನ್ನಾಗಲೀ ಮಹಾತ್ಮನೆಂದು ಕರೆಯದಿರುವವರು ಯಾರು; ನಹುಷನನ್ನು ಮಹಾತ್ಮನೆಂದು ಕರೆಯುವವರು ಯಾರು?

ಹೀಗೆ ನಾವು ಗುಣವನ್ನು ಮುಖ್ಯವಾಗಿಟ್ಟುಕೊಂಡರೆ, ಇವನು ನಮ್ಮ ಕಾಲದವನು, ಇವನು ಹಿಂದಿನಕಾಲದವನು, ಎಂಬ ವಿಚಾರಗಳು ತೀರ ಅಪ್ರಕೃತವಾಗುತ್ತವೆ. ಭವಭೂತಿಯು ಹೇಳಿರುವಂತೆ "ಗುಣಾಃ ಪೂಜಾಸ್ಥಾನಂ" ಎಂಬ ಅಭಿಪ್ರಾಯವೇ ಸ್ಥಿರವಾಗಿ ನಿಲ್ಲುವುದು. ನಳನು ಪುರಾಣಪುರುಷನಾದರೇನು, ನಮ್ಮ ಮುತ್ತಾತನಾದರೇನು, ಚಕ್ರವರ್ತಿಯಾದರೇನು, ನಮ್ಮ ಚಿಕ್ಕಪ್ಪನ ಮಗನಾದರೇನು, ನಮಗೆ ಬೇಕಾಗಿರುವುದು ನಳನೆಂಬ ಮನುಷ್ಯನ ಗುಣ. ಅವನು ಪಟ್ಟ ಕಷ್ಟದಲ್ಲಿ

ಅವನು ಚಕ್ರವರ್ತಿಯೆಂಬುದು ಮರೆತುಹೋಗುವುದು. ಅದೇ ರೀತಿಯಲ್ಲಿ ಆ ವನವಾಸಕಾಲದಲ್ಲಿ ರಾಮನು ಸೂರ್ಯವಂಶಸಂಭೂತನೆಂಬುದೂ ಮರೆತು ಹೋಗುವುದು. ನಮ್ಮ ಮನಸ್ಸಿನಲ್ಲಿ ಬೇರೂರಿ ನಿಲ್ಲುವುದು ಒಂದೇ ಒಂದು ವಿಚಾರ—ಒಬ್ಬಾತನ ಸದ್ಗುಣ ಅಥವಾ ಸಚ್ಚರಿತ್ರೆ. ಇತರ ವಿಚಾರಗಳು ಅಪ್ರಕೃತತ್ವದ ದೆಸೆಯಿಂದ ಇದ್ದರೂ ಇಲ್ಲದಂತಾಗುತ್ತವೆ. ಅದೇ ಪ್ರಕಾರದಲ್ಲಿ, ಲಿಂಕನ್ನನ ಚರಿತ್ರೆಯನ್ನು ಓದುವಾಗ ಅವನು ಹಿಂದಿನ ಶತಮಾನದಲ್ಲಿ ಬದುಕಿದ್ದನೆಂಬುದೂ ಅಮೆರಿಕದವನೆಂಬುದೂ ಮನಸ್ಸಿಗೆ ಹೆಚ್ಚಾಗಿ ಹತ್ತುವುದಿಲ್ಲ. ಆ ಸಮಯದಲ್ಲಿ ಹೆಸರೂ ಜಾತಿಯೂ ಕುಲಗೋತ್ರಗಳೂ ಇತರ ಅಂಶಗಳೂ ಅಮುಖ್ಯವಾಗುವುವು. ನಮ್ಮ ಅಂತಃಕರಣವು ಹಂಸಕ್ಷೀರನ್ಯಾಯದಿಂದ ಪ್ರವರ್ತಿಸುವುದು.

ಮಹಾತ್ಮರ ಚರಿತ್ರೆಯನ್ನೋದುವಾಗ ಯಾವ ಯಾವ ವಿಚಾರಗಳು ಪ್ರಮುಖವಾಗುವುವೆಂದೂ ಯಾವುವು ಹಿಂದೆ ಬೀಳುವುವೆಂದೂ ಮೇಲೆ ಹೇಳಿದು ದಾಯಿತು. ಈ ಸಂದರ್ಭದಲ್ಲಿ ಒಂದು ಮಾತನ್ನು ಕೇಳಬಹುದು. ನಳನೇ ಆಗಲಿ ಶಿಬಿಯೇ ಆಗಲಿ, ರಾಮನೇ ಆಗಲಿ, ಅಥವಾ ಮತ್ತೊಂದು ಕಾಲದಲ್ಲಿ ಜೀವಿಸಿದ್ದ ಮತ್ತೊಬ್ಬ "ಮಹಾತ್ಮ"ನೇ ಆಗಲಿ, ಅಂಥ ಮನುಷ್ಯರ ಚರಿತ್ರೆಯನ್ನು ಏತಕ್ಕೋಸ್ಕರ ಓದಬೇಕು, ಹಾಗೆ ಓದುವುದರಿಂದ ನಮಗೆ ಬರುವ ಲಾಭವಾದರೂ ಏನು? ಪ್ರಶ್ನೆಯು ಪ್ರಸಕ್ತವಾದುದೇ. ನಾವು ಯಾವಜ್ಜೀವವೂ ವಿದ್ಯಾ-ಅರ್ಥಿಗಳೆಂದು ಒಬ್ಬ ಪ್ರಸಿದ್ಧ ಲೇಖಕನು ಹೇಳಿದ್ದಾನೆ. ಆ ಮಾತು ಸಾಮಾನ್ಯವಾಗಿ ಕಾಣಬಹುದು. ಈ ಅಭಿಪ್ರಾಯವು ಸ್ವಲ್ಪವೂ ಹೊಸದಲ್ಲವೆಂದು ಬರೆಯುಬಹುದು. ಆದರೆ ವಸ್ತುತಃ ನಾವು ಸದಾ ವಿದ್ಯಾ-ಅರ್ಥಿಗಳೆಂಬುದು ಸ್ವಲ್ಪವೂ ಸುಳ್ಳಲ್ಲ. ಕಂಡಹಾಗೆ ಅಂದರೆ ಪ್ರಯತ್ನಪೂರ್ವಕವಾಗಿ ಹೊಸಹೊಸ ವಿಷಯಗಳನ್ನು ತಿಳಿದುಕೊಳ್ಳುತ್ತಿರುತ್ತೇವೆ. ಚರ್ಚೆ, ವಿಚಾರ, ಅಧ್ಯವಸಾಯ—ಮೊದಲಾದ ರೀತಿಯಲ್ಲಿ ಗೊತ್ತಿಲ್ಲದಿದ್ದವುಗಳನ್ನು ಗೊತ್ತುಮಾಡಿಕೊಳ್ಳುತ್ತಿರುತ್ತೇವೆ. ಸ್ವಲ್ಪ ಗೊತ್ತುಮಾಡಿಕೊಂಡವುಗಳನ್ನು ಇನ್ನೂ ಚೆನ್ನಾಗಿ ಪರಿಶೀಲಿಸಿ ಮುಂದಟ್ಟುಮಾಡಿಕೊಳ್ಳುತ್ತೇವೆ. ಈ ವಿಧವಾದ ಅಭ್ಯಾಸವು ಗ್ರಂಥಗಳ ಸಹಾಯದಿಂದ ಹೇಗೋ ಹಾಗೆ ಅವುಗಳ ಸಹಾಯವಿಲ್ಲದೆಯೂ ಜರುಗುತ್ತಿರುತ್ತದೆ. ವಿದ್ಯಾರ್ಥಿಯೆಂದರೆ ಪುಸ್ತಕಗಳನ್ನು ಓದುವವನೆಂಬುದು ಮಾತ್ರ ಅರ್ಥವಾಗಬೇಕಾಗಿಲ್ಲ. ಕಂಡಹಾಗೆ ಮಾಡುವಂತೆಯೇ ಕಾಣದ ಹಾಗೂ ಅಂದರೆ ಪ್ರಯತ್ನವಿಲ್ಲದೆಯೂ ಕೂಡ ಅಭ್ಯಾಸಮಾಡುತ್ತಿರುತ್ತೇವೆ. ಜ್ಞಾನಾರ್ಜನೆಗೆ ಇದೇ ಕಾಲವೆಂದೂ ಇದೇ ಮಾರ್ಗವೆಂದೂ ನಿಯಮವಿಲ್ಲ. ಹೊಟ್ಟೆಯೆಂಬುದು ಎಂದಿಗೂ ತುಂಬದ ಒಂದು ವಸ್ತುವೆಂದು ಎಲ್ಲರೂ ಹೇಳುವಹಾಗೆ ನಮ್ಮ ಚಿತ್ತವೂ ಕೂಡ ಹೊಟ್ಟೆತುಂಬಿ ತೃಪ್ತಿಹೊಂದದ ಒಂದು ಪದಾರ್ಥ. ಅದರ ಹಸಿವು ಅಡಗಿದುದನ್ನು ಬಲ್ಲವರಾರು? ಅದೊಂದು ಬಡಬಾಗ್ನಿ. ಪ್ರಾಯಶಃ ಎಲ್ಲವನ್ನೂ ತಿಳಿದ ಆ ಭಗವಂತನಲ್ಲಿ ಅದು ಕಾಣದಿರಬಹುದು. ಆದರೆ ಮರ್ತ್ಯರಲ್ಲಿ ಮಾತ್ರ ಆ ಹಸಿವು ಅಡಗಿಲ್ಲ.

ಈ ಜ್ಞಾನಾರ್ಜನೆಯನ್ನು ನಾವು ಜ್ಞಾನಾರ್ಜನೆಯೆಂದು ಕರೆಯಬಹುದು,

ಅಥವಾ "ಲೋಕಸಂಗ್ರಹ" ವೆಂದೂ ಕರೆಯುಬಹುದು. ನಮ್ಮ ಯಾವು ದೊಂದು ವ್ಯವಹಾರಕ್ಕೂ ಅನುಭವವು ಆಗತ್ಯವಾದುದರಿಂದ ಅದನ್ನು ನಾನಾವಿಧ ದಲ್ಲಿ ಶೇಖರಿಸುತ್ತೇವೆ. "ಕೆಲವಂ ಬಲ್ಲವರಿಂದೆ" ಕಲಿಯುವೆವು. "ಕೆಲವಂ ಶಾಸ್ತ್ರಂಗಳಿಂದೆ" ಪರಿಚಿತವನ್ನಾಗಿ ಮಾಡಿಕೊಳ್ಳುವೆವು. ಆದರೆ ಇವೆಲ್ಲವೂ ಸ್ವಲ್ಪ ಹೆಚ್ಚು ಕಡಿಮೆ ಪರೋಕ್ಷವಾದ ಮಾರ್ಗಗಳು. ಪ್ರತ್ಯಕ್ಷವಾದ ಅತ್ಯುತ್ತಮಫಲ ದಾಯಕವಾದ ಮತ್ತೊಂದು ಮಾರ್ಗವಿರುವುದು—ಶ್ರೇಷ್ಠರಾದ ಜನರನ್ನು ನೋಡಿ ನಮ್ಮನ್ನು ನಾವು ತಿದ್ದಿಕೊಳ್ಳುವುದು. ಅಂಥ ಜನರು ನಮ್ಮ ಕಣ್ಣೆದುರಿಗೆ ಸಿಲ್ಲುವ ನಿದರ್ಶನಗಳಾಗುವರು. ಮನುಷ್ಯನು ಹೀಗೆ ಹಾಗೆ ಇರಬೇಕೆಂದೂ ಹೀಗೆ ಹಾಗೆ ಮಾಡಬೇಕೆಂದೂ ವಿಧಿಯನ್ನು ಕುರಿತು ಸಾವಿರಾರು ಪುಟಗಳನ್ನು ವಿಶರಿಸಿ ಬರೆದಿರುವ ಗ್ರಂಥಗಳನ್ನು ಓದಬಹುದು. ಶ್ರುತಿಸ್ಮೃತಿಗಳನ್ನು ಸಾವಿರಗಟ್ಟಲೆಯಾಗಿ ಓದಬಹು ದು. ಮನುಸ್ಮೃತಿಯನ್ನೂ ಯಾಜ್ಞವಲ್ಕ್ಯಸ್ಮೃತಿಯನ್ನೂ ಬಾಯಿಪಾಠ ಮಾಡ ಬಹುದು. ಆದರೆ ಫಲವು ಪಠನವು ಮಾತ್ರವೇ ಆದೀತು. ಬದುಕಿಬಾಳಿದ ಮಹಾತ್ಮರ ದೆಸೆಯಿಂದ ನಾವು ಕಲಿಯುವಷ್ಟನ್ನು ಗ್ರಂಥಪಠನದಿಂದ ಪ್ರಾಯಶಃ ಕಲಿಯಲಾರೆ ವು ಏಕೆಂದರೆ ಪಠನದಿಂದ ಒಂದು ಭಾಗವು ಮಾತ್ರ ಲಭ್ಯವಾದೀತು—ಶಾಸ್ತ್ರಭಾಗ. ಆದರೆ ಆಚರಣೆಯ ಭಾಗವು ಶಾಸ್ತ್ರವನ್ನು ಆಚರಣೆಗೆ ತರುವುದರ ಮೂಲಕವೇ ಅರ್ಥ ವಾಗಬೇಕು. ಅವೆರಡೂ ಬೆರೆಯಬೇಕು. ಜ್ಞಾನಕಾಂಡ ಕರ್ಮಕಾಂಡಗಳಿಗಿರುವ ಅನುಬಂಧವನ್ನೂ ಅವೆರಡನ್ನೂ ತಿಳಿಯಬೇಕೆಂದು ನಮ್ಮ ಪೂರ್ವಿಕರು ಒತ್ತಿ ಒತ್ತಿ ಹೇಳುತ್ತಿದ್ದುದನ್ನೂ ಜ್ಞಾಪಿಸಿಕೊಂಡರೆ ಸಾಕಾಗಿದೆ. ಮಹಾತ್ಮರು ಅವರ ಯಾವ ಅದೃಷ್ಟದ ಬಲದಿಂದಲೋ ಏನೋ ಶಾಸ್ತ್ರವನ್ನು ಆಚರಣೆಯನ್ನಾಗಿಯೂ ಆಚರಣೆ ಯನ್ನು ಶಾಸ್ತ್ರವನ್ನಾಗಿಯೂ ಮಾಡಿಕೊಂಡಿರುತ್ತಾರೆ. ಒಂದು ವಿಷಯವು ಕಂಠಸ್ಥ ವಾದ ಮಾತ್ರಕ್ಕೆ ಹೃದಯಸ್ಥ (ಅಂದರೆ ಅರ್ಥ) ವಾಯಿತೆಂದು ಎಂದಿಗೂ ಹೇಳ ಲಾಗುವುದಿಲ್ಲ. ಹಾಗೆ ಅದು ಮನಸ್ಸಿಗೆ ಅಂಟಲು ನಾವು ಕೆಲವುವೇಳೆ ಮಹಾಪುರುಷರು ಮಾಡಿದುದನ್ನು ನೋಡಬೇಕಾಗುತ್ತದೆ. ಶಾಸ್ತ್ರದ ಮೂಲಕ ಸ್ವಾರ್ಥತ್ಯಾಗವು ಶ್ರೇಯಸ್ಕರವಾದ ಗುಣವೆಂಬುದನ್ನು ಕಲಿತರೆ ಸಾಲದು. ನಮ್ಮ ಪ್ರಯತ್ನವು ಶಾಸ್ತ್ರ ಪರಿಚಯದಲ್ಲಿ ಮಾತ್ರ ಪರ್ಯವಸಿತವಾದರೆ ನಾವು ಕಲಿತುದನ್ನು ಇತರರಿಗೆ ಹೇಳಲು ಸಮರ್ಥರಾಗಬಹುದು. ಆದರೆ ಸ್ವಂತ ಅನುಷ್ಠಾನದಲ್ಲಿ ಅದು ನಿಷ್ಪ್ರಯೋಜಕ ವಾದೀತು. ಇತರರಿಗೆ ಹೇಳಿ ಸುಮ್ಮನಿರುವುದಕ್ಕೂ ಅದನ್ನು ನಾವೇ ಮಾಡುವು ದಕ್ಕೂ ಎಷ್ಟೋ ವ್ಯತ್ಯಾಸ. ಪ್ರತಿಯೊಬ್ಬನೂ ತ್ಯಾಗಬುದ್ಧಿಯಿಂದ ದಾನಧರ್ಮಾ ದಿಗಳನ್ನು ಮಾಡಬೇಕೆಂದು ಪುರೋಹಿತನು ಇತರರಿಗೆ ಹೇಳಬಹುದು. ಆದರೆ ಇತರರು ಗೋದಾನ ಭೂದಾನಗಳನ್ನು ತನಗೇ ಕೊಡಲೆಂದು ಮನಸ್ಸಿನಲ್ಲಿ ಹಾರೈ ಸುತ್ತಿರುತ್ತಾನೆ. ಸ್ವಾರ್ಥತ್ಯಾಗದ ಗೂಢಾರ್ಥವನ್ನು ಶಿಬಿಚಕ್ರವರ್ತಿಯಂತಹ ಮಹಾತ್ಮರ ಮೂಲಕವೇ ತಿಳಿಯಬೇಕಾಗುವುದು. ಮಹಾಪುರುಷರ ಚರಿತ್ರೆಯ ಸಾರ ವೇ ಇದು. ಅವರು ಶ್ರೇಷ್ಠವಾದ ಒಂದೊಂದು ಗುಣಕ್ಕೆ ಒಬ್ಬೊಬ್ಬರು ನಿದರ್ಶನ ಸ್ವರೂಪರಾಗಿದ್ದಾರೆ. ಆಯಾಗುಣವು ಅವರವರ ಮೂಲಕ ಬಾಹ್ಯರೂಪವನ್ನು

ತಳೆದು ಪ್ರತ್ಯಕ್ಷನಾಗುವುದೆಂತಲೂ ಹೇಳಬಹುದು. ಮೂರ್ತಿಪೂಜೆಗೂ ಪರಮ ತತ್ವಕ್ಕೂ ಇರುವ ಸಂಬಂಧವನ್ನು ವಿವರಿಸುತ್ತ ಶಂಕರಾಚಾರ್ಯರು ವರ್ಣನಾತೀತ ನಾಗಿ ಅತಿಗೂಢನಾದ ಪರಮಾತ್ಮನನ್ನು ಮನಸ್ಸಿನಲ್ಲಿ ನೆಲೆಯಾಗಿ ನಿಲ್ಲಿಸಿ ಧ್ಯಾನಾ ರ್ಹನನ್ನಾಗಿ ಮಾಡಿಕೊಳ್ಳುವುದಕ್ಕಾಗಿಯೇ ಜನರು ದೇವದೇವನನ್ನು ಮೂರ್ತನ ನ್ನಾಗಿ ಮಾಡಿಕೊಳ್ಳುತ್ತಾರೆಂದೂ, ಈರೀತಿಯಾಗಿ ಇಂದ್ರಿಯಗಳಿಗೆ ಗೋಚರನನ್ನಾಗಿ ಕಲ್ಪಿಸಿ ಆ ಮೂಲಕ ಆರಾಧನೆಮಾಡುವರೆಂದೂ ಹೇಳಿದ್ದಾರೆ. ಅದೇ ಪ್ರಕಾರದಲ್ಲಿ ಜನಜೀವನದಲ್ಲಿ ಮಹಾತ್ಮರು ಶ್ರೇಷ್ಠಗುಣಗಳ ಮೂರ್ತಿಮಾತ್ರ. ಕಣ್ಣೆದುರಿಗೆ ಕಾಣುವ ಶ್ರೇಷ್ಠರು ಕಾಣಲಾಗದಿರುವ ಗುಣಗಳ ಪರೋಕ್ಷಪ್ರಕಾಶ. ಅವರ ಮೂಲಕ ಆ ಗುಣಗಳ ಪ್ರಶಂಸೆಯಿಂದ ನಮ್ಮ ಹ್ರಸ್ವತೆಯನ್ನು ನಾವು ತಿಳಿದು ಅದನ್ನು ಹೋಗಲಾಡಿಸಿಕೊಳ್ಳಬೇಕು. ಹೀಗೆ ನಮ್ಮನ್ನು ನಾವು ತಿದ್ದಿಕೊಂಡು ನಿನ್ನೆಗಿಂತ ಈ ದಿನವೂ ಈ ದಿನಕ್ಕಿಂತ ನಾಳೆಯೂ ಉತ್ತಮರಾಗಬೇಕು. ಈ ಪ್ರಯತ್ನ ದಿಂದಲೇ ನಮಗೆ ಗೌರವ. ನಮ್ಮಲ್ಲಿ ಆತ್ಮವೆಂಬ ಶ್ರೇಷ್ಠವಾದೊಂದು ವಸ್ತುವಿದೆ ಯೆಂದೂ ಆ ಆತ್ಮವು ಜಗತ್ಕರ್ತನಾದ ಪರಮಾತ್ಮನ ಅಂಶವೆಂದೂ ಆ ಪರಮಾತ್ಮ ನೇ ಹೀಗೆ ಜೀವಾತ್ಮನೆನ್ನಿಸಿಕೊಳ್ಳುವನೆಂದೂ ನಮ್ಮ ಹಿಂದಿನ ಶಾಸ್ತ್ರಗಳೂ ದರ್ಶನ ಗಳೂ ಉದ್ಘೋಷಿಸುತ್ತವೆ. ಆದರೆ ನಮಗೆ ಈ ಅಂಶವು ಪ್ರಾರಂಭದಲ್ಲಿ ಗೊತ್ತಿರುವು ದಿಲ್ಲ. ಯಾವುದೋ ವಿಜಾತೀಯವಾದೊಂದು ಕತ್ತಲೆಯು ನಮ್ಮ ಮನಸ್ಸಿನಲ್ಲಿ ಆವ ರಿಸಿ ಮಂಕನ್ನುಂಟುಮಾಡಿರುವುದೆಂದು ಹೇಳುತ್ತಾರೆ. ಆ ಅಜ್ಞಾನವೆಂಬ ಕತ್ತಲೆ ಯು ಜ್ಞಾನವೆಂಬ ಬೆಳಕಿನಿಂದ ಪರಿಹೃತವಾಗಬೇಕೆಂತಲೂ ಹೇಳುತ್ತಾರೆ. ಈ ಮಾತಿನ ತಾತ್ಪರ್ಯವು ಇಷ್ಟು—ಜ್ಞಾನವನ್ನು ಸಂಪಾದಿಸಿ ಆತ್ಮಗೌರವವನ್ನು ಪಡೆಯಬೇಕು. ಈ ತಾತ್ಪರ್ಯವನ್ನು ಮತ್ತೊಂದು ವಿಧವಾಗಿಯೂ ವರ್ಣಿಸ ಬಹುದು. ಜ್ಞಾನಾರ್ಜನೆಯ ದೆಸೆಯಿಂದ ಅಂತಸ್ಸಾರವನ್ನು ಪುಷ್ಟಿಗೊಳಿಸಿ ಸ್ವರೂಪ ಪರಿಪೂರ್ಣತೆಯನ್ನು ಪಡೆಯಬೇಕು. ಲೋಕದಲ್ಲಿ ಮಹಾಪುರುಷರೆನ್ನಿಸಿಕೊಂಡವರು ಈ ತತ್ವವನ್ನು ತಿಳಿದವರು. ಅವರು ತಮ್ಮಲ್ಲಿ ಆತ್ಮವೆಂಬ ವಸ್ತುವಿಶೇಷವು ಇದೆ ಯೆಂಬುದನ್ನು ನಿರ್ಧರಮಾಡಿಕೊಂಡಿರುತ್ತಾರೆ. ನಿರ್ಮಲವಾದ ಆ ವಸ್ತುವಿಗೆ ಕಳಂಕವು ಅಂಟದಹಾಗೆ ನೋಡಿಕೊಳ್ಳುವುದು ಅವರ ಜೀವಮಂತ್ರವಾಗುವುದು. ಅಲ್ಲದೆ ಅದು ಪೂರ್ಣಾವತಾರವನ್ನು ಪಡೆಯಲು ಪ್ರಯತ್ನಮಾಡುವುದಕ್ಕಿಂತ ಬೇರೆಯಾದ ಕೆಲಸವು ಅವರಿಗಿಲ್ಲ. ಅಂಥವರ ಚರಿತ್ರೆಯನ್ನು ಓದುತ್ತ ಓದುತ್ತ ನಮಗೆ ಬುದ್ಧಿಯು ಪರಿಶುದ್ಧವಾಗುವುದು. ಇದನ್ನೇ ನಮ್ಮ ಹಿರಿಯರು ಚಿತ್ತ ಶುದ್ಧಿಯೆಂದು ಕರೆಯುತ್ತಾರೆ. ಪರಬ್ರಹ್ಮನಲ್ಲಿ ಮನಸ್ಸನ್ನು ನಿಲ್ಲಿಸಿ ಬಾಹ್ಯಪ್ರಪಂಚದ ಮೇಲಿನ ದೃಷ್ಟಿಯನ್ನು ತೊರೆಯಬೇಕೆಂಬ ಯೋಗಶಾಸ್ತ್ರದ ಮುಖ್ಯತತ್ವದ ಅರ್ಥವೂ ಇದೇ. ಮಹಾತ್ಮರ ಚರಿತ್ರೆಯನ್ನು ಓದುತ್ತ ಓದುತ್ತ ನಮಗೆ ನಾವೂ ಅವರಂತೆಯೇ ಇರಬೇಕೆಂಬ ಅಪೇಕ್ಷೆಯುಂಟಾಗುವುದು. ಒಬ್ಬೊಬ್ಬ ಮಹಾತ್ಮನು ಒಂದೊಂದು ದೊಡ್ಡ ಗುಣಕ್ಕಾಗಿ ನಮಗೆ ಧ್ಯೇಯವಸ್ತುವಾಗುವನು. ಇದೇ ನಮ್ಮ ಅಭ್ಯಾಸದ ಅತ್ಯುತ್ತಮಫಲ. ದುಂಬಿಯಂತೆ ನಮ್ಮ ಬುದ್ಧಿಯು ನಾನಾವಿಷಯ

ಗಳನ್ನು ಬಳಕೆಗೆ ತಂದುಕೊಂಡು ಅವುಗಳ ಸಾರವನ್ನು ಸಂಗ್ರಹಿಸುವುದು—ಸಂಗ್ರಹಿಸಿ ನಮ್ಮ ಆತ್ಮವನ್ನು ಮಧುವಂತೆ ಮಧುರವನ್ನಾಗಿ ಮಾಡುವುದು. ಇದೇ ನಾವು ಪಡೆಯುವ ಅನುಭವ. ಅನುಭವವೂ ಅನುಕರಣವೂ ಜೋಡಿ. ಮಹಾತ್ಮರಂತೆ ನಾವೂ ಆಚರಿಸಲು ಪ್ರಯತ್ನಿಸುತ್ತೇವೆ; ಮಹಾತ್ಮರಂತೆ ಜೀವಿಸಲೂ ಪ್ರಯತ್ನಿಸುತ್ತೇವೆ—

"ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥"

ಭಗವದ್ಗೀತಾ, ಅ. ಮೂರು, ಶ್ಲೋಕ 21.

ಈ ಅನುವರ್ತನವು ತುಚ್ಛವಾದುದಲ್ಲ. ಕೇವಲ ಕೃತಕವಾದ ಅಭಿನಯವಲ್ಲ. ಸ್ವಪ್ರಯೋಜನವು ಮುಖ್ಯವಾದ ಉದ್ದೇಶ. ಸ್ವಪ್ರಯೋಜನವೆಂಬುದಕ್ಕೆ ದ್ರವ್ಯಲಾಭವೆಂದರ್ಥವಲ್ಲ, ಆತ್ಮೋತ್ಕರ್ಷವೆಂಬುದು ನ್ಯಾಯವಾದ ಅರ್ಥ. ಕಾರ್ಲೈಲ್ ಎಂಬಾತನು ಹೇಳಿರುವ ವೀರಪೂಜೆಯ ಪ್ರಯೋಜನವು ಇದಲ್ಲದೆ ಮತ್ತೊಂದಲ್ಲ. ಆತ್ಮೋತ್ಕರ್ಷಕ್ಕಾಗಿ ಮಾಡುವ ಅನುಕರಣವು ವ್ಯರ್ಥವಾದುದಲ್ಲ. ಆತ್ಮೋತ್ಕರ್ಷಕ್ಕಾಗಿ ನಾವು ನಮ್ಮಲ್ಲಿ ಹುಟ್ಟುತಾಬಂದ ಅನುಕರಣಶಕ್ತಿಯನ್ನು ವಿನಿಯೋಗಿಸುವುದಕ್ಕಿಂತ ಹೆಚ್ಚಿನ ಸದ್ವಿನಿಯೋಗವು ಮತ್ತೊಂದಿಲ್ಲ. ಮಹಾತ್ಮರ ಚರಿತ್ರೆಯನ್ನು ತಿಳಿದು ಅನುವರ್ತಿಸುವುದರಿಂದ ದೊಡ್ಡ ಗುಣವನ್ನು ಕಲಿಯುವೆವು. ಮನಸ್ಸು ಪರಿಪಕ್ವವಾಗುವುದು. ಹೃದಯವು ಸಾರ್ದ್ರವಾಗಿ ಎಲ್ಲರಲ್ಲಿಯೂ ಭ್ರಾತೃಭಾವವುಂಟಾಗುವುದು. ಅದರಿಂದಲೇ ನಮಗೆ ಅಜ್ಞಾನನಿವೃತ್ತಿ, ಅನುಭೂತಿಪ್ರಾಪ್ತಿ.

ನಾವು ಮೇಲೆ ಹೇಳಿರುವ ಮಾತುಗಳಿಂದ ಲಿಂಕನ್ನನೊಬ್ಬ ಶ್ರೇಷ್ಠಪುರುಷನೆಂದೂ ಮಹಾತ್ಮನೆಂದೂ ಸೂಚಿಸಿದ ಹಾಗಾಯಿತು. ಅವನ ಮಹತ್ವವೆಂಥದೆಂದು ಕೇಳಬಹುದು. ಅವನ ಚರಿತ್ರೆಯನ್ನು ಓದುವುದರಿಂದ ನಮಗೆ ಬರುವ ಲಾಭವೇನು; ಲಿಂಕನ್ನನು ತನ್ನ ಜೀವಮಾನದಲ್ಲಿ ಯಾವ ಮಹಾಕಾರ್ಯವನ್ನು ಸಾಧಿಸಿದನು; ಅವನ ಗುಣಗಳೆಂಥವು; ಅವುಗಳ ಆಶ್ರಯದಿಂದ ಸನ್ನಿವೇಶವೈಚಿತ್ರ್ಯವನ್ನು ಹೇಗೆ ಮಾರ್ಪಡಿಸಿ ಹದಕ್ಕೆ ತಂದನು—ಅದರಿಂದ ಇತರರಿಗೆ ಯಾವವಿಧವಾದ ಉಪಕಾರವು ಎಷ್ಟರಮಟ್ಟಿಗೆ ಲಭಿಸಿತು—ಎಂಬ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರವು ದೊರೆತ ಪಕ್ಷದಲ್ಲಿ ಆತನ ಮಾಹಾತ್ಮ್ಯವನ್ನು ಪ್ರತಿಪಾದಿಸಿದಂತಾದೀತು.

ಲಿಂಕನ್ನನ ಚರಿತ್ರೆಯನ್ನೋದುತ್ತಿರಲಾಗಿ ಆತ್ಮನಿಷ್ಠೆಯಿಂದ ಜಗತ್ತನ್ನು ಜಯಿಸಬಹುದೆಂಬುದು ಅವನ ಚರಿತ್ರೆಯ ಸಾರಭೂತವಾದ ಅಂಶವಾಗಿ ತೋರುವುದು. "God helps those who help themselves" ಎಂಬ ನುಡಿಗೆ ಅವನು ದೃಷ್ಟಾಂತವಾಗಿದ್ದಾನೆ. ಈ ವಿಚಾರವು ಅವನ ಪೂರ್ವವಯಸ್ಸಿನ ಸಂಗತಿಗಳನ್ನೂ ಜೀವಿತದ ಉತ್ತರಾರ್ಧವನ್ನೂ ಹೋಲಿಸಿ ನೋಡಿದಲ್ಲಿ ಸ್ಪಷ್ಟವಾಗುವುದು. ಪ್ರಬುದ್ಧನಾಗುವವರೆಗೂ ಕಾಡಿನಲ್ಲಿ ಬೆಳೆದವನು. ಜನವಾಸದ ಮಹಿಮೆಯನ್ನೂ ನಾಗರಿಕತೆಯ ದೆಸೆಯನ್ನೂ ಕಾಣದವನು. ನಮ್ಮ ಕಾಲದಲ್ಲಿ ನಡೆಯುವಂತೆ ಅವ

ನಿಗೆ ಕ್ರಮವಾದ ವಿದ್ಯಾಭ್ಯಾಸವು ನಡೆಯಲಿಲ್ಲ. ಒಂದು ವರ್ಷದಷ್ಟು ಕಾಲವೂ
ಕೂಡ ಶಾಲೆಗೆ ಹೋಗಲಿಲ್ಲವೆಂದು ಅವನೇ ಹೇಳಿದ್ದಾನೆ. ಚಿಂತೆಯಿಲ್ಲ, ಮನೆಯು
ಲ್ಲಾದರೂ ತಂದೆತಾಯಿಗಳ ಪೋಷಣೆಯಿಂದ ಅವನ ಅಭ್ಯಾಸವು ಸಾಗಿರಬಹುದೆಂದರೆ,
ತಂದೆಯು ನಿರಕ್ಷರಕುಕ್ಷಿ; ತಾಯಿಯು ಬಹುಕಾಲ ಬದುಕಿರಲಿಲ್ಲ. ಅವನಲ್ಲಿ
ಆ ಕಾಲದಲ್ಲಿಯೂ ಮುಂದೆಯೂ ಎಷ್ಟರಮಟ್ಟಿನ ತಿಳಿವಳಿಕೆಯು ಲಭಿಸಿತೋ
ಅದೆಲ್ಲವೂ ಸ್ವಂತ ವ್ಯಾಸಂಗದ ಫಲ. ತಾಯಿಯು ಅಕ್ಷರಾಭ್ಯಾಸವನ್ನು ಹೇಳಿ, ಓದು
ವುದನ್ನು ಕಲಿಸಿಕೊಟ್ಟಳು. ಆದರೆ ಅದನ್ನು ಊರ್ಜಿತಮಾಡಿ ವಿದ್ಯೆಯಲ್ಲಿ ಸ್ಥಿರವಾದ
ಆಸಕ್ತಿಯನ್ನು ಪಡೆಯಲು ಅವನು ಹೊರತು ಇತರರು ಯಾರೂ ಕಾರಣರಲ್ಲ.
ನೆರೆಹೊರೆಯವರಿಂದ ಪುಸ್ತಕಗಳನ್ನು ಸಂಪಾದಿಸಿ ಓದಿದನು ; ಸಾರವತ್ತಾದ ಅಂಶ
ಗಳನ್ನು ಮರದ ಹಲಗೆಯ ಮೇಲೆ ಬರೆದಿಟ್ಟಾದರೂ ಬಾಯಿಗೆ ಕಲಿಯಬೇಕೆಂಬ ಶ್ರದ್ಧೆ
ಯಿಂದ ಕಲಿತನು. ಕಾಸಿಗೆ ಕಾಸು ಗಂಟುಹಾಕಿ ಪತ್ರಿಕೆಗಳನ್ನು ತರಿಸಿ ಓದಿದನು.
ಹಾಗೆ ಶ್ರದ್ಧೆಯಿಲ್ಲದವರು ಇಷ್ಟೆಲ್ಲಾ ಶ್ರಮಪಡಬೇಕಾಗಿರಲಿಲ್ಲವೆಂದು ನಾವು ಹೇಳ
ಬೇಕಾಗಿಲ್ಲ. ಹೊಲಗದ್ದೆಗಳನ್ನು ಉತ್ತುಕೊಂಡು ರೈತನಂತೆ ಜೀವಿಸಬಹುದಾಗಿ
ದ್ದರೂ ಅವನು ದೃಶ್ಯಗಳನ್ನು ಕಲ್ಪಿಸಿಕೊಂಡು ಮಾತನಾಡುವ ರೀತಿಯನ್ನು
ಕಲಿತನು. ಓದುವುದನ್ನು ಮರೆಯಲಿಲ್ಲ. ತಾನು ಓದಿದ್ದರಿಂದಲೂ ಕೇಳಿದ್ದರಿಂ
ದಲೂ ಸಮಯೋಚಿತವಾಗಿ ಪ್ರಯೋಜನವನ್ನು ಹೊಂದಿಸಿಕೊಂಡು ಬಹುಸ್ವಾರಸ್ಯ
ದಿಂದ ಮಾತನಾಡಲು ಕಲಿತನು. ಅವನು ಓದಿ ಮನನಮಾಡಿದ ಗ್ರಂಥಗಳ ದೆಸೆ
ಯಿಂದ ಶೈಲಿಯು ತಿದ್ದಿತು. ಪತ್ರಿಕೆಯೇ ಮೊದಲಾದವುಗಳಿಂದ ತಿಳಿವಳಿಕೆಯು
ತಿದ್ದಿತು. ಮೇಲೆ ಹೇಳಿರುವ ಅಭ್ಯಾಸದ ಬಲದಿಂದ ವಾಗ್ಮಿಯೆನ್ನಿಸಿಕೊಂಡನು.
ಮುಂದೆ ಪ್ರೆಸಿಡೆಂಟನಾದ ಕಾಲದಲ್ಲಿಯೂ ಕೂಡ ಅವನು ತನ್ನ ತಿಳಿವಳಿಕೆಯನ್ನು
ಹೆಚ್ಚಿಸುವುದರಲ್ಲಿ ಅತ್ಯಾಸಕ್ತನಾಗಿದ್ದನು. ಸರ್ವಜ್ಞನೆಂದು ಮೆರೆಯಲಿಲ್ಲ. ಈ
ವಿಧವಾದ ಪ್ರಯತ್ನಕ್ಕೇ ಆತ್ಮಾವಲಂಬನೆಯೆಂದು ಹೆಸರು.

ಆತ್ಮಾವಲಂಬನೆಯೊಂದರ ಮಾತೇ ಅಲ್ಲ. ಅನೇಕರು ಆತ್ಮಾವಲಂಬಿಗಳಾಗಿ
ರಬಹುದು. ಲಿಂಕನ್ನನಂತೆಯೇ ಬಾಲ್ಯದಲ್ಲಿ ಗುರುಮುಖವಾದ ಶಿಕ್ಷಣವನ್ನರಿಯದ
ವರಾಗಿರಬಹುದು. ಆದರೆ ಆರೀತಿ ವಿದ್ಯಾವಂತರಾದರೂ ಅವನಂತೆ ಸರಳಸ್ವಭಾವವು
ಳ್ಳವರಾಗಿರುವುದು ಅಪೂರ್ವ. ಎಷ್ಟುಮಂದಿ ಸ್ಥಿತಿಯು ಬದಲಾಯಿಸಿದೊಡನೆಯೇ
ಬದಲಾಯಿಸಿಲ್ಲ ! ಎಷ್ಟುಜನರು ಐಶ್ವರ್ಯವನ್ನು ಸಂಪಾದಿಸಿ ಆಕೂಡಲೇ ತಾವು
ಒಂದಾನೊಂದು ಕಾಲದಲ್ಲಿ ಬಡವರ ಮಕ್ಕಳಾಗಿದ್ದೆವೆಂಬುದನ್ನು ಮರೆತಿಲ್ಲ ! ಎಷ್ಟು
ಮಂದಿ ಮತ್ತೊಬ್ಬರ ಕಾಲನ್ನು ಕಟ್ಟುತ್ತಿದ್ದವರು ದೆಸೆಯು ತಿರುಗಲಾಗಿ ಮತ್ತೊ
ಬ್ಬರನ್ನು ಕಾಲಿಂದ ಒದೆಯುವುದಕ್ಕೆ ಹೋಗಿಲ್ಲ!—ನಾವು ಈ ಮಾತನ್ನು ಹೇಳಿ
ಜುಗುಪ್ಸೆಯನ್ನುಂಟುಮಾಡುತ್ತಿರಬಹುದು. ಆದರೆ ಲಿಂಕನ್ನನಲ್ಲಿ ಬುದ್ಧಿಯು ಯಾವಾ
ಗಲೂ ಒಂದೇಸಮನಾಗಿ ಸರಳವಾಗಿಯೂ ಪ್ರಸನ್ನವಾಗಿಯೂ ಇದ್ದಿತೆಂಬುದನ್ನು
ಮರೆಯಲಾಗುವುದಿಲ್ಲ. ಕಮ್ಮಾರನ ಅಂಗಡಿಯಲ್ಲಿ ಕುಳಿತು ಕಥೆಯನ್ನು ಹೇಳಿ ಹೇಳಿ
ನಗಿಸುತ್ತಿದ್ದ ಹುಡುಗನು ಪ್ರೆಸಿಡೆಂಟನಾದ ಮೇಲೂ ಕೂಡ ತನ್ನನ್ನು ನೋಡಲು

ಬಂದವರೊಡನೆ ನಿಧಾನವಾಗಿ ಮಾತನಾಡಿ ಕಥೆಗಳನ್ನು ಹೇಳಿ ನಗಿಸಿ ಕಳುಹಿಸುತ್ತಿದ್ದನು. ತನ್ನ ಪದವಿಯನ್ನು ಮರೆತು ಕೈಕೆಳಗಿನ ಅಧಿಕಾರಿಗಳ ಮನೆಗೆ ಹೋಗಿ ಅವರ ಸಮಯವನ್ನು ಕಾದು ಮಾತನಾಡಿ ಬರುವುದು ಸಾಮಾನ್ಯನ ಗುಣವಲ್ಲ. ದಳಪತಿಯು ನಮಗೆ ಯುದ್ಧಗಳಲ್ಲಿ ಜಯವನ್ನು ಸಂಪಾದಿಸಿಕೊಡಲಿ, ಅವಶ್ಯಕವಾದರೆ ಅವನು ಕುದುರೆಯನ್ನೇರುವಾಗ ರಿಕಾಪನ್ನಾದರೂ ಹಿಡಿದುಕೊಂಡೇನು, ಎಂಬುದು ಸಾಮಾನ್ಯನ ಬಾಯಿಂದ ಹೊರಡದ ಮಾತು. ಅಹಂಭಾವನೆಯುಳ್ಳವನ ಬಾಯಿಂದ ಎಂದಿಗೂ ಹೊರಡದ ಮಾತು. ಲಿಂಕನ್ನನ ಈ ಸರಳತೆಯು ಮಾತಿನಲ್ಲೊಂದರಲ್ಲೇ ಅಲ್ಲ. ಮನಸ್ಸಿನಲ್ಲಿಯೂ ಕರ್ಮದಲ್ಲಿಯೂ ಇದ್ದಿತು.

ಸರಳತೆಯೂ ಚಿತ್ತೌನ್ನತ್ಯವೂ ಇರಲಾಗಿ ಮನುಷ್ಯನಲ್ಲಿ ಅಲ್ಪಬುದ್ಧಿಗೆ ಸ್ಥಳವಿರಲಾರದು. ಲಿಂಕನ್ನನಲ್ಲಿ ಮುಚ್ಚುಮರೆಗಳಿರಲಿಲ್ಲ. ಬಾಯಲ್ಲಿ ಹೇಳುವುದು ಒಂದಾಗಿ, ಕೈಯಲ್ಲಿ ಮಾಡುವುದು ಮತ್ತೊಂದಾಗುತ್ತಿರಲಿಲ್ಲ. ಸುಳ್ಳೆಂಬುದನ್ನೂ ಮೋಸವೆಂಬುದನ್ನೂ ಅರಿಯದವನು. ಅವನು ನ್ಯೂಸೇಲಂನಲ್ಲಿದ್ದಾಗ ಮೊದಲೇ ಇದ್ದ ಬಡತನದ ಜೊತೆಗೆ ಸಾಲವೂ ಹೇರಿಕೊಂಡಿತು. ಆದರೂ ತನ್ನದಲ್ಲದ ಹಣವನ್ನು ಮುಟ್ಟಲಿಲ್ಲ. ಸಾಲವು ಹೇರಿಕೊಂಡು, ಸಂಪಾದನೆಮಾಡಿ ಅದನ್ನು ತೀರಿಸುವ ಮಾರ್ಗವಿಲ್ಲದಿರಲಾಗಿ ಸುಳ್ಳು ಹುಟ್ಟುವುದು. ಆ ಸ್ಥಿತಿಗೀಡಾದರೂ ಲಿಂಕನ್ನನಲ್ಲಿ ಸುಳ್ಳು ತಲೆದೋರಲಿಲ್ಲ. ಕಾಸಿಗೆ ಕೈಯೊಡ್ಡಿ ಲಾಯರಾಗಿದ್ದಾಗ ಇತರರಿಗೆ ಮೋಸಮಾಡಲಿಲ್ಲ. ಒಂದು ಮೊಕದ್ದಮೆಯಲ್ಲಿ ತನ್ನ ಕಕ್ಷಿಗಾರನಲ್ಲಿ ಸುಳ್ಳಾಗಲೀ ನ್ಯಾಯವಲ್ಲದ ಪ್ರವರ್ತನೆಯಾಗಲೀ ಕಂಡುಬಂದರೆ ಮೊಕದ್ದಮೆಯನ್ನು ಅಷ್ಟಕ್ಕೇ ಬಿಟ್ಟುಬಿಡುತ್ತಿದ್ದನೆಂದು ಅವನ ಚರಿತ್ರೆಯನ್ನು ಬರೆದಿರುವವರನೇಕರು ಹೇಳುತ್ತಾರೆ. ಲಿಂಕನ್ನನಿಗೆ ಎರಡು ವಿಧವಾದ ಹೆದರಿಕೆಯಿದ್ದಿತೆಂದು ತೋರುತ್ತದೆ. ಸುಳ್ಳು ಹೇಳಿದರೆ ಅಥವಾ ಮೋಸಮಾಡಿದರೆ ತನ್ನ ಆತ್ಮಕ್ಕೆ ಹಾನಿಯನ್ನೆಣಿಸಿದಂತಾದೀತೆಂದೂ ಜಗತ್ಕರ್ತೃವಾದ ಭಗವಂತನಲ್ಲಿ ಕದ್ದಂತಾದೀತೆಂದೂ ಅವನು ನಂಬಿದ್ದನು. ಅಂಗಡಿಯಲ್ಲಿ ಸಾಮಾನನ್ನು ತೂಗುವಾಗ ತೂಕವನ್ನು ಸ್ವಲ್ಪ ಕಡಿಮೆಮಾಡಿದರೆ ಕೊಳ್ಳುವವನಿಗೆ ಹೆಚ್ಚಿನ ನಷ್ಟವಾಗುತ್ತಿರಲಿಲ್ಲ. ಮೋಸಮಾಡಿದ ತನಗೆ ವಿಶೇಷವಾದ ನಷ್ಟವುಂಟಾಗುತ್ತಿದ್ದಿತು. ಆ ಮೋಸದಿಂದ ತಾನು ಬದುಕದಿದ್ದರೂ ಕೆಡುವುದು ಮಾತ್ರ ನಿಶ್ಚಿತವೆಂದು ಅವನ ಭಾವನೆ. ಅದೇ ರೀತಿಯಲ್ಲಿ ತನ್ನಂತೆಯೇ ಮನುಷ್ಯನಾಗಿ ತನ್ನಂತೆಯೇ ಭಗವಂತನಿಂದ ಸೃಷ್ಟಿಯನ್ನು ಪಡೆದು ಸಮಾನಸ್ಕಂಧನಾದ ನೀಗ್ರೋವನ್ನು ತನ್ನ ಅಡಿಯಾಳಾಗಿ ಭಾವಿಸುವುದು ಹೇಯವಾದ ಪ್ರಯತ್ನವೊಂದೇ ಅಲ್ಲದೆ ಭಗವಂತನಲ್ಲಿ ಅನ್ಯಾಯವನ್ನಾಚರಿಸಿದಂತಾಗುವುದೆಂದು ಅವನು ಎಣಿಸುತ್ತಿದ್ದನು. ತನ್ನ ಆಚರಣೆಯಿಂದ ಭಗವಂತನನ್ನು ಮೆಚ್ಚಿಸಲು ಯತ್ನಿಸುವವನು ಇತರರಿಗೆ ಮೋಸಮಾಡುವುದಿಲ್ಲ. ಲಿಂಕನ್ನನು ಸುಳ್ಳುಗಾರನೆಂದು ಯಾರೂ ಎಂದಿಗೂ ಹೇಳುವುದಿಲ್ಲ. ಅವನು ಸತ್ಯದ ಸಾಕ್ಷಾನ್ಮೂರ್ತಿ. ಅವನ ಆ ಗುಣವನ್ನು ಸ್ಮರಿಸುತ್ತ ಸ್ಮರಿಸುತ್ತ ರಾಮನ ಚರಿತ್ರೆಯೂ ಧರ್ಮರಾಯನ ಚರಿತ್ರೆಯೂ ಜ್ಞಾಪಕಕ್ಕೆ ಬರುವುವು.

ನಮ್ಮಲ್ಲಿ ಸತ್ಯವಿದ್ದಲ್ಲಿ ನಾವು ಯಾರಿಗೂ ಯಾವುದಕ್ಕೂ ಹೆದರಬೇಕಾಗಿಲ್ಲ. ಸತ್ಯವು ನಮ್ಮಲ್ಲಿದ್ದಪಕ್ಷದಲ್ಲಿ ವಸಿಷ್ಠನ ಬಳಿಯಲ್ಲಿ ಬ್ರಹ್ಮದಂಡವಿದ್ದಹಾಗೆ. ಆದರಿಂದ ನಾವು ಮಾಡುತ್ತಿರುವುದು ಯುಕ್ತವಾದುದೆಂದೂ ಅಂತರಾತ್ಮವು ಅದಕ್ಕೆ ಸಾಕ್ಷಿಯಾಗಿ ನಿಲ್ಲುವುದೆಂದೂ ನಮಗೆ ಒಂದು ವಿಧವಾದ ದಾರ್ಢ್ಯವುಂಟಾಗುವುದು. ಈ ರೀತಿಯಾದ ನಿಶ್ಚಯಕ್ಕೆ ಆತ್ಮನಿಷ್ಠೆಯೇ ಕಾರಣ. ಆತ್ಮನಿಷ್ಠನು ಅಸತ್ಯವಂತನಾಗುವುದಿಲ್ಲ. ಲಿಂಕನ್ನನಲ್ಲಿ ಸಂಕಲ್ಪದ ಸಾಮರ್ಥ್ಯವು ಅತಿಶಯವಾಗಿದ್ದಿತು. ಅವನು ಯಾವುದೊಂದು ವಿಚಾರವನ್ನೂ ಬಹು ಸೂಕ್ಷ್ಮವಾಗಿ ಚಿಂತಿಸಿ ಒಂದು ನಿರ್ಣಯಕ್ಕೆ ಬರುತ್ತಿದ್ದನು. ನಿರ್ಣಯವು ಲಭ್ಯವಾದ ಬಳಿಕ ಅದನ್ನು ಬಿಟ್ಟು ಅರುಗಾಗುತ್ತಿರಲಿಲ್ಲ. ದಾಸ್ಯವು ಅಧರ್ಮವಾದುದೆಂಬುದನ್ನು ಬಾಲ್ಯದಲ್ಲಿಯೇ ಅರಿತನು—ಅದನ್ನು ನಾಶಮಾಡಬೇಕೆಂದು ಸಂಕಲ್ಪಿಸಿದನು. ಮುಂದೆ ಅದನ್ನು ನಾಶಮಾಡದೆ ಬಿಡಲಿಲ್ಲ. ಯುದ್ಧವು ಪ್ರಾರಂಭಿಸುವುದಕ್ಕೆ ಮೊದಲೂ ಪ್ರಾರಂಭಿಸಿದ ಮೇಲೂ ಅವನು ಸಂಯೋಗನೆಂಬುದರ ಮುಖ್ಯತೆಯನ್ನರಿತು, ಅಮೆರಿಕವು ಒಂದು ಜನಾಂಗವಾಗಿ ನಿಲ್ಲುವುದಕ್ಕೋಸ್ಕರಲೂ ಹಿಂದಿನವರು ಹೊಡೆದಾಡಿ ಹೆಣಗಾಡಿ ನಿರ್ಮಿಸಿದುದನ್ನು ವ್ಯರ್ಥಮಾಡದಿರುವುದಕೋಸ್ಕರಲೂ ಬಹುಸಾಹಸಮಾಡಿದನು. ಇತರರು ಸಂಯೋಗವನ್ನು ನಾಶಮಾಡಗೊಡಲಿಲ್ಲ. ಜನಾಂಗವನ್ನು ಒಡೆದು ಹಾಕಬೇಕೆಂದು ಪ್ರಯತ್ನಿಸಿದರಾದಕಾರಣ ದಕ್ಷಿಣದ ಜನರು ದಂಗೆಕೋರರೆಂದು ನಿಶ್ಚಯಮಾಡಿ ಅವನು ತನ್ನ ಪ್ರತಿಯೊಂದು ವ್ಯವಹಾರದಲ್ಲಿಯೂ ಆ ಸಿದ್ಧಾಂತವನ್ನು ಸ್ಮರಿಸಿಕೊಳ್ಳುತ್ತಿದ್ದನು. ಅವರನ್ನು ನಿಶ್ಶೇಷನಾಗಿ ಅಡಗಿಸಬೇಕೆಂದು ಹಟಹಿಡಿದನೇ ಹೊರತು ಅವರೊಡನೆ ಸಂಧಿಗೆ ಒಪ್ಪಲಿಲ್ಲ. ಮುಖ್ಯಮಂತ್ರಿಯಾದ ಸಿವರ್ಡನೇ ಹೇಳಿದರೂ ಕೂಡ ಅವನು ಸಂಧಿಯ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಸಭೆಯಲ್ಲಿಯೂ ಕೂಡ ಅವನು ತನಗೆ ಸೂಕ್ತವಾಗಿ ತೋರದಿದ್ದಲ್ಲಿ ಇತರರ ಸಲಹೆಯನ್ನು ಲಕ್ಷ್ಯಕ್ಕೆ ತರುತ್ತಿರಲಿಲ್ಲ. ಇದು ಸ್ವಪ್ರತಿಷ್ಠೆಯಲ್ಲ; ಅವಧಾರಣಾಶಕ್ತಿ. ಈ ಕಾರಣಕ್ಕಾಗಿ ಜನಗಳು ಅವನನ್ನು ನಾನಾವಿಧನಾಗಿ ದೂರಿದರು. ಅವನಲ್ಲಿದ್ದ ಪ್ರೀತಿಯು ಅನೇಕರಿಗೆ ಕಡಿಮೆಯಾಯಿತು. ಲಿಂಕನ್ನನು ಹೆದರಲಿಲ್ಲ. ತನ್ನ ಅಂತರಾತ್ಮವು ಯಾವುದನ್ನು ಅನುಮೋದಿಸಿತೋ ಅದನ್ನು ಮಾಡದೆ ಬಿಡಲಿಲ್ಲ. ಮನೋದಾರ್ಢ್ಯವಿಲ್ಲದಿರುವವರು ಹೀಗೆ ಮಾಡುತ್ತಿರಲಿಲ್ಲವೆಂಬುದು ಖಂಡಿತ. ಸತ್ಯಪ್ರವರ್ತನೆಯೂ ಆತ್ಮನಿಷ್ಠೆಯೂ ಇಲ್ಲದವರಲ್ಲಿ ಮನೋನಿಶ್ಚಯವಿಲ್ಲವೆಂಬುದೂ ಖಂಡಿತ. ಲಿಂಕನ್ನನಲ್ಲಿ ಆತ್ಮನಿಷ್ಠೆಯು ಹೇಗೆ ಮುಖ್ಯಗುಣವೋ ಅವಧಾರಣಾಶಕ್ತಿಯಿಂದ ಉತ್ಪನ್ನವಾದ ಮನೋನಿಶ್ಚಯವೂ ಹಾಗೆ ಮುಖ್ಯವಾದುದೆಂದು ಹೇಳದಿರುವುದಕ್ಕಾಗುವುದಿಲ್ಲ.

ಸತ್ಯಧರ್ಮನಾದವನಲ್ಲಿ ಸ್ವಾರ್ಥವಿಲ್ಲ; ಸ್ವಾರ್ಥಪರನಲ್ಲಿ ಸತ್ಯವಿಲ್ಲ. ಸ್ವಾರ್ಥತ್ಯಾಗದ ಸಂಬಂಧದಲ್ಲಿಯೂ ಲಿಂಕನ್ನನನ್ನು ಒಂದು ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದು. ಅವನು ದೇಶಸೇವೆಯಲ್ಲಿ ತನ್ನ ಜೀವವನ್ನು ತೆತ್ತನು. ಪ್ರಜೆಗಳ ಹಿತವೇ ತನ್ನ ಹಿತವೆಂದೆಣಿಸಿದನು. ಅವರ ಮನೋವೃತ್ತಿಯನ್ನು

ಇತರರಿಗಿಂತ ಹೆಚ್ಚಿನ ಸೂಕ್ಷ್ಮತೆಯಿಂದ ಅನುಸರಿಸಿದರೂ ಅವರ ಅಭ್ಯುದಯದಲ್ಲಿ ಅವನಿಗೆ ಇತರರಿಗಿಂತ ಹೆಚ್ಚಿನ ದೃಷ್ಟಿಯಿದ್ದಿತು. ಯುದ್ಧಕಾಲದಲ್ಲಿ ಕೆಲಸವು ಅತಿಯಾಗಿ, ವಿಶ್ರಾಂತಿಯು ಅತ್ಯವಶ್ಯಕವಾದರೂ ಅವನು ತನ್ನನ್ನು ನೋಡಲು ಬಂದವರೊಡನೆ ಮಾತನಾಡಿ ತೃಪ್ತಿಪಡಿಸದೆ ಕಳುಹಿಸಿದವನಲ್ಲ. ಹಾಗೆ ಬರುವವರು ಅರ್ಧರಾತ್ರಿಯ ಹೊತ್ತಿನಲ್ಲಿ ಬಂದರೂ ಅವನು ಆಕ್ಷೇಪಿಸುತ್ತಿರಲಿಲ್ಲ. ನಿದ್ರೆಗೆ ಭಂಗನಾದರೂ ಚಿಂತೆಯಿಲ್ಲ, ಅರ್ಥಿಗಳು ತಮ್ಮ ಅಪೇಕ್ಷೆಯು ಸಲ್ಲದೆ ಹಿಂದಿರುಗುವುದನ್ನು ಅವನು ಸಹಿಸುತ್ತಿರಲಿಲ್ಲ. ತನ್ನ ವಿಶ್ರಾಂತಿಗಿಂತ ಇತರರ ಅಪೇಕ್ಷೆಯು ಹೆಚ್ಚು. ಲಿಂಕನ್ನನಿಗೆ ಪ್ರಾಣದ ಮೇಲೆ ಆಸೆಯಿರಲಿಲ್ಲ. ರಕ್ಷಕರಿಲ್ಲದೆಯೇ ದಕ್ಷಿಣದವರು ವಾಸವಾಗಿದ್ದ ಸ್ಥಳಗಳಿಗೆ ಹೋಗಿ ನಿರ್ಭಯನಾಗಿ ಸಂಚರಿಸಿ ಬರುತ್ತಿದ್ದನು. ಹೀಗೆ ಅತ್ಯುಚ್ಚಸ್ಥಾನವನ್ನೇರಿ ಇಡೀರಾಜ್ಯಕ್ಕೆ ಪ್ರಭುವಾದರೂ ತನ್ನ ಕ್ಷೇಮದಲ್ಲಿ ಆಸಕ್ತನಾಗದ ಲಿಂಕನ್ನನನ್ನು ನೋಡಿದರೆ, ಪ್ಲೇಟೋ ಎಂಬ ಗ್ರೀಸಿನ ತತ್ವಜ್ಞಾನಿಯು ವರ್ಣಿಸಿರುವ ತತ್ವದ್ರಷ್ಟೃಗಳ ಜ್ಞಾಪಕವುಂಟಾಗುತ್ತದೆ.

ಸ್ವಾರ್ಥತ್ಯಾಗಕ್ಕೂ ಪರೋಪಕಾರಬುದ್ಧಿಗೂ ವ್ಯತ್ಯಾಸವು ಬಹಳವಾಗಿಲ್ಲ. ಮರದ ಮನೆಗಳನ್ನು ಕಟ್ಟುವ ಕೆಲಸದಲ್ಲಿ ನೆರೆಹೊರೆಯವರಿಗೆ ಸಹಾಯಮಾಡಬೇಕೆಂದೂ ಮದ್ಯಪಾನದಿಂದ ಜ್ಞಾನತಪ್ಪಿ ಬಿದ್ದವನಿಗೆ ಸಹಾಯಮಾಡಬೇಕೆಂದೂ ಬಾಲ್ಯದಲ್ಲಿ ಹುಟ್ಟಿದ ಬುದ್ಧಿಯು ಪ್ರೆಸಿಡೆಂಟನಾದಾಗ ನಷ್ಟವಾಗಲಿಲ್ಲ. ನೀಗ್ರೋಗಳಿಗೆ ಬಿಡುಗಡೆ ಮಾಡುವುದು ನಿಶ್ಚಿತವಾದ ಮೇಲೆ, ಅವರ ವಾಸಕ್ಕಾಗಿ ಗೊತ್ತುಮಾಡಿದ್ದೊಂದು ಸ್ಥಳದಲ್ಲಿ ಕುತ್ತವೊಂದಿದ್ದುದನ್ನು ನೋಡಿ ಅವನು ಕೊರಗಿದನು. ಕೇಳಿದವರಿಗೆ ಕೇಳಿದುದನ್ನು ಇಲ್ಲವೆನ್ನಲು ಅವನಿಂದ ಸಾಧ್ಯವಾಗುತ್ತಿರಲಿಲ್ಲ. ಅದು ಒಂದು ದೋಷವೆಂದು ಇತರರು ಎಣಿಸಬಹುದು. ಎಷ್ಟೋ ನಿರೀಕ್ಷಣೆಯಿಂದ ಬಂದವರಿಗೆ ಆಶಾಭಂಗವನ್ನುಂಟುಮಾಡಲು ಅವನಲ್ಲಿ ಶಕ್ತಿಯಿರಲಿಲ್ಲ. ಈ ಗುಣವಿರಲಾಗಿ ನಾನು ಹೆಂಗಸಾಗಿದ್ದರೆ ಗತಿಯೇನೆಂದು ಅವನು ಹೆದರುತ್ತಿದ್ದನು. ಅದು ಒಂದು ದೌರ್ಬಲ್ಯವೆಂದು ಅವನಿಗೂ ಗೊತ್ತಿದ್ದಿತು. ಯಾವಳೋ ಹುಡುಗಿಯು ಕೇಳಿಕೊಂಡುದಕ್ಕಾಗಿ ಅವನು ಗಡ್ಡಮೀಸೆಗಳನ್ನು ಬೆಳೆಯಿಸಿದನು. ಲಾರ್ಡ್ ಚಾರ್ನ್‌ವುಡ್‌ನು ತನ್ನ ಗ್ರಂಥದಲ್ಲಿ ಈ ವಿಷಯವನ್ನು ನಮೂದಿಸಿ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದ್ದಾನೆ. ಆದರೆ ಅವನ ಆಕ್ಷೇಪಣೆಯು ಅಷ್ಟು ಮುಖ್ಯವಲ್ಲ.

ಮೇಲೆ ಹೇಳಿರುವ ಗುಣಗಳೆಲ್ಲಕ್ಕಿಂತಲೂ ಲಿಂಕನ್ನನಲ್ಲಿ ಶಾಂತಿಪ್ರೀತಿಯು ಅತಿಶಯವಾಗಿದ್ದಿತು. ರಾಜ್ಯದ ಪ್ರಜೆಗಳು ಏಕೀಭವಿಸಿ ನೆಮ್ಮದಿಯಿಂದಲೂ ಸದ್ಭಾವದಿಂದಲೂ ಇರುವುದನ್ನು ನೋಡಲು ಅವನಿಗೆ ಬಹು ಇಷ್ಟ. ಈ ವಿಷಯದಲ್ಲಿ ಅವನು ಬಹುಜನರುಳ್ಳ ಒಂದು ಕುಟುಂಬದ ವೃದ್ಧಯಜಮಾನನ ಹಾಗೆ. ತುಂಟರನ್ನು ಕುಸ್ತಿಮಾಡಿ ಸೋಲಿಸಿ ಅವರ ಉದ್ಧತತನವನ್ನು ಅಡಗಿಸುವುದರಲ್ಲಿಯೂ ಯುದ್ಧದ ವಿಷಯದಲ್ಲಿ ದಂಡೋಪಾಯವನ್ನನುಸರಿಸದಿದ್ದರೆ ನಿರ್ವಾಹವಿಲ್ಲವೆಂಬುದು ಖಂಡಿತವಾಗಿ ಗೊತ್ತಾಗುವವರೆಗೆ ತಡೆಯುವುದರಲ್ಲಿಯೂ, ಯುದ್ಧವು ಮುಗಿದ ಮೇಲೆ ಅಳಿದುಳಿದ ದಕ್ಷಿಣದ ಜನರನ್ನು ಹಿಂಸಿಸದೆ ಒಂದುಮನೆಯ

ಜನರಹಾಗೆ ಕಾಣಬೇಕೆಂದು ತನ್ನವರನ್ನು ಪ್ರಾರ್ಥಿಸಿದುದರಲ್ಲಿಯೂ ಆ ಶಾಂತಿ ಪ್ರೀತಿಯು ವ್ಯಕ್ತವಾಗುವುದು. "ಯಾರಮೇಲೂ ನಮಗೆ ಅಸೂಯೆ ಬೇಡ ; ಎಲ್ಲರ ವಿಷಯದಲ್ಲಿಯೂ ಕನಿಕರವಿರಲಿ" ಎಂದು ಹೇಳುವುದು, ಗಂಗಾತೀರದಲ್ಲಿ ತಪಸ್ಸು ಮಾಡುತ್ತ ಪರಮಾತ್ಮನು ಶಾಂತಸ್ವರೂಪನೆಂಬುದನ್ನು ಅರಿತು, ಮನೋವಾಕ್ಕರ್ಮಗಳಿಂದ ಜಗತ್ತಿನಲ್ಲಿ ಶಾಂತಿಯನ್ನು ನೆಲೆಗೊಳಿಸಲಿಚ್ಛಿಸುವ ಋಷಿಗಳಿಗೆ ಮಾತ್ರವೇ ಸಹಜವಾದುದು. ಶಾಂತಿಯಲ್ಲಿ ಪಕ್ಷಪಾತವುಳ್ಳ ಲಿಂಕನ್ನನು ಅವರಿಗೆ ಸಮಾನನೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಈ ಅಂಶದಲ್ಲಿ ಆತನು ತನ್ನ ಪರಮಗುರುವಾದ ಯೇಸು ಕ್ರಿಸ್ತನ ಹಾಗೆ. ತನಗೆ ಅಪಕಾರವನ್ನೆಣಿಸಿದವರಿಗೆ ಉಪಕಾರವನ್ನೇ ಮಾಡುವಂಥವನು. ಅವನ ಮಂತ್ರಿಗಳಲ್ಲಿಬ್ಬರು ಅವನನ್ನು ದ್ವೇಷಿಸಿದರು. ಬಹಳ ತಿರಸ್ಕಾರದಿಂದ ಕಂಡರು. ಆದರೂ ಲಿಂಕನ್ನನು ಪ್ರತಿಯಾಗಿ ಅವರನ್ನು ದ್ವೇಷಿಸಲಿಲ್ಲ, ತಿರಸ್ಕಾರದಿಂದ ಕಾಣಲಿಲ್ಲ. ಹೀಗೆ ಶಮದಮಾದಿಗಳಿಂದ ಕೂಡಿರಲು ಮಹಾತ್ಮರಿಗಲ್ಲದೆ ಇತರರಿಗೆ ಶಕ್ಯವಲ್ಲ.

ಲಿಂಕನ್ನನಲ್ಲಿ ಮೇಲೆ ವರ್ಣಿಸಿರುವ ಗುಣಗಳು ಮುಖ್ಯವಾದವುಗಳೆಂದು ಹೇಳಬಹುದು. ಆದರೆ ಅವನಲ್ಲಿ ಆತ್ಮಾವಲಂಬನೆಯು ಅತ್ಯುತ್ತಮವಾದುದು. ಅದೂ ಇತರ ಗುಣಗಳೂ ಕಾರ್ಯಕಾರಣಭಾವಗಳಿಂದ ನೆಲಸುವುವು. ಇತರರ ಕೈಯನ್ನು ಕಾಯದೆ ಸ್ವಂತ ವ್ಯವಸಾಯದಿಂದ ಏನೇನನ್ನು ಸಾಧಿಸಬಹುದೆಂಬುದಕ್ಕೆ ಲಿಂಕನ್ನನು ನಿರತಿಶಯನಿದರ್ಶನವಾಗಿದ್ದಾನೆ.

ಅವನಲ್ಲಿ ನ್ಯೂನತೆಗಳಿಲ್ಲದಿರಲಿಲ್ಲ. ಮನುಷ್ಯನಾದ ಮೇಲೆ ನ್ಯೂನತೆಯಿರದೆ ಯಾವನೂ ಪರಿಪೂರ್ಣತೆಯ ಮೂರ್ತಿಯಾಗಿರುವುದಿಲ್ಲ. ಆದರೆ ಮನುಷ್ಯನು ಸಚ್ಚರಿತ್ರನಾದರೆ ಅವನ ದೌರ್ಬಲ್ಯಗಳು ಲೆಕ್ಕಕ್ಕೆ ಬರುವುದಿಲ್ಲ. ಅಮೆರಿಕದವರು ಲಿಂಕನ್ನನನ್ನು ದೇವಾಂಶಸಂಭೂತನೆಂದು ಪೂಜಿಸುತ್ತಾರೆ. ಅವರ ಪ್ರಶಂಸೆಗೆ ಕೊನೆಮೊದಲಿಲ್ಲ. ಅವರ ಸ್ತೋತ್ರಕ್ಕೆ ಲಿಂಕನ್ನನು ಸರ್ವಥಾ ಅರ್ಹನು. "ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ" ಎಂದು ಶ್ರೀಕೃಷ್ಣನು ಹೇಳಿದಹಾಗೆ, ದಾಸ್ಯವೆಂಬ ಅಧರ್ಮವನ್ನು ನಾಶಮಾಡಿ ಧರ್ಮವನ್ನು ನೆಲೆಗೊಳಿಸುವುದಕ್ಕೋಸ್ಕರಲೇ ಲಿಂಕನ್ನನು ಅವತರಿಸಿದನೆಂದು ಅವರು ಭಾವಿಸುತ್ತಾರೆ. ಇದು ಉತ್ಪ್ರೇಕ್ಷೆಯೆಂದು ತೋರುವುದಿಲ್ಲ.

ಲಿಂಕನ್ನನನ್ನು ಪ್ರಜೆಯೆಂದು ಭಾವಿಸಿ ನೋಡಿದರೆ ಆಗಲೂ ಅವನ ಶ್ರೇಷ್ಠತೆಯು ಪ್ರಕಾಶಕ್ಕೆ ಬರುವುದು—ಸಾಮಾನ್ಯಪ್ರಜೆಯೆನ್ನಿಸಿಕೊಂಡವನು ಏನೇನು ಮಾಡಬಹುದು, ಎಷ್ಟರ ಮಟ್ಟಿಗೆ ಉಚ್ಛ್ರಾಯಸ್ಥಿತಿಗೆ ಬರಬಹುದೆಂಬುದಕ್ಕೆ ಆತನು ಸಾಕ್ಷಿ. ಸಾಧಾರಣವಾಗಿ, ಉತ್ತಮಸ್ಥಿತಿಗೇರಲು ಐಶ್ವರ್ಯವಾಗಲೀ ಅಧಿಕಾರಸ್ಥರ ಬೆಂಬಲವಾಗಲೀ ಬೇಕು. ಲಿಂಕನ್ನನಿಗೆ ಇವೆರಡರಲ್ಲಿ ಯಾವ ಉಪಪತ್ತಿಯೂ ಇರಲಿಲ್ಲ. ಬಡವನಾಗಿ ಹುಟ್ಟಿ ಬಡವನಾಗಿ ಬೆಳೆದನು. ಆದರೂ ಇತರ ಬಲಗಳೆಲ್ಲಕ್ಕಿಂತ ಉತ್ಕೃಷ್ಟವಾದ ಬುದ್ಧಿಯ ಬಲವು ಅವನಿಗಿದ್ದಿತು. ಅದರ ಸಹಾಯದಿಂದಲೇ ಅವನು ಒಂದೇ ನೆಗೆತಕ್ಕೆ ಪ್ರೆಸಿಡೆಂಟನ ಪದವಿಗೆ ಹಾರಿದನು. ಅನುಭವವಿರ

ಲಿಲ್ಲ. ಅದಕ್ಕೆ ಮುಂಚೆ ಇತರ ಅಧಿಕಾರಗಳನ್ನು ವಹಿಸಿರಲಿಲ್ಲ. ಅದೊಂದೂ ಆವಶ್ಯಕವಿಲ್ಲವೆಂತಲೇ ಅವನ ಚರಿತ್ರೆಯು ಪ್ರತಿಪಾದಿಸುವಂತೆ ತೋರುವುದು. ಅಮೆರಿಕದಂತಹ ರಾಜ್ಯದಲ್ಲಿ ಪ್ರಜೆಯಾದರೆ ಅಂಥವನಿಗೆ ಅವಕಾಶವೆಷ್ಟಿದ್ದೀತೆಂಬುದನ್ನು ಅದರಿಂದ ತಿಳಿಯಬಹುದು. ಈ ವಿಷಯದಲ್ಲಿ ಲಿಂಕನ್ನನು ಪ್ರಜಾಧಿಪತ್ಯದಿಂದ ಲಭಿಸುವ ಸೌಕರ್ಯಗಳಿಗೆ ಅಳತೆಯೆಂದು ಅಂಗೀಕರಿಸಬಹುದು. ಅವನ ಚರಿತ್ರೆಯಿಂದ ನಮಗೆ ಪ್ರಜಾಧಿಪತ್ಯವು ಪ್ರಜೆಗಳಿಂದ ಪ್ರಜೆಗಳಿಗೋಸ್ಕರ ಏರ್ಪಟ್ಟುದೆಂದೂ, ರಾಜನೆನ್ನಿಸಿಕೊಂಡು ತನ್ನ ಕ್ಷೇಮವನ್ನೇ ಮುಂದಾಗಿಟ್ಟುಕೊಂಡು ಆಳುವ ಸರ್ಕಾರಕ್ಕಿಂತ, ಪ್ರಜೆಗಳ ಕ್ಷೇಮವನ್ನು ಬಯಸಿ ಆಳುವ ಸರ್ಕಾರವೇ ಮೇಲೆಂದೂ, ಅಂತಹ ಸರ್ಕಾರವೊಂದರಲ್ಲಿಯೇ ಪ್ರಜೆಗಳಿಗೆ ವಾಸ್ತವ ಅಥವಾ ಯಥಾರ್ಥವಾದ ಸ್ವಾತಂತ್ರ್ಯವುಂಟೆಂದೂ ತಿಳಿದುಬರುವುದು. ತನಗೆ ಹೇಗೆ ಸ್ವಾತಂತ್ರ್ಯವು ಪ್ರಿಯನಾದುದೋ ಇತರರಿಗೂ ಹಾಗೆಯೇ ಎಂದು ಅವನು ನಂಬಿದನು. ತನಗೆ ಹೇಗೆ ಇತರರಿಗೆ ಅಡಿಯಾಳಾಗುವುದು ಅಸಹ್ಯವೋ ಹಾಗೆ ಇತರರಿಗೂ ಕೂಡ ತನಗೆ ಅಡಿಯಾಳಾಗಿರಲು ಅಸಹ್ಯವೆಂಬುದನ್ನು ಅರಿತು ಅವನು ಪ್ರವರ್ತಿಸಿದನು. ಈ ಸಂಬಂಧದಲ್ಲಿ ಮನುಷ್ಯನ ವೈಬಣ್ಣವು ಗೊತ್ತಿಗೆ ಬಾರದ ವಿಷಯ. ಬಿಳಿಯ ಜನಗಳಂತೆಯೇ ನೀಗ್ರೋಗಳಿಗೂ ಸ್ವಾತಂತ್ರ್ಯವು ದೊರೆಯಲೆಂದು ಅವನು ಹಾರೈಸಿದನು. ಅವನ ಆ ಹಾರೈಕೆಯು ಅಮೆರಿಕದಲ್ಲಿ ಈಚೆಗೆ ಕೈಗೂಡಿದೆ.

ಅಧಿಕಾರವನ್ನು ಪಡೆದು ತಮ್ಮ ಪುರಾವೃತ್ತವನ್ನು ಮರೆಯುವುದು ಅನೇಕರ ಸ್ವಭಾವ. ಅಧಿಕಾರವನ್ನು ಪಡೆದು ತಮ್ಮನ್ನು ತಾವು ಗೌರವಿಸಿಕೊಳ್ಳಲಾರಂಭಿಸುವುದು ಮತ್ತೆ ಅನೇಕರ ಸ್ವಭಾವ. ಆದರೆ ಇವೆರಡೂ ಅನಾವಶ್ಯಕವೆಂಬುದನ್ನು ಲಿಂಕನ್ನನು ತನ್ನ ಚರಿತ್ರೆಯಿಂದ ತೋರಿಸಿದ್ದಾನೆ. ಪ್ರೆಸಿಡೆಂಟನಾದರೂ ಅವನು ಹೊಸಬನೊಬ್ಬ ಮನುಷ್ಯನಾಗಲಿಲ್ಲ. ಮನುಷ್ಯ ಲಿಂಕನ್ನನಿಗೂ ಪ್ರೆಸಿಡೆಂಟ್ ಲಿಂಕನ್ನನಿಗೂ ವ್ಯತ್ಯಾಸವು ಅಣುಮಾತ್ರವೂ ಇರಲಿಲ್ಲ. ಪ್ರೆಸಿಡೆಂಟನಾದರೂ ಅವನು ತಾನು ಇತರರಂತೆ ಮರ್ತ್ಯನೆಂಬುದನ್ನೂ ಇತರರು ತನ್ನಂತೆಯೇ ಮನುಷ್ಯರೆಂಬುದನ್ನೂ ಮರೆಯಲಿಲ್ಲ.

ಶ್ರೇಷ್ಠನಾದವನ ಗುಣವನ್ನೂ ಕರ್ಮವನ್ನೂ ಪ್ರಮಾಣವಾಗಿಟ್ಟುಕೊಂಡು ಸಾಮಾನ್ಯನು ಅನುಸರಿಸಲು ಯತ್ನಿಸುವನೆಂದು ಮೇಲೆ ಹೇಳಿದೆ. ಲಿಂಕನ್ನನ ಚರಿತ್ರೆಯನ್ನು ಓದಿದಾಗ ಈ ವಿಧನಾದ ಪ್ರಯೋಜನವು ಲಭ್ಯವಾಯಿತು. ಕಥೆಯ ಪುಸ್ತಕಗಳನ್ನೋದಿ ಒಂದು ಕಡೆಗೆ ಬೀಸಾಡುವ ಹಾಗೆ ಅವನ ಚರಿತ್ರೆಯನ್ನು ಬೀಸಾಡಲಾರದವನಾದೆನು. ಓದುತ್ತ ಓದುತ್ತ ಲಿಂಕನ್ನನಲ್ಲಿ ಪ್ರೀತಿಯೂ ಪ್ರೀತಿಗಿಂತ ಹೆಚ್ಚಾಗಿ ಭಕ್ತಿಯೂ ನನ್ನಲ್ಲಿ ಉದಿಸಿದವು. ಈ ಪೂಜ್ಯಭಾವನೆಗೆ ಅವನ ಗುಣದಹಾಗೆ ಅವನ ಬಾಯಿಂದ ಹೊರಬಿದ್ದ ಅನುಭವದ ಮಾತುಗಳು ಮುಖ್ಯ ಕಾರಣವಾದುವು. ಆ ಮಾತುಗಳನ್ನು ಲಿಂಕನ್ನನು ಜನಸಮುದಾಯಕ್ಕೆ ಹೇಳಿದರೂ ಆ ಜನಸಮುದಾಯದಲ್ಲಿ ಪ್ರತಿಯೊಬ್ಬನನ್ನೂ ಪ್ರತ್ಯೇಕವಾಗಿ ಆರಿಸಿಕೊಂಡು ಹೇಳಿದ ಹಾಗೆ ಅನುಭವನಾಗುತ್ತದೆ. ಅದೇ ರೀತಿಯಲ್ಲಿ ಅವನ ಚರಿತ್ರೆಯನ್ನೋದುವ ಪ್ರತಿಯೊಬ್ಬರನ್ನೂ

ಕುರಿತು ಹೇಳಿದ ಹಾಗೆ ತೋರಿತು. ಲಿಂಕನ್ನನು ನನ್ನ ಕಣ್ಣಮುಂದೆ ನಿಂತಂತೆ ತೋರಿತು. ಅವನ ಮಹಿಮೆಯ ಮೂರ್ತಿಯನ್ನು ನೋಡಿ ನನ್ನ ಹ್ರಸ್ವತೆಯ ಸ್ಮರಣೆಯುಂಟಾಯಿತು. ಕೆಲವಂಶಗಳಲ್ಲಿ ಅವನನ್ನು ಮೇಲುಪಙ್ತಿಯಾಗಿಟ್ಟುಕೊಂಡು ಅನುಸರಿಸಿದೆನು. ಲಾಭವಿಲ್ಲದಿರಲಿಲ್ಲ. ಇದೇ ರೀತಿಯಲ್ಲಿ ಅವನನ್ನು ಅನುಸರಿಸುವ ಇತರರೂ ಪ್ರಯೋಜನಹೊಂದುವರೆಂದು ನನ್ನ ನಂಬಿಕೆ.

ಚಂದ್ರಶೇಖರ ಶರ್ಮ.

# ೧ ನೆಯ ಅಧ್ಯಾಯ

---

## ಜನನ ಮತ್ತು ನೆಲಸುವ ಏರ್ಪಾಡು.

ಸ್ವಾತಂತ್ರ್ಯಕ್ಕಾಗಿ ಅಮೇರಿಕದವರು ಮಾಡಿದ ಯುದ್ಧವು ಮುಗಿಯುತ್ತ ಬಂದಿತು. ಆದರೆ ಅದರಿಂದ ಪ್ರಯೋಜನವಾಗಲಿಲ್ಲ. ತಮ್ಮಲ್ಲಿದ್ದ ಸರ್ವಸ್ವವನ್ನೂ ಕೊಟ್ಟು ಅವರು ಸ್ವಾತಂತ್ರ್ಯವನ್ನು ಕೊಂಡುಕೊಂಡರು. ಅಮೆರಿಕದವರು ಸ್ವಚ್ಛಂದರಾದರು. ಆದರೆ ಉತ್ತಮಸ್ಥಿತಿಗೆ ಬರಲಿಲ್ಲ. ಜನರ ಬಡತನವು ನೋಡಿದವರ ಹೃದಯವನ್ನು ಕರಗಿಸುತ್ತಿದ್ದಿತು.

ಆದರೂ ಯುದ್ಧವು ಮುಗಿದಮೇಲೆ ಅಭ್ಯುದಯದ ಗಾಳಿಯು ಒಂದಾವೃತ್ತಿ ಬೀಸಿತು. ಅನೇಕ ವಿಧವಾದ ಕೈಗಾರಿಕೆಗಳು ಏರ್ಪಟ್ಟುವು. ನಗರವಾಸಿಗಳಾದ ಪ್ರಜೆಗಳು ಬೇಕಾದ ಸೌಕರ್ಯಗಳನ್ನು ಹೊಂದಲಾರಂಭಿಸಿದರು. ಭೂದೇವಿಯು ಪ್ರಸನ್ನಳಾದಳೆಂಬಂತೆ ಧಾನ್ಯಗಳು ಹೇರಳವಾಗಿ ಬೆಳೆದುವು. ಜಮಿನಾನುದಾರರೂ ಕೃಷಿಕರೂ ತಮ್ಮ ದನಕರುಗಳ ವ್ಯಾಪಾರದಿಂದ ಬಹಳ ಆದಾಯವನ್ನು ಹೊಂದಿದರು. ಯಾವುದಕ್ಕೂ ಕೊರತೆಯಿರದಂತಾಗುತ್ತ ಬಂದಿತು.

ರಾಜ್ಯವು ಈಸ್ಥಿತಿಯಲ್ಲಿರಲಾಗಿ ಜನರು ಪಶ್ಚಿಮದ ಪ್ರದೇಶಗಳನ್ನು ಕುರಿತು ಚಿಂತಿಸುತ್ತಿದ್ದರು. ಅವು ಎಲ್ಲಾ ಭಾಗದಲ್ಲಿಯೂ ಸಮೃದ್ಧಿಯಿಂದಿದ್ದಂತೆ ಕಾಣಿಸಿದುವು. ಅವುಗಳನ್ನು ಸಮೀಪಿಸಲು ಕ್ಷಾಮಕ್ಕೆ ಧೈರ್ಯವಿರಲಿಲ್ಲ. ಭೂಮಿಯು ಫಲವತ್ತಾಗಿ ಬೆಳೆಯನ್ನು ಬೇಕಾದಹಾಗೆ ನೀಡಬಲ್ಲದು. ಜೀವನೋಪಾಯಗಳಿಗೆ ಕಡಿಮೆಯಿರಲಿಲ್ಲ. ಜೀವನವು ಬಹು ಸುಖದಿಂದ ತೇಲಬಹುದಾಗಿದ್ದಿತು. ಹೀಗೆ ಭ್ರಾಂತಿಗೊಂಡು ನೂರಾರು ಜನರು ಸಂಸಾರಸಮೇತರಾಗಿ ಪಶ್ಚಿಮದಲ್ಲಿದ್ದ ಭಾಗಗಳಿಗೆ ವಾಸಕ್ಕಾಗಿ ಹೋದರು. ಹೀಗೆ ಹೋದವರಲ್ಲಿ ಲಿಂಕನ್ನನ ಮನೆತನದವರು ಒಬ್ಬರು.

ಹದಿನೇಳನೆಯ ಶತಮಾನದಲ್ಲಿ ಮತಾಂತರಾವಲಂಬಿಗಳ ಹಿಂಸೆಯನ್ನು ತಡೆಯಲಾರದೆ ಪ್ಯೂರಿಟನ್ನರೆಂಬವರು ತಂಡತಂಡವಾಗಿ ಅಮೆರಿಕಕ್ಕೆ ಹೋಗಿ ನೆಲಸಿದರೆಂಬುದು ಆಂಗ್ಲೇಯ ಚರಿತ್ರೆಯ ಮೂಲಕ ನಮಗೆ ತಿಳಿದ ವಿಷಯ. ಅಂಥಾ "ಯಾತ್ರಿಕಪರ್ಯರ" (Pilgrim Fathers) ಜೊತೆಯಲ್ಲಿ ಹೊರಟು ಬಂದ ಲಿಂಕನ್ನನ ಪೂರ್ವಿಕರು ಈಗಿನ ಮಸಾಚುಸೆಟ್ಸ್ ಎಂಬ ಭಾಗದಲ್ಲಿ ಪದಾರ್ಪಣಮಾಡಿದರು. ಆದರೆ ಅಲ್ಲಿ ಸರಿಬೀಳದೆ ಅವರು ಮತ್ತೊಂದು ಕಡೆಗೆ ಹೋದರು. ಒಂದು ಸ್ಥಳವನ್ನು ಬಿಟ್ಟು ಮತ್ತೊಂದಕ್ಕೆ ಹೋದರೂ ಗರಿಗೂಡಿ

ಕೊಳ್ಳಲಿಲ್ಲ. ಇತರರ ಮಾತಿಗೆ ಮರುಳಾಗಿ ಪದಚಲನವಮಾಡಿದ ಅವರು ಎಲ್ಲಿಯೂ ಸುಖವನ್ನಾಗಲೀ ಅನುಕೂಲವನ್ನಾಗಲೀ ಕಾಣಲಿಲ್ಲ. ಸ್ವಾತಂತ್ರ್ಯದ ಯುದ್ಧವು ನಡೆಯುತ್ತಿದ್ದ ಕಾಲದಲ್ಲಿ ಪ್ರೆಸಿಡೆಂಟ ಲಿಂಕನ್ನನ ಅದೇ ಹೆಸರಿನ ತಾತನು ತನ್ನ ಮೂರುಮಂದಿ ಮಕ್ಕಳೊಡನೆ ಕೆಂಟಕಿಯೆಂಬ ಭಾಗಕ್ಕೆ ಹೋದನು.

ಆಕಾಲದಲ್ಲಿ ಕೆಂಟಕಿಯು ವರ್ಜಿನಿಯ ಸೀಮೆಗೆ ಸೇರಿದ್ದಿತು. ಅಲ್ಲಿ ಎಲ್ಲೆಲ್ಲಿ ನೋಡಿದರೂ ಘೋರವಾದ ಅರಣ್ಯ; ಅದನ್ನು ಹೊಕ್ಕವರೇ ಇರಲಿಲ್ಲ. ನಿವಾಸಿಗಳಿಗೆ ಕೆಂಟಕಿಯಲ್ಲಿ ಸ್ವಸಹಾಯವೇ ಇದ್ದ ಬೆಂಬಲ. ನೆಲಸಿದವರು ಅತಿವಿರಳ; ಬಹು ದೂರ ದೂರದಲ್ಲಿ ವಾಸಮಾಡುತ್ತಿದ್ದರು. ಅವರು ಧೈರ್ಯಶಾಲಿಗಳು, ಸಾಹಸಿಗಳು. ಅವರ ಶ್ರಮಸಹಿಷ್ಣುತೆಯು ನಿದರ್ಶನೀಯವಾಗಿದ್ದಿತು. ಅಲ್ಲಿನ ಕಾಡು ಜನಗಳನ್ನು ಕಂಡರೆ ಅವರಿಗೆ ಸಹಿಸುತ್ತಿರಲಿಲ್ಲ. ಕಂಡಕಡೆಯಲ್ಲಿ ಕೊಲ್ಲುತ್ತಿದ್ದರು. ಆದಕಾರಣ ಕಾಡುಜನರಿಗೆ ಬಿಳಿಯ ಜನರನ್ನು ಕಂಡರೆ ಬಹಳ ಹೆದರಿಕೆಯಿದ್ದಿತು.

ಭಾವಿ ಪ್ರೆಸಿಡೆಂಟನ ತಾತನು ಸರ್ಕಾರವು ಖಿಲ್ಲೆಯನ್ನೇರ್ಪಡಿಸಿದ್ದ ಒಂದು ಬಳಿಯಲ್ಲಿ ಕೃಷಿಗಾಗಿ ಭೂಮಿಯನ್ನು ಪಡೆದು ನೆಲಸಿದನು. ಅಲ್ಲಿನ ಕಾಡಿನಲ್ಲಿದ್ದ ಮರಗಳನ್ನು ಕತ್ತರಿಸಿ ಭಾರವಾದ ದಿಮ್ಮಿಗಳಿಂದ ಒಂದು ಮನೆಯನ್ನು ಕಟ್ಟಿಕೊಂಡನು.

ಒಂದು ದಿನ ತಂದೆಯೂ ಕಿರಿಯಮಗನೂ ಹೊಲದಲ್ಲಿ ಕೆಲಸಮಾಡುತ್ತಿದ್ದಾಗ ರೆಡ್ ಇಂಡಿಯನನೊಬ್ಬನು ಒಂದು ಪೊದೆಯ ಹಿಂದಿನಿಂದ ಅವರಕಡೆಗೆ ಗುಂಡುಹಾರಿಸಿದನು. ಗುಂಡು ತಂದೆಗೆ ತಗುಲಿ ಆತನು ಸತ್ತು ನೆಲಕ್ಕುರುಳಿದನು. ಹತ್ತಿರದಲ್ಲಿಯೇ ಸೌದೆಯನ್ನು ಕಡಿಯುತ್ತಿದ್ದ ಹಿರಿಯ ಮಕ್ಕಳಿಬ್ಬರೂ ಆ ಶಬ್ದವನ್ನು ಕೇಳಿದರು. ಒಬ್ಬನು ತತ್‌ಕ್ಷಣವೇ ಕೋಟೆಗೆ ಹೋಗಿ ಜನಗಳನ್ನು ಕರತರಲು ಓಡಿದನು. ಮತ್ತೊಬ್ಬನು ಮನೆಗೆ ಓಡಿಹೋಗಿ, ಬಾರುಮಾಡಿ ಸಿದ್ಧವಾಗಿಯೇ ಇಟ್ಟಿರುತ್ತಿದ್ದ ಬಂದೂಕವನ್ನು ಮರದ ದಿಮ್ಮಿಗಳ ನಡುವೆ ಮಾಡಿದ್ದ ಕಂಡಿಯಲ್ಲಿಟ್ಟು ಗುರಿನೋಡಿ ಹಾರಿಸಿದನು. ದೊಡ್ಡವರಿಬ್ಬರೂ ಪಲಾಯನಮಾಡಿ ಆರು ವರ್ಷದ ಹುಡುಗನೊಬ್ಬನೇ ಉಳಿದನೆಂದು ನಿರ್ಭೀತನಾಗಿ ಆ ಹುಡುಗನನ್ನು ಕಂಕುಳಲ್ಲಿ ಇರುಕಿಸಿಕೊಂಡು ಎದುರಿಗಿದ್ದ ಕಾಡಿಗೆ ಹೋಗಿ ಬೀಳಲು ಹವಣಿಸುತ್ತಿದ್ದ ಇಂಡಿಯನನು ಪೆಟ್ಟುತಗಲಿ ಹತನಾಗಿ ಬಿದ್ದನು. ಅವನು ಬಿದ್ದೊಡನೆಯೇ ಹುಡುಗನು ದೌಡೋಡಿಬಂದು ಗುಡಿಸಲನ್ನು ಸೇರಿಕೊಂಡನು. ಎಲ್ಲರೂ ಸೇರಿ ತಂದೆಯನ್ನು ಸಮಾಧಿಗೊಳಿಸಿದರು.

ವಿಧವೆಯೂ ನಿಸ್ಸಹಾಯಳೂ ಆದ ತಾಯಿಗೆ ಬಲು ಕಷ್ಟಬಂದಿತು. ಮಕ್ಕಳಿನ್ನೂ ಚಿಕ್ಕವರು. ಆ ರಾಜ್ಯದಲ್ಲಿ ಯಾವ ಮೂಲೆಯಿಂದ ಯಾವ ಮೂಲೆಯವರೆಗೆ ನೋಡಿದರೂ ನಿರ್ಗತಿಕರಲ್ಲದ ಜನರು ಕಾಣುತ್ತಿರಲಿಲ್ಲ. ಕೆಂಟಕಿಯಲ್ಲಂತೂ ಉತ್ತಮಸ್ಥಿತಿಯೆಂಬುದು ತೀರ ದುರ್ಲಭವಾಗಿದ್ದಿತು. ಪಾಂಡಿತ್ಯವೂ ಶಾಸ್ತ್ರಾಭಿಜ್ಞಾನವೂ ಅಲ್ಲಿಗೆ ಕಾಲಿಟ್ಟಿರಲಿಲ್ಲ. ಅಲ್ಲಿ ಸ್ಕೂಲುಗಳ ಹೆಸರಿರಲಿಲ್ಲ. ಓದು ಬರಹವನ್ನು ಕಲಿಯಲು ಇತರ ಸಾಧನವೂ ಇರಲಿಲ್ಲ. ಪ್ರೆಸಿಡೆಂಟನ ತಂದೆಯಾದ ಥಾಮ

ಸ್ಸನು ನಿರಕ್ಷರಕುಕ್ಷಿಯೂ ದರಿದ್ರನೂ ಮೂಢನೂ ಆಗಿಯೇ ಬೆಳೆದನು. ತನ್ನ ಮದುವೆಯಾಗುವವರೆಗೂ ಆತನು ಒದನ್ನು ಕಲಿಯಲೇ ಇಲ್ಲ. ತಾನು ಕೆಲಸಕ್ಕೆ ಬಾರದ ಮನುಷ್ಯನಾಗಲು ವಿದ್ಯೆ ಬರದಿದ್ದುದೇ ಕಾರಣವೆಂದು ಆತನು ಹೇಳುತ್ತಿದ್ದನು. ಆದರೆ, ತಾನು ಹೀಗಾದರೂ ತನ್ನ ಮಕ್ಕಳು ನಿರ್ಗಂಧಕುಸುಮಗಳಾಗ ಬಾರದೆಂದು ಅವನ ಮನಸ್ಸಿನಲ್ಲಿ ದೃಢವಾಗಿದ್ದಿತು.

ಕ್ರಿ. ಶ. 1806 ರಲ್ಲಿ ವರ್ಜೀನಿಯಾ ದೇಶಸ್ಥಳಾದ ಯುವತಿಯೊಬ್ಬಳು (Nancy Hanks) ಥಾಮಸ್ ಲಿಂಕನ್ನನನ್ನು ಮದುವೆಯಾದಳು. ಥಾಮಸ್ಸನು ಪ್ರತ್ಯೇಕವಾದ ಮನೆಯನ್ನು ಏರ್ಪಡಿಸಿಕೊಂಡು ವಾಸಮಾಡುತ್ತ ಸಂಸಾರವನ್ನಾರಂಭಿಸಿದನು. ಆ ಪ್ರಾಂತದಲ್ಲಿ ಕಾಡು ಹೆಚ್ಚಾಗಿದ್ದಿತು. ಆದರೆ ಅದನ್ನು ಕತ್ತರಿಸಿ ನೆಲವನ್ನು ಉತ್ತು ಬಿತ್ತಿದವರಿಗೆ ಬೆಳೆಯು ವಿಪುಲವಾಗಿ ಆಗದಿರುತ್ತಿರಲಿಲ್ಲ.

ಆ ಮರದ ಮನೆಯಲ್ಲಿ 1809 ನೆಯ ಇಸವಿ ಫೆಬ್ರವರಿ ಹನ್ನೆರಡನೆಯ ತಾರೀಖಿನ ದಿನ ಅಬ್ರಹಾಂ ಲಿಂಕನ್ನನು ಹುಟ್ಟಿದನು. ಅವನಿನ್ನೂ ಕಂಕುಳ ಕಂದನಾಗಿದ್ದಾಗಲೇ ತಂದೆತಾಯಿಗಳು ಆ ನಿವಾಸವನ್ನು ಬಿಟ್ಟು ಸ್ವಲ್ಪದೂರದಲ್ಲಿದ್ದ ಮತ್ತೊಂದಕ್ಕೆ ವಾಸಹೋದರು. ಆದರೆ ಮೊದಲದನ್ನು ಸಂಪೂರ್ಣವಾಗಿ ತ್ಯಜಿಸಿ ಹೋಗಲಿಲ್ಲ. ಎರಡು ಕಡೆಗಳಲ್ಲಿಯೂ ಇರುತ್ತ ಅಬ್ರಹಾಂ ಲಿಂಕನ್ನನು ಬೆಳೆದು ಏಳು ವರ್ಷದ ಹುಡುಗನಾದನು. ಥಾಮಸ್ಸನಿಗೆ ಮೂರುಮಂದಿ ಮಕ್ಕಳು. ಹಿರಿಯವಳಾದ ಸಾರಳು ಅಬ್ರಹಾಮನಿಗಿಂತ ಮೂರು ವರ್ಷಕ್ಕೆ ದೊಡ್ಡವಳು; ಮತ್ತೊಬ್ಬನು ಅಬ್ರಹಾಮನಿಗಿಂತ ಚಿಕ್ಕವನು. ಆದರೆ ಈ ಮಗನು ಬಾಲ್ಯದಲ್ಲಿಯೇ ತೀರಿಹೋಗಲಾಗಿ ಇಬ್ಬರೇ ಉಳಿದರು. ತಾಯಿಯು ಸಾಧಾರಣವಾಗಿ ಎತ್ತರವುಳ್ಳವಳು. ಆಕೆಯ ಕಣ್ಣುಗಳಲ್ಲಿ ಪ್ರಕೃತಿಯ ಸೌಜನ್ಯತೆಯೂ ಹೃದಯದ ಪ್ರಸನ್ನಪ್ರಕೃತಿಯೂ ವ್ಯಕ್ತನಾಗಿರುತ್ತಿದ್ದುವು. ಆಕೆಯ ಮಾತನ್ನು ಮಕ್ಕಳು ಎಳ್ಳಷ್ಟೂ ಮೀರುತ್ತಿರಲಿಲ್ಲ. ಆಕೆಗೆ ಓದುಬರಹವೆಂದರೆ ಪ್ರಾಣ. ಕೈಗೆ ಸಿಕ್ಕಿದ ಪುಸ್ತಕವನ್ನು ಓದಿ ಮುಗಿಸದೇ ಬಿಡುತ್ತಿರಲಿಲ್ಲ. ಕಾಲಬಳಿಯಲ್ಲಿ ಕುಳಿತು ಅನನ್ಯ ಮನಸ್ಕರಾಗಿ ಕೇಳುತ್ತಿದ್ದ ಮಕ್ಕಳಿಗೆ ಮಾತೆಯು ಕಥೆಗಳನ್ನೂ ಇತಿಹಾಸಗಳನ್ನೂ ಓದಿ ಹೇಳುತ್ತಿದ್ದಳು.

ಪತಿಪತ್ನಿಯರಿಬ್ಬರೂ ನಿಷ್ಠರು, ಪಾಪಭೀತಿಯುಳ್ಳವರು; ದೇವರಲ್ಲಿ ಭಕ್ತಿಯುಳ್ಳವರು. ಅವರು ಶ್ರಮವನ್ನು ವಹಿಸಿ ಮಕ್ಕಳಿಗೂ ಕೂಡ ಪಾಪಭೀತಿಯನ್ನೂ ಭಗವದ್ಭಕ್ತಿಯನ್ನೂ ಕಲಿಸಿದರು. ಆದರೆ ಆ ವಿಚಾರಗಳನ್ನು ಅವರ ಮನಸ್ಸಿನಲ್ಲಿ ನಿಶ್ಚಲವಾಗಿ ನೆಲೆಗೊಳಿಸಲು ದೇವಾಲಯವಾಗಲೀ ಪಾಠಶಾಲೆಯಾಗಲೀ ಸುತ್ತುಮುತ್ತಿನಲ್ಲಿರಲಿಲ್ಲ. ತಾಯಿಯು ಮಕ್ಕಳಿಗೆ ಅಕ್ಷರವನ್ನು ಕಲಿಸಿ ಕಾಗುಣಿತವನ್ನು ಹೇಳಿಕೊಟ್ಟಳು.

ಆದರೂ ಹುಡುಗನ ವಿದ್ಯೆಯು ಸರಿಯಾಗಿ ಸಾಗುತ್ತಿರಲಿಲ್ಲ. ಒಂದೆರಡು ತಿಂಗಳವರೆಗೆ ಅಭ್ಯಾಸವು ನಡೆದಪಕ್ಷದಲ್ಲಿ ಆಬಳಿಕ ಆರು ತಿಂಗಳವರೆಗೆ ತಪ್ಪಿಹೋ

ಗುತ್ತಿದ್ದಿತು. ಶಾಲೆಯೇ ನಡೆಯುತ್ತಿರಲಿಲ್ಲ. ಈ ಕಾರಣದಿಂದ ಅವನ ವ್ಯಾಸಂಗವು ಸಮಗ್ರವಾಗಲಿಲ್ಲ. ಕೆಲವು ಕಾಲದಮೇಲೆ ಒಂದುದಿನ ಅಬ್ರಹಾಮನು ತಾನು ಎಷ್ಟುದಿನ ಶಾಲೆಗೆ ಹೋಗುತ್ತಿದ್ದೆನೆಂಬುದನ್ನು ಲೆಕ್ಕಹಾಕಿದನು. ನೆಟ್ಟಗೆ ಒಂದು ವರ್ಷವೂ ಆಗಲಿಲ್ಲ.

ದೇವಮಂದಿರಗಳನ್ನಿನ್ನೂ ಆಗಿನ ಜನರು ಕಂಡಿರಲಿಲ್ಲ. ಉಪದೇಶಗಳೂ ಉಪನ್ಯಾಸಗಳೂ ಸಾಮಾನ್ಯವಾಗಿ ಮರದ ನೆಳಲಿನಲ್ಲಾಗಲೀ ವಿಶಾಲವಾಗಿ ಕಟ್ಟಿ ಕೊಂಡಿರುವ ಕೃಷಿಕರ ಮನೆಗಳಲ್ಲಾಗಲೀ ನಡೆಯುತ್ತಿದ್ದುವು. ದೇಶದೇಶವನ್ನು ಸುತ್ತುತ್ತ ಉಪದೇಶವನ್ನು ವೃತ್ತಿಯಾಗಿ ಮಾಡಿಕೊಂಡಿದ್ದ ಭಕ್ತರ ಬಾಯಿಂದ ಜನರು ಅವುಗಳನ್ನು ಕೇಳುತ್ತಿದ್ದರು. ಭಗವಂತನ ಮಹಿಮೆಯನ್ನರಿತು ಧ್ಯಾನ ಮಾಡಲು ಮತ್ತಾವ ಸಾಧನವೂ ಇರಲಿಲ್ಲ.

ಥಾಮಸ್ ಲಿಂಕನ್ನನಿಗೆ ಕೆಂಟಕಿಯ ವಾಸವು ಬೇಸರವನ್ನುಂಟುಮಾಡಿತು. ಅದಕ್ಕೆ ಅನೇಕ ಕಾರಣಗಳಿದ್ದುವು. ಗುಲಾಮರನ್ನು ಚಾಕರಿಗಾಗಿ ಇಟ್ಟುಕೊಳ್ಳುವ ಪದ್ಧತಿಯು ಅಲ್ಲಿ ಸಾಮಾನ್ಯವಾಗುತ್ತ ಬಂದಿತು. ಒಬ್ಬೊಬ್ಬ ಜಮೀನುದಾರನೂ ತನ್ನ ಶಕ್ತಿಗನುಸಾರವಾಗಿ ಗುಲಾಮರನ್ನಿಟ್ಟುಕೊಳ್ಳುತ್ತ ಬಂದನು. ಭೂಮಿಕಾಣಿ ಗಳು ಹೇಗೆ ಆಸ್ತಿಯಾಗಿದ್ದುವೋ ಹಾಗೆ ದಾಸಜನವೂ ಒಂದು ಬಗೆಯ ಆಸ್ತಿಯಾ ಯಿತು. ಹೀಗಿರುವಾಗ ಒಬ್ಬ ದಾಸನಿಗೂ ಕೂಡ ಸ್ವಾಮಿಯಾಗದಿದ್ದಂತಹ ಬಡ ಜಮೀನುದಾರನನ್ನು ಕೇಳುವವರೇ ಇರಲಿಲ್ಲ. ಎಲ್ಲಾ ವಿಚಾರಕ್ಕೂ ಅವರು ಗುಲಾಮರನ್ನುಳ್ಳ ಧನಿಕರನ್ನು ಆಶ್ರಯಿಸುವ ಹೊತ್ತುಬಂದಿತು. ಲಿಂಕನ್ನನಿಗೆ ಅದು ಸರಿಬೀಳಲಿಲ್ಲ. ನೆರೆಹೊರೆಯವರೆಲ್ಲರೂ ಗುಲಾಮರನ್ನಿಟ್ಟುಕೊಂಡಿರಲಾಗಿ ತಾನು ಅಲ್ಲಿರುವುದು ಶುದ್ಧ ಅಪಮಾನಕರವೆನ್ನಿಸಿತು. ಅವನು ಕುಬೇರನಲ್ಲ. ಒಂದೊಂದುವೇಳೆ ಕೈತುತ್ತುಬಾಯಿತುತ್ತೂ ಕಷ್ಟವಾಗಿ ತೀರ ಅಭಾಸವಾಗು ತ್ತಿದ್ದಿತು. ಅದರ ಜೊತೆಗೆ ಅವನ ಮನಸ್ಸು ಸಮಗತಿಯಲ್ಲಿರಲಿಲ್ಲ. ಇಂಡಿಯಾನದ ಕಡೆಯಿಂದ ವಿಚಿತ್ರವಾದ ಕಥೆಗಳೂ ವರ್ಣನೆಗಳೂ ಗಾಳಿಯೊಡನೆ ಓಡಿಯೋಡಿ ಬರುತ್ತಿದ್ದುವು. ಫಲವತ್ತಾದ ಕ್ಷೇತ್ರಗಳಿಂದಲೂ ಮೃಗಸಂಕೀರ್ಣವಾದ ಕಾಡುಗ ಳಿಂದಲೂ ಕಣ್ಣಿಗೆ ಕಾಣುವವರೆಗೆ ಹರಡಿದ್ದ ಹುಲ್ಲುಗಾವಲೆಗಳಿಂದಲೂ ಕಂಗೊಳಿ ಸುವ ಇಂಡಿಯಾನದ ಮುಂದೆ ಕೆಂಟಕಿಯು ಎಷ್ಟರದು! ಥಾಮಸ್ಸನು ಅಲ್ಲಿಗೆ ಹೊರಡಲೇಬೇಕೆಂದು ನಿಶ್ಚಯಿಸಿದನು.

ಹಿಂದೆಯೇ ನಿಂತ ತಾಯಿಯೂ ಮಕ್ಕಳೂ ಬಹಳ ಕಷ್ಟದಿಂದ ಕಾಲವನ್ನು ತಳ್ಳುತ್ತಿದ್ದರು. ಅವರಿಗಾಗಿ ಥಾಮಸ್ಸನು ಬಿಟ್ಟು ಹೋದ ಆಹಾರ ಪದಾರ್ಥಗಳು ಸಾಕುಸಾಲದೆನ್ನುವಷ್ಟಿದ್ದುವು. ತಂದೆಯು ಮನೆಯಲ್ಲಿಲ್ಲವೆಂತ ಹುಡುಗರು ಶಾಲೆಗೆ ಹೋಗುವುದು ತಪ್ಪಲಿಲ್ಲ. ಶಾಲೆಯ ಕೆಲಸವನ್ನು ಮುಗಿಸಿಕೊಂಡು ಅಬ್ರಹಾಮನು ಕಾಡಿಗೆ ಹೋಗಿ ಬಲೆಯನ್ನೊಡ್ಡಿ ಸಿಕ್ಕಿದ ಪ್ರಾಣಿಗಳನ್ನೂ ಹಕ್ಕಿಗಳನ್ನೂ ಮನೆಗೆ ತರುತ್ತಿದ್ದನು. ಅವರಿಗೆ ಆಹಾರವು ಈ ರೀತಿಯಾಗಿರುತ್ತಿದ್ದಿತು. ಧಾನ್ಯಗಳ ರೊಟ್ಟಿ ತರಗೆಲೆಗಳೂ ಹಾಸಿಗೆಯಾಗುತ್ತಿದ್ದುವು. ಅಬ್ರಹಾಮನು ನಿತ್ಯವೂ ಬೊ

ತ್ರಿಗೆ ಮುಂಚೆ ಎದ್ದು ಹೊರಗೆ ಬಿದ್ದಿದ್ದ ಒಣಮರಗಳನ್ನು ಕಡಿದು ಆದಿನದ ಅಡಿಗೆಗೆ ಸೌದೆಯನ್ನೊದಗಿಸಿಕೊಡುತ್ತಿದ್ದನು. ಸ್ವಾಭಾವಿಕವಾಗಿ ಅವನು ಚಟುವಟಿಕೆಯುಳ್ಳವನಲ್ಲ. ಆದರೆ ಒಂದು ಕೆಲಸಕ್ಕೆ ಕೈಹಾಕಿದಮೇಲೆ ತನ್ನ ಮನಸ್ಸನ್ನು ಅದರೊಳಗಿಟ್ಟು ನೆರವೇರಿಸುತ್ತಿದ್ದನು. ಹಿಮಸುರಿಯುವುದನ್ನೂ ಮೈಕೈಗಳನ್ನು ಕೊರೆಯುತ್ತ ಬೀಸುವ ಗಾಳಿಯನ್ನೂ ಲಕ್ಷ್ಯಕ್ಕೆ ತರುತ್ತಿರಲಿಲ್ಲ. ಶಾಲೆಗೆ ಹೋಗುವುದಕ್ಕೆ ಮುಂಚೆ ಅವನು ಕೊಡಲಿಯನ್ನು ಹಿಡಿಯದಿದ್ದರೆ ಶಾಲೆಯಿಂದ ಬಂದು ಕಡಿದುಕೊಡುವವರೆಗೂ ತಾಯಿಗೆ ಅಡಿಗೆಗೆ ಸೌದೆಯಿರುತ್ತಿರಲಿಲ್ಲ.

ಥಾಮಸ್ಸನು ಪತ್ನೀಪುತ್ರರನ್ನು ಸೇರಿದನು. ಅವನ ಮುಖವು ಜೋಲುಬಿದ್ದಿದ್ದಿತು. ಹರ್ಷವಿರಲಿಲ್ಲ. ಎಂದಿಗೂ ಮರೆಯದಂತಹ ನಷ್ಟವು ಪ್ರಾಪ್ತವಾಗಿದ್ದಿತು. ಸಂಸಾರದ ಅನೇಕ ಸರಕುಗಳೂ ಅತ್ಯಂತ ಉಪಯುಕ್ತವಾದ ನೇಗಿಲು ಮುಂತಾದ ಸಾಮಾನುಗಳೂ ಅವನ ಪ್ರಯಾಣಕಾಲದಲ್ಲಿ ಒದಗಿದ ಪ್ರಮಾದದದೆಸೆಯಿಂದ ಒಹಿಯೋ ನದಿಯ ತಳವನ್ನು ಸೇರಿದ್ದುವು. ಅವನು ಉಳಿದವುಗಳನ್ನು ಪರಿಚಿತನಾಗಿ ವಿಶ್ವಾಸಾರ್ಹನಾದೊಬ್ಬ ಸಿಪಾಯಿಯ ವಶದಲ್ಲಿಟ್ಟು ಬಂದಿದ್ದನು. ಇಂಡಿಯಾನವು ಯಾವ ಭಾಗದಲ್ಲಿಯೂ ಉತ್ತಮವಾಗಿರಲಿಲ್ಲ. ಆದರೂ ಹೆಂಡತಿಯೊಡನೆ ಅದರಷ್ಟು ಫಲವತ್ತಾದ ಸ್ಥಳವು ಮತ್ತೊಂದು ಸಿಕ್ಕದೆಂದು ಸುಳ್ಳು ಹೇಳಿದನು.

ಅವರು ಬಹುದೂರ ಪ್ರಯಾಣ ಮಾಡಬೇಕಾಗಿದ್ದಿತು. ಥಾಮಸ್‌ಲಿಂಕನ್ನನು ಎರಡು ಕುದುರೆಗಳನ್ನು ಹೊಂದಿಸಿಕೊಂಡು, ಅವುಗಳ ಮೇಲೆ ಮನೆಯಲ್ಲಿದ್ದ ವಿಶಿಷ್ಟ ಪದಾರ್ಥಗಳನ್ನೂ ಬಟ್ಟೆಗಳನ್ನೂ ಹೇರಿ ಹೆಂಡತಿ ಮಕ್ಕಳೊಡನೆ ಹೊರಟನು. ಅವರು ಒಂದು ನಾರದ ಮೇಲೆ ಒಹಿಯೋನದಿಯನ್ನು ತಲಪಿದರು. ಅದರ ದಡದ ಮೇಲಿಂದ ಅವರು ಹೊಕ್ಕ ರಾಜ್ಯವು ಕಣ್ಣಮುಂದೆ ವಿಸ್ತರಿಸಿದ್ದಿತು. ಎಲ್ಲಿ ನೋಡಿದರೂ ದಟ್ಟವಾದ ಕಾಡೊಂದು ಹೊರತು ಮತ್ತಾವುದೂ ಕಾಣಿಸಲಿಲ್ಲ. ಅರಣ್ಯವು ದುರ್ಗಮವಾಗಿದ್ದಿತು. ನದಿಯು ಪಕ್ಕದಲ್ಲಿ ಪ್ರವಹಿಸುತ್ತಿದ್ದಿತು. ಕಾಡು ಎಲ್ಲಿಯವರೆಗಿರುವುದೆಂಬುದನ್ನು ಗೊತ್ತುಮಾಡಲು ಸಾಧ್ಯವೇ ಆಗಿರಲಿಲ್ಲ. ಆ ವನಗಹನದಲ್ಲಿ, ಮರಗಳು ತಲೆದೂಗುವುದರಿಂದ ಒಮ್ಮೊಮ್ಮೆ ಕೇಳಿಸುವ ಸುಯ್ ಸುಯ್ ಶಬ್ದವನ್ನೂ ಈಕಡೆಯಿಂದ ಆಕಡೆಗೆ ಹಾರಿ ಹೋಗುತ್ತ ಯಾವುದಾದರೊಂದು ಹಕ್ಕಿಯು ಒಮ್ಮೊಮ್ಮೆ ಮಾಡುವ ಗಾನವನ್ನೂ ಬೇಗ ಮರೆತು ನೀರವವು ತನ್ನ ಆಧಿಪತ್ಯವನ್ನು ನಿರಂತರವಾಗಿ ಸ್ಥಾಪಿಸಿದ್ದಿತು.

---

# ೨ನೆಯ ಅಧ್ಯಾಯ

## ಇಂಡಿಯಾನದಲ್ಲಿ

ಸಂಯೋಗ ಹೊಂದಿದ ಸಂಸ್ಥಾನಗಳಲ್ಲಿ ಇಂಡಿಯಾನವೂ ಒಂದಾಗಿದ್ದಿತು. ಅನ್ಯಪ್ರದೇಶಗಳಿಂದ ಆ ಸಂಸ್ಥಾನಕ್ಕೆ ಜನವು ತಂಡ ತಂಡವಾಗಿ ಪ್ರವಹಿಸಿ ಬಹು ದೂರದವರೆಗೆ ವ್ಯಾಪಿಸಿತು. ಆದುದರಿಂದ ಥಾಮಸ್‌ಲಿಂಕನ್ನನು ಹಿಂದಿನ ರಾಜ್ಯ ದಲ್ಲಿದ್ದಂತೆ ಒಂಟಿಯಾಗಿ ಮನೆಯನ್ನು ಕಟ್ಟಿಕೊಂಡಿರಲಾಗಲಿಲ್ಲ. ನೆರೆಯು ಬೇಕಾದಷ್ಟಿ ದ್ದಿತು. ಆದರೆ ಅವನಿಗೆ ಅಂತಹ ಪ್ರದೇಶವು ಇಷ್ಟವಾಗಲಿಲ್ಲ. ತಾನು ರಾಜ್ಯದ ಸ್ಥಿತಿ ಗತಿಗಳನ್ನು ತಿಳಿದುಕೊಂಡು ಹೋಗಲು ಬಂದಿದ್ದಾಗ ಸ್ನೇಹಿತನಲ್ಲಿಟ್ಟಿದ್ದ ಸಾಮಾನು ಗಳನ್ನು ಅವನು ಈಗ ತೆಗೆದುಕೊಂಡು ಕಾಡಿನಲ್ಲಿ ಇನ್ನೂ ಮುಂದೆ ಹೊರಟನು. ಅಲ್ಲಿ, ದಟ್ಟವಾದ ಮರಗಿಡಗಳಿಂದ ಆವೃತನಾಗಿ ಹುಲ್ಲು ಹಸಿರನ್ನು ಹೊದೆದ ದಿಣ್ಣೆ ಯೊಂದು ಸಿಕ್ಕಿತು. ಆ ಸ್ಥಳವು ಎಲ್ಲರ ಒಪ್ಪಿಗೆಗೂ ಬರಲಾಗಿ ಅಲ್ಲಿ ಮನೆಯನ್ನು ಕಟ್ಟಿಕೊಳ್ಳಬೇಕೆಂದು ನಿಷ್ಕರ್ಷೆಯಾಯಿತು.

ಅಲ್ಲಿಗೆ ಬಂದಾಗ ಅಬ್ರಹಾಮನಿಗೆ ಎಂಟು ವರ್ಷವಾಗಿದ್ದಿತು. ಅವನು ತನ್ನ ವಯಸ್ಸಿಗೆ ಉದ್ದವಾಗಿಯೇ ಇದ್ದನು. ಉದ್ದನಾಗಿ ಬೆಳೆಯುತ್ತಲೂ ಇದ್ದನು. ಮೈಗಿಂತಲೂ ಕಾಲುಗಳ ಉದ್ದವು ಹೆಚ್ಚಾಗಿದ್ದಿತು. ಹುಡುಗನು ನೋಡುವುದಕ್ಕೆ ಲಕ್ಷಣವಾಗಿರಲಿಲ್ಲ. ನೈರ್ಮಲ್ಯವೆಂತಹದೆಂಬುದನ್ನೂ ಇನ್ನೂ ಅರಿಯದಿದ್ದನು. ಕಾಡಿನ ಮಧ್ಯದಲ್ಲಿರಲಾಗಿ ನಾಜೋಕಿನಿಂದ ನೆಯ್ದ ಹತ್ತಿಯ ಬಟ್ಟೆಗಳು ದುರ್ಲಭ ನಾದುವು. ಸಿಕ್ಕಿದರೂ ಅವುಗಳ ಬೆಲೆಯು ಬಡಬಗ್ಗರಿಗೆ ಬರೆಯೆಳೆಯುವಷ್ಟಾಗುತ್ತಿ ದ್ದಿತು. ಹತ್ತಿಯನ್ನೂ ಉಣ್ಣೆಯನ್ನೂ ಬೆರಸಿ ನೆಯ್ದ ಬಟ್ಟೆಗಳನ್ನು ಅಬ್ರಹಾಮನು ತೊಡುತ್ತಿದ್ದನು. ತಾನು ಪ್ರಬುದ್ಧನಾಗುವವರೆಗೂ ಕಾಲುಚೀಲವನ್ನು ಕಂಡೇ ಇರಲಿಲ್ಲವೆಂದು ಅವನು ಹೇಳುತ್ತಿದ್ದನು. ತಾಯಿಯು ತೊಗಲಿನಿಂದಲೂ ಇತರ ವಸ್ತುಗಳಿಂದಲೂ ಮಾಡಿಕೊಟ್ಟ ಜೋಡುಗಳನ್ನು ಅವನು ಮೆಟ್ಟುತ್ತಿದ್ದನು.

ಕಂಕುಳಲ್ಲೊಂದು ಬಂದೂಕವಿದ್ದರೆ ಕಿರಾತನ ವೇಷವು ಸಂಪೂರ್ಣವಾಗುತ್ತಿ ದ್ದಿತು. ಆದರೆ ಹುಡುಗನಿಗೆ ಬೇಟೆಯಲ್ಲಿ ಅಷ್ಟು ಉತ್ಸಾಹವಿರಲಿಲ್ಲ. ಮನೆಯವರ ಮಾಂಸಾಹಾರಾಪೇಕ್ಷೆಯನ್ನು ಪೂರ್ತಿಗೊಳಿಸಲು ಮಾತ್ರ ಆಗಿಂದಾಗ ಹಕ್ಕಿಗಳನ್ನು ಕೊಲ್ಲುತ್ತಿದ್ದನು. ಒಂದಾವೃತ್ತಿ ಕಾಡುಕೋಳಿಗಳ ಹಿಂಡೊಂದು ತಮ್ಮ ಮನೆಯ ಹತ್ತಿರಲೇ ಮೇಯುತ್ತಿದ್ದುದನ್ನು ಕಂಡು ತನ್ನ ತಂದೆಯ ಬಂದೂಕವನ್ನುಪಯೋ ಗಿಸಿ ಅವುಗಳಕಡೆಗೆ ಗುಂಡು ಹಾರಿಸಿದನು. ಸ್ಥೂಲವಾಗಿ ಆ ಪಡೆಗೆ ಮುಖಂಡನಂತಿ ದ್ದೊಂದು ಪಕ್ಷಿಯು ಸತ್ತು ಉರುಳಿತು. ಸಜೀವನಾದ ಪ್ರಾಣಿಯನ್ನು ಹೊಡೆ ಯಲು ಅದೇಮೊದಲು. ಆ ಮೊದಲುಬಾರಿ ಪಕ್ಷಿಯನ್ನು ಹೊಡೆದು ಮನೆಗೆ ತರು ವಾಗ ಅವನಿಗೆ ದುಃಖವೂ ಸಂತೋಷವೂ ಉಂಟಾದುವು. ನಿರಪರಾಧಿಯಾದ ಪ್ರಾಣಿ

ಯನ್ನು ಹೊಡೆದುದಕ್ಕಾಗಿ ದುಃಖವು ಗುರಿಯು ವ್ಯರ್ಥವಾಗದಿದ್ದುದಕ್ಕಾಗಿ ಉಂಟಾದ ಸಂತೋಷಕ್ಕಿಂತ ಹೆಚ್ಚಾಗಿ ಅವನು ಬಹಳ ನೊಂದುಕೊಂಡನು. ದುಃಖವು ಬಹುಕಾಲದವರೆಗೆ ಅಳಿಸಿ ಹೋಗಲಿಲ್ಲ; ಪ್ರಾಣಿಹತ್ಯೆಯನ್ನು ಮಾಡಲು ಅದೇ ಕೊನೆಯಾಯಿತು.

ದೂರದಿಂದ ಇಂಡಿಯಾನವು "ನುಣ್ಣಗೆ" ಕಾಣಿಸಿದರೂ ಅದರೊಳಗೆ ವಾಸವಾಗಿದ್ದವರು ತಮ್ಮ ದಾರಿದ್ರ್ಯವನ್ನೂ ರಾಜ್ಯವು ಬೆಂಗಾಡಾಗಿದ್ದುದನ್ನೂ ಹೇಳಿಕೊಳ್ಳಲು ಸಂಕೋಚಪಟ್ಟುಕೊಳ್ಳುತ್ತಿದ್ದರು. 1812ನೇ ಇಸವಿಯ ಯುದ್ಧವು ಆಗ ತಾನೇ ಮುಗಿದಿದ್ದಿತು. ರೇವುಪಟ್ಟಣಗಳಲ್ಲಿ ವ್ಯಾಪಾರವು ನಿಂತುಹೋಗಿ ಪ್ರಜೆಗಳು ಬಹಳ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದ್ದರು. ಪದಾರ್ಥಗಳನ್ನು ಸ್ವಂತವಾಗಿ ತಯಾರುಮಾಡಲು ಸಂಯುಕ್ತಸಂಸ್ಥಾನಗಳಿಗೆ ಇನ್ನೂ ಚೈತನ್ಯವುಂಟಾಗಿರಲಿಲ್ಲ. ಹೊರಗಿನಿಂದ ಬರುವಂಥವುಗಳು ಅಗ್ಗವಾಗಿರುತ್ತಿರಲಿಲ್ಲ. ಸೂಜಿಗೆ ಬದಲಾಗಿ ಮುಳ್ಳು ಕೆಲಸ ಮಾಡುತ್ತಿದ್ದಿತು. ಅತ್ಯವಶ್ಯಕವಾದ ವಸ್ತುಗಳು ಸಿಕ್ಕಿದರೆ ಮೃಷ್ಟಾನ್ನಭೋಜನವಾದ ಹಾಗೆಂದು ಜನಗಳು ಭಾವಿಸುತ್ತಿದ್ದರು.

ಆದರೆ ಕಾಡಿನಲ್ಲಿ ಖಗಮೃಗಗಳಿರುವವರೆಗೆ ಅಷ್ಟು ಯೋಚನೆಯಿರಲಿಲ್ಲ. ಅಲ್ಲಿಯ ಜೀವನವು ಮಾತ್ರ ಹುಡುಗರಿಗೂ, ಅವರಿಗಿಂತ ಹೆಚ್ಚಾಗಿ, ಹೆಂಗಸರಿಗೂ ಕಷ್ಟಮಯವಾಗಿದ್ದಿತು. ನೆರೆಹೊರೆಯ ಗೃಹಿಣಿಯಾವಳೂ ಬಂದು ಪ್ರಕೃತದ ವರ್ತಮಾನವನ್ನೂ ದೇಶಕಾಲಗಳ ಸ್ಥಿತಿಯನ್ನೂ ವರ್ಣಿಸಿ ದೂಷಿಸಿ ಮಾತನಾಡಿ ಒಂದೈದು ನಿಮಿಷದ ಹೊತ್ತನ್ನೂ ವಿನೋದವಾಗಿ ಕಳೆಯಿಸುತ್ತಿರಲಿಲ್ಲ. ಆ ಕಡೆಯ ನದಿಯ ಮಾರ್ಗವಾಗಿ ಹಡಗು ಒಂದಾದರೂ ಸಂಚರಿಸುತ್ತಿರಲಿಲ್ಲ. ನಿವಾಸಿಯೊಬ್ಬನು ಒಂದು ಕಾಗದವನ್ನು ಬರೆದು ಅದನ್ನು ನೂರು ಮೈಲಿಗಳ ದೂರದಲ್ಲಿದ್ದ ನೆಂಟನಿಗೆ ಕಳುಹಿಸಿದರೆ ತಲಪಲು ಕಾಲವು ತಿಂಗಳ ಮೇಲಾಗುತ್ತಿದ್ದಿತು. ಆಡಳಿತದ ವಿಚಾರಗಳೂ ಸರ್ಕಾರದ ನಡೆವಳಿಕೆಗಳೂ ಸ್ವದೇಶ ದೇಶಾಂತರಗಳ ವೃತ್ತಾಂತಗಳೂ ಪ್ರತಿಶಬ್ದದಂತೆ ದುರ್ಬಲವಾಗಿಯೂ ಕರ್ಣಾಕರ್ಣಿಕೆಯಾಗಿಯೂ ಕೇಳಿಬರುತ್ತಿದ್ದುವು.

ಮೊದಲು ಕಟ್ಟಿದ ಮನೆಯು ಕೇವಲ ಗೂಡಿನಂತೆ ತಾತ್ಕಾಲಿಕವಾದುದರಿಂದ ಲಿಂಕನ್ನನು ದೃಢವಾಗಿಯೂ ವಿಶಾಲವಾಗಿಯೂ ಇರುವ ಮನೆಯನ್ನು ಕಟ್ಟಬೇಕೆಂದು ಆಲೋಚಿಸಿದನು. ತಂದೆಮಕ್ಕಳಿಬ್ಬರೂ ಕಾಡಿನಿಂದ ದೊಡ್ಡ ಮರಗಳನ್ನು ಕಡಿದು ತಂದು, ಸವರಿ, ನೇರವಾದ ತುಂಡುಗಳನ್ನು ಮಾಡಿದರು. ಅವುಗಳನ್ನು ನಿಲ್ಲಿಸುವಾಗಲೂ ಮನೆಯನ್ನು ಕಟ್ಟಿ ಪೂರ್ತಿಮಾಡುವಾಗಲೂ ಸಹಾಯವು ಅವಶ್ಯಕವಾದುದರಿಂದ ಲಿಂಕನ್ನನು ನೆರೆಯವರನ್ನು ಕರೆದನು. ಆಕಾಲದಲ್ಲಿ ಮನೆ ಕಟ್ಟುವುದು ಅತ್ಯಂತ ವಿಶೇಷವಾದ ಸಂಗತಿಯಾಗಿದ್ದಿತು. ವಿನೋದವಾಗಿ ಕಾಲವನ್ನು ಕಳೆಯುವುದಕ್ಕೂ ನೆರೆಹೊರೆಯವರೊಡನೆ ಪರಿಚಯವನ್ನುಂಟುಮಾಡಿಕೊಳ್ಳುವುದಕ್ಕೂ ಅದು ಅನುಪಮಸಮಯ. ಮೈಯಲ್ಲಿ ಬೆವರುಹರಿಯುವಷ್ಟು ಕೆಲಸವು ಬೀಳುತ್ತಿದ್ದಿತು. ಹುಡುಗರೆಂದೂ ಮುದುಕರೆಂದೂ ತಾರತಮ್ಯವಿರಲಿಲ್ಲ. ಎಲ್ಲರೂ ಕೈಹಾಕಿದರು. ನಾಲ್ಕುಗೋಡೆಗಳೂ ಎದ್ದು ಚಾವಣಿಯನ್ನು ಹೊದೆದುವು. ಬುದ್ಧಿಯೋಡಿದಷ್ಟು

ಮಟ್ಟಿಗೆ ನಿರ್ವಹಿಸಿ ಹಿಡಿದ ಕೆಲಸವನ್ನು ಕೊನೆಗಾಣಿಸಿದುದಾಯಿತು.

ಕಾಲದೇಶವರ್ತಮಾನಗಳು ಮನುಷ್ಯನ ಚಿತ್ತವೃತ್ತಿಯನ್ನು ರೂಪಗೊಳಿಸುವುವೆಂದು ಹೇಳುತ್ತಾರೆ. ಅದು ಯಾವಾಗಲೂ ನಿಜವಾಗದು. ಮನುಷ್ಯನ ಚಿತ್ತವೂ ಅದರ ಶಕ್ತಿಯೂ ಮುಖ್ಯವಾದವುಗಳು. ಪಿಶಾಚಿಯ ಕಥೆಯನ್ನು ಹೇಳಿದರೆ ಕೆಲವರು ನಂಬುತ್ತಾರೆ; ಮತ್ತೆ ಕೆಲವರು ಅದು ಕೇವಲ ಭ್ರಾಂತಿಯೆಂದೂ ಸುಳ್ಳೆಂದೂ ತಿರಸ್ಕರಿಸುತ್ತಾರೆ. ಅಬ್ರಹಾಮನಿಗೆ ಅನೇಕರು ಅನೇಕ ಕಥೆಗಳನ್ನು ಹೇಳುತ್ತಿದ್ದರು. ಬೆಳಕನ್ನರಿಯದಂತಹ ಕಾಡುಗಳು ಸುತ್ತಲೂ ಇರಲಾಗಿ ಅಂತಹ ಕಥೆಗಳಿಗೆ ಮಿತಿಯೇ ಇರಲಿಲ್ಲ. ಒಂದಕ್ಕಾದರೂ ಅವನು ಮನಸ್ಸು ಕೊಡಲಿಲ್ಲ. ಬಳಿಕೆಯಾದರೆ ಭಯವು ಬಯಲಾಗುವುದು. ಹೊಸದಾಗಿ ಹೊಸವಾಗಿ ಬಂದು ಕಾಡುಗಳ ಹೊರವಳಯದಲ್ಲಿ ನೆಲಸುತ್ತಿದ್ದ ಜನರು ಕತ್ತಲೆಯಲ್ಲಿ ಕಲ್ಲನ್ನು ಕಂಡು ಹುಲಿಯೆಂದು ಹೆದರುವಂತಹ ಸ್ಥಿತಿಯಲ್ಲಿದ್ದರು. ಮರಗಳ ಮಧ್ಯದಲ್ಲಿ ಸಶಬ್ದವಾಗಿ ಬೀಸುವ ಬಿರುಗಾಳಿಯೂ ಅಲ್ಲಲ್ಲಿ ಸಂಚರಿಸುವ ಪ್ರಾಣಿಗಳೂ ದೂರದಲ್ಲಿ ಘೋರ್ಗರೆಯುವ ಧ್ವನಿಯೂ ಹೆದರಿಕೆಯನ್ನುಂಟುಮಾಡುವುದು ಸಹಜವೇ. ಅಬ್ರಹಾಮನು ಆ ಟೊಳ್ಳು ಕಥೆಗಳನ್ನೆಲ್ಲಾ ನಂಬಲಿಲ್ಲ. ಕೇಳಿ ಅಧೀರನಾಗಲಿಲ್ಲ. ಒಂದೊಂದುವೇಳೆ ಅವನು ಕಾಡೊಳಕ್ಕೆ ಹೋಗಿ ಕುಳಿತು ಸವಿರಾಮವಾಗಿ ಚಿಂತಿಸುತ್ತಿದ್ದನು. ಜನಗಳು ಹೇಳಿದ ಸಮಾಚಾರಗಳೆಲ್ಲವೂ ಆಗ ಚಿಂತನೆಗೆ ಬರುತ್ತಿದ್ದುವು. ಅಷ್ಟುವರ್ಷಗಳವರೆಗೆ ಅಲ್ಲಿದ್ದುಕೊಂಡು ಕಾಡನ್ನು ಕತ್ತರಿಸಿದರೂ ಅದು ಒಂದುಗೆರೆಯಷ್ಟೂ ಅರೆಯಾದಂತಿರಲಿಲ್ಲ. ಅಂತಹ ಕಾಡನ್ನು ಸೃಷ್ಟಿಮಾಡಬಲ್ಲ ಭಗವಂತನ ಮಹಿಮೆಯೆಂತಹುದೆಂದು ಅಬ್ರಹಾಮನು ನೋಡಿ ನೋಡಿ ವಿಸ್ಮಯಪಡುತ್ತಿದ್ದನು.

ಇಂಡಿಯಾನದ ಕಾಡಿಗೆ ವಾಸಹೋಗಿ ಒಂದು ವರ್ಷವಾಯಿತು. ಅಬ್ರಹಾಮನಿಗೆ ಆಗ ಹತ್ತನೆಯ ವರ್ಷವು ನಡೆಯುತ್ತಿದ್ದಿತು ಶೋಕವನ್ನರಿಯದಿದ್ದ ಮಕ್ಕಳಿಗೆ ದುಃಖವು ಪ್ರಾಪ್ತವಾಯಿತು. ಕಷ್ಟದ ಜೀವನವೂ ಹವವೂ ಮನಸ್ಸಿನ ಚಿಂತೆಯೂ ಸೇರಿ ತಾಯಿಯ ಆರೋಗ್ಯವನ್ನು ಕೆಡಿಸಿದ್ದುವು. ಮುಂದಿನ ಬೇಸಿಗೆಯಲ್ಲಿ ವಿಜಾತೀಯನಾದ ರೋಗವು ಕಾಲುಹಾಕಿಕೊಂಡಿತು. ಅದುವರೆಗೆ ಆ ರೋಗವು ಇತರಭಾಗಗಳಲ್ಲಿಯೂ ಹರಡಿ ಬಹಳ ನಷ್ಟವನ್ನುಂಟುಮಾಡಿದ್ದಿತು. ಕ್ಷೀವ್ರಕ್ಷಯವೆನ್ನಬಹುದಾದ ಆ ಜಾಡ್ಯವನ್ನು ಆಗಿನ ಜನರು ಬಿಳಿಯ ರೋಗವೆನ್ನುತ್ತಿದ್ದರು. ದನಕರುಗಳು ನೂರರಗಟ್ಟಲೆಯಾಗಿ ಅದರಿಂದ ಸಾಯುತ್ತಿದ್ದುವು. ಮನೆಮಂದಿ ಮಕ್ಕಳಿಗೆಲ್ಲಾ ತಗುಲಿ ಎಲ್ಲರನ್ನು ಮೃತ್ಯುವಿಗೆ ಈಡುಮಾಡುವುದು ಆ ರೋಗದ ಲಕ್ಷಣವಾಗಿದ್ದಿತು. ಜನದ ಪಾಡೇ ಹೀಗಿರುವಾಗ ರೋಗ ತಗಲಿದ ದನಕರು ಕುರಿಗಳನ್ನು ನೋಡುತ್ತಿದ್ದವರಾರು.

ಗಂಡನೂ ಮಕ್ಕಳೂ ಅನನ್ಯಮನಸ್ಕರಾಗಿ ಆಕೆಗೆ ಉಪಚಾರಮಾಡಿದರು. ಮಕ್ಕಳು ತಾಯಿಯ ಹಾಸಿಗೆಯ ಬಳಿಯನ್ನು ಬಿಟ್ಟು ಅರುಗಾಗುತ್ತಿರಲಿಲ್ಲ. ಹಿಂದೆ ಅವರ ಜೊತೆಯಲ್ಲಿಯೇ ಇಂಡಿಯಾನಕ್ಕೆ ಬಂದು ಅನತಿದೂರದಲ್ಲಿ ದಾಯಾದಿಗಳೊಬ್ಬರು ನೆಲಸಿದ್ದರು. ಅವರಿಗೆ ಡೆನ್ನಿಸ್ ಹ್ಯಾಂಕ್ಸ್ ಎಂಬ ಅಬ್ರಹಾಮನಷ್ಟೇ ವಯ

ಸ್ಟಿನ ಒಬ್ಬ ಮಗನಿದ್ದನು. ಆ ಹುಡುಗನು ಎರಡು ಕಡೆಯೂ ಇರುತ್ತ ತನ್ನ
ಮೂರು ಪಾಲು ಕಾಲವೆಲ್ಲವನ್ನೂ ಅಬ್ರಹಾಮನ ಸಹವಾಸದಲ್ಲಿ ಕಳೆಯುತ್ತಿದ್ದನು.
ಜ್ವರ ರೋಗವು ಆ ಹುಡುಗನ ತಾಯಿತಂದೆಗಳಿಗೂ ತಗುಲಿತು. ನೋಡಿಕೊಳ್ಳುವ
ವರಿಲ್ಲದಿದ್ದುದರಿಂದ ಅವರೂ ಲಿಂಕನ್ನನ ನಿವಾಸಕ್ಕೆ ಬಂದರು. ಹೀಗೆ ರೋಗಿಗಳು
ಮೂರುಜನವಾಗಲಾಗಿ ಮನೆಯ ಕೆಲಸವನ್ನು ಮಾಡಿಕೊಳ್ಳುವುದೂ ಹಾಸಿಗೆ
ಹತ್ತಿ ಮಲಗಿದವರನ್ನು ಉಪಚರಿಸುವುದೂ, ಆಹಾರಾದಿಗಳನ್ನು ತಂದೊದಗಿಸುವುದೂ
ಥಾಮಸ್ ಲಿಂಕನ್ನನೊಬ್ಬನ ತಲೆಯಮೇಲೆ ಬಿತ್ತು. ಆ ಕೆಲಸಗಳನ್ನೆಲ್ಲಾ
ಮಾಡಲು ಹುಡುಗರು ಬೆಳೆದವರಲ್ಲ. ಒಪ್ಪೊಂಟಿಗರಾಗಿಯೂ ಆಗ ತಂದು
ಆಗ ತಿನ್ನುವವರಾಗಿಯೂ ಇರುವ ಬಡವರ ಅವಸ್ಥೆಯೆಂತಹದೆಂಬುದು
ಲೋಕಕ್ಕೆ ತಿಳಿಯದ ವಿಷಯವಲ್ಲ.

ಡೆನ್ನಿಸ್‌ಹ್ಯಾಂಕ್ಸನ ತಂದೆ ತಾಯಿಗಳು ಸತ್ತ ಕೆಲವು ದಿವಸಗಳ ಮೇಲೆ
ಅಬ್ರಹಾಮನ ತಾಯಿಯು ಮೃತಳಾದಳು. ವಿಸ್ತಾರವಾಗಿಯೂ ಉನ್ನತವಾಗಿ
ಯೂ ಬೆಳೆದಿದ್ದೊಂದು ಮರದ ಕೆಳಗೆ ಅದರ ನೆಳಲು ಬೀಳುವೆಡೆಯಲ್ಲಿ ಆಕೆಯ
ದೇಹವು ಭೂತಲವನ್ನು ಸೇರಿತು. ಆ ಬಳಿಯಲ್ಲಿ ಕುಳಿತು ಅಬ್ರಹಾಮನು ಕತ್ತಲೆ
ಯಾಗುವುದನ್ನೂ ತಾನು ಏಕಾಕಿಯಾಗಿದ್ದುದನ್ನೂ ಮರೆತವನಾಗಿ ಬಹಳ ಹೊತ್ತಿನ
ವರೆಗೆ ಕಣ್ಣೀರನ್ನು ಸುರಿಸಿದನು. ತಾಯಿಯು ತನಗೆ ನೀತಿಬೋಧಕವಾದ ಕಥೆಗ
ಳನ್ನೋದುತ್ತಿದ್ದುದೂ ಸನಾತನಧರ್ಮಗಳನ್ನುಪದೇಶಿಸುತ್ತಿದ್ದುದೂ ಜ್ಞಾಪಕಕ್ಕೆ
ಬಂದಿತು. ಭವಿಷ್ಯಜ್ಜೀವನದಲ್ಲಿ ಅವನು, ಕಣ್ಣುಗಳಲ್ಲಿ ನೀರು ಬಟ್ಯಾಡುತ್ತಿರ
ಲಾಗಿ. “ನಾನು ಈಗ ಯಾವ ಸ್ಥಿತಿಯಲ್ಲಿದ್ದೇನೆಯೋ ಯಾವ ಸ್ಥಿತಿಗೆ ಬರುತ್ತೇ
ನೆಯೋ ಅದೆಲ್ಲವೂ ಆ ಮಹಾ ತಾಯಿಯ ಅನುಗ್ರಹದಿಂದ,” ಎಂದನು.

ಮನೆಯಲ್ಲಿ ಹಿರಿಯರಾದವರು ಸತ್ತರೆ ವೈದಿಕನನ್ನು ಕರೆತಂದು, ಸಮಾಧಿ
ಪ್ರದೇಶವನ್ನು ಸೇರಿ, ಆತನ ಬಾಯಿಂದ ಉಪದೇಶವನ್ನು ಕೇಳುವುದು ಆಗಿನ ವಾಡಿ
ಕೆಯಾಗಿದ್ದಿತು. ಸತ್ತ ಒಂದು ವರ್ಷದೊಳಗೆ ಅದು ಎಂದಾದರೊಂದು ದಿನ ನಡೆಯಬೇ
ಕಾಗಿದ್ದಿತು. ಅಬ್ರಹಾಮನು ದಿನವೆಲ್ಲಾ ಕುಳಿತು ಒಂದು ಕಾಗದವನ್ನು ಬರೆದನು.
ಕಾಗದವನ್ನು ಬರೆಯಲು ಅದೇ ಮೊದಲು. ಸ್ಥಳದಿಂದ ಸ್ಥಳಕ್ಕೆ ಸಂಚಾರಮಾಡುತ್ತ
ಜನರಿಗೆ ಮತದ ತತ್ವಗಳನ್ನು ಬೋಧಿಸುತ್ತಿದ್ದ ಕೆಂಟಕಿಯ ಉಪದೇಶಿಗೆ ಅದನ್ನು
ಬರೆದು ಕಳುಹಿಸಿದನು. ಕೆಂಟಕಿಗೂ ಅವರಿದ್ದ ಪ್ರದೇಶಕ್ಕೂ ನೂರುಮೈಲಿಗಳ ಅಂತ
ರವಿದ್ದಿತು. ಆದುದರಿಂದ ಉಪದೇಶಿಯು ಆ ಸತ್ಕಾರ್ಯಕ್ಕಾಗಿ ತನ್ನ “ಕಾರ್ಯಕ್ಷೇತ್ರ”
ವನ್ನು ದಾಟಿ ಬರಬೇಕಾಗುತ್ತಿದ್ದಿತು. ಸಕಾಲದಲ್ಲಿ ಅಬ್ರಹಾಮನಿಗೆ ಉತ್ತರವು
ಬಂದಿತು. ಉಪದೇಶಿಯು ತನ್ನ ಸಂಚಾರಕಾಲದಲ್ಲಿ ಅಲ್ಲಿಗೆ ಹೋಗಲು ಒಡಂಬಟ್ಟನು.

ವಸಂತಕಾಲವು ಬಂದಿತು. ಗಿಡಗಳು ಹಸಿರುಹಸಿರಾಗಿ ಚಿಗುರುಚಿಗುರಾಗಿ
ಹೂವುಹೂವಾಗಿರಲು ಅರಣ್ಯವು ಅತಿರಮಣೀಯವಾಗಿ ರಂಜಿಸಿತು. ಉಪದೇ
ಶಿಯು ಒಂದು ಭಾನುವಾರ ಬಂದನು. ಜಗತ್ತು ತೇಜಃಪುಂಜನಾದ ಸೂರ್ಯನ
ದೆಸೆಯಿಂದ ತೇಜೋಮಯವಾಗಿ ನಗುತ್ತಲಿದ್ದಿತು. ಉಪನ್ಯಾಸದ ವಾರ್ತೆಯು ಹರಡಿ

ಹತ್ತಿರದಲ್ಲಿಯೂ ದೂರದಲ್ಲಿಯೂ ಇದ್ದ ಆಬಾಲವೃದ್ಧರು ಅಲ್ಲಿ ನೆರೆದರು. ಉಪದೇಶಿಯು ಮೃತಳಾದವಳ ಸಚ್ಛೀಲಗಳನ್ನೂ ಕಷ್ಟಪರಂಪರೆಗಳನ್ನೂ ವರ್ಣಿಸಿದನು. ಎಲ್ಲರ ಕಣ್ಣಿನಲ್ಲಿಯೂ ನೀರು ತುಂಬಿತು. ಒಂಟಿಗರಾದ ಆ ತಂದೆಮಕ್ಕಳಿಗೆ ಕಲ್ಯಾಣವನ್ನು ಕೋರಿ ಆತನು ಭಗವಂತನನ್ನು ಸ್ತುತಿಸಿದನು.

ಮಕ್ಕಳಿನ್ನೂ ಚಿಕ್ಕವರಾಗಿರುವಾಗಲೇ ಗೃಹಿಣಿಯು ಸತ್ತು, ಹೆಣ್ಣಾದಿಕ್ಕಿಲ್ಲದಿರುವ ಸಂಸಾರದಲ್ಲಿ ಕಾರ್ಯನಿರ್ವಾಹವು ಎಷ್ಟು ಕಷ್ಟವೆಂಬುದನ್ನು ಹೆಂಡತಿ ಸತ್ತ ಗಂಡನೂ ತಾಯಿಲ್ಲದೆ ತಬ್ಬಲಿಗಳಾದ ಮಕ್ಕಳ ತಂದೆಯೂ ಮಾತ್ರ ಹೇಳಬಲ್ಲರು. ಲಿಂಕನ್ನನ ಮನೆಯಲ್ಲಿ ಹುಡುಗರನ್ನು ನೋಡಿಕೊಳ್ಳುವರಿರಲಿಲ್ಲವಾಗಿ ಅವರು ಪರದೇಶಿಗಳಂತಾದರು. ತಮ್ಮ ದೇಹವನ್ನು ಪೋಷಿಸಿಕೊಳ್ಳುವ ಭಾರವು ಅರಿಯದ ಆ ಹುಡುಗರ ಪಾಲಿಗೆ ಬಂದಿತು. ಜ್ಯೇಷ್ಠಳಾದ ಸಾರಳಿಗೆ ಹದಿಮೂರುವರ್ಷಗಳೂ ಆಗಿರಲಿಲ್ಲ. ಆಗಲೇ ಯಜಮಾನಿಯಾದಳು. ಮನೆಗೆಲಸದಲ್ಲಿ ಅಬ್ರಹಾಮನು ಅವಳಿಗೆ ಸಹಾಯಮಾಡುತ್ತಿದ್ದನು. ದುರ್ದಶೆಯು ಹೀಗಾದರೂ ಥಾಮಸ್ಸನು ಕೊರಗಲಿಲ್ಲ. ಸ್ವಭಾವವಾಗಿ ಪ್ರಸನ್ನಮನಸ್ಕನಾದ ಅವನು ಕರುಣಾಶಾಲಿಯಾದ ಪರಮಾತ್ಮನು ಹೇಗಾದರೂ ಎಂದಾದರೂ ಸಹಾಯಮಾಡಿಯೇ ಮಾಡುವನೆಂದು ನಂಬಿಕೆಯನ್ನಿಟ್ಟಿದ್ದನು. ಆದರೆ ಹೇಗೆಂದೂ ಯಾವಾಗಲೆಂದೂ ಚಿಂತಿಸುತ್ತ ಅವನು ಕೂರುತ್ತಿರಲಿಲ್ಲ. ಮನೆವಾರ್ತೆಯಲ್ಲಿ ಆತನೂ ಸಹಾಯಮಾಡುತ್ತಿದ್ದನು. ಕಷ್ಟದಲ್ಲಿ ಬೆಳೆದವರೇ ಕಷ್ಟದ ಜಾತಿಯನ್ನು ಬಲ್ಲವರು; ಕಷ್ಟವನ್ನು ಮರೆಯದವರು. ಅಬ್ರಹಾಮನು ಕಷ್ಟವನ್ನೇ ಉಂಡು ಬೆಳೆದನು.

ಅಬ್ರಹಾಮನಿಗೆ ಆಹಾರಕ್ಕಿಂತ ಹೆಚ್ಚಾಗಿ ಅಪೇಕ್ಷಿತವಾದ ವಸ್ತುವು ಮತ್ತೊಂದಿದ್ದಿತು—ಪುಸ್ತಕಗಳು. ಈಗಿನಂತೆ ಆ ಕಾಲದಲ್ಲಿ ಅವು ಯಥೇಚ್ಛವಾಗಿ ಸಿಕ್ಕುತ್ತಿರಲಿಲ್ಲ. ಆ ಹುಡುಗನ ಹತ್ತಿರ ಮೂರೇ ಮೂರು ಪುಸ್ತಕಗಳಿದ್ದುವು. ಆದರೂ ಅವಷ್ಟರಿಂದಲೇ ಅವನು ಪರಮಾನಂದ ಹೊಂದುತ್ತಿದ್ದನು. ಅವನ ಭಾವನೆಯಲ್ಲಿ ಬೈಬಲನ್ನೂ ಈಸೋಪನ ನೀತಿಕಥೆಗಳನ್ನೂ ಪಿಲ್‌ಗ್ರಿಂಸ್ ಪ್ರೋಗ್ರೆಸ್ ಎಂಬ ಗ್ರಂಥವನ್ನೂ ಇಟ್ಟುಕೊಂಡಿದ್ದ ತನ್ನಂತಹ ಭಾಗ್ಯಶಾಲಿಗಳು ಇತರರಿರಲಿಲ್ಲ. ಅವುಗಳನ್ನು ಅವನು ಒದಿಯೋದಿ ಮುಂದಟ್ಟು ಮಾಡಿಕೊಂಡನು. ಪ್ರತಿಯೊಂದು ಪುಸ್ತಕದಲ್ಲಿಯೂ ಅನೇಕ ಭಾಗಗಳು ಅವನಿಗೆ ಕಂಠಸ್ಥವಾಗಿದ್ದುವು.

ಈ ಮೂರು ಗ್ರಂಥಗಳ ಸಹಾಯದಿಂದ ಅಬ್ರಹಾಮನು ಭಿತ್ತಿಪ್ರಸ್ತರವನ್ನು ಹೊಂದಿದಬಳಿಕ ಮಹಾಪುರುಷರ ಜೀವನಚರಿತ್ರೆಯನ್ನು ಹಿಡಿದು ಆ ವ್ಯಾಸಂಗದಿಂದ ತನ್ನ ಸುಜ್ಞಾನಸದುದ್ದೇಶಪ್ರಾಸಾದಗಳನ್ನು ನಿರ್ಮಿಸಲು ಯತ್ನಿಸಿದನು. ಅಂತಹ ಗ್ರಂಥಗಳಲ್ಲಿ ತಾಯಿಯು ತೆಗೆದುಕೊಟ್ಟಿದ್ದ ಹೆನ್ರಿ ಕ್ಲೆ (Henry Clay) ಎಂಬಾತನ ಚರಿತ್ರೆಯೂ ಇದ್ದಿತು. ಆ ಪುಸ್ತಕದಲ್ಲಿ ಅವನಿಗೆ ಪ್ರಾಣ. ಓದುತ್ತ ಬಂದ ಹಾಗೆ ಅಬ್ರಹಾಮನ ಆಶ್ಚರ್ಯವು ಹೆಚ್ಚುತ್ತ ಕ್ಲೆಯನ್ನು ಅವನು ಮನಸ್ಸಿನಲ್ಲಿ ಪೂಜಿಸಿದನು. ಸ್ವಲ್ಪ ಕಾಲದಮೇಲೆ ವಾಷಿಂಗ್ಟನ್ನನ ಚರಿತ್ರೆಯು ಸಿಕ್ಕಿತು. ಅದನ್ನು ಅವನು ನಿವಾಸಿಯೊಬ್ಬನಿಂದ ಎರವು ತೆಗೆದುಕೊಂಡು ಬಂದು ಹಗಲೂ

ರಾತ್ರಿಯೂ ಓದಿ ಪೂರೈಸಿದನು. ಅಷ್ಟರಲ್ಲಿ ಆ ಪೂಜ್ಯನ ಚರಿತ್ರೆಯು ಮತ್ತೊಬ್ಬ ನಿಂದ ಬರೆಯಲ್ಪಟ್ಟಿವೆಯೆಂಬುದನ್ನು ಆಗಂತುಕನೊಬ್ಬನಿಂದ ಕೇಳಿ ಅದನ್ನು ಪತ್ತೆ ಮಾಡಲು ಹೊರಟನು. ಪುಸ್ತಕವನ್ನು ಹುಡುಕಿ ಮಿತಿಮೀರುವ ಸಂತೋಷದಿಂದ ನಲಿಯುತ್ತ ಮನೆಗೆ ತಂದು ಓದಲು ಕುಳಿತನು. ಎಣ್ಣೆಯು ಮುಗಿದು ದೀಪವಾರುವವರೆಗೂ ಏಳಲಿಲ್ಲ. ಆ ಮೇಲೆ ಅದನ್ನು ಮರದ ಗೋಡೆಯಲ್ಲಿದ್ದ ಒಂದು ಪೊಟರೆಯಲ್ಲಿಟ್ಟು ಮುಗಿದನು. ಒಂದು ಹೊತ್ತಿನಲ್ಲಿ ಬಿರುಗಾಳಿಯೆದ್ದು ಹಿಮವನ್ನೂ ಮಂಜಿನ ಗಡ್ಡೆಯನ್ನೂ ಸುರಿಸಿತು. ಬೆಳಗಾದಮೇಲೆದ್ದು ನೋಡಲಾಗಿ ಪುಸ್ತಕವೆಲ್ಲಾ ನೆನೆದು ಕೆಟ್ಟುಹೋಗಿತ್ತು. ಅಬ್ರಹಾಮನಿಗೆ ಬಹಳ ಚಿಂತೆ ಹತ್ತಿತು. ಕೆಟ್ಟುಹೋದ ಆ ಪುಸ್ತಕವನ್ನು ಕೊಟ್ಟಿದ್ದಾತನು ಹಿಂದಕ್ಕೆ ತೆಗೆದುಕೊಳ್ಳುವನೋ ಇಲ್ಲವೋ ಎಂದು ಅಂಜುತ್ತ ಅಂಜುತ್ತ ಅವನು ಆತನ ಬಳಿಗೆ ಹೋದನು. ಆತನು ಕಠಿನಮುದ್ರೆಯನ್ನು ತಾಳಿ, '' ಈಗ ಅದನ್ನು ಕಟ್ಟಿಕೊಂಡು ಏನು ಮಾಡಬೇಕು ?'' ಎಂದನು.

ಅಬ್ರಹಾಮನು, ನ್ಯಾಯವಾಗಿರುವುದನ್ನು ಯಾವುದನ್ನು ಹೇಳಿದರೂ ಮಾಡುವುದಾಗಿ ಒಪ್ಪಿಕೊಂಡನು.

ಮೂರು ದಿನಗಳವರೆಗೆ ಆತನ ಮನೆಗೆ ಹುಲ್ಲು ಹೊರೆಯನ್ನು ಹೊತ್ತು ತಂದು ಹಾಕಬೇಕೆಂದು ತೀರ್ಮಾನವಾಯಿತು. ಹುಡುಗನು ಒಪ್ಪಿದನು. ಆದರೆ ಹೋಗುತ್ತ, '' ಆ ಕೆಲಸವನ್ನು ಮಾಡಿದರೆ ಪುಸ್ತಕದ ಬೆಲೆಯನ್ನಾಗಲಿ ಅದಕ್ಕಾದ ನಷ್ಟವನ್ನಾಗಲೀ ಕೊಟ್ಟಂತಾಯಿತೆ ?'' ಎಂದು ಪ್ರಶ್ನೆಮಾಡಿದನು.

'' ಒಳ್ಳೆಯದು, ಆದುದಾಗಿಹೋಯಿತು. ಕಾಣದಿದ್ದುದಕ್ಕೆ ಯಾರುತಾನೇ ಏನು ಮಾಡಿಯಾರು. ಇದೋ ನೋಡು, ನೀನು ಮೂರುಹಗಲು ಹುಲ್ಲನ್ನು ಹೊತ್ತರೆ ಆ ಪುಸ್ತಕವನ್ನು ನಿನಗೇ ಕೊಟ್ಟುಬಿಡುತ್ತೇನೆ.''

ಅಬ್ರಹಾಮನ ಸಂತೋಷವನ್ನು ಎಷ್ಟೆಂದು ಹೇಳಬೇಕು. ಅವನು ಆ ಪುಸ್ತಕವನ್ನು ಸಂಪಾದಿಸಿದನು. ಬಣ್ಣವು ಅಳಿಸಿ ಹೋಸಿದ್ದರೂ ಗ್ರಂಥವು ಅಮೂಲ್ಯವಾಗಿತ್ತು. ಮತ್ತೆ ಅದನ್ನು ಮೊದಲಿಂದ ಕೊನೆಯವರೆಗೂ ಓದಿ ಅವನು ಅಲ್ಲಿನ ಸಂಗತಿಗಳನ್ನು ಮುಂದಟ್ಟುಮಾಡಿದನು. ಮುಂದೆ ಟ್ರೆಂಟರ್ ಬಳಿಯ ಯುದ್ಧಭೂಮಿಯಲ್ಲಿ ನಿಂತು ಉಪನ್ಯಾಸಮಾಡುವಾಗ ಈ ವಿಷಯವನ್ನು ಸ್ಮರಿಸಿಕೊಂಡು ಹೀಗೆಂದನು—'' ನಮ್ಮವರು ಸ್ವಾತಂತ್ರ್ಯಕ್ಕಾಗಿ ಹೋರಿದುದೂ ಹೆಣಗಿದುದೂ ಆ ಪುಸ್ತಕದಲ್ಲಿ ಸವಿಸ್ತಾರವಾಗಿ ಹೇಳಲ್ಪಟ್ಟಿರುತ್ತವೆ. ಆದರೆ ಹಿಂದೆ ಟ್ರೆಂಟರ್ ಬಳಿ ನಡೆದ ಯುದ್ಧದಷ್ಟು ಮಟ್ಟಿಗೆ ಮತ್ತಾವ ವಿಚಾರವೂ ನನ್ನ ಮನಸ್ಸಿಗೆ ನಾಟಲಿಲ್ಲ. ನಮ್ಮವರು ಯಾವುದಕ್ಕಾಗಿ ತಮ್ಮ ಜೀವವನ್ನು ಆಹುತಿಗೊಡುತ್ತಿದ್ದರೋ ಅದು ಸಾಧಾರಣವಾದುದಲ್ಲವೆಂದು ನನಗೆ ಹುಡುಗನಾಗಿದ್ದಾಗಲೇ ಹೊಳೆಯಿತು.''

ತನ್ನ ದೇಶದವರು ಉತ್ಸಾಹ ಆಗ್ರಹಗಳಿಂದ ಕಷ್ಟವನ್ನು ಸಹಿಸಿ ಪಾರಾಗಲೆಸಗಿದುದೂ, ಎದೆಗೆಡದ ಪೌರುಷದಿಂದ ಯುದ್ಧಕ್ಕೆರಗಿದುದೂ, ಯಾವುದರ ನಿಮಿತ್ತವಾಗೆಂಬುದನ್ನು ಕುರಿತು ಆ ಹುಡುಗನು ಚಿಂತಿಸಲುಪಕ್ರಮಿಸಿದ್ದನು.

ಅಬ್ರಹಾಮನ ಕಥೆಯನ್ನು ಪ್ರಸ್ತಾಪಿಸಿದಾಗಲೆಲ್ಲಾ ಅವನು ಓದಿದ ಪುಸ್ತಕಗಳಲ್ಲಿ ಮೊದಲನೆಯದಾಗಿ ಈ ವಾಷಿಂಗ್ಟನ್ನನ ಚರಿತ್ರೆಯನ್ನು ನಮೂದಿಸದಿರಲಾಗುವುದಿಲ್ಲ.

ಅಬ್ರಹಾಮನು ಹುಡುಗನಾಗಿದ್ದಾಗಲೂ ದೊಡ್ಡವನಾದ ಮೇಲೂ ಗಟ್ಟಿಯಾಗಿ ಓದುವ ಅಭ್ಯಾಸವನ್ನಿಟ್ಟಿದ್ದನು. ಹಾಗೆ ಓದುವಾಗ ಲಕ್ಷ್ಯವು ಓದುತ್ತಿರುವ ಪ್ರಸಂಗದ ಮೇಲೆ ಸಂಪೂರ್ಣವಾಗಿ ಬೀಳುವುದರಿಂದ, ಗುರುವು ಹೇಳುವ ಪಾಠವನ್ನು ಕೇಳುತ್ತಿದ್ದರೂ ಇಲಿಯು ಬಿಲವನ್ನು ಹೊಗುವುದನ್ನು ನೋಡುತ್ತಿರುವ ಧೂರ್ತತೆಗೆ ಅವಕಾಶವಿರುವುದಿಲ್ಲವೆಂದು ಅವನು ಅಭಿಪ್ರಾಯಡುತ್ತಿದ್ದನು.

---

## ೩ ನೆಯ ಅಧ್ಯಾಯ

---

### ಇಂಡಿಯಾನದಲ್ಲಿ (ಮುಂದೆಸಾಗಿದ್ದು)

ತಂದೆಯು ಒಂದಾನೊಂದು ದಿನ ಮಕ್ಕಳನ್ನು ಅವರ ಪಾಡಿಗೇ ಬಿಟ್ಟು ಕೆಂಟಕಿಗೆ ಹೊರಟು ಹೋದನು. ಎಲ್ಲಿಗೆ ಹೋಗುತ್ತೀಯೆಂದಾಗಲೀ ಯಾವ ಕಾರ್ಯಕ್ಕಾಗಿ ಹೋಗುತ್ತೀಯೆಂದಾಗಲೀ ಹುಡುಗರು ಕೇಳಲಿಲ್ಲ. ಆದರೆ ಡಿಸೆಂಬರ್ ತಿಂಗಳಲ್ಲೊಂದು ದಿನ ಬೆಳಗಿನಲ್ಲಿ ಅವನು ಹೆಂಡತಿಯೊಬ್ಬಳನ್ನು ಕರೆದುಕೊಂಡು ಹಿಂದಿರುಗಿದನು. ಥಾಮಸ್ ಲಿಂಕನ್ನನಿಗೆ ಆಕೆಯು ಮೊದಲಿಂದಲೂ ಗುರುತಿದ್ದವಳು. ಈಗ ಆಕೆಯು ತಾಯಿಯಾಗಿ ಮನೆಗೆ ಬಂದುದನ್ನು ನೋಡಿ ಅಬ್ರಹಾಮನೂ ಹುಡುಗರೂ ಬಹು ಸಂತೋಷಹೊಂದಿದರು.

ಗೃಹಿಣಿಯು ಇಂಡಿಯಾನದ ಹೊಸ ಸಂಸಾರದಲ್ಲಿ ಸ್ವಲ್ಪ ಅಸಮಾಧಾನವನ್ನು ಹೊಂದಿದರೂ ಅದನ್ನು ತನ್ನ ಬಲಮಕ್ಕಳೆದುರಿನಲ್ಲಿ ತೋರ್ಪಡಿಸಲಿಲ್ಲ. ಕೈಗೆ ಬಂದ ಕೆಲಸವನ್ನು ಬೇಸರಗೊಳ್ಳದೆ ಮನಸ್ಸಿಟ್ಟು ಮಾಡುತ್ತಿದ್ದಳು. ಅಬ್ರಹಾಮನು ಆಕೆಯ ಆ ಸುಗುಣವನ್ನು ಆಗಾಗ ನೆನಸಿಕೊಳ್ಳುತ್ತಿದ್ದನು. ಬಲತಾಯಿಯೆಂದು ಅವನಿಗಾಗಲೀ ಬಲಮಗನೆಂದು ಆಕೆಗಾಗಲೀ ಅಂತಃಕರಣವು ಅಡ್ಡಹಾದಿಯನ್ನು ಹಿಡಿಯಲಿಲ್ಲ. ಮಗನವಿಷಯದಲ್ಲಿ ಆಕೆಗೆ ಬಹಳ ಸದ್ಭಾವವಿದ್ದಿತು. ಅವನು ನನಗೆ ಎಂದೂ ಎದುರು ಮಾತನ್ನಾಡಲಿಲ್ಲ; ನನ್ನನ್ನು ಕಡೆಗಾಣಲಿಲ್ಲ. ನನ್ನ ಮಾತಿಗೆ ಬಾಯಲ್ಲಾಗಲೀ ಕೆಲಸದಲ್ಲಾಗಲೀ ಅಲಕ್ಷ್ಯತೆಯನ್ನು ತೋರಿಸಲಿಲ್ಲ. ನನ್ನ ಮಾತನ್ನು ಯಾವಾಗಲೂ ನಡೆಯಿಸುತ್ತಿದ್ದನು, ಎಂದು ಆಕೆಯು ನುಡಿದಿದ್ದಾಳೆ. ಅಬ್ರಹಾಮನು ಆಕೆಯನ್ನು, ''ಸುಶೀಲೆಯಾದ ಹೆಂಗಸು, ದಯಾಮಯಿ: ಎಲ್ಲರಲ್ಲಿಯೂ ಸ್ನೇಹಪರಳಾಗಿರುತ್ತಿದ್ದಳು. ಉತ್ತಮ ವರ್ಗಕ್ಕೆ ಸೇರಿದವಳು, ಸಾಮಾನ್ಯರಂತಲ್ಲ,'' ಎಂದು ಗೌರವಿಸಿದ್ದಾನೆ.

ಆ ಸಮಯದಲ್ಲಿ ಅಬ್ರಹಾಮನಿಗೆ ಗ್ರಂಥವೊಂದು ಸಿಕ್ಕಿತು. ಫೆನಿಮೂರ್ ಕೂಪರನ "Leather-Stocking Tales" (ಚರ್ಮಸಂಗ್ರಹಣದ ಕಥೆಗಳು) ಎಂಬ ಪುಸ್ತಕವು ಹೊಸದಾಗಿ ಪ್ರಚಾರಕ್ಕೆ ಬಂದು ಜನರ ಮನಸ್ಸನ್ನಾಕರ್ಷಿಸಿದ್ದಿತು. ಆ ಕಥೆಗಳನ್ನು ಅವನು ಅತ್ಯಂತ ಆಸಕ್ತಿಯಿಂದ ಓದಿದನು. ಇದು ಅವನ ಅಭ್ಯಾಸಪರತೆಯ ಒಂದು ದೃಷ್ಟಾಂತ ಮಾತ್ರ. ಹತ್ತಿರದಲ್ಲಿಯೂ ದೂರದಲ್ಲಿಯೂ ನೆರೆಯಲ್ಲಿಯೂ ಹೊರೆಯಲ್ಲಿಯೂ ಇದ್ದ ಪುಸ್ತಕಗಳನ್ನು ಕಷ್ಟಪಟ್ಟು ಸಂಪಾದಿಸಿ ಓದುತ್ತಿದ್ದನು. ಅವುಗಳನ್ನು ಓದುವುದರಿಂದ ಲಭಿಸುತ್ತಿದ್ದ ಆನಂದದಲ್ಲಿ ಮೊದಲು ಪಟ್ಟ ಕಷ್ಟವು ಲೆಕ್ಕಕ್ಕೆ ಬರುತ್ತಿರಲಿಲ್ಲ. ಪದ್ಯಗದ್ಯಗಳೆಂಬ ಭೇದವಾಗಲಿ ಪಕ್ಷಪಾತವಾಗಲೀ ಅವನ ಮನಸ್ಸಿನಲ್ಲಿರಲಿಲ್ಲ. ಕೂಪರನು ಬರೆದ ಕಥೆಗಳನ್ನು ಹೇಗೋ ರಾಬರ್ಟ್ ಬರ್ನ್ಸನ ಕವನಗಳನ್ನೂ ಆಸಕ್ತಿಯಿಂದ ಹಾಗೆಯೇ ಓದಿದನು. ವಾಷಿಂಗ್ಟನ್ನನ ಚರಿತ್ರೆಯನ್ನು ಹೇಗೋ ಹಾಗೆಯೇ ಷೇಕ್ಸ್‌ಪಿಯರ್ ಕವಿಯ ನಾಟಕಗಳನ್ನೂ ಓದಿದನು. ಬಲತಾಯಿಯು ಅವನ ಈ ಅಭ್ಯಾಸವನ್ನು ಕುರಿತು ಹೀಗೆಂದಿದ್ದಾಳೆ. "ಆತನು ಕೈಗೆ ಸಿಕ್ಕಿದ ಗ್ರಂಥವನ್ನು ಓದದೆ ಬಿಡುತ್ತಿರಲಿಲ್ಲ. ಓದುವಾಗ ಬಹಳ ರಸಯುಕ್ತವೆಂದು ತೋರಿದ ಭಾಗವನ್ನು ಆ ಕೂಡಲೇ ಬರೆದಿಡುತ್ತಿದ್ದನು. ಕಾಗದವು ದೊರೆಯದಿದ್ದರೆ ಮರದ ಹಲಗೆಯೇ ಆಗುತ್ತಿದ್ದಿತು. ಕಾಗದವು ಸಿಕ್ಕುವವರೆಗೂ ಹಲಗೆಯನ್ನೂ ಹಲಗೆಯಮೇಲೆ ಬರೆದಿದ್ದುದನ್ನೂ ಜೋಪಾನವಾಗಿ ತೆಗೆದಿಡುತ್ತಿದ್ದನು. ಆ ಬಳಿಕ ಅದನ್ನು ಕಾಗದದ ಮೇಲೆ ಬರೆದು, ನೋಡಿ ನೋಡಿ ಬಾಯಿಗೆ ಕಲಿತುಕೊಳ್ಳುತ್ತ, ಮರೆತುಹೋಗದಂತೆ ಎರಡುಮೂರಕ್ಕೊಂದು ತಡವೆ ಅಷ್ಟನ್ನೂ ಉಚ್ಚರಿಸುತ್ತಿದ್ದನು." ಹೀಗೆ ತನ್ನದಲ್ಲದಿದ್ದಂತಹ ತನ್ನದಾಗದಿದ್ದಂತಹ ಪುಸ್ತಕಗಳಿಂದ ವಿಷಯಗಳನ್ನು ಸಂಗ್ರಹಿಸಿಡುತ್ತಿದ್ದನು. ಗ್ರಂಥಕರ್ತರೂ ವಿದ್ಯಾವಿಶಾರದರೂ ಆಗುವವರು ಒಂದು ಪುಸ್ತಕವನ್ನಿಟ್ಟುಕೊಂಡು, ಅದರೊಳಗೆ ಚಿರಸ್ಮರಣೀಯವೂ ಉಪಯುಕ್ತವೂ ಆದ ವಿಷಯಗಳನ್ನು ಬರೆದುಕೊಳ್ಳುವರೆಂಬುದು ಹೊಸದಲ್ಲ. ಅಬ್ರಹಾಮನು ತನ್ನ ಹತ್ತನೆಯ ವಯಸ್ಸಿನಲ್ಲಿಯೇ ಅಂತಹದೊಂದು ಪುಸ್ತಕವನ್ನಿಟ್ಟಿದ್ದನು. ಹೀಗೆ ಮರದ ಹಲಗೆಯ ಮೇಲೂ ಕಾಗದದ ಮೇಲೂ ಬರೆದು ಬರೆದು ಓದಿ ಮುಂದಟ್ಟು ಮಾಡಿಕೊಳ್ಳುತ್ತಿದ್ದುದೇ ಪ್ರೆಸಿಡೆಂಟನಾಗುತ್ತಿದ್ದವನಿಗೆ ಸಾಗುತ್ತಿದ್ದ ವಿದ್ಯಾಭ್ಯಾಸ.

ಮನೆಯಿಂದ ಒಂದೂವರೆ ಮೈಲಿಯ ದೂರದಲ್ಲಿ ಹೊಸದಾಗಿ ಸ್ಕೂಲೊಂದು ಸ್ಥಾಪಿತವಾಯಿತು. ಜನರು ಅದರಿಂದ ದೊರಕುವಷ್ಟು ಸೌಕರ್ಯವನ್ನೆಲ್ಲಾ ಹೊಂದಬಹುದಾಗಿದ್ದಿತು. ಥಾಮಸ್ಸನು ತನ್ನ ಮನೆಯ ಹುಡುಗರೆಲ್ಲರನ್ನೂ ಓದಲು ಕಳುಹಿಸಿದನು. ಸ್ಕೂಲಿಗೆ ಹೋಗುವುದೆಂದರೆ ಅತ್ಯಂತ ಗೌರವ್ಯವಾದ ವಿಷಯವಾಗಿದ್ದಿತು. ಶಾಲೆಯು ಇತರ ವಾಸದ ಮನೆಗಳಂತೆ ಮರದ ತುಂಡುಗಳಿಂದಲೇ ಕಟ್ಟಲ್ಪಟ್ಟಿದ್ದಿತು. ಶಾಲೆಯಂತೆಯೇ ಹೊಸದಾದ ಸಂಮೇಳನ ಮಂದಿರವೂ ಮರದ ತುಂಡಿನದಾಗಿದ್ದಿತು. ಅಬ್ರಹಾಮನು ಕಾಲಹರಣ ಮಾಡಲಿಲ್ಲ. ಹೊಲದ ಕೆಲಸದಲ್ಲಿಯೂ ಇತರ ಹವ್ಯಾಸಗಳಲ್ಲಿಯೂ ಹಗಲಿನ ಹೆಚ್ಚು ಭಾಗವು ಕಳೆದುಹೋಗಿ

ಓದಲು ವಿರಾಮವೇ ಸಿಕ್ಕುತ್ತಿರಲಿಲ್ಲವಾಗಿ ಅವನು ರಾತ್ರಿಯವೇಳೆ ಪಂಜಿನ ಮುಂದೆ ಬಹಳ ಹೊತ್ತಿನವರೆಗೂ ಕೂರುತ್ತಿದ್ದನು. ಮನಸ್ಸಿನಲ್ಲಿ ಆ ವಯಸ್ಸಿನಲ್ಲಾಗಲೇ ಚಿಂತೆಯು ಬೇರೂರಿದ್ದಿತು. ದೂರವರ್ತಿಯಾಗಿ ಪ್ರತಿಧ್ವನಿಯಂತೆ ಕೇವಲ ದುರ್ಬಲವಾದ ಶಬ್ದದಿಂದ ಕೇಳಿಬರುತ್ತಿದ್ದ ಜಗತ್ತಿನಲ್ಲಿ ತಾನು ಪ್ರಾಮುಖ್ಯತೆಯನ್ನು ಹೇಗೆ ಹೊಂದಬಹುದೆಂದು ಅವನು ಚಿಂತಿಸುತ್ತಿದ್ದಿರಬಹುದು. ನೇಗಿಲನ್ನು ಹಿಡಿದು ಹೊಲದಲ್ಲಿ ದುಡಿಯುತ್ತಿದ್ದಾಗಲೂ ದೊಡ್ಡದಾದ ಕೊಡತಿಯನ್ನೆತ್ತಿ ಬಡಿಯುತ್ತಿದ್ದಾಗಲೂ ಮರದ ತುಂಡುಗಳನ್ನು ಸೀಳುತ್ತಿದ್ದಾಗಲೂ ಅಬ್ರಹಾಮನು ಶಾಲೆಯ ಪಾಠಗಳನ್ನು ಸ್ಮರಿಸಿಕೊಳ್ಳುವನು. ಅಥವಾ ತಾನು ಬಾಯಿಗೆ ಕಲಿತಿದ್ದ ವಿಷಯಗಳನ್ನು ಉಚ್ಚರಿಸುವನು. ಅವನಿಗೆ ಹೆನ್ರಿ ಕ್ಲೆಯಂತಹ ಆರಾಧ್ಯದೇವತೆಯು ಮತ್ತೊಂದಿರಲಿಲ್ಲ. ಆತನ ಚರಿತ್ರೆಯಲ್ಲಿ ಒಂದೊಂದು ಅಂಶವೂ ಒಂದೊಂದು ಚಿತ್ರದಂತೆ ತೋರುತ್ತ ಅವನ ಉತ್ಸಾಹವನ್ನು ಹೆಚ್ಚಿಸುತ್ತಿದ್ದಿತು. ತನ್ನ ಯೌವನಕಾಲದಲ್ಲಿ ಅಬ್ರಹಾಮನು ಮಾತಿನ ನಡುವೆ ಒಂದು ದಿನ ಹೀಗೆಂದನು : "ಮನುಷ್ಯನು ಎಷ್ಟೊಂದು ಬಡವನಾದರೂ, ಇಷ್ಟಪಟ್ಟಲ್ಲಿ ಸಾಕಾದಷ್ಟು ವಿದ್ಯೆಯನ್ನು ಸಂಪಾದಿಸಿ ಮಾನದೊಡನೆ ಜೀವಿಸಬಹುದೆಂಬ ಸಾಧುವಾಕ್ಯಕ್ಕೆ ಆತನಂತಹ ನಿದರ್ಶನವು ಬೇರೆಯಿಲ್ಲ." ಆದರೆ, ಹೆನ್ರಿ ಕ್ಲೆಯು ಯಾವ ವಾಕ್ಯಕ್ಕೆ ನಿದರ್ಶನವಾಗಿದ್ದಾನೆಂದು ಅಬ್ರಹಾಮನು ಹೇಳಿದನೋ ಅದೇ ವಾಕ್ಯಕ್ಕೆ ಅವನೂ ನಿದರ್ಶನವಾಗಿದ್ದಾನೆ. ಅವನ ಚರಿತ್ರೆಯು ಆ ನೀತಿಯನ್ನೇ ಬೋಧಿಸುವುದು. ಅಬ್ರಹಾಮನ ತಿಳುವಳಿಕೆಯು ವೃದ್ಧಿಗೊಂಡಿತು. ಕೈಗೆ ಕೊಟ್ಟ ವಿಷಯವನ್ನು ಅರ್ಥಮಾಡಿಕೊಂಡು ತಿಳಿದುಕೊಳ್ಳುವಷ್ಟು ಸಮರ್ಥನಾದನು. ಅವನ ತಿಳುವಳಿಕೆಗೆ ಹೊರಗಾದುದೂ ದೂರವಾದುದೂ ಇರಲಿಲ್ಲ. ಬೀಜಗಣಿತವೇ ಮೊದಲಾದವು ಮುಂದೆ ಪರಿಚಿತವಾದುವು. ಕಲಿತುಕೊಳ್ಳುವ ಆಸೆಯು ಮಾತ್ರ ಮೊದಲಿನಿಂದಲೂ ಬಹಳವಾಗಿದ್ದಿತು,

ಹದಿನೇಳನೆಯ ವಯಸ್ಸಿನಲ್ಲಿ ಅವನು ಬೂನ್‌ವಿಲ್ (Boonville) ಗೆ ಹೋಗಿ ಕೋರ್ಟಿನಲ್ಲಿ ನಡೆಯುತ್ತಿದ್ದ ಖೂನಿಯ ಮೊಕದ್ದಮೆಯೊಂದನ್ನು ನೋಡಿದನು. ಇಂಡಿಯಾನದ ಕಾಡಿನಿಂದ ಆಚೆಗಿದ್ದ ಪ್ರಪಂಚವನ್ನು ಪ್ರತ್ಯಕ್ಷವಾಗಿ ನೋಡಲು ಅದೇಮೊದಲು. ಅವನು ಯಾವುದೋ ಸಂದರ್ಭದಲ್ಲಿ ಆ ಪ್ರಾಂತ ಹೋಗಿದ್ದನು. ಕೋರ್ಟಿನಲ್ಲಿ ಅಪರಾಧಿಯ ಪರವಾಗಿ ಪ್ರಸಿದ್ಧನಾದ ಕೆಂಟಕಿಯ ಲಾಯರೊಬ್ಬನು ವಾದಿಸುವನೆಂಬುದನ್ನು ಕೇಳಿ ಆತನ ವಾಗ್ಮಿತೆಯನ್ನು ಕೇಳಲು ಆಸೆಪಟ್ಟು ಅಲ್ಲಿಗೆ ಹೋದನು. ಲಾಯರು ಮಾತನಾಡಿದುದನ್ನು ಅಬ್ರಹಾಮನು ಬಿಟ್ಟಬಾಯಿ ಬಿಟ್ಟಂತೆ ಕೇಳಿದನು. ಕೇಳಿ ಮರುಳಾದನು. ತನಿಖೆಯು ಮುಗಿದು ಮೊಕದ್ದಮೆಯ ತೀರ್ಮಾನವನ್ನು ಆಲೋಚಿಸಲು ಪಂಚಾಯಿತರು ಒಳಗೆ ಹೋದ ಸಮಯದಲ್ಲಿ ಲಾಯರು ಹೊರಗೆ ಬಂದನು. ಹುಡುಗನ ವಿಸ್ಮಯವು ಅವನಲ್ಲಿಯೇ ಅಡಗಲಿಲ್ಲ. ಅವನು ಕೂಡಲೇ ಹೊರಗೆ ಬಂದು ಮಾತನಾಡಿಸಿ ತನ್ನ ಎರಡು ಕೈಗಳನ್ನೂ ಸಂಭಾವಿತನಾದ ಆ ಲಾಯರ ಕಡೆಗೆ ನೀಡಿ, ಆತನ ವಾಗ್ಜಾಲವನ್ನು ಕೇಳಿ ಪರಮಾನಂದವಾಯಿತೆಂದು ಹೊಗಳಿ ಬಹಳ ಕೃತಜ್ಞನಾಗಿರುವೆನೆಂದನು,

ನೋಡಲು ಅಬ್ರಹಾಮನು ಉದ್ದವಾಗಿ ಬೆಳೆದು, ಕೈಕಾಲು ಕಡ್ಡಿಕಡ್ಡಿಯಾಗಿ. ಬೆಪ್ಪನಂತೆ ಕಾಣುತ್ತಿದ್ದನು. ಗರ್ವಿಷ್ಠನಾದ ಆ ಲಾಯರು, ಮೇಲೆ ಬಿದ್ದು ಮಾತ ನಾಡಿಸಿಕೊಂಡು ಬಂದ ಆ ಹುಡುಗನನ್ನು ದುರುದುರನೆ ನೋಡಿ, ತೀರ ಅಲಕ್ಷ್ಯ ದಿಂದ ಅವನನ್ನು ತಳ್ಳಿಕೊಂಡು ಹೊರಟುಹೋದನು. ಅಬ್ರಹಾಮನಿಗೆ ಬಹಳ ನಾದ ಕೊರಗುಂಟಾಯಿತು. ಲೋಕದಲ್ಲಿ ಹೀಗೆ ಸ್ಥಾನಭೇದಗಳಿರುವುದನ್ನು ನೋಡಿ ಅವನು ಖಿನ್ನನಾದನು. ಆದರೆ ಖೇದವು ಬಹಳಕಾಲದವರೆಗಿರಲಿಲ್ಲ. ಲಾಯರನ ವಾಗ್ಮಿತೆಯು ಮತ್ತೆ ಮತ್ತೆ ಜ್ಞಾಪಕಕ್ಕೆ ಬರುತ್ತ ಮಾತನಾಡುವದಾದರೆ ಹಾಗೆ ಮಾತನಾಡಬೇಕೆಂದುಕೊಂಡನು.

ಅದು ಮೊದಲಾಗಿ ಹುಡುಗನು ಉಪನ್ಯಾಸಮಾಡಲು ಕಲಿತನು. ಯಾವು ದಾದರೊಂದು ವಿಚಾರವನ್ನು ಆಧಾರವಾಗಿಟ್ಟುಕೊಂಡು ತನ್ನೊಳಗೆ ತಾನೇ ಚರ್ಚಿ ಸುತ್ತಿದ್ದನು. ಮೊಕದ್ದಮೆಗಳನ್ನೂ ಅಪರಾಧಿಗಳನ್ನೂ ಕಲ್ಪಿಸಿಕೊಂಡು, ತಾನು ಕ್ರಮ ವಾಗಿ ಮೊಕದ್ದಮೆಯನ್ನು ನಡೆಯಿಸುವ ಲಾಯರೂ, ಪ್ರತಿವಾದಿಯೂ, ನ್ಯಾಯಾಧಿ ಪತಿಯೂ, ಪಂಚಾಯಿತರ ಮುಖಂಡನೂ ಆಗುತ್ತ, ಆಯಾ ಪದವಿಗೆ ತಕ್ಕಹಾಗೆ ಮಾತನಾಡುತ್ತಿದ್ದನು. ಕೆಲಸಮಾಡುತ್ತಿರುವ ಕಾಲದಲ್ಲಿ ಈ ನಾಟಕವಾರಂಭಿಸಿ, ಔತ್ಸುಕ್ಯವು ಹೆಚ್ಚಿದ ಹಾಗೆ ಅವನಿಗೆ ಮಾಡುತ್ತಿದ್ದ ಕೆಲಸವು ಮರೆತು ಹೋಗುತ್ತಿ ದ್ದಿತು. ದೇಹದ ಮೇಲಿನ ಪ್ರಜ್ಞೆಯು ದೂರವಾಗುತ್ತಿದ್ದಿತು. ಆ ವೇಳೆಗಳಲ್ಲಿ ತಂದೆಯು ಬಂದು ಎಚ್ಚರಗೊಳಿಸುತ್ತಿದ್ದನು. ಮಾತನಾಡತೊಡಗಿ ಮಗನು ಕೆಲಸ ಗಾರರನ್ನಾಕರ್ಷಿಸಿ ಕೃಷಿಯು ಸಾಗದಂತೆ ಮಾಡುವನೆಂದು ಆತನು ಆಕ್ಷೇಪಿಸುತ್ತಿ ದ್ದನು.

ಓದಿದ ಪುಸ್ತಕದ ಮುಖ್ಯ ತತ್ವಗಳನ್ನೂ ಗ್ರಹಿಸುವವರೆಗೂ ಅವನು ಬಿಡು ತ್ತಿರಲಿಲ್ಲ. ಆ ಪ್ರಯತ್ನವು ಉದ್ದೇಶಪೂರ್ವಕವಾದುದಲ್ಲದಿದ್ದರೂ ಕೂಡ ಸ್ವಭಾವ ಜನಿತವಾಗಿದ್ದಿತು. ಆಗ ಮಾಡಿದ ಆ ಅಭ್ಯಾಸವು ಅವನಲ್ಲಿ ಕೊನೆಯವರಿಗೂ ನಿಂತಿತು. ಮುಂದೆ ಅವನು ಪ್ರೆಸಿಡೆಂಟನಾದಕಾಲದಲ್ಲಿ ರಾಜ್ಯಕ್ಕೆ ದಾಸ್ಯವನ್ನಾ ಶ್ರಯಿಸಿ ವಿಪತ್ತು ಉಂಟಾಯಿತು. ಆ ಸಮಯದಲ್ಲಿ ಆ ಪ್ರಸಂಗದಲ್ಲಿ ಅಡಗಿದ್ದ ತತ್ವಗಳನ್ನು ಅಬ್ರಹಾಮನ ಹಾಗೆ ಇಡೀರಾಜ್ಯದಲ್ಲಿ ಮತ್ತೊಬ್ಬರು ತಿಳಿದಿರಲಿಲ್ಲ. ಆ ತಿಳಿವಳಿಕೆಯ ಬೆಂಬಲದಿಂದಲೇ ಅವನು ರಾಜ್ಯವನ್ನು ನಿರಪಾಯವಾಗಿ ಕಡು ಹಾಯಿಸಿದನು. ಆ ಕೆಲಸವು ಮತ್ತೊಬ್ಬನಿಂದ ಸಾಗುತ್ತಿರಲಿಲ್ಲವೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಆ ಕಾಲದಲ್ಲಿ ಫಲಿಸಿದ ಅವನ ತತ್ವಗ್ರಹಣ ಶಕ್ತಿಯು ಅವನು ಹುಡುಗನಾಗಿದ್ದಾಗ ಮೊಳೆತಿದ್ದಿತು.

ಮಾರನೆಯ ವರ್ಷ ಅಬ್ರಹಾಮನು ದೋಣಿಯೊಂದನ್ನು ಕಟ್ಟಿ ಅದರೊಳಗೆ ತಮ್ಮ ಕ್ಷೇತ್ರದಲ್ಲಿ ಬೆಳೆದ ಪದಾರ್ಥಗಳನ್ನು ತುಂಬಿ ನದಿಯೊಳಗೆ ತೆಗೆದುಕೊಂಡು ಹೋಗಿ ಮಾರಬೇಕೆಂಬ ಮಹಾಕಾರ್ಯವನ್ನು ಆಲೋಚಿಸಿದನು. ಇಂಡಿಯಾ ನಕ್ಕೆ ದಕ್ಷಿಣದಲ್ಲಿದ್ದ ಜನಗಳ ಕಾರ್ಯಪರತೆಯೂ ಅಲ್ಲಿಯ ವ್ಯಾಪಾರದ ಸಮೃದ್ಧ ತೆಯೂ ಕಿವಿಗೆ ಬಿದ್ದಿದ್ದುವು. ಆ ಭಾಗಗಳನ್ನು ನೋಡಬೇಕೆಂಬ ಕುತೂಹಲವೂ

ಅವನ ಮನಸ್ಸಿನಲ್ಲಿದ್ದಿತು. ಒಬ್ಬನೇ ಕಷ್ಟಪಟ್ಟು ದೋಣಿಯನ್ನು ಕಟ್ಟಿದನು. ಹೊರಗೆ ಕ್ರಯಕ್ಕೆ ಹೋಗಬಹುದಾದ ಸಾಮಾನುಗಳನ್ನು ಅದರಲ್ಲಿ ತುಂಬಿ ಹತ್ತಿರದಲ್ಲಿದ್ದ ವ್ಯಾಪಾರದ ಸ್ಥಳಕ್ಕೆ ಅದನ್ನು ತೆಗೆದುಕೊಂಡು ಹೋದನು.

ಅವನು ಸಾಮಾನನ್ನು ಮಾರಿರಬಹುದು. ಅದಕ್ಕೆ ಫಲವಾಗಿ, ಅಂದಿನಿಂದ ಧನಾರ್ಜನೆಯೆಂಬುದೊಂದುಂಟೆಂಬುದು ಅವನಿಗೆ ಗೋಚರವಾಯಿತು. ಆದರೆ ಅಬ್ರಹಾಮನಿಗೆ ''ಧನಪಿಶಾಚವು'' ಹಿಡಿಯಲಿಲ್ಲ. ಅವನು ಜಿಪುಣನಲ್ಲ. ನದೀ ತೀರದಲ್ಲಿ ಸುತ್ತಾಡುತ್ತಿದ್ದಾಗ ಅವನು ಒಂದು ಅಪೂರ್ವದೃಶ್ಯವನ್ನು ನೋಡಿದನು. ದೊಡ್ಡದೊಂದು ಹಡಗು ಅವನ ದಿಕ್ಕಿನಲ್ಲಿ ತೇಲಿಬರುತ್ತಿದ್ದಿತು. ಅದನ್ನು ಹತ್ತಲೆಂದು ತೀರಕ್ಕೆ ಬಂದ ಮನುಷ್ಯರಿಬ್ಬರು ತಮ್ಮನ್ನು ಹಡಗಿಗೆ ಮುಟ್ಟಿಸಲು ದೋಣಿಯನ್ನು ಹುಡುಕಿದರು. ಇದ್ದ ದೋಣಿಗಳೂ ಇತರ ಯಾನಗಳೂ ತೆರವಿಲ್ಲದಿದ್ದುವು. ಅಬ್ರಹಾಮನದೊಂದು ಮಾತ್ರ ಅನುವಾಗಿದ್ದಿತು. ಅವನು ಅವರನ್ನು ಗಂಟುಮೂಟೆಗಳೊಡನೆ ತನ್ನ ದೋಣಿಯಲ್ಲಿ ಕೂರಿಸಿಕೊಂಡು ಹಡಗಿಗೆ ತಲಪಿಸಿದನು. ಆಶ್ಚರ್ಯದ ಮೇಲೆ ಆಶ್ಚರ್ಯ, ಅವರು ಬೆಳ್ಳಿಯ ಡಾಲರೊಂದನ್ನು ತೆಗೆದು ಅವನ ಕೈಯ್ಯಲ್ಲಿಟ್ಟರು.

'' ನಾನು ಬೆಕ್ಕಬೆರಗಾದೆನು '' ಎಂದು ಅಬ್ರಹಾಮನು ಈ ಪ್ರಸ್ತಾಪವನ್ನು ಕುರಿತು ಮುಂದೆ ತನ್ನ ಸೆಕ್ರಟರಿಯೊಂದಿಗೆ ಹೇಳಿದನು. '' ಅದು ತೀರ ಅಲ್ಪವಾದುದೆಂದು ನೀವು ಅಸಡ್ಡೆಮಾಡಬಹುದು. ಆದರೆ ನನಗೆ ಆ ಕಾಲದಲ್ಲಿ ಅದರಷ್ಟು ಮುಖ್ಯವಾಗಿ ಕ್ಷಣಕ್ಷಣಕ್ಕೂ ಸ್ಮರಣೆಗೆ ತಂದುಕೊಂಡು ನಲಿಯುವಂತಹ ಸಂಗತಿಯು ಮತ್ತೊಂದಿರಲಿಲ್ಲ. ಒಂದೆರಡು ಗಂಟೆಗಳ ಹೊತ್ತಿನಲ್ಲಿ ಒಂದು ಡಾಲರನ್ನೂ ಸಂಪಾದಿಸಿದುದು ನಿಜವೇ ಎಂದು ನನಗೆ ಸಂಶಯವು ಬರುತ್ತಿದ್ದಿತು. ಶ್ರಮಕ್ಕೆ ತಕ್ಕ ಫಲವುಂಟೆಂಬುದನ್ನು ಅರಿತೆನು. ಕೂಪಕೂರ್ಮವೆನ್ನುವಂತಿದ್ದ ನನಗೆ ಹೆಚ್ಚು ವಿಸ್ತಾರವುಳ್ಳ ಜಗತ್ತೂ ಒಂದಿರುವುದೆಂಬುದು ಅರಿವಾಯಿತು. ಅಂದು ನನ್ನ ಮನಸ್ಸಿನಲ್ಲಿ ಸಂಪಾದನೆ ಮಾಡಬಲ್ಲೆನೆಂಬ ಭರವಸೆಯೂ ಉತ್ಸಾಹವೂ ಹುಟ್ಟಿದುವು. ''

ಅಬ್ರಹಾಮನು ಪ್ರಬುದ್ಧನಾಗುತ್ತಿದ್ದನು. ಬಾಲ್ಯವು ಕಳೆದು ಹರೆಯವು ಪ್ರಾಪ್ತವಾಗುತ್ತಿದ್ದಿತು. ಅದರೊಡನೆ ಒಂದು ಜಾತಿಯ ಧೈರ್ಯವು ಆವಿರ್ಭವಿಸಿತು. ಅಂಗೈಯಲ್ಲಿ ಆ ಬೆಳ್ಳಿಯ ನಾಣ್ಯವನ್ನು ಹಿಡಿದು ಅವನು ದುಡಿದು ಕೆಲಸ ಮಾಡಿದರೆ ಅಂತಹ ನಾಣ್ಯಗಳು ನೂರರಗಟ್ಟಲೆಯಾಗಿ ಸಿಕ್ಕುವುವೆಂದು ಯೋಚಿಸತೊಡಗಿದನು.

ಮಾರನೆಯ ವರ್ಷ ತರುಣನು ಎರಡನೆಯಾವೃತ್ತಿ ವ್ಯಾಪಾರಕ್ಕಾಗಿ ಹೊರಟನು. ಆ ಪ್ರಯಾಣವು ಮರೆಯುವಂತಹದಲ್ಲ. ನೆರೆಯಲ್ಲಿ ಪದಾರ್ಥಗಳನ್ನು ಸಂಗ್ರಹಮಾಡಿಟ್ಟುಕೊಂಡಿದ್ದ ಜೆಂಟ್ರಿ (Gentry) ಯೆಂಬಾತನು ತನ್ನ ಸರಕುಗಳನ್ನು ನ್ಯೂ ಆರ್ಲಿಯನ್ಸಿಗೆ ಹರಿಗೋಲಿನ ಮೂಲಕ ತೆಗೆದುಕೊಂಡು ಹೋಗಿ ಮಾರಿಬರಬಲ್ಲವನನ್ನು ಹುಡುಕುತ್ತಿದ್ದನು. ಆ ಕೆಲಸಕ್ಕೆ ಪ್ರಾಮಾಣಿಕನಾದ ಅಬ್ರ

ಹಾಮನು ತಕ್ಕವನೆಂದು ತೋರಿತು. ಅಬ್ರಹಾಮನು ಹೊರಗೆ ತಿರುಗಿದವನಲ್ಲ, ವ್ಯಾಪಾರದ ಮರ್ಮವನ್ನೂ ಚಾತುರ್ಯವನ್ನೂ ಅರಿತವನಲ್ಲ. ಮಿಸಿಸಿಪ್ಪಿಯ ದಕ್ಷಿಣ ತೀರವನ್ನು ನೋಡಿರಲಿಲ್ಲ—ಇಷ್ಟಾದರೂ ಜೆಂಟ್ರಿಯು ಅವನನ್ನು ಕಣ್ಣು ಮುಚ್ಚಿಕೊಂಡು ನಂಬುವವನಾಗಿದ್ದನು. ಆತನು ಆ ತರುಣನನ್ನು ಕೇಳಿದನು. ಅಬ್ರಹಾಮನ ಎದೆಯು ಡವಡವನೆ ಹೊಡೆದುಕೊಂಡಿತು. ಒಪ್ಪಿಕೊಂಡನು. ತನಗೆ ದೆಸೆಯು ತಿರುಗಿತೆಂದು ಅವನು ಹೇಳಿಕೊಂಡನು. ಹೊರಗಿನ ದೇಶವನ್ನು ನೋಡಬೇಕೆಂದು ಆಸೆಪಡುತ್ತಿದ್ದ ಅವನಿಗೆ ಇದು ಸುಸಮಯವಾಗಿ ತೋರಿತು. ಅವನೂ ಜೆಂಟ್ರಿಯ ಮಗನೂ ದೋಣಿಯಲ್ಲಿ ಕುಳಿತು ಹೊರಟರು. ದೋಣಿಯು ಒಹಿಯೋನದಿಯನ್ನು ಸೇರಿದ ಬಳಿಕ ಸಾವಿರದೆಂಟುನೂರು ಮೈಲಿಗಳ ಪ್ರಯಾಣ ವನ್ನು ಮಾಡಬೇಕಾಗಿದ್ದಿತು. ಅಪರಿಚಿತ ಜಲರಾಶಿಯಲ್ಲಿ ಹಡಗನ್ನು ನಡೆಯಿ ಸಿದ ಕೊಲಂಬಸ್ ಆಗಲೀ ಅಟ್ಲಾಂಟಿಕ್ ಸಾಗರವನ್ನು ಈ ಕೊನೆಯಿಂದ ಆ ಕೊನೆಯವರೆಗೆ ಮೊದಲನೆಯ ಸಾರಿ ದಾಟಿದ ನಾವಿಕನಾಗಲೀ ಇಂಡಿಯಾನದ ವನ ಗಹನವನ್ನು ಬಿಟ್ಟು ಹೊರಗೆ ಕಾಲಿಟ್ಟ ಅಬ್ರಹಾಮನಷ್ಟು ಪುಲಕಿತಶರೀರನಾಗ ಲಿಲ್ಲ. ಪ್ರಯಾಣದ ಮಹತ್ವವನ್ನು ಚಿಂತಿಸಿಕೊಳ್ಳಲಿಲ್ಲ. ಭವಿತವ್ಯತೆಯನ್ನು ಕುರಿತು ಚಿತ್ತದಲ್ಲಿ ಅಷ್ಟೊಂದು ಚರ್ಚೆಮಾಡಲಿಲ್ಲ.

ಪ್ರಯಾಣವು ಅತ್ಯಂತ ಘನವಾದುದು. ಅದು ಕಣ್ತೆರೆಯುತ್ತಿರುವ ತರುಣ ರನ್ನು ಹೊಸರಾಜ್ಯಗಳಿಗೆ ಕರೆತರುತ್ತಿದ್ದಿತು. ಗಭೀರ ಪ್ರವಾಹದಿಂದ ಹರಿದು ಸಾಗರವನ್ನು ಸೇರುವ ಒಹಿಯೋ ನದಿಯಲ್ಲಿ ಅವರು ಹೊರಟಹಾಗೆ ತೋಟಗಳೂ ಕಬ್ಬಿನ ಗದ್ದೆಗಳೂ ದಡದಲ್ಲಿ ಎರಡುಕಡೆಯಲ್ಲಿಯೂ ಬೆಳದಿದ್ದ ಎತ್ತರವಾದ ಗಿಡ ಗಳೂ ಬಹಳ ಮನೋಹರವಾಗಿದ್ದುವು. ನಂದನೋದ್ಯಾನದಲ್ಲಿದ್ದಂತೆ ತೋರುತ್ತಿ ದ್ದಿತು. ಅಲ್ಲಲ್ಲಿ ನಿವಾಸಿಗಳು ನದೀತೀರಕ್ಕೆ ಬಂದು ಅವರ ಕ್ಷೇಮವನ್ನು ವಿಚಾ ರಿಸುತ್ತ ಸ್ನೇಹಭಾವವನ್ನು ತೋರಿಸಿದರು. ರಾತ್ರಿಯ ಹೊತ್ತಿನಲ್ಲಿ ದೋಣಿಯನ್ನು ಮರಕ್ಕೆ ಕಟ್ಟಿ ಮರವನ್ನೇರಿ ಅಬ್ರಹಾಮನೂ ಜೊತೆಯಲ್ಲಿ ಬಂದಿದ್ದವನೂ ಮಲಗು ತ್ತಿದ್ದರು. ಕಂಡವರೊಡನೆ ಸ್ನೇಹವನ್ನು ಬೆಳೆಯಿಸಿ ಆತರುಣರು ರಾಜ್ಯಭಾರದ ವೃತ್ತಾಂತಗಳನ್ನೂ ಇತರ ಕಥೆಗಳನ್ನೂ ಉಪಯುಕ್ತವಾದ ವಿಚಾರಗಳನ್ನೂ ಕೇಳಿ ತಿಳಿದುಕೊಳ್ಳುತ್ತಿದ್ದರು.

ದಾರಿಯಲ್ಲಿ ಒಂದು ಸಂಘಟನೆಯುಂಟಾಯಿತು. ಆ ಪ್ರಾಂತದಲ್ಲಿ ಅಂತಹ ವಿಚಿತ್ರವೊದಗುವುದೆಂದು ಅವರು ನಿರೀಕ್ಷಿಸಿರಲಿಲ್ಲ. ಒಂದು ದಿನ ರಾತ್ರಿ ಎಂದಿ ನಂತೆ ಅವರು ದೋಣಿಯನ್ನು ತೀರದಲ್ಲಿದ್ದ ಮರಕ್ಕೆ ಕಟ್ಟಿ ಮಲಗಿದ್ದರು. ದಿನ ವೆಲ್ಲಾ ದುಡಿದಿದ್ದುದರಿಂದ ರಾತ್ರಿಯಲ್ಲಿ ಗಾಢವಾದ ನಿದ್ರೆ ಹತ್ತಿತು. ಸರಿಹೊತ್ತಿ ನಲ್ಲಿ ಒಂದು ಸಣ್ಣ ಸದ್ದಾಗಿ ಅವರಿಬ್ಬರೂ ಎಚ್ಚರಗೊಂಡರು. ಅಬ್ರಹಾಮನು ಚಕ್ಕನೆದ್ದು, ಯಾರದು ? ಎಂದು ಕೂಗಿದನು. ಉತ್ತರವು ಬರಲಿಲ್ಲ. ಕೂಡಲೇ ಹತ್ತಿರಿದ್ದ ದೊಣ್ಣೆಯನ್ನು ಹಿಡಿದು ಸನ್ನದ್ಧನಾಗಿ ನಿಂತನು, ಲೂಟಿಗಾಗಿಯೇ ಬಂದಿದ್ದ ಏಳುಮಂದಿ ನೀಗ್ರೋಜನರು ಕಾಣಿಸಿಕೊಂಡರು. ಅವರೊಳಗೊಬ್ಬನು

ದಡದ ಮೇಲೆ ನಿಂತು, ನೀರಿನಲ್ಲಿ ಒಂದು ಮಾರು ದೂರದಲ್ಲಿದ್ದ ದೋಣಿಗೆ ಹಾರಿದನು. ಆದರೆ ಅವನು ಅರ್ಧಕ್ಕೆ ಬರುವಷ್ಟರಲ್ಲಿ ದೊಣ್ಣೆಯು ಅವನ ತಲೆಯ ಮೇಲೆರಗಿ ಬಲವಾದ ಪೆಟ್ಟಿನೊಡನೆ ಅವನನ್ನು ನೀರಿಗೆ ಕೆಡವಿಬಿಟ್ಟಿತು. ಅದೇ ಪ್ರಯತ್ನದಲ್ಲಿ ಎರಡನೆಯವನೂ ಮೂರನೆಯವನೂ ನಾಲ್ಕನೆಯವನೂ ಅದೇಗತಿಯನ್ನು ಹೊಂದಿದರು. ಉಳಿದವರು ಯುದ್ಧಕೊಡಲಾರದೆ ಕಾಲಿಗೆ ಬುದ್ಧಿ ಹೇಳಿದರು. ಅಬ್ರಹಾಮನು ಅಷ್ಟಕ್ಕೆ ಬಿಡಲಿಲ್ಲ. ಅವನೂ ಜೊತೆಯವನೂ ಬೆನ್ನಟ್ಟಿದರು. ಸ್ವಲ್ಪದೂರದಲ್ಲಿಯೇ ನಿಗ್ರೋಗಳನ್ನು ಅವರು ಅಡ್ಡಗಟ್ಟಲಾಗಿ ಮುಷ್ಟಿಯುದ್ಧವು ಪ್ರಾರಂಭಿಸಿತು. ಕಳ್ಳರು ಮತ್ತೆ ಓಡಿದರು. ಅಬ್ರಹಾಮನಿಗೆ ಮುಖದಲ್ಲಿ ಸ್ವಲ್ಪ ಗಾಯವಾಯಿತು.

ಮಿಸಿಸಿಪ್ಪಿಯ ದಕ್ಷಿಣತೀರದವರೆಗೆ ಹೋಗಿಬರಲು ಮೂರುತಿಂಗಳು ಹಿಡಿಯಿತು. ಸರಕುಗಳನ್ನು ಲಾಭಕರನಾಗಿ ಮಾರಿದಹಾಗಾಯಿತು. ನ್ಯೂ ಆರ್ಲಿಯನ್ಸ್‌ವರೆಗೆ ಹೋಗುವ ಅವಶ್ಯಕತೆಯಿರಲಿಲ್ಲ. ಬರಿದಾದ ದೋಣಿಯನ್ನು ಪ್ರತಿಸ್ರೋತವಾಗಿ ನಡೆಯಿಸಿಕೊಂಡು ಹೋಗುವುದು ದುಸ್ತರವಾದುದರಿಂದ ಅವರು ಅದನ್ನು ಮಾರಿಬಿಟ್ಟರು. ಮೊದಲನೆಯ ಸಲವೇ ಅಷ್ಟೊಂದು ಆದಾಯವುಂಟಾದುದರಿಂದ ಅವರ ಸಂತೋಷಕ್ಕೆ ಮಿತಿಯಿರಲಿಲ್ಲ. ಹಿಂದಿರುಗುವಾಗ ಹೊಗೆಯ ಜಹಜಿನಲ್ಲಿ ಪ್ರಯಾಣಮಾಡಿದರು. ಅವರು ಮಾಡಿದ ಸಾಹಸವನ್ನು ಕೇಳಿ ತೃಪ್ತಿಗೊಂಡ ಕೆಪ್ಟನನು ತನ್ನಲ್ಲಿ ಕೆಲಸಕ್ಕಿರಲು ಅಬ್ರಹಾಮನನ್ನು ಕೇಳಿದನು. ಅವನು ಒಪ್ಪಲಿಲ್ಲ. ಇನ್ನೂ ಪ್ರಾಪ್ತವಯಸ್ಕನಾಗಿರಲಿಲ್ಲನಾಗಿ ತನಗೆ ಸ್ವಾತಂತ್ರ್ಯವಿಲ್ಲವೆಂದೂ ತಂದೆಗೆ ಅಧೀನನಾಗಿರುವೆನೆಂದೂ ಹೇಳಿದನು. ಸ್ವಲ್ಪಮಟ್ಟಿಗೆ ದೇಶಾಟನೆಯಾಗಿ ಪ್ರಪಂಚದ ಒಂದುಭಾಗವನ್ನು ನೋಡಿದಂತಾಯಿತು. ಸಂಚಾರಕಾಲದಲ್ಲಿ ಕಂಡ ಇತರ ವಿಷಯಗಳನ್ನು ಮರೆಯುವುದಾದರೂ ಅಬ್ರಹಾಮನು ಆಗ ಪ್ರಚಾರದಲ್ಲಿದ್ದ ದಾಸ್ಯಪದ್ಧತಿಯನ್ನು ಮರೆಯಲಿಲ್ಲ. ಅವನು ಮುಂದೆ ಅದನ್ನು ನಾಶಮಾಡಲು ಬದ್ಧಕಂಕಣನಾದನು. ಪಶುಪ್ರಾಣಿಗಳಿಗಾದರೂ ಹೆಚ್ಚಿನ ಸ್ವಾತಂತ್ರ್ಯವಿದ್ದಿತು. ಅವು ಸ್ವಚ್ಛಂದಚಾರಿಗಳಾಗಿದ್ದುವು. ಹೆಚ್ಚಿನ ಜೀತವಿರಲಿಲ್ಲ. ಗುಲಾಮರು ತೋಟದಲ್ಲಿ ದುಡಿಯುವುದೂ ಕೈಕಾಲುಗಳು ತತ್ತರಿಸುವಷ್ಟು ಹೊರೆಯನ್ನು ಹೊರುವುದೂ ಅಬ್ರಹಾಮನ ಕಣ್ಣಿಗೆ ಬಿದ್ದುವು. ತೀರಪಟ್ಟಣಗಳಲ್ಲಿದ್ದ ಗುಲಾಮರ ಕಷ್ಟವನ್ನಂತೂ ಹೇಳಿ ಮುಗಿಸಲಾಗುತ್ತಿರಲಿಲ್ಲ. ಈ ಜೀತವೆಲ್ಲಕ್ಕಿಂತ ಹೆಚ್ಚಾಗಿ, ವರ್ತಕರಿಂದ ಕೊಂಡುಕೊಳ್ಳಲ್ಪಟ್ಟು ಮನೆಗಳನ್ನೂ ಮಂದಿಮಕ್ಕಳನ್ನೂ ಎಂದೆಂದಿಗೂ ಹಿಂದೆಯೇ ತೊರೆದು ಬಂದ ಗುಲಾಮರು ತಂಡತಂಡವಾಗಿ ಹಡಗಿನಲ್ಲಿ ಮಿಸಿಸಿಪ್ಪಿಪ್ರಾಂತಕ್ಕೆ ಒಯ್ಯಲ್ಪಡುವುದನ್ನು ನೋಡಿ ಅವನು ಕಣ್ಣೀರು ಹಾಕಿದನು. ಅವರನ್ನು ತುಂಬಿಕೊಂಡು ನೂರಾರು ಹಡಗುಗಳು ಪ್ರಯಾಣಮಾಡುತ್ತಿದ್ದುದನ್ನು ಅಬ್ರಹಾಮನು ನೋಡಿದನು. ಸಮದೃಷ್ಟಿಯುಳ್ಳ ಭಗವಂತನಿಂದ ಇತರರಂತೆಯೇ ಸೃಷ್ಟಿಸಲ್ಪಟ್ಟು ಸಮನಾದ ಹಕ್ಕುಬಾಧ್ಯತೆಗಳನ್ನುಳ್ಳ ಮನುಷ್ಯವರ್ಗದಲ್ಲಿ ಒಬ್ಬನು ಮತ್ತೊಬ್ಬನಿಗೆ ದಾಸ–ಅದರಲ್ಲಿಯೂ ಕ್ರೀತದಾಸ—ನಾಗಿದ್ದುದನ್ನು ನೋಡಿದನು.

ಆದರಲ್ಲಿ ಲೇಶವೂ ಧರ್ಮವಿಲ್ಲವೆಂದು ತೋರಿತು. ಅಂದಿನಿಂದ ಜನರನ್ನು ದಾಸ್ಯದ ದೆಸೆಯಿಂದ ಬಿಡುಗಡೆಮಾಡಿ ಉದ್ಧಾರಮಾಡುವುದು ಅಬ್ರಹಾಮನ ಅಸ್ಖಲಿತ ವ್ರತವಾಯಿತು.

ಅಬ್ರಹಾಮನು ಬಹಳದಿನ ಕಾಡಿನಲ್ಲಿ ಅಡಗಿರಬೇಕಾಗಿರಲಿಲ್ಲ. ಕಾಡು ದಿನದಿನಕ್ಕೆ ಹಿಂದಕ್ಕೆ ಸಂಕುಚಿಸುತ್ತ ನಾಗರಿಕತೆಗೆ ಸ್ಥಳವನ್ನು ಬಿಟ್ಟುಕೊಡುತ್ತಿದ್ದಿತು. ನಿವಾಸಿಗಳು ಇಂಡಿಯಾನಕ್ಕೆ ಜಲಪ್ರವಾಹದಂತೆ ನುಗ್ಗಿದರು. ಒಕ್ಕಲು ಹೋದವರು ಇನ್ನು ಮುಂದೆ ತಮ್ಮ ಮನಸ್ಸುಬಂದೆಡೆಯಲ್ಲಿರಲು ಅವಕಾಶವು ತಪ್ಪಿಹೋಯಿತು. ಜನವಸತಿಯು ಹೆಚ್ಚಿ ಅಲ್ಲಿ ಮರದ ಮನೆಗಳ ಶ್ರೇಣಿಗಳುಂಟಾದುವು. ನಿವಾಸಿಗಳಲ್ಲಿ ಮೈತ್ರಿಯೂ ಒಗ್ಗಟ್ಟೂ ಹೆಚ್ಚಿದವು. ಯಾವುದಾದರೊಂದು ಕಾರಣದಿಂದ ಎಲ್ಲರೂ ಒಟ್ಟಿಗೆ ಸೇರುತ್ತಿದ್ದರು ಅಬ್ರಹಾಮನೂ ಅವರ ನಡುವೆ ಇರುತ್ತಿದ್ದನು. ಆಟಗಳಲ್ಲಿ ಅವನಿಗೆ ಬಹಳ ಆಸಕ್ತಿ. ಎಲ್ಲಾ ಸ್ಥಳದಲ್ಲಿಯೂ ಎಲ್ಲರ ದೃಷ್ಟಿಯಲ್ಲಿಯೂ ಇರುತ್ತಿದ್ದನು, ಅವನು ಒಂದು ಕಡೆಯಲ್ಲಿರುವುದನ್ನು ಅವನ ಉದ್ದವು ಹೇಳಿಬಿಡುತ್ತಿದ್ದಿತು. ಈ ವೇಳೆಗೆ ಅವನಿಗೆ ಇಪ್ಪತ್ತುವರ್ಷವಾಗಿದ್ದಿತು. ಎತ್ತರದಲ್ಲಿ ಆರು ಅಡಿ, ನಾಲ್ಕು ಅಂಗುಲ. ಅವನಷ್ಟು ಎತ್ತರನಾಗಿ ಇನ್ನಾರೂ ಇರಲಿಲ್ಲ. ಆಕಾರಕ್ಕೆ ತಕ್ಕ ಬಲವಿದ್ದಿತು. ಔನ್ನತ್ಯದಿಂದ ಯಾವ ಯಾವ ಅನುಕೂಲ್ಯಗಳಿರುವುವೋ ಅವೆಲ್ಲವನ್ನೂ ಅವನು ಪಡೆದಿದ್ದನು. ಪಡೆದು ಪೂರ್ತಿಯಾಗಿ ಉಪಯೋಗಿಸುತ್ತಿದ್ದನು.

ಆಟಪಾಟಗಳಲ್ಲಿ ಮುಂದಿರುವುದೂ ಕೆಲಸದಲ್ಲಿ ಮುಂದಿರುವುದೂ ಲಘುವಾದ ಗುಣಗಳೆಂದು ತೋರಿದರೂ ಅನಾಗರಿಕನಾದ ಆ ಕಾಲದಲ್ಲಿ ಅವು ಅಗತ್ಯಗಳಾಗಿ ಪ್ರಯೋಜನಕಾರಿಗಳಾಗಿದ್ದುವು. ಆದರೆ ಹೀಗೆ ಒರಟು ಕೆಲಸಗಳಲ್ಲಿ ಪ್ರವೃತ್ತನಾದರೂ ಅಬ್ರಹಾಮನಲ್ಲಿ ಹೃದಯವು ಸಾರ್ದ್ರವಾಗಿದ್ದಿತು. ವಜ್ರಕಾಯನಾದರೂ ಅವನು ಮೃದುಹೃದಯನಾಗಿದ್ದನು. ತನ್ನ ಕಷ್ಟದಲ್ಲಿ ಹೃದಯವು ಕಲ್ಲಾದರೂ ಇತರರ ಕಷ್ಟದಲ್ಲಿ ದ್ರವಿಸುವುದು. ಕೊರಗುವವರನ್ನು ನೋಡಿ ಅವನು ಕೊರಗುತ್ತಿದ್ದನು. ಅವನೊಡನೆ ಮಾತನಾಡಿದವರಿಗೆ ಅವನಲ್ಲಿ ಪ್ರೀತಿಯುಂಟಾಗದಿರುತ್ತಿರಲಿಲ್ಲ. ಆ ಅಂಶವನ್ನು ಆಕರ್ಷಣಶಕ್ತಿಯೆಂದಾಗಲೀ ಅಥವಾ ಮತ್ತೊಂದೆಂದಾಗಲೀ ಕರೆದರೂ ಆ ಶಕ್ತಿಯು ಅವನಲ್ಲಿ ಮೊದಲಿಂದ ಕೊನೆಯವರೆಗೂ ಇದ್ದಿತು. ಪ್ರೆಸಿಡೆಂಟನಾದ ಕಾಲದಲ್ಲಿ ದರ್ಶನವನ್ನು ಅಪೇಕ್ಷಿಸಿ ಅವನಲ್ಲಿ ಬಂದವರು ಹೆಚ್ಚುಕಡಿಮೆ ಪ್ರತಿಯೊಬ್ಬರೂ ಆ ಸದಭಿಪ್ರಾಯವನ್ನು ಹೊಂದಿ ಹಿಂದಿರುಗುತ್ತಿದ್ದರು. ಕಥೆಯನ್ನು ಹೇಳುವುದರಲ್ಲಿ ಅವನಿಗೆ ಅದ್ಭುತವಾದ ನೈಪುಣ್ಯವಿದ್ದಿತು. ಈ ಗುಣವೂ ಕೂಡ ಬದಲಾಯಿಸಲಿಲ್ಲ. ವಿನೋದವನ್ನುಂಟುಮಾಡಲು ಅವನ ಹಾಗೆ ಯಾರಿಗೂ ಬರದು. ಕಥೆಗಳಲ್ಲಿನ ವಿನೋದವು ಉಚ್ಚವರ್ಗದ್ದಾಗಿರಬಹುದು, ಅಥವಾ ವ್ಯತ್ಯಸ್ತವಾಗಿದ್ದಿರಬಹುದು. ಆದರೆ ಅವುಗಳನ್ನು ಸಂದರ್ಭಕ್ಕೆ ತಕ್ಕಂತೆ ಉಪಯೋಗಿಸಿ ತನ್ನ ಮನಸ್ಸಿನ ಅರ್ಥವನ್ನು ತಿಳಿಯಪಡಿಸುವುದರಲ್ಲಿಯೂ, ಕೇಳುವವರನ್ನು ನಗಿಸುವವನಾದರೂ ಕೂಡ ನಾಚಿಕೆಯುಂಟಾ

ಗದಂತೆ ಮನೋಭಾವವನ್ನು ಒಂದೇಸಮನಾಗಿಡುವುದರಲ್ಲಿಯೂ ಅವನ ಜಾಣ ತನವು ಅನುಪಮವಾದುದು. ಈ ಶಕ್ತಿಯು ವಯಸ್ಸಾದ ಹಾಗೆ ಹೆಚ್ಚಿ ಪರಿಪಾಕ ಹೊಂದಿತು. ಆ ಹುಡುಗತನದ ಕಾಲದಲ್ಲಿ ಅವನು ಈಸೋಪನ ಕಥೆಗಳನ್ನು ಹೊಸಹೊಸದಾಗಿ ಹೇಳುತ್ತ ಕೇಳುವವರಿಗೆ ಉಲ್ಲಾಸವನ್ನುಂಟುಮಾಡುತ್ತಿದ್ದನು. ನಗುವನ್ನುಂಟುಮಾಡುವಂತಹ ಪ್ರಸ್ತಾಪವನ್ನಾಗಲೀ ಇತರ ಜನಜನಿತವಾದ ಪ್ರಸ್ತಾಪವನ್ನಾಗಲೀ ಕಿವಿಗೆ ಬಿದ್ದ ಕೂಡಲೇ ಸರಿಪಡಿಸಿ, ಸ್ವಾರಸ್ಯವುಳ್ಳದ್ದನ್ನಾಗಿ ಮಾಡಲು ಹೊಂದಿಸಬೇಕಾದುದೆಲ್ಲವನ್ನೂ ಹೊಂದಿಸಿಕೊಂಡು ಕಥೆಯರೂಪದಲ್ಲಿ ಹೇಳುತ್ತಿದ್ದನು. ಜನರು ಸಮರಾತ್ರಿಯಾದರೂ ಕುಳಿತು ಅವನ ಕಥೆಗಳನ್ನೂ ಮಾತುಗಳನ್ನೂ ಕೇಳುತ್ತಿದ್ದರು. ಹಗಲಿನ ಶ್ರಮದಿಂದ ಆಯಾಸಹೊಂದಿ ತೂಕಡಿಸುತ್ತ ಡೆನಿಸ್ ಹ್ಯಾಂಕ್ಸನು ಅವನನ್ನು ಮನೆಗೆ ಹೋಗಲು ಎಬ್ಬಿಸಬಹುದು. ಆದರೆ ಕೊನೆಯಲ್ಲಿ ನಿರ್ವಾಹವಿಲ್ಲದೆ ತಾನೊಬ್ಬನೇ ಹೋಗಬೇಕಾಗುತ್ತಿದ್ದಿತು.

ಮೇಲೆ ಹೇಳಿರುವ ಗುಣಗಳುಳ್ಳವನಲ್ಲಿ ಸರಳಸ್ವಭಾವವಿದೆಯೆಂದು ನಾವು ಹೊಸದಾಗಿ ಹೇಳಬೇಕಾಗಿಲ್ಲ. ಹೊರಗಿನವರಿಗೋಸ್ಕರ ಅಥವಾ ಸ್ವಪ್ರಯೋಜನಕ್ಕೋಸ್ಕರ ಮನುಷ್ಯನು ಪ್ರಮಾಣಿಕನಾಗಲು ಪ್ರಯತ್ನಪಡಬಹುದು. ನಿಜವನ್ನೇ ಹೇಳಲು ಪ್ರಯತ್ನಪಡಬಹುದು. ಎಲ್ಲರಲ್ಲಿಯೂ ಸೌಜನ್ಯವನ್ನು ತೋರಬಹುದು. ಆದರೆ ಅದೆಲ್ಲವೂ ಕೃತಕ. ಜೀವನವು ಗೋಜಿಕೊಂಡು ಜೀವನದ ಅಂಶಗಳು ಒಂದಕ್ಕೊಂದು ಗಂಟುಹಾಕಿಕೊಂಡರೆ ಹೀಗೆಲ್ಲಾ ಆಟವನ್ನು ಹೂಡಬೇಕಾಗುತ್ತದೆ. ಆದರೆ ಆತ್ಮಸಾಕ್ಷಿಯಾಗಿ ಕೆಲಸಮಾಡುವವನಲ್ಲಿ ಅವು ಪ್ರಕೃತಿಸಿದ್ಧವೆಂಬುದನ್ನು ಊಹಿಸುವುದು ಕಷ್ಟವಲ್ಲ. ಅದರೊಳಗೂ ದೂರದಲ್ಲಿದ್ದುಕೊಂಡು ಕೇವಲ ಪ್ರಕೃತಿಯ ಪೋಷಣೆಯಲ್ಲಿ ಬೆಳೆದ ಅಬ್ರಹಾಮನಲ್ಲಿ ಅವು ಹುಟ್ಟುತಾಬರುವ ಕೈಕಾಲುಗಳಂತೆಯೂ ಇತರ ದೇಹಭಾಗಗಳಂತೆಯೂ ಸಹಜವಾಗಿ ಬಂದುವು. ಕಾಲದೇಶಗಳ ವಿಚಿತ್ರಗತಿಯಿಂದ ನಾವು ಮಾರ್ಪಡುವೆವೇ ಹೊರತು ನೈಸರ್ಗಿಕವಾಗಿ ನಮ್ಮಲ್ಲಿ ಆ ಸದ್ಗುಣಗಳೆಲ್ಲದರ ಬೀಜವು ಇದ್ದೇ ಇರುವುದೆಂದು ನಮ್ಮ ಭಾವನೆ.

---

## ೪ನೆಯ ಅಧ್ಯಾಯ

---

### ಇಲಿನ್ವಾದಲ್ಲಿ

ಥಾಮಸ್ ಲಿಂಕನ್ನನು ಸಂಸಾರದೊಡನೆ ಮತ್ತೆ ಗಂಟುಮೂಟೆಯನ್ನೆತ್ತಿಕೊಂಡು ಹೊರಟನು. ಪಶ್ಚಿಮಕ್ಕೆ ಹೋದಷ್ಟೂ ಭೂಮಿಯು ಫಲವತ್ತಾಗಿ ರಾಜ್ಯವು ಸುಭಿಕ್ಷವಾಗಿರುವುದೆಂದು ಅವನು ಭಾವಿಸಿರಬಹುದು. ಈ ತಡವೆ

ಇಲಿನ್ವಾಕ್ಕೆ ಹೋದನು. ಅಲ್ಲಿಗೆ ಪದಾರ್ಪಣ ಮಾಡಲು ಲಿಂಕನ್ನನಿಗೆ ಯಾರೂ ಹೆಚ್ಚಾಗಿ ಹೇಳಬೇಕಾಗಲಿಲ್ಲ.

ಹೀಗೆ ಪ್ರಯಾಣಹೊರಟವರು ಲಿಂಕರ್ದಂಪತಿಗಳು, ಹೆಂಡತಿಯ ಮೊದಲ ಗಂಡನ ಮಕ್ಕಳು ಅವರ ಇತರ ಸಂಬಂಧಿಗಳು ಮತ್ತು ಅಬ್ರಹಾಮನು. ಅಕ್ಕನಾದ ಸಾರಳು ಕೆಲವು ವರ್ಷಗಳಿಗೆ ಮೊದಲು ಮದುವೆಯಾಗಿದ್ದವಳು ಪ್ರಯಾಣ ಕಾಲಕ್ಕೆ ಸ್ವಲ್ಪ ಮುಂಚೆ ಪ್ರಾಣವನ್ನು ಬಿಟ್ಟಿದ್ದಳು. ಇವರಿಷ್ಟು ಮಂದಿಯೂ ಎರಡು ವಾರಗಳವರೆಗೆ ಕಾಡುಮೇಡುಗಳನ್ನೂ ಜೌಗು ಭೂಮಿಗಳನ್ನು ತಿರುಗಿ ಇಲಿನ್ವಾರಾಜ್ಯಕ್ಕೆ ಹೋಗಿಬಿದ್ದರು. ಪ್ರಯಾಣಕಾಲದಲ್ಲಿ ಉಂಟಾದ ಬೇಸರವನ್ನು ಅಬ್ರಹಾಮನು ತನ್ನ ವಿನೋದಕರವಾದ ಕಥೆಗಳಿಂದ ಪರಿಹರಿಸಿ ತೊಂದರೆಗಳನ್ನು ಮರೆಯಿಸುತ್ತಿದ್ದನು. ಆದರೂ ದಣಿವು ಹೇಳಿತೀರದಷ್ಟಾಯಿತು. ಆ ಪ್ರದೇಶದಲ್ಲಿ ನೇಗಿಲೂ ಕೊಡಲಿಯೂ ಪ್ರವೇಶಮಾಡಿರಲಿಲ್ಲ. ಅಬ್ರಹಾಮನು ಬಹಳವಾಗಿ ಶ್ರಮಪಟ್ಟನು. ಆ ಹುಡುಗನು ಮನೆಯನ್ನು ಕಟ್ಟಿ ಹದಿನೈದು ಎಕರೆಯ ನೆಲವನ್ನು ಉತ್ತು ಹಸನು ಮಾಡಿದನು. ಆಮೇಲೆ ಅದಷ್ಟರ ಸುತ್ತಲೂ ಬೇಲಿಯನ್ನು ಹಾಕಿದುದಾಯಿತು.

ವಯಸ್ಸಾಗಿ ಪ್ರಾಯಸಮರ್ಥನಾದಮೇಲೂ ಸುಮ್ಮನೆ ಕುಳಿತಿರುವುದು ಯೋಗ್ಯವಲ್ಲವೆಂದು ತಿಳಿದು ಅಬ್ರಹಾಮನು ಯಾವುದಾದರೊಂದು ಮಾರ್ಗದಿಂದ ಸಂಪಾದನೆ ಮಾಡಬೇಕೆಂದ ಚಿಂತಿಸಿದನು. ಆ ಯೋಚನೆಯು ಅವನ ಮನಸ್ಸಿನಲ್ಲಿ ಮೊದಲಿನಿಂದ ಇದ್ದರೂ ಪ್ರಬುದ್ಧನಾಗುವವರೆಗೆ ತಂದೆಯ ಅಧೀನನಾಗಿದ್ದುದರಿಂದ ನಿರ್ವಾಹವಿಲ್ಲದೆ ಇದ್ದಿತು. ಇಲಿನ್ವಾಕ್ಕೆ ಬಂದ ಕೆಲವು ಕಾಲದಮೇಲೆ ಅವನಿಗೆ ಇಪ್ಪತ್ತೊಂದು ತುಂಬಿತು. 1830ನೇ ಬೇಸಿಗೆಯಲ್ಲಿ ಪ್ರಾರಂಭಿಸಿದನು. ನೆರೆಹೊರೆಯವರ ಚಿಲ್ಲರೆ ಕೆಲಸಗಳನ್ನು ಮಾಡಿಕೊಡುತ್ತಲೂ ಇತರ ಕೆಲಸಗಳಲ್ಲಿ ಕೈಹಾಕುತ್ತಲೂ ಅವರ ಪ್ರೀತಿಯನ್ನು ಪಡೆದನು. ಅಷ್ಟೇ ಅಲ್ಲ. ಅವನ ಚಟುವಟಿಕೆಯೂ ಸದ್ಭಾವವೂ ಪ್ರಸನ್ನತೆಯೂ ಜನರ ಹೃದಯವನ್ನು ರಂಜಿಸುತ್ತಿದ್ದುವು. ಅಬ್ರಹಾಮನು ಮೋಸಮಾಡಿದನೆಂದು ಹೇಳುವವರಿಲ್ಲ.

ಆ ವರ್ಷದ ಕೊನೆಯಲ್ಲಿ ಹಿಮಗಾಲನಾರಂಭಿಸಿ ಎಂದೂ ಕಾಣದಿದ್ದಷ್ಟು ಮಂಜು ಸುರಿಯಿತು. ಈ ಹಿಮಗಾಲದಲ್ಲಿ ಅಬ್ರಮನಿಗೆ ವ್ಯಾಪಾರಗಾರನೊಬ್ಬನ ಗುರುತಾಗಿ, ಅವನ ಸರಕುಗಳನ್ನು ತೆಗೆದುಕೊಂಡು ಮತ್ತೆ ನ್ಯೂ ಆರ್ಲಿಯರ್ಸಿಗೆ ಪ್ರಯಾಣವು ಒದಗಿತು. ದಿನಗೂಲಿಯೂ ಭತ್ಯವೂ, ಲಾಭವು ಬಂದಲ್ಲಿ ಪ್ರತಿಯೊಬ್ಬನಿಗೂ ಇಪ್ಪತ್ತು ಡಾಲರುಗಳ ಬಹುಮಾನವೂ ಬರುವುದಾಗಿದ್ದುದರಿಂದ ಅಬ್ರಹಾಮನೂ ಡೆನ್ನಿಸ್ ಹ್ಯಾಂಕ್ಸನೂ ಹಿಂದುಮುಂದು ನೋಡದೆ ಒಪ್ಪಿಕೊಂಡನು. ಆ ಸಂಪಾದನೆಯೆಂದಿಗೂ ಅಲ್ಪನಾದುದಲ್ಲ. ಅಬ್ರಹಾಮನ ಬಲತಾಯಿಯ ಮಗನೊಬ್ಬನೂ ಅವರ ಜೊತೆಯಲ್ಲಿ ಹೊರಟನು.

ಪ್ರಯಾಣವು ಜಾಗ್ರತೆಯಾಗಿಯೂ ನಿರ್ವಿಘ್ನವಾಗಿಯೂ ಸಾಗಿ ನ್ಯೂ ಆರ್ಲಿಯರ್ಸನ್ನು ಅವರು ತಲಪಿದರು. ದಾಸ್ಯಪದ್ಧತಿಯುಳ್ಳ ರಾಜ್ಯವನ್ನು ಒಳಹೊಕ್ಕು

ನೋಡಿಕೊಂಡು ಬರಲು ಅಬ್ರಹಾಮನಿಗೆ ಇದು ಎರಡನೆಯಾವೃತ್ತಿ. ಈತಡವೆ ಆ ಪದ್ಧತಿಯ ಅವಗುಣಗಳು ಮತ್ತಷ್ಟು ಸ್ಫುಟವಾದುವು. ಗುಲಾಮರಲ್ಲಿ ಗಂಡಸರು ಹೆಂಗಸರೆಂಬ ಭೇದವಿಲ್ಲದೆ ಎಲ್ಲರಿಗೂ ಕೋರಡೆಯ ಪೆಟ್ಟು ಬೀಳುತ್ತಿದ್ದಿತು. ವರ್ತಕರು ಅವರನ್ನು ಕೇವಲ ನಿರ್ಜೀವವಸ್ತುಗಳಂತೆ ಕಾಣುತ್ತ ಮಾರುತ್ತಲೂ ಕೊಳ್ಳುತ್ತಲೂ ಇದ್ದರು. ತಂದೆಯು ಮಗನನ್ನೂ ತಾಯಿಯು ಮಗಳನ್ನೂ ಹೆಂಡತಿಯು ಗಂಡನನ್ನೂ ಅಗಲುತ್ತ ಮತ್ತೆಂದಿಗೂ ನೋಡುವ ಭಾಗ್ಯವಿಲ್ಲವೆಂದು ಗೋಳಿಡುತ್ತಿದ್ದರು. ಕೊಳ್ಳುವವರಲ್ಲಿಯೂ ಮಾರುವವರಲ್ಲಿಯೂ ಮರುಕವು ಲೇಶವೂ ಇರಲಿಲ್ಲ. ಶೋಕಾವಹವಾದ ಈ ದೃಶ್ಯವನ್ನು ನೋಡಿ ಅಬ್ರಹಾಮನ ಕಣ್ಣುಗಳಲ್ಲಿ ನೀರು ಧಾರೆಧಾರೆಯಾಗಿ ಹರಿಯಿತು. ಜನರು ಅಷ್ಟೊಂದು ಕ್ರೂರರೂ ಆಗಿರಬಲ್ಲರೇ ಎಂದು ಅವನು ಚಿಂತಿಸಿದನು. ಅದೆಲ್ಲವನ್ನೂ ನೋಡಿ ಅವನ ಎದೆಯಲ್ಲಿ ಶೂಲವನ್ನು ನೆಟ್ಟಂತಾಯಿತು. ನೋಡಿದಮೇಲೆ ಅವನಿಗೆ ಇತರರೊಡನೆ ಮಾತುಕಥೆಗಳು ಬೇಕಾಗುತ್ತಿರಲಿಲ್ಲ; ತೀರ ಖಿನ್ನನಾಗಿರುತ್ತಿದ್ದನು. ''ಹೇಗಾದರೂ ಮಾಡಿ ಆ ಪದ್ಧತಿಯನ್ನು ತಪ್ಪಿಸಬೇಕೆಂದು ಅವನು ಆಗ ಶಪಥ ಮಾಡಿದನೆಂದು ನನಗೆ ತೋರುತ್ತದೆ. ಅವನ ಮನಸ್ಸು ಆ ದೃಶ್ಯವನ್ನು ನೋಡಿ ಬಹಳ ದುಃಖಕ್ಕೆ ಗುರಿಯಾಯಿತು'' ಎಂದು ಒಬ್ಬಾತನು ಹೇಳಿದ್ದಾನೆ.

ಎಲ್ಲರೂ ನ್ಯೂ ಆರ್ಲಿಯನ್ಸಿಂದ ಹಿಂದಿರ-ಗಿ ಬಂದರು. ಅಬ್ರಹಾಮನನ್ನು ಕಳುಹಿಸಿದ್ದ ವ್ಯಾಪಾರಗಾರನು ಅವನ ಸಾಹಸಕ್ಕೆಗಿ ಬಹಳನಾಗಿ ಮೆಚ್ಚಿ, ನ್ಯೂ ಸೇಲಂ ಎಂಬ ಹಳ್ಳಿಯಲ್ಲಿ ಹೊಸದಾಗಿ ಏರ್ಪಾಡಾಗಿದ್ದ ತನ್ನ ಮಳಿಗೆಗೆ ಹೋಗಿ ವ್ಯಾಪಾರ ಮಾಡಬೇಕೆಂದು ಗೊತ್ತುಮಾಡಿದನು. ತನಗೆ ಯಾವುದಾದರೊಂದು ವಿಧನಾದ ಕೆಲಸವೂ ಸಂಪಾದನೆಯೂ ಅವಶ್ಯಕವಾಗಿದ್ದುದರಿಂದ ಅಬ್ರಹಾಮನು ಅನುಮತಿಸಿ ಆ ಗ್ರಾಮಕ್ಕೆ ಹೋದನು. ಉದಾಸೀನನಾಗದೆ ಮಳಿಗೆಯನ್ನು ನೋಡಿಕೊಂಡನು. ವ್ಯಾಪಾರಕ್ಕಾಗಿ ಬಂದವರು ಪ್ರಸನ್ನ ಮನಸ್ಸಿನಿಂದ ಹಿಂದಿರುಗುತ್ತಿದ್ದರು. ಅವನ ಶ್ರದ್ಧಾವಿನಯಗಳೂ ಪ್ರಾಮಾಣಿಕತೆಯೂ ಎಲ್ಲರಿಗೂ ಅವನನ್ನು ಅಚ್ಚುಮೆಚ್ಚಾಗಿ ಮಾಡಿದವು. ಈ ಗುಣಗಳನ್ನು ಅಧಿಕರಿಸಿ ಎಷ್ಟೋ ಕಥೆಗಳು ಹುಟ್ಟಿವೆ. ತನ್ನ ಏಳಿಗೆಯಲ್ಲಿ ದೃಷ್ಟಿಯನ್ನಿಟ್ಟಿರುವಾತನಲ್ಲಿ, ಕಾರ್ಯದಲ್ಲಿ ಶ್ರದ್ಧೆಯೂ, ಇತರರು ತನ್ನಂತೆಯೇ ಮನುಷ್ಯರು, ತನಗಿಂತಲೂ ತಿಳಿದವರು ಎಂಬ ಭಾವನೆಯಿಂದ ಹುಟ್ಟುವ ವಿನಯವೂ, ನ್ಯಾಯಮಾರ್ಗವೊಂದೇ ವ್ಯವಹಾರದ ಮಾರ್ಗವೆಂದು ತಿಳಿದಿರುವವನಲ್ಲಿ ಇರುವ ಸತ್ಯಸಂಧತೆಯೂ ಅವನಲ್ಲಿ ಇದ್ದುವೆಂಬುದನ್ನು ಈ ಕಥೆಗಳು ಪ್ರತಿಪಾದನ ಮಾಡುವುವು.

ಆದರೆ ಆ ಕಾಲದಲ್ಲಿ ಆ ಪ್ರದೇಶಗಳಲ್ಲಿ ಈ ಗುಣಗಳ ಹಾಗೆ ದೇಹಬಲವೂ ಅವಶ್ಯಕವಾಗಿದ್ದಿತು. ಒರಟರಾದ ಜನಗಳ ನಡುವೆ ಚಿನ್ನದ ಬೊಂಬೆಯಂತಿದ್ದರೆ ಸಾಗದು. ಆಗಿನಕಾಲದಲ್ಲಿ ಬಲಶಾಲಿಯಾದವನಿಗೇ ಹೆಚ್ಚಿನ ಗೌರವವು ದೊರೆಯುತ್ತಿದ್ದಿತೆಂದರೆ ಸುಳ್ಳಾಗಲಾರದು. ದುರ್ಬಲರಾದವರ ಧ್ವನಿಯು ಯಾರ ಕಿವಿಗೂ ಕೇಳಿಸುತ್ತಲೇ ಇರಲಿಲ್ಲ. ಈಗಿನಂತೆಯೇ ಆಗಲೂ ಜಗಳಗಂಟುಗರಿರುತ್ತಿದ್ದರು.

ಸ್ವಲ್ಪದರಲ್ಲಿಯೇ ಅಬ್ರಹಾಮನಿಗೆ ಅಂಥವರ ಪರಿಚಿತಿಯು ಲಭಿಸಿತು. ನ್ಯೂ ಸೇಲಂಗೆ ಅನತಿದೂರದಲ್ಲಿ ಕೆಲವರು ತರುಣರು ವಾಸಮಾಡುತ್ತಿದ್ದರು. ಅವರಿಗೆ ತಿಂದು ತಿರುಗಿಕೊಂಡಿರುತ್ತ ದೊಂಬಿಮಾಡುವುದು ಹೊರತು ಮತ್ತೇನೂ ಕೆಲಸವಿರಲಿಲ್ಲ. ಕುಸ್ತಿಯೊಳಗೆ ಅಗ್ರೇಸರರು. ಅಬ್ರಹಾಮನು ಎಲ್ಲರಿಗೂ ಬೇಕಾದವನಾದುದನ್ನು ನೋಡಿ ಅವರು ಅವನನ್ನು ಒಂದು ಮೆಟ್ಟಿಲಷ್ಟು ಇಳಿಸಬೇಕೆಂದು ನಿಶ್ಚಯಿಸಿದರು. ಕುಸ್ತಿಗಾರನೆಂದು ಹೆಸರುಗೊಂಡಿದ್ದ ಅವನ ಮೈಕಟ್ಟನ್ನೂ ಪರೀಕ್ಷಿಸುವುದು ಅವಶ್ಯಕವಾಗಿದ್ದಿತು. ಜಾಕ್ ಆರ್ಮ್‌ಸ್ಟ್ರಾಂಗ್ (Jack Armstrong) ಎಂಬ ಮುಖಂಡನು ಆ ಮಹಾಕಾರ್ಯಕ್ಕೆ ವೀಳ್ಯವನ್ನು ತೆಗೆದುಕೊಂಡನು. ಅವರವರಿಗೆ ಕುಸ್ತಿಯಾಯಿತು. ಅಬ್ರಹಾಮನ ಏಟುಗಳು "ಮುಟ್ಟಿ ಮುಟ್ಟಿ ನೋಡಿಕೊಳ್ಳುವ ಹಾಗಾದುವು." ಎದುರಾಳಿಯು ಸೋತು ಉಸಿರು ಮೆತ್ತಗಾಯಿತು. ಅವನ ಕಡೆಯ ತರುಣರು ಅಬ್ರಹಾಮನ ಮೇಲೆ ಒಮ್ಮೆಲೆ ನುಗ್ಗಿದರು. ಅವನು ಅವರನ್ನು ಎದುರಿಸಿ ನಿಲ್ಲುವಷ್ಟರಲ್ಲಿ ಆರ್ಮ್‌ಸ್ಟ್ರಾಂಗನೆದ್ದು ಅವರನ್ನು ನಿರೋಧಿಸಿ, ಅಬ್ರಹಾಮನೊಡನೆ ಸ್ನೇಹವನ್ನು ಬೆಳೆಯಿಸಿದನು. ಅಂದಿನಿಂದ ಅಬ್ರಹಾಮನಿಗೆ ಅವನಂತಹ ಸ್ನೇಹಿತನು ಸಿಕ್ಕಲಿಲ್ಲ. ಮುಂದೆ ಅಬ್ರಹಾಮನು ನಿರುದ್ಯೋಗಿಯಾಗಿ ಸಂಪಾದಿಸಲು ಮಾರ್ಗವಿಲ್ಲದೆ ಇದ್ದಕಾಲದಲ್ಲಿ ಆರ್ಮ್‌ಸ್ಟ್ರಾಂಗನು ಅವನಿಗೆ ದ್ರವ್ಯಸಹಾಯವನ್ನು ಮಾಡಿದನು. ಸಮಯದಲ್ಲಿ ಒತ್ತಾಸೆ ಮಾಡುವ ಸ್ನೇಹಿತನೇ ಸ್ನೇಹಿತನು.

ಮಲ್ಲಯುದ್ಧಗಳು ಅಪೂರ್ವವಲ್ಲದಿದ್ದರೂ, ಜನರು ಕಲಹಕಂಟಕಗಳಿಲ್ಲದೆ ನೆಮ್ಮದಿಯಿಂದಿರುವುದನ್ನು ನೋಡಿದರೆ ಮಾತ್ರವೇ ಅಬ್ರಹಾಮನಿಗೆ ಮನಸ್ಸು ಬಲು ಮಟ್ಟಿಗೆ ಸಮಾಧಾನ ಹೊಂದುತ್ತಿದ್ದಿತು. ಭಂಗವನ್ನು ತರುತ್ತಿದ್ದವರಿಗೆ ಶಾಸ್ತಿಯಾಗದೆ ತಪ್ಪುತ್ತಿರಲಿಲ್ಲ. ಆದರೆ ಯಾವುದರಲ್ಲಿಯೂ ಕೀಳಾದ ದಾರಿಯಲ್ಲಿ ಹೋಗುತ್ತಿರಲಿಲ್ಲ. ಶಿಕ್ಷೆಯನ್ನು ಮಾಡಿದರೂ ರಕ್ಷೆಯನ್ನು ಮಾಡುತ್ತಿದ್ದನು. ಎಲ್ಲರೂ ಅವನನ್ನು ಗೌರವಿಸುತ್ತಿದ್ದರು. ಮನೋವಾಕ್ಕಾಯಗಳಲ್ಲಿ ಶುದ್ಧನಾಗಿದ್ದನು. ಅವನನ್ನು ಪ್ರಾಮಾಣಿಕನಾದ ಅಬ್ರಹಾಮನೆಂದು ("Honest Abe") ಎಲ್ಲರೂ ಕರೆದರು ಆ ಹೆಸರು ಕೊನೆಯವರೆಗೂ ನಿಂತಿತು.

ನ್ಯೂ ಸೇಲಂಗೆ ಹೋದಮೇಲೆ ಕೆಲಸವು ಹೆಚ್ಚಾದರೂ ಕೂಡ ಅಬ್ರಹಾಮನು ತನ್ನ ಓದುಬರಹಕ್ಕೆ ವಿಘ್ನವನ್ನು ತಂದುಕೊಳ್ಳಲಿಲ್ಲ. ಅವನು ಬರುಬರುತ ದರಿದ್ರನಾದನು. ಅಷ್ಟಾದರೂ ಕಾಸಿಗೆ ಕಾಸು ಗಂಟುಹಾಕಿ, ತಿಂಗಳಿಗೊಂದಾವೃತ್ತಿ ಹೊರಡುತ್ತಿದ್ದ ಪತ್ರಿಕೆಯೊಂದನ್ನು ಬೆಲೆಗೆ ತರಿಸಿಕೊಂಡು ಓದದೆ ಬಿಡುತ್ತಿರಲಿಲ್ಲ. ಪತ್ರಿಕೆಯ ವಿಷಯಗಳನ್ನು ಅನವರತವೂ ಚಿಂತಿಸುತ್ತ ಪ್ರಬಂಧಗಳ ರಚನೆಯನ್ನೂ ವಿಷಯ ವಿಸ್ತರಣಮಾರ್ಗವನ್ನು ಅರಿತನು. ಹಳ್ಳಿಯ ಸ್ಕೂಲು ಮೇಷ್ಟರನ್ನು ಕೇಳಿ ವ್ಯಾಕರಣದ ಕೆಲವು ಅಂಶಗಳನ್ನು ತಿಳಿದುಕೊಂಡನು. ಆಮೇಲೆ ವ್ಯಾಕರಣದ ಪುಸ್ತಕವೊಂದನ್ನು ಹುಡುಕಿ ತಂದು ಓದಿದನು. ಉಪಾಧ್ಯಾಯನು

ಹೇಳಿದುದಕ್ಕಿಂತ ಹೆಚ್ಚಿನದು ಅದರಲ್ಲಿದ್ದಂತೆ ಕಾಣಲಿಲ್ಲ. ಅವನು ಒಂದು ವಾರದ ಮೇಲೆ ಅದನ್ನು ಹಿಂದಿರುಗಿಸಿದನು.

---

## ೫ ನೆಯ ಅಧ್ಯಾಯ

---

### ನ್ಯೂಸೇಲಂನಲ್ಲಿ

ಚುನಾವಣೆಯ ಕಾಲದಲ್ಲಿ ಒಂದೆರೆಡಾವೃತ್ತಿ ಗುಮಾಸ್ತನಾಗಿದ್ದುದು ಹೊರತು ಅಬ್ರಹಾಮನು ಮತ್ತಾವ ನೌಕರಿಗೂ ಸೇರಿರಲಿಲ್ಲ. ಅವನಿಗೆ ಆ ಆಸೆಯೇ ಇರಲಿಲ್ಲ. ಆದರೆ 1832 ನೆಯ ವರ್ಷದಲ್ಲಿ ತೀರ "ಮನೆಮುಳ" ನಾಗಿ ಕುಳಿತನು. ಕೈಗೆ ಯಾವುದೊಂದು ಕೆಲಸವೂ ಸಿಕ್ಕಲಿಲ್ಲ. ನ್ಯೂಸೇಲಂವಿುನ ಮಳಿಗೆಯು ಮುಚ್ಚಿಹೋಗಿ ಆ ವೃತ್ತಿಯು ಕೊನೆಗೊಂಡಿತು. ರಾಜ್ಯಭಾರದ ವಿಷಯದಲ್ಲಿ ಕೈಹಾಕಲು ಅದರಂತಹ ಸಮಯವು ಮತ್ತೊಂದಿರಲಿಲ್ಲ. ಜನಗಳ ಸಹನಾಸದಲ್ಲಿರುತ್ತಲೂ, ಓದಿ ಓದಿದ್ದನ್ನು ಚಿಂತನೆಮಾಡಿ ಮಂದಟ್ಟುಮಾಡಿಕೊಳ್ಳುತ್ತಲೂ ಇದ್ದುದರಿಂದ ಯಾವಾಗಲೆಂದರೆ ಆಗ ಉಪನ್ಯಾಸಮಾಡಲು ಅವನಿಗೆ ಶಕ್ತಿಯುಂಟಾಗಿದ್ದಿತು. ಸರಸವಾದ ಕಥೆಗಳನ್ನು ಹೇಳುವುದರಲ್ಲಿಯೂ ಉದಾಹರಣೆಗಳನ್ನು ಜೋಡಿಸುವುದರಲ್ಲಿಯೂ ಇದ್ದ ನೈಪುಣ್ಯವನ್ನು ಅವನು ತನ್ನ ಮಾತಿನಲ್ಲಿ ಪ್ರಕಾಶಪಡಿಸುತ್ತ, ಹರಟೆಯಿಂದಲೂ ವಿನೋದದಿಂದಲೂ ಕಾಲವನ್ನು ತಳ್ಳುವ ಸೋಮಾರಿಗಳಿಗೂ ಇತರ ವ್ಯವಸಾಯಗಾರರಿಗೂ ಪ್ರಯೋಜನನಾಗುವಂತಹ ವಿಚಾರಗಳನ್ನು ಹೇಳಿ ಪ್ರೋತ್ಸಾಹಿಸುತ್ತಿದ್ದನು.

ಅವನ ಚರಿತ್ರೆಯನ್ನು ಬರೆದಿರುವಾತನೊಬ್ಬನು ಒಂದು ದಿನ ಅವನಲ್ಲಿಗೆ ಹೋದನು. ಅಬ್ರಹಾಮನು ಹಾಸಿಗೆಯ ಮೇಲೆ ಮಲಗಿ ಕಾಲಿಂದ ತೊಟ್ಟಿಲನ್ನು ತೂಗುತ್ತ ಅತ್ಯಾಸಕ್ತಿಯಿಂದ ಪುಸ್ತಕವೊಂದನ್ನು ಓದುತ್ತಿದ್ದನು. ಈ "ದೊಡ್ಡ ಮಗು" ವಿಗೆ ಯಾವ ಕೆಲಸವೂ ಇರಲಿಲ್ಲವಾಗಿ ವಿರಾಮವು ಬೇಕಾದಹಾಗಿರುತ್ತಿದ್ದಿತು. ಕೆಲಸಮಾಡಿ ಸೋತಿರುವ ಗೃಹಿಣಿಗೆ ಅವನು ಅವಶ್ಯಕನಾದಲ್ಲಿ ಸಹಾಯ ಮಾಡುತ್ತಿದ್ದನು. ಆದರೂ ಪುಸ್ತಕವು ಯಾವಾಗಲೂ ಹತ್ತಿರದಲ್ಲಿರುತ್ತಿದ್ದಿತು. ಏನುಮಾಡುವುದಕ್ಕೂ ತೋರದಿದ್ದರೆ ಒಂದು ಮರದ ಬುಡಕ್ಕೆ ಹೋಗಿ ನೆಳಲಲ್ಲಿ ಕಾಲುಚಾಚಿ ಮಲಗಿ ಓದುತ್ತಿದ್ದನು. "ನೀನು ಓದುತ್ತಿರುವುದೇನು ?" ಎಂದು ನಾನು ಪ್ರಶ್ನೆಮಾಡಿದೆನು. "ನಾನು ಓದುತ್ತಿಲ್ಲ. ಮನನಮಾಡುತ್ತಿದ್ದೇನೆ" ಎಂದು ಅವನು ಹೇಳಿದನು. ನೀನು ಮನನಮಾಡುತ್ತಿರುವುದೇನು ಎಂದು ನಾನು ಸಂಪಡಿಸಿ ಕೊಂಡು ಕೇಳಿದೆನು. "ನ್ಯಾಯಶಾಸ್ತ್ರ" ಎಂದು ಉತ್ತರವು ಬಂದಿತು. ತಾನು

ಮಾಡುತ್ತಿದ್ದ ಕೆಲಸವು ತೃಪ್ತಿಕರವೆಂದು ತೋರಿಬಂದುದರಿಂದ ಅವನಿಗೆ ಸಂತೋಷವುಂಟಾಗಿ ಮುಖದಲ್ಲಿ ಮಂದಹಾಸವು ತೋರಿತು. '' ' ಜಗದೀಶ !' ಎಂದೆನು '' ಎಂದು ಒಬ್ಬಾತನು ತನ್ನ ಅನುಭವವನ್ನು ವರ್ಣಿಸಿದ್ದಾನೆ. ಡೆನಿಸ್ ಹ್ಯಾಂಕ್ಸನು ಅವನನ್ನು '' ತೀರ ಸೋಮಾರಿಯಾದ ಹುಡುಗ, ಓದುವುದು ಬರೆಯುವುದು ಹೊರತು ಮತ್ತೇನನ್ನೂ ಮಾಡುತ್ತಿರಲಿಲ್ಲ '' ಎಂದು ಕರೆದರೂ ಮತ್ತೊಂದು ಸಮಯದಲ್ಲಿ '' ಅವನು ಹೇಗೆ ಮರವನ್ನು ಕಡಿಯುತ್ತಿದ್ದನು ! ಕೊಡಲಿಯು ಮರದೊಳಕ್ಕೆ ಇಳಿದು ಮರವನ್ನು ಉರುಳಿಸುತ್ತಿದ್ದುದನ್ನು ನೋಡಿದರೆ ಮೂರು ಮಂದಿ ಕೆಲಸಮಾಡುತ್ತಿದ್ದಾರೆಂದು ಊಹೆಯಾಗುವುದು'' ಎಂದು ಆಶ್ಚರ್ಯಪಟ್ಟಿದ್ದಾನೆ.

ಓದುವ ಹುಚ್ಚನ್ನು ಕಲಿತವರಿಗೆ ಇತರ ವಿಷಯಗಳು ಮುಖ್ಯವಾಗುವುದಿಲ್ಲ. ಅಬ್ರಹಾಮನಿಗೆ ಆ ಕೆಲಸದಲ್ಲಿರಲಾಗಿ ಹಸಿವೂ ಬಾಯಾರಿಕೆಯೂ ಮರೆತುಹೋಗುತ್ತಿದ್ದುವು. ಪುಸ್ತಕವನ್ನು ಸಂಪಾದಿಸಲು ಪಡಬೇಕಾದ ಶ್ರಮವು ಲೆಕ್ಕಕ್ಕೆ ಬರುತ್ತಿರಲಿಲ್ಲ. ಪಟ್ಟ ಶ್ರಮವನ್ನು ವ್ಯರ್ಥವೆಂದೆಣಿಸುತ್ತಿರಲಿಲ್ಲ. ಅಲ್ಲಿನ ಜನರೆಲ್ಲರಿಗಿಂತಲೂ ಅಬ್ರಹಾಮನು ಜಾಣನೆಂದು ಎಲ್ಲರಿಗೂ ಅಭಿಪ್ರಾಯವಿದ್ದಿತು. ತಿಳಿವಳಿಕೆಯಲ್ಲಿ ಮಿಾರಿದವನಾದರೂ ತಲೆಯಲ್ಲಿ ಮೆರೆಯದೆ ಇರುವುದು ಹೆಚ್ಚೆಂದು ಜನರು ಅವನ ವಿನಯಶೀಲತೆಯನ್ನು ಹೊಗಳುತ್ತಿದ್ದರು.

ತಾನೂ ಪ್ರತಿನಿಧಿಯಾಗಬೇಕೆಂದು ನಿಶ್ಚಯಿಸಿ ಅಬ್ರಹಾಮನು ತನ್ನನ್ನು ಅನುಮೋದಿಸಿ ಚೀಟಿಹಾಕುವಂತೆ ಸ್ನೇಹಿತರನ್ನೂ ಹಿತೈಷಿಗಳನ್ನೂ ಇತರ ವ್ಹಿಗ್ ಸಂಪ್ರದಾಯವುಳ್ಳ ಜನರನ್ನೂ ಪ್ರಾರ್ಥಿಸಿದನು. ಆದರೆ ಚುನಾವಣೆಗೆ ಸ್ವಲ್ಪ ಮುಂಚೆ ಬ್ಲಾಕ್-ಹಾಕ್ (Black Hawk) ಎಂಬ ರೆಡ್ ಇಂಡಿಯನ್ ಮುಖಂಡನು ಸ್ವಜನರನ್ನು ಕಟ್ಟಿಕೊಂಡು ಬಿಳಿಯ ಜನರು ವಾಸಮಾಡುತ್ತಿದ್ದ ದೇಶದ ಮೇಲೆ ನುಗ್ಗಲಾಗಿ, ಅವನಮೇಲೆ ಯುದ್ಧಮಾಡುವುದಕ್ಕೋಸ್ಕರ ಸೈನ್ಯಕ್ಕೆ ಉಮೇದುವಾರರು ಬೇಕೆಂದು ಸರ್ಕಾರವು ಪ್ರಕಟಿಸಿತು. ಜೊತೆಯಲ್ಲಿ ನಲ್ವತ್ತೇ ಜನರಿದ್ದರೂ ಕೂಡ ಆ ಮುಖಂಡನು ನಿರ್ಭಯದಿಂದ ನುಗ್ಗಿದುದನ್ನು ನೋಡಿ ಎಲ್ಲರಿಗೂ ಭಯವಾಯಿತು. ಅವನನ್ನು ಅಡಗಿಸಲು 2000 ಸೈನ್ಯವು ಬೇಕಾಗಿದ್ದಿತು. ಅಬ್ರಹಾಮನು ತನ್ನ ಪ್ರಕೃತದ ಯೋಚನೆಯನ್ನು ಮೂಲೆಗೊತ್ತರಿಸಿ ದಂಡಿಗೆ ಸೇರಿಕೊಂಡನು. ಸಾಹಸಕಾರ್ಯಾಪೇಕ್ಷೆಯಿಂದಲೋ ಅಥವಾ ಆಮೂಲಕ ಪ್ರಾಮುಖ್ಯತೆಯನ್ನು ಪಡೆದು ಪ್ರತಿನಿಧಿತ್ವವನ್ನು ಸುಲಭಮಾಡಿಕೊಳ್ಳಬಹುದೆಂಬ ಭರವಸೆಯಿಂದಲೋ ಹಾಗೆ ಮಾಡಿರಬಹುದು. ಯುದ್ಧವು ನಡೆದು ರೆಡ್ ಇಂಡಿಯನರಿಗೆ ಸಂಪೂರ್ಣವಾಗಿ ಸೋಲುಂಟಾಯಿತು.

ಯುದ್ಧಕಾಲದಲ್ಲಿ ಒಂದು ದಿನ ಕ್ಷುಧಾರ್ತನಾದ ವೃದ್ಧ ಇಂಡಿಯನನೊಬ್ಬನು ಪಾಳೆಯದೊಳಕ್ಕೆ ಬಂದನು. ಅವನು ಪ್ರಾಣಭಯವಿಲ್ಲದಿರಲು ಜನರಲ್ ಕಾಸ್ಸ್ (General Cass) ಎಂಬಾತನಿಂದ ರಕ್ಷಣಪತ್ರವನ್ನು ತಂದಿದ್ದನು. ಆದರೂ ಪಾಳೆಯದಲ್ಲಿದ್ದ ಸೈನಿಕರಲ್ಲಿ ಕೆಲವರು ಬಂದೂಕಗಳನ್ನು ಎತ್ತಿ ಗುರಿಕಟ್ಟಿದರು. ಇಂಡಿಯನರ ಮುಖ್ಯಸ್ಥನು ಕ್ರೂರಕೃತ್ಯಗಳನ್ನು ನಡೆಯಿಸಿದ್ದುದರಿಂದ ಬಿಳಿಯ

ಜನರ ಹೃದಯದಲ್ಲಿ ಕರುಣೆಯು ಸ್ವಲ್ಪವೂ ಇರಲಿಲ್ಲ. ಕೈಗೆ ಸಿಕ್ಕಿದ ಇಂಡಿಯ ನನನ್ನು ಜೀವಸಹಿತ ಬಿಡುವುದಿಲ್ಲವೆಂದು ಅವರು ಶಪಥಮಾಡಿದ್ದರು. ಅವರ ಆ ಹೊತ್ತಿನ ಉದ್ದೇಶವನ್ನು ತಿಳಿದ ಅಬ್ರಹಾಮನು ತಟ್ಟನೆದ್ದು ಬಂದು ಅವರ ಕೈಲಿದ್ದ ಬಂದೂಕಗಳನ್ನು ಕಿತ್ತುಕೊಂಡು, ''ಇಂತಹ ಹೀನಕೃತ್ಯವನ್ನು ಮಾಡಬೇಡಿ. ಅವನದೊಂದು ಕೂದಲೆಳೆಯು ಅರುಗಾದೀತು!'' ಎಂದು ಗರ್ಜಿಸಿ ಅವರನ್ನು ತಡೆದನು ; ರೋಷದಿಂದ ವೈಮರೆತಿದ್ದ ಸೈನಿಕರು ಅವನ ಮಾತಿಗೆ ಕಿವಿಗೊಡಲಿಲ್ಲ. ಪ್ರತ್ಯುತ್ತರವಾಗಿ ಅಬ್ರಹಾಮನು ಇಂಡಿಯನನನ್ನು ಮರೆಕಟ್ಟಿಕೊಂಡು ತನ್ನ ಎದೆಯನ್ನೊಡ್ಡಿ ನಿಂತನು. ಸೈನಿಕರ ರೀತಿಯಿಂದ ಭಯವಾಗುವುದಾದರೂ, ಅಬ್ರಹಾಮನು ಕದಲಲಿಲ್ಲ. ಯೋಧರು ತಮ್ಮ ಕೆಪ್ಟನನ ಮನಸ್ಸ್ಥೈರ್ಯವನ್ನು ನೋಡಿ ಚಂಚಲಮನಸ್ಕರಾಗಿ ಬಂದೂಕವನ್ನಿಳಿಸಿಕೊಂಡು ಹೊರಟುಹೋದರು. '' ಲಿಂಕನ್ನನಿಗೆ ಅಷ್ಟೊಂದು ಆವೇಶವುಂಟಾದುದನ್ನು ನಾನು ಮತ್ತೆ ಯಾವಾಗಲೂ ನೋಡಿರಲಿಲ್ಲ'' ಎಂದು ಜತೆಗಾರನೊಬ್ಬನು ಹೇಳಿಕೊಂಡನು.

ಉಮೇದುವಾರರು ಮಾಡಿಕೊಂಡಿದ್ದ ಕೆಲಸದ ವಾಯಿದೆಯು ಕಳೆದು, ಕಷ್ಟದಿಂದ ಬಳಲಿ ಬೆಂಡಾಗಿದ್ದವರು ಅತ್ಯಂತ ಸಂತೋಷದಿಂದ ತಮ್ಮ ತಮ್ಮ ಊರುಗಳಿಗೆ ಹಿಂದಿರುಗಿದರು. ಮತ್ತಾವ ಕದನವೂ ನಡೆಯಲಿಲ್ಲ. ಅಬ್ರಹಾಮನೂ ಜೊತೆಗಾರನೂ ನ್ಯೂಸೆಲಂಗೆ ಹಿಂದಿರುಗಿದರು.

ಈ ಸಂದರ್ಭದಲ್ಲಿ ಒಂದು ವೃತ್ತಾಂತವನ್ನು ಹೇಳಬೇಕಾಗುವುದು. ಅಬ್ರಹಾಮನು 1848 ರಲ್ಲಿ ಕಾಂಗ್ರೆಸ್ ಸಭೆಯಲ್ಲಿ ಮೆಂಬರಾಗಿದ್ದನು. ಆ ವರ್ಷ ಜನರಲ್ ಕಾಸ್ಸನು ಪ್ರೆಸಿಡೆಂಟನಾಗಬೇಕೆಂದು ಬಹಳ ಶ್ರಮಪಟ್ಟನು. ಸಭಿಕರಲ್ಲಿ ಕೆಲವರು ಅವನ ಸೇನಾನಿರ್ವಾಹದ ನೈಪುಣ್ಯವನ್ನೂ, ಕದನಗಳಲ್ಲಿ ಅವನಿಗೆ ಲಭಿಸಿದ ವಿಜಯಗಳನ್ನೂ ಬಹಳವಾಗಿ ಕೊಂಡಾಡಿದರು. ಆ ಸ್ತೋತ್ರವು ಅಬ್ರಹಾಮನಿಗೆ ತಲೆಕೆಳಗು ವ್ಯಾಪಾರವೆಂದು ತೋರಿತು. ಅವನು ಚರ್ಚೆಯ ಸಮಯದಲ್ಲಿ ಒಂದು ತಡವೆ ಎದ್ದುನಿಂತು ಪರಿಹಾಸಕರನಾದ ರೀತಿಯಿಂದ ಹೀಗೆಂದನು : '' ಸಭಾಧ್ಯಕ್ಷರೆ, ನಾನೊಬ್ಬ ವೀರಾಗ್ರಣಿ! ಅದು ತಮಗೂ ಗೊತ್ತಿರಬಹುದು. ಬ್ಲಾಕ್ ಹಾಕ್ ಯುದ್ಧದ ಸಮಯದಲ್ಲಿ ಬಹಳ ಹೊಡೆದಾಡಿದೆನು. ನನ್ನ ದೇಹದಿಂದ ರಕ್ತವು ತೊಟ್ಟಿತು. ನಾನು ವಿಜಯಿಯಾಗಿಯೇ ಹಿಂದಿರುಗಿದೆನು. ಸ್ಟಿಲ್‌ಮನ್ನನು (Stillman) ಸೋತಾಗ ನಾನು ಆ ಬಳಿಯಲ್ಲೇ ಇರಲಿಲ್ಲ: ಆದರೆ ಜನರಲ್ ಕಾಸ್ಸನು ಹಲ್ ಪ್ರದೇಶವನ್ನು ಬಿಟ್ಟುಕೊಡುವುದು ಎಷ್ಟು ನಿಶ್ಚಯಕ್ಕೆ ಬಂದಿಷ್ಟಿತೋ ನಾನೂ ಕೂಡ ಆ ಪ್ರದೇಶಕ್ಕೆ ಅಷ್ಟು ಹತ್ತಿರದಲ್ಲಿದ್ದೆನು. ಆತನು ಮಾಡಿದಂತೆಯೇ ನಾನೂ ಕೂಡ ಕದನವು ಪೂರೈಸಿದಮೇಲೆ ಹೋಗಿ ಆ ಸ್ಥಳವನ್ನು ನೋಡಿಕೊಂಡು ಬಂದೆನು. ಯುದ್ಧದಲ್ಲಿ ಆತನ ಖಡ್ಗವು ಮುರಿದಿರಬಹುದು; ಆದರೆ ನನ್ನ ಬಳಿಯಲ್ಲಿ ಕತ್ತಿಯಿರಲಿಲ್ಲ. ಒಂದು ಸ್ಥಳದಲ್ಲಿ ನನ್ನ ಕೋವಿಯು ಮುರಿದುಹೋಗುವಷ್ಟು ಬಗ್ಗಿತು. ಅದಕ್ಕಿಂತ ಇನ್ನೇನು? ಜನರಲ್ ಕಾಸ್ಸನು ಮಗ್ಗುಲಲ್ಲಿ ಯುದ್ಧವು ನಡೆಯುತ್ತಿದ್ದರೂ ಹೆದರದೆ ಹಣ್ಣುಗಳನ್ನು ಆರಿಸುತ್ತ ಹೊರಟನು.

ಇರಬಹುದು. ಆದರೆ ನಾನು ಯಾವ ವಿಷದಲ್ಲಿಯೂ ಕಡಿಮೆಯಾಗಲಿಲ್ಲ. ಈರುಳ್ಳಿಯ ಗಡ್ಡೆಗಳನ್ನು ಆರಿಸುತ್ತ ಹೊರಟೆನು! ಆತನು ಇಂಡಿಯನರೊಡನೆ ಬಲವಾಗಿ ಹೊಡೆದಾಡಿರಬಹುದು; ಆದರೆ ಅದು, ನಾನು ಸೊಳ್ಳೆಗಳೊಡನೆ ನಡೆಯಿಸಿದ ಹೊಡೆದಾಟಕ್ಕಿಂತ ಹೆಚ್ಚಿನದಲ್ಲ. ರಕ್ತಸ್ರಾವದಿಂದ ದುರ್ಬಲನಾಗಿ ನಾನು ಆತನಂತಯೇ ಯಾವಾಗಲೂ ಮೂರ್ಛೆ ಬಿದ್ದಿಲ್ಲದಿರಬಹುದು, ಆದರೆ ಎಷ್ಟೋಸಾರಿ ಹಸಿವಿನಿಂದ ಬಸವಳಿದೆನು. ಸಭಾಧ್ಯಕ್ಷರೆ, ನನ್ನ ಡೆಮೊಕ್ರೆಟ್ ಪಕ್ಷದ ಸ್ನೇಹಿತರು ನನ್ನನ್ನು ಪ್ರೆಸಿಡೆಂಟನನ್ನಾಗಿ ಚುನಾಯಿಸಿ ಒಳ್ಳೆಯ ಬಟ್ಟೆಗಳನ್ನು ಉಡಿಸಬಹುದು. ಆವರೆ ಅವರು ಜನರಲ್ ಕಾಸ್ಸನನ್ನು ರಣವೀರನೆಂದು ಸ್ತೋತ್ರಮಾಡುತ್ತಿರುವಂತೆ ನನ್ನನ್ನು ಮಾತ್ರ ಎಂದಿಗೂ ಸ್ತೋತ್ರಮಾಡಗೊಡಿಸುವುದಿಲ್ಲ.''

ಚುನಾವಣೆಗೆ ಹತ್ತು ದಿನಗಳ ಮುಂಚೆ ಅಬ್ರಹಾಮನು ನ್ಯೂಸೇಲಂಗೆ ಬಂದನು. ಹೆಚ್ಚಾಗಿ ಪ್ರಯತ್ನಮಾಡಲು ಅವಕಾಶವಿರಲಿಲ್ಲ. ಪ್ರಜೆಗಳು ಚೀಟಿ ಹಾಕಿ ಪೂರೈಸಿದಮೇಲೆ ನೋಡಲಾಗಿ ಅಬ್ರಹಾಮನಿಗೆ 207 ಚೀಟಿಗಳೂ ಅವನಂತೆಯೇ ಸಂಸ್ಥಾನದ ಸರ್ಕಾರದಲ್ಲಿ ಪ್ರತಿನಿಧಿಯಾಗಲು ಪ್ರಯತ್ನಮಾಡಿದ್ದ ಮತ್ತೊಬ್ಬನಿಗೆ 206 ಚೀಟಿಗಳೂ ಬಂದವು. ಆದರೂ ಅಬ್ರಹಾಮನನ್ನು ಮೆಂಬರಾಗಿ ತೆಗೆದುಕೊಳ್ಳಲಿಲ್ಲ. ಅವನಿಗೆ ಅದರಿಂದ ಆಶಾಭಂಗವಾಗದಿದ್ದರೂ ಕೂಡ, ಜನರು ತನ್ನಲ್ಲಿ ಅಷ್ಟೊಂದು ವಿಶ್ವಾಸವನ್ನಿಟ್ಟು ಮುಖ್ಯಸ್ಥಾನವನ್ನು ಕೊಟ್ಟದ್ದಕ್ಕಾಗಿ ಬಹಳಮಟ್ಟಿಗೆ ಸಂತೋಷವುಂಟಾಯಿತು. ಸಭೆಗೆ ಸೇರಿ ಹೆಚ್ಚಿನ ಫಲವನ್ನು ಪಡೆಯಬೇಕೆಂಬ ಆಸೆ ಯಾವುದೂ ಅವನಿಗಿರಲಿಲ್ಲವಾದಕಾರಣ ಕೊರಗುಂಟಾಗಲಿಲ್ಲ.

ಅಬ್ರಹಾಮನ ಭಾಷಣಗಳಿಂದ ಅವನು ವ್ಹಿಗ್ಗರ ಸಂಪ್ರದಾಯವುಳ್ಳವನೆಂದೂ, ಆಗ ರಾಜ್ಯಶಾಸನವನ್ನು ನಡೆಯಿಸುತ್ತಿದ್ದಪಕ್ಷಕ್ಕೆ ವಿರೋಧಿಯೆಂದೂ ತಿಳಿದುಬಂದಿತು. ಆಗ ಆಂಡ್ರೂ ಜಾಕ್ಸನ್ ಎಂಬಾತನು ಪ್ರೆಸಿಡೆಂಟನಾಗಿದ್ದನು. ಯಾವ ಸಭಿಕನು ತನ್ನ ಪಕ್ಷವನ್ನವಲಂಬಿಸಿ ತಾನು ಮಾಡುವುದನ್ನು ಅಂಗೀಕರಿಸುವುದಿಲ್ಲವೋ ಅಂಥವನನ್ನು ಕೆಲಸದಿಂದ ಕಿತ್ತುಹಾಕುವುದಲ್ಲದೆ '' ಅಡಿಗೆಯಮನೆಯಿಂದ ನಾಯಿಯನ್ನು ಒಡಿಸುವಂತೆ'' ಆತನನ್ನು ಸಭೆಯಿಂದ ಅಟ್ಟಿಬಿಡುವುದಾಗಿ ಸಭಿಕರೆದುರಿನಲ್ಲಿ ಪ್ರತಿಜ್ಞೆಮಾಡಿದ್ದನು. ಆಮಾತು ಹೊರಗೂ ಪ್ರಚಾರಕ್ಕೆ ಬಂದಿದ್ದಿತು. ಆತನ ಮಾತಿಗೆ ಪ್ರತಿಯಾಗಿ ಹೇಳಿ ಪ್ರತಿಯಾಗಿ ಆಚರಿಸುವುದು ಬಲವುಳ್ಳವರ ಆಧಾರವಿಲ್ಲದವರಿಗೆ ಕಷ್ಟವಾದರೂ ಅಬ್ರಹಾಮನು ಪ್ರತಿಕಕ್ಷಿಗಳ ಗುಂಪನ್ನು ತ್ಯಜಿಸಲಿಲ್ಲ. ಶಕ್ತಿಯುಳ್ಳವನೊಬ್ಬನು ಹೆದರಿಸುತ್ತಾನೆಂದು ಹೆದರಿ ಯುಕ್ತವಾದ ಮಾರ್ಗವನ್ನು ಬಿಟ್ಟು ನಡೆಯುವುದು ಕರ್ತವ್ಯನಿಷ್ಠನಾದವನ ಧರ್ಮವಲ್ಲವೆಂದು ಅವನು ನಂಬಿದ್ದನು.

ಚುನಾವಣೆಯ ಪ್ರಸಂಗದಲ್ಲಿ ಅಬ್ರಹಾಮನಿಗೆ ಗಣನೆಯ ಜನಗಳನೇಕರ ಗುರುತುಂಟಾಯಿತು. ಅವನ ಭಾಷಣವು ಕೇಳುವವರ ಮನಸ್ಸನ್ನು ಸೆಳೆಯುತ್ತಿದ್ದಿತು. ತರ್ಕವು ದೋಷರಹಿತವಾಗಿರುತ್ತಿದ್ದಿತು. ಯಾರ ಅಭಿಪ್ರಾಯಗಳು ವಿರುದ್ಧಗಳೋ ಅವರು ಅವನೊಡನೆ ಚರ್ಚೆಗೆ ಸೇರುತ್ತಿರಲಿಲ್ಲ. ಜಾಕ್ಸನ್ನನ ಪಕ್ಷದವನೊಬ್ಬನು

" ನನಗೆ ನಂಬಲು ಇಷ್ಟವಿರಲಿ, ಇಲ್ಲದಿರಲಿ, ತಾನು ಹೇಳುವುದನ್ನು ನಿಜವೆಂದು ಒಪ್ಪಿಕೊಳ್ಳುವಂತೆ ಅವನು ಮಾಡಿಬಿಡುತ್ತಾನೆ" ಎಂದು ಅಂಗಲಾಚಿಕೊಂಡನು. ಅಬ್ರಹಾಮನ ಉಡುಪು ಲಕ್ಷಣವಾಗಿರುತ್ತಿರಲಿಲ್ಲ. ಆ ಲಕ್ಷಣವಿಲ್ಲದ ಉಡುಪು ಸೈಂಧವಾಕಾರದ ಅವನ ದೇಹಕ್ಕೆ ಮತ್ತಷ್ಟು ವಿಕಾರವನ್ನುಂಟುಮಾಡುತ್ತಿದ್ದಿತು. ಆದರೂ ಅವನ ಭಾಷಣವನ್ನು ಕೇಳುತ್ತಿದ್ದವರು ಅವನ ವೇಷವನ್ನೂ ಭೂಷಣವನ್ನೂ ಮರೆತುಬಿಡುತ್ತಿದ್ದರು. " ಮೋಟು ಮರದಮೇಲೆ ನಿಂತು ಮಾತೆತ್ತಿದರೆ ಅವನಿಗೆ ಒಂದು ಬಗೆಯ ಉತ್ಸಾಹವುಂಟಾಗುತ್ತಿದ್ದಿತು. ತಾನು ಕುಣಿದು ಎಲ್ಲರನ್ನೂ ಕುಣಿಸಿಬಿಡುತ್ತಿದ್ದನು."

ಆಕಾಲದ ಜನರಿಗೆ ವೇಷಭೂಷಣಗಳಲ್ಲಿ ಸೂಕ್ಷ್ಮದೃಷ್ಟಿಯಿರಲಿಲ್ಲ. ಆದರೆ ಅವರಲ್ಲಿ ಪರಸ್ಪರವಾಗಿ ಸ್ನೇಹವೂ ಆದರಣೆಯೂ ಗಾಢವಾಗಿರುತ್ತಿದ್ದುವು. ಪ್ರತಿನಿಧಿಯಾಗಬೇಕೆಂಬ ಉದ್ದೇಶವುಳ್ಳವರು ಹತ್ತಾರು ಜನರನ್ನು ಸೇರಿಸಿ ಯಾವುದಾದರೂ ಎತ್ತರವಾದ ಸ್ಥಳವನ್ನೇರಿ ನಿಂತು ಯುಕ್ತಿಯುಕ್ತವಾಗಿ ಮಾತನಾಡುತ್ತಿದ್ದರು. ತಾವು ಏತಕ್ಕೆ ಸಾಮಾಜಿಕರಾಗಲುಳ್ಳವರೆಂಬುದನ್ನು ಆಗ ವಿವರಿಸುತ್ತಿದ್ದರು. ಸೇರಿದ್ದವರು ತಮಗೆ ತೋರಿದಹಾಗೆ ಪ್ರಶ್ನೆಗಳನ್ನು ಹಾಕಿ ವಕ್ತೃವಿನಿಂದ ಉತ್ತರವನ್ನು ಪಡೆಯುತ್ತಿದ್ದರು. ಆದರೆ ಆ ಪದ್ಧತಿಯು ಹೊಸದಲ್ಲ. ಪ್ರಶ್ನೆಗಳು ಅಸಂಬದ್ಧವಾಗಿ ಅಪಹಾಸಮಯವಾಗಿದ್ದಪಕ್ಷದಲ್ಲಿ ಹೊರತು ಅನ್ಯಥಾ ಎಲ್ಲಕ್ಕೂ ಸಮಾಧಾನಕರವಾದ ಉತ್ತರವನ್ನು ಕೊಟ್ಟು ಲಿಂಕನ್ನನು ಒಡಂಬಡಿಸುತ್ತಿದ್ದನು. ಒಂದು ಸಮಯದಲ್ಲಿ, ಸೇರಿದ್ದ ಜನಗಳ ಗುಂಪಿನೊಳಗೆ ತನ್ನ ಸ್ನೇಹಿತನು ದುಷ್ಟನೊಬ್ಬನಿಂದ ನಿಷ್ಕಾರಣವಾಗಿ ಏಟುತಿಂದದ್ದನ್ನು ನೋಡಿ ಗದ್ದುಗೆಯಮೇಲೆ ನಿಂತು ಮಾತನಾಡುತ್ತಿದ್ದ ಅಬ್ರಹಾಮನು ಕೆಳಗಿಳಿದುಬಂದು ದುಷ್ಟನ ಕುತ್ತಿಗೆಯನ್ನು ಹಿಡಿದು ಐದಾರುಸಲ ಕುಲುಕಿ ಗುಂಪಿನಿಂದ ಹೊರಗೆಹೋಗಿ ಬೀಳುವಹಾಗೆ ತಳ್ಳಿಬಿಟ್ಟನು. ಆಮೇಲೆ ಮೋಟುಮರವನ್ನು ಏರಿ ಮೊದಲಿನಂತೆ ಸ್ವಸ್ಥಚಿತ್ತದಿಂದ ಉಪನ್ಯಾಸಮಾಡಿದನು. ಸಮಯದಲ್ಲಿ ಬುದ್ಧಿಶಕ್ತಿಯಂತೆ ದೇಹಶಕ್ತಿಯೂ ಕೂಡ ಕೆಲಸಕ್ಕೆ ಬರುವುದು.

ಸಾಮಾಜಿಕನಾಗಲು ಅವಕಾಶವು ತಪ್ಪಿಹೋಯಿತು ; ಯುದ್ಧಕಾರ್ಯಗಳು ಪೂರೈಸಿದ್ದುವು ; ಅವನನ್ನು ಕೆಲಸಕ್ಕಿಟ್ಟಿದ್ದಾತನು ದಿವಾಳಿಯಾಗಿದ್ದನು. ಸಂಪಾದನೆಗೆ ಯಾವ ಮಾರ್ಗವೂ ಇರಲಿಲ್ಲ. ರಾಜ್ಯಭಾರದ ವಿಷಯಗಳಲ್ಲಿಯೂ ಯುದ್ಧದಲ್ಲಿಯೂ ಕೈ ಹಾಕಿದಮೇಲೆ ಕೃಷಿಯನ್ನೂ ಕೊಡಲಿಯನ್ನೂ ಹಿಡಿಯಲು ಮನಸ್ಸು ಬರಲಿಲ್ಲ. ಅಬ್ರಹಾಮನಿಗೆ ವ್ಯಾಪಾರವೇ ಎಲ್ಲಕ್ಕಿಂತ ಸುಖಕರವಾಗಿ ಕಂಡುಬಂದಿತು. ಆದಕಾರಣ ಅವನು ಒಂದು ಮಳಿಗೆಯನ್ನು ಕೊಂಡುಕೊಂಡನು. ಅಂಗಡಿಗೆ ಬರುತ್ತಿದ್ದ ಗಿರಾಕಿಗಳು ಹೆಚ್ಚಾಗಿರಲಿಲ್ಲವಾದಕಾರಣ ವ್ಯಾಸಂಗಕ್ಕೆ ಅವನಿಗೆ ವಿರಾಮವು ದೊರೆಯುತ್ತಿದ್ದಿತು. ಜೊತೆಗೆ ಅದೇ ಊರಿನಲ್ಲಿದ್ದ ಮತ್ತೊಂದು ಮಳಿಗೆಯನ್ನು ಇನ್ನೂರೈವತ್ತು ಡಾಲರುಗಳಿಗೆ ಕೊಂಡುಕೊಂಡನು.

ಈ ವ್ಯವಹಾರದಲ್ಲಿ ಅವನೊಡನೆ ಪಾಲುಗಾರನೊಬ್ಬನಿದ್ದನು. ಆತನು ತೀರ ಸೋಮಾರಿ, ಕೆಲಸಕ್ಕೆ ಬಾರದವನು. ಹೀಗಿರಲಾಗಿ ಇಬ್ಬರೂ ಒಟ್ಟಿಗೆ ವ್ಯಾಪಾರ

ಮಾಡಲಾಗಲಿಲ್ಲ. ಪಾಲಾಗಬೇಕಾಯಿತು. ಮಾರಾಟವು ನಿಂತುಹೋಗಿ, ಲಾಭವಿರಲಿ, ಅಸಲಿಗೇ ಮೋಸಬಂದಿತು. ಅಂಗಡಿಯು ಮುಚ್ಚಿಹೋಯಿತು. ಅಬ್ರಹಾಮನು ಇದ್ದ ಸಾಮಾನುಗಳನ್ನು ಹರಾಜು ಹಾಕಿಬಿಟ್ಟನು. ಸಾಲವು ಹೇರಿಕೊಂಡುದಲ್ಲದೆ ಕೈಗೆ ಹಚ್ಚಿಕೊಂಡಿದ್ದ ಕೆಲಸಕ್ಕೆ ಸೊನ್ನೆಬಿದ್ದಿತು.

ನ್ಯಾಯಶಾಸ್ತ್ರದಲ್ಲಿ ತಿಳುವಳಿಕೆಯನ್ನು ಹೊಂದಿದರೆ ಅದಾದರೂ ಉಪಯೋಗಕ್ಕೆ ಬರುವುದಾಗಿ ತೋರಿತು. ಹಿಂದೆ ಒಂದೆರಡು ಧರ್ಮಶಾಸ್ತ್ರದ ಪುಸ್ತಕಗಳನ್ನು ಅವನು ಒದಿದ್ದನು. ಈಗ ಆ ಗ್ರಂಥಗಳನ್ನು ಕ್ರಮವಾಗಿ, ಲಕ್ಷ್ಯವನ್ನಿಟ್ಟು, ಒದಲು ತೊಡಗಿದನು. ಆ ಸುತ್ತಲಲ್ಲಿದ್ದ ಲಾಯರುಗಳು ಸದ್ಭಾವದಿಂದ ತಮ್ಮಲ್ಲಿದ್ದ ಪುಸ್ತಕಗಳನ್ನು ಅವನಿಗೆ ಕೊಟ್ಟರು. ಅವುಗಳಿಗೋಸ್ಕರವಾಗಿ ಒಂದೊಂದು ಸಮಯದಲ್ಲಿ ಅಬ್ರಹಾಮನು ಹದಿನಾಲ್ಕು ಹದಿನೈದು ಮೈಲಿಗಳ ದೂರವನ್ನಾದರೂ ತಿರುಗಬೇಕಾಗುತ್ತಿದ್ದಿತು.

ನ್ಯಾಯಶಾಸ್ತ್ರದ ಲೇಖ್ಯಬೋಧಿನಿಯೊಂದನ್ನಿಟ್ಟುಕೊಂಡು ಅದನ್ನು ಅನುಸರಿಸಿ ಉಯಿಲುಗಳನ್ನೂ ಇತರ ವಿಧವಾದ ಪತ್ರಗಳನ್ನೂ ಬರೆದು ಬರೆದು ಅಭ್ಯಾಸಮಾಡಿದನು. ಜನರು ಒಬ್ಬೊಬ್ಬರಾಗಿ ಅವನ ಹತ್ತಿರಬಂದು ತಮ್ಮ ವ್ಯವಹಾರದಲ್ಲಿ ಅನೇಕ ವಿಷಯಗಳನ್ನು ತಿಳಿದುಕೊಂಡು ಹೋಗಲಾರಂಭಿಸಿದರು. ಕಾಗದಪತ್ರಗಳನ್ನು ಬರೆಯುವುದು ಹೆಚ್ಚುಕಡಿಮೆ ಒಂದು ವೃತ್ತಿಯಾಯಿತು. ಈ ಸಹಾಯಕ್ಕೆ ಪ್ರತಿಯಾಗಿ ಕಾಳುಬೇಳೆಗಳನ್ನು ಬಂದವರಿಂದ ತೆಗೆದುಕೊಂಡು ಅವನು ತಾನು ಊಟಕ್ಕಿದ್ದ ಮನೆಯವರಿಗೆ ಕಷ್ಟವಾಗದಿರುವಸಲುವಾಗಿ ಕೊಡುತ್ತಿದ್ದನು. ಜೊತೆಗೆ ಚಿಕ್ಕಚಿಕ್ಕ ಮೊಕದ್ದಮೆಗಳನ್ನು ವಹಿಸಿ, ತನಿಖೆಮಾಡುವ ಕೋರ್ಟಿಗೆ ಹೋಗಿ ಜಡ್ಜಿಯೆದುರಿನಲ್ಲಿ ವಾದಿಸುತ್ತಿದ್ದನು. ಅವನ ಮನಸ್ಸಿನಲ್ಲಿ, ಹೀಗೆ ಲಾಯರಾಗಿದ್ದುಕೊಂಡು ವಾದವಿವಾದಗಳನ್ನು ಮಾಡುವುದು ವಾಗ್ಮಿತೆಯನ್ನು ಸಂಪಾದಿಸಲು ಅತ್ಯುತ್ಕೃಷ್ಟವಾದ ಅಭ್ಯಾಸವೆನ್ನಿಸಿತು. ಆದರೆ ಅವನು ವಾಗ್ಮಿತೆಯೊಂದರಲ್ಲಿಯೇ ದೃಷ್ಟಿಯನ್ನಿಡಲಿಲ್ಲ. ನ್ಯಾಯವು ಕಂಡುಬರದಿದ್ದ ಮೊಕದ್ದಮೆಯನ್ನು ಹಿಡಿಯುತ್ತಿರಲಿಲ್ಲ. ಅವನಲ್ಲಿ ಮಾತಿಗೆ ಮನಸ್ಸಿನಲ್ಲಿ ಒಂದರ್ಥ ಬಾಯಲ್ಲಿ ಒಂದರ್ಥವಿರಲಿಲ್ಲ. ಮೊಕದ್ದಮೆಯನ್ನು ವಿವರಿಸಿ ಅದರ ಸಾಧುತೆಯನ್ನು ಒಡೆದು ಒಡೆದು ಪಂಚಾಯಿತರಿಗೆ ಹೇಳುವಾಗ ಅಬ್ರಹಾಮನು ಸತ್ಯವನ್ನೇ ಹೇಳುತ್ತಿದ್ದನು. ಸಭೆಯಲ್ಲಿ ಕುಳಿತಾಗ ನ್ಯಾಯವನ್ನರಿತು ಮಾತನಾಡುವವನಾದರೂ ಇತರರಿಗೆ ನೋಯುವಂತೆ ಮಾತನಾಡುತ್ತಿರಲಿಲ್ಲ. ಆಕಾಲದಲ್ಲಿ ಅವನು ಭೂಮಿಯನ್ನು ಅಳೆಯುವುದನ್ನೂ ಕಲಿತು ಮುಂದೆ ಅದರೊಳಗೆ ಚತುರತೆಯನ್ನು ಸಂಪಾದಿಸಿದನು. ಪ್ರಾರಂಭದಲ್ಲಿ ದ್ರಾಕ್ಷಿಯ ಬಳ್ಳಿಯನ್ನಿಟ್ಟುಕೊಂಡು ಅಳೆಯುತ್ತಿದ್ದನೆಂದು ನೋಡಿದವರು ಹೇಳುತ್ತಾರೆ.

ಅದೇ ವರ್ಷ ಅಬ್ರಹಾಮನು ನ್ಯೂಸೇಲಂನಲ್ಲಿ, ಪೋಸ್ಟು ಮಾಸ್ಟರಾದನು. ಒದುವುದೂ ಬರೆಯುವುದೂ ಇತರರಿಗಿಂತ ಅವನಿಗೆ ಹೆಚ್ಚಾಗಿ ತಿಳಿದಿದ್ದುದರಿಂದ ಆ ಊರಿನ ಜನರು ಅವನನ್ನು ಚುನಾಯಿಸಿದರು. ಟಪಾಲು ಹೆಚ್ಚಾಗಿರುತ್ತಿರಲಿಲ್ಲವಾಗಿ ಅವನು '' ತನ್ನ ಕೆಲಸವನ್ನೆಲ್ಲಾ ಟೋಪಿಯೊಳಗಿಟ್ಟುಕೊಂಡು ಹೊರಗೆ

ತಿರುಗಬಹುದಾಗಿದ್ದಿತು.'' ನಿಜನಾಗಿ ಹೊರಗೆ ಸುತ್ತುತ್ತಲೇ ಇರುತ್ತಿದ್ದನು. ವಾರವಾರವೂ ವೃತ್ತಾಂತಪತ್ರಿಕೆಗಳು ಅಲ್ಲಿಗೆ ಬರುತ್ತಿದ್ದುವು. ಅವನು ಯಾವ ಕೆಲಸಗಳಿದ್ದರೂ ಬಿಟ್ಟು ಅವುಗಳನ್ನು ಮೊದಲು ಓದುತ್ತಿದ್ದನು. ಹೀಗೆ ಆ ಕೆಲಸವನ್ನು ನೋಡಿಕೊಳ್ಳುತ್ತಿದ್ದರೂ ಬರುವ ಉತ್ಪತ್ತಿಗಿಂತ ಎಷ್ಟೋಪಾಲು ಹೆಚ್ಚಿನ ಲಾಭವು ಅವನಿಗೆ ಉಂಟಾಗುತ್ತಿದ್ದಿತು. ಕಾಲಕ್ರಮದಲ್ಲಿ ನ್ಯೂಸೇಲಂವಿನ ಜನರು ಇತರ ಸ್ಥಳಗಳಿಗೆ ಒಕ್ಕಲು ಹೋಗಲಾಗಿ ಊರು ಹಾಳುಬಿದ್ದಿತು. ಪೋಸ್ಟಾಫೀಸು ''ಎದ್ದು ಹೋಗ'' ಬೇಕಾಯಿತು.

ಅಂಗಡಿಯನ್ನಿಟ್ಟು ನಷ್ಟಹೊಂದಿದ್ದರಿಂದ ಸಾಲವು ಹೇರಿಕೊಂಡು ಅದರ ಭಾರದಿಂದ ಕತ್ತು ನೋಯಹತ್ತಿತು. ಅದು ಲಕ್ಷಾಂತರ ಡಾಲರುಗಳ ಸಾಲದಂತೆ ಅವನಿಗೆ ತೋರಿತು. ನನ್ನ ''ನ್ಯಾಷನಲ್ ಡೆಟ್'' (ಸರ್ಕಾರದ ಸಾಲ) ಎಂದು ಅವನು ಅದನ್ನು ಕರೆಯುತ್ತಿದ್ದನು. ಆದರೆ ನ್ಯಾಷನಲ್ ಡೆಟ್‌ನಂತೆ ಎಂದೆಂದಿಗೂ ಬೆಳೆಯುತ್ತ ತೀರದೆ ಇರಲಿಲ್ಲ. ಅವನಿಗೆ ಸಾಲವನ್ನೂ ಕೊಟ್ಟಿದ್ದವನೊಬ್ಬನು ಸಹನೆ ಸಾಲದವನಾಗಿ ಇದ್ದಕ್ಕಿದ್ದಹಾಗೆ ಒಂದು ದಿನ ಬಂದು ಅಬ್ರಹಾಮನ ಕುದುರೆಯನ್ನೂ ತಡಿಯೇ ಮೊದಲಾದ ಸಾಮಾನುಗಳನ್ನೂ ತೆಗೆದುಕೊಂಡು ಹೋಗಿ ಹರಾಜುಹಾಕಿಬಿಟ್ಟನು. ಅಬ್ರಹಾಮನ ಸ್ನೇಹಿತನು ಅವುಗಳನ್ನು ಕೊಂಡು ಕೊಂಡು ಪುನಃ ಅವನಿಗೇ ಕೊಟ್ಟು, ''ನಿನಗೆ ದುಡ್ಡು ಯಾವಾಗ ಸಿಕ್ಕುವುದೋ ಆಗ ನನ್ನ ಹಣವನ್ನು ಕೊಡು. ಅಥವಾ ಸಿಕ್ಕದಿದ್ದಪಕ್ಷದಲ್ಲಿ ಕೊಡದಿದ್ದರೂ ಚಿಂತೆ ಯಿಲ್ಲ'' ಎಂದು ಹೇಳಿ ಕಳುಹಿಸಿದನು. ಆದರೆ ಆ ಸ್ನೇಹಿತನು ತನ್ನ ಹಣವು ಕೈಗೆ ಬರುವವರೆಗೂ ಜೀವಿಸಲಿಲ್ಲ. ತನಗೆ ಸಾಲ ಕೊಟ್ಟಿದ್ದ ಭಗವಂತನಿಗೆ ಉತ್ತರವನ್ನು ಹೇಳಲು ಇಹಲೋಕವನ್ನು ಬಿಟ್ಟು ಹೊರಟುಹೋದನು. ನ್ಯೂಸೇಲಂನ ಜನರು ಆತನ ಗುಣಕಥನವನ್ನು ಮಾಡಬೇಕೆಂದು ಅಬ್ರಹಾಮನನ್ನು ಕೇಳಿದರು. ಅವನು ಒಪ್ಪಿದನು. ಒಪ್ಪಿ ಮಾತನಾಡಲು ಎದ್ದುನಿಂತನು. ಬಾಯಿಂದ ಮಾತೇ ಹೊರಡಲಿಲ್ಲ. ದುಃಖದಿಂದ ಗಂಟಲು ಕೂತುಹೋಯಿತು. ಕಣ್ಣುಗಳಿಂದ ನೀರು ತೊಟ್ಟಿಕ್ಕಿದುವು. ದುಃಖವು ಮಿತಿಮೀರಿ ಅಬ್ರಹಾಮನು ಕುಳಿತುಬಿಟ್ಟನು. ಸಂದಿಗ್ಧಸಮಯದಲ್ಲಿ ಸಹಾಯಮಾಡಿದವರನ್ನು ಪ್ರಶಂಸಿಸುವುದರಲ್ಲಿ ನಾಲಿಗೆಗಿಂತ ಕೆಲವು ವೇಳೆಗಳಲ್ಲಿ ನೇತ್ರವೇ ಹೆಚ್ಚಾಗಿ ಹೇಳಬಲ್ಲದು.

---

## ೭ ನೆಯ ಅಧ್ಯಾಯ

---

### ಸ್ಪ್ರಿಂಗ್ ಫೀಲ್ಡಿನಲ್ಲಿ

1834 ರಲ್ಲಿ ಅಬ್ರಹಾಮನು ಪ್ರತಿನಿಧಿಯಾಗಲು ಮತ್ತೆ ಪ್ರಯತ್ನಿಸಿದನು. ಈ ಬಾರಿ ಅದು ಸಫಲವಾದರೂ ಆಗಬಹುದಾಗಿ ತೋರಿತು. ಹಿಂದಿನ ಚುನಾವ

ಣೆಯ ಸಮಯದಲ್ಲಿ ಜನಗಳೆದುರಿಗೆ ಉಪನ್ಯಾಸಮಾಡಿ ಅವರ ಮನಸ್ಸನ್ನು ತನ್ನ ಕಡೆಗೆ ಒಲಿಸಿಕೊಳ್ಳಲು ಕಾಲವು ಅತ್ಯಲ್ಪವಾಗಿದ್ದಿತು. ಆದರೂ ಚೀಟಿಗಳು ಅವನಿಗೇ ಹೆಚ್ಚಾಗಿ ಬಂದಿದ್ದವು.

ಆಗಸ್ಟ್ ತಿಂಗಳಲ್ಲಿ ಚುನಾವಣೆಯು ನಡೆದು ಅಬ್ರಹಾಮನು ನೇಮಕವಾದನು. ಅವನಿಗೆ ಬಹಳ ಸಂತೋಷವಾಯಿತು. ಆಗ ಇಪ್ಪತ್ತೈದು ವರ್ಷವಾಗಿದ್ದಿತು. ಗ್ರಹಣ ಶಕ್ತಿಯು ಹೆಚ್ಚಾಗಿದ್ದುದರಿಂದ ಅವನು ಕೈಗೆ ಕೊಟ್ಟ ವಿಚಾರದಲ್ಲಿ ಅಪೂರ್ವಚಿಂತಿತವಾಗಿಯೇ ಮಾತನಾಡಬಲ್ಲವನಾಗಿದ್ದನು. ವಾದದಲ್ಲಿ ಬಹು ಗಟ್ಟಿಗನೆನ್ನಿಸಿಕೊಂಡಿದ್ದನು. ನ್ಯಾಯಶಾಸ್ತ್ರದಲ್ಲಿ ತಿಳಿವಳಿಕೆಯಿದ್ದಿತು. ಆದಕಾರಣ ಪ್ರತಿನಿಧಿಯಾಗಲು ಅವನು ಅನೇಕ ವಿಧದಲ್ಲಿ ಅರ್ಹನಾಗಿದ್ದನು. ಅಲ್ಲದೆ, ಜನಗಳೊಡನೆ ಧಾರಾಳವಾಗಿ ಬೆರೆದು ಅವರ ಸಹವಾಸದಲ್ಲಿರುತ್ತಿದ್ದುದರಿಂದ ಅವರ ನಡೆನುಡಿಗಳೂ ಕುಂದುಕೊರತೆಗಳೂ ಅಬ್ರಹಾಮನಿಗೆ ಪರಿಚಿತವಾಗಿದ್ದುವು. ಮಾತನಾಡುವಾಗ ಅವನು ಶ್ರಮಪಡುತ್ತಿರಲಿಲ್ಲ; ಮನಸ್ಸಿನಲ್ಲಿದ್ದುದನ್ನು ಸ್ಪಷ್ಟವಾಗಿ ಹೇಳಲು ಕಷ್ಟಪಡುತ್ತಿರಲಿಲ್ಲ. ಸಣ್ಣ ಅಥವಾ ಸಾಮಾನ್ಯ ಶಬ್ದಗಳನ್ನು ಉಪಯೋಗಿಸಿ ಅರ್ಥವನ್ನು ತರುವುದೇ ಅವನಿಗೆ ಇಷ್ಟವಾದುದೆಂದು ಕೆಲವರು ಹೇಳುತ್ತಾರೆ. ತಾನು ತಿಳಿವಳಿಕೆ ಸಾಲದವನೆಂದು ಒಪ್ಪಿಕೊಳ್ಳುವುದು ಅವಮಾನಕರವೆಂದು ಅವನು ಎಂದೂ ತಿಳಿಯಲಿಲ್ಲ. ತಿಳಿದುಕೊಳ್ಳತಕ್ಕ ವಿಷಯಗಳಿದ್ದರೆ ಅವನು ಸಣ್ಣ ಹುಡುಗನಿಂದಲೂ ಕಲಿಯಲು ಸಿದ್ಧವಾಗಿದ್ದನು.

ಸಭೆಯಲ್ಲಿದ್ದ ಇತರ ಮೆಂಬರುಗಳೂ ಕೂಡ ಅಬ್ರಹಾಮನಂತೆ ಸ್ನೇಹಿತರ ಮತ್ತು ಪರಿಚಿತರ ಬಲದಿಂದ ಪದವಿಯನ್ನು ಪಡೆದಿದ್ದರು. ಸಂಸ್ಥಾನದಲ್ಲಿ ಬೇಕಾದ ತಿದ್ದುಪಾಟುಗಳನ್ನು ಮಾಡುವುದೂ ಆಡಳಿತದಲ್ಲಿ ಕಣ್ಣಿಟ್ಟಿರುವುದೂ ಕರ್ತವ್ಯವೆಂಬ ಭಾವನೆಯಿದ್ದುದರಿಂದ ಅವರೆಲ್ಲರೂ ಒಟ್ಟಾಗಿ ಸೇರಿ ಕೆಲಸಮಾಡುತ್ತಿದ್ದರು. ಐಕಮತ್ಯವು ಒಡೆದು ಪಕ್ಷಗಳುಂಟಾಗಿ ರಾಗದ್ವೇಷಗಳು ಕಾಣಿಸಿಕೊಂಡಿರಲಿಲ್ಲ. ಅವಶ್ಯಕವಾದಾಗ ಬಂದುಸೇರಿ ಕಾನೂನುಗಳನ್ನು ರಚಿಸಿ ತಮ್ಮ ಕೆಲಸವಾದಮೇಲೆ ಹೋಗುತ್ತಿದ್ದರು. ಸಭೆಯಲ್ಲಿ ಅಬ್ರಹಾಮನಿಗೆ ಕೆಲಸವು ಹೆಚ್ಚಾಗುತ್ತಿರಲಿಲ್ಲ. ಹೆಚ್ಚಾಗಿ, ಎಲ್ಲರಿಗೂ ಆಯಾಸವುಂಟಾದಾಗ ಅವನು ಪ್ರತಿನಿಧಿಗಳೆಲ್ಲರನ್ನೂ ಒಟ್ಟುಗೂಡಿಸಿ ಬೇಸರವನ್ನು ಪರಿಹರಿಸುವಂತಹ ಕಥೆಗಳನ್ನು ಹೇಳುತ್ತಿದ್ದನು. ಸಭೆಯಲ್ಲಿ ಯಾರಾದರೂ ಮಸೂದೆಗಳನ್ನು ತಂದರೆ ಅದರ ವಿಷಯವನ್ನು ಕಡೆದು ಕಡೆದು ಚಿಂತಿಸಿ ಸಾಧ್ವಸಾಧುತೆಯನ್ನು ಪರಿಶೀಲಿಸಿ ತರುವಾಯ ಚರ್ಚಿಸುತ್ತಿದ್ದನು.

ಮುಂದಿನತಡವೆಯೂ ಅವನು ಎಲ್ಲರಿಗಿಂತ ಹೆಚ್ಚಾಗಿ ಚೀಟಿಗಳನ್ನು ಹೊಂದಿ ಸಭೆಗೆ ಮೆಂಬರಾದನು. ಆ ಸಮಯದಲ್ಲಿ ಅವನು ಮನಸ್ಸಿನ ಅಭಿಪ್ರಾಯವನ್ನು ಹೀಗೆ ವಿವರಿಸಿದನು :—'' ರಾಜ್ಯಶಾಸನದಲ್ಲಿ ಯಾರು ಯಾರು ಸಹಾಯ ಮಾಡುವರೋ ಅವರೆಲ್ಲರೂ ಸರ್ಕಾರದಿಂದ ದೊರೆಯುವ ಅನುಕೂಲ್ಯಗಳನ್ನು ಪಡೆಯಲು ಬಾಧ್ಯರೆಂಬುದೇ ನನ್ನ ಭಾವನೆ. ಆದ್ದರಿಂದ ಕಂದಾಯವನ್ನು ಸಲ್ಲಿಸುವವರೂ, ಆಯುಧವನ್ನು ಹಿಡಿದು ದೇಶಸೇವೆಯನ್ನು ಮಾಡುವವರೂ ಚೀಟಿ

ಹಾಕುವ ಈ ಆನುಕೂಲ್ಯವನ್ನು ಪಡೆಯಲುಳ್ಳವರೆಂಬುದು ನ್ಯಾಯವಾಗಿ ತೋರುತ್ತದೆ. ನನ್ನ ಬುದ್ಧಿಗೆ, ಒಂದುವೇಳೆ ಹೆಂಗಸರೂ ಕೂಡ ಇದಕ್ಕೆ ಬಾಹ್ಯರಲ್ಲ.'' ಆಕಾಲದಲ್ಲಿ ಎರಡು ವಿಚಾರಗಳು ಪ್ರಜೆಗಳ ಮನಸ್ಸನ್ನು ಬಹುವಾಗಿ ಆಕರ್ಷಿಸಿದ್ದುವು. ಮೊದಲನೆಯದು, ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಹುಟ್ಟದಿದ್ದರೂ ಅಲ್ಲಿ ವಾಸಮಾಡುತ್ತಿದ್ದವರಿಗೆ ಚೀಟಿಹಾಕಲು ಹಕ್ಕು ಉಂಟೇ ಎಂಬುದು ; ಜನೋಪಯುಕ್ತವಾದ ಕಾರ್ಯಗಳನ್ನು ಮಾಡುವುದು ಎರಡನೆಯದ್ದು ಅವೆರಡು ವಿಚಾರಗಳಲ್ಲಿಯೂ ಅಬ್ರಹಾಮನಿಗೆ ಉದಾರಬುದ್ಧಿಯಿದ್ದಿತು. ಆದ. ರಿಂದ ತನ್ನ ಅಭಿಪ್ರಾಯವನ್ನೂ ಉದ್ದೇಶಗಳನ್ನೂ ಸಫಲಮಾಡಲು ಮುಂದೆ ನುಗ್ಗುವುದೊಂದೇ ಮಾರ್ಗವೆಂದು ಅವನು ನಿಶ್ಚಯಿಸಿದನು. ಅವನ ಭಾಷಣವೂ ರಸಿಕತೆಯೂ ಪ್ರಸಿದ್ಧಿಗೆ ಬಂದುವು. ಪ್ರತಿಯಾಗಿ '' ಸವಾಲ '' ನ್ನು ಹೇಳುವುದರಲ್ಲಿ ಅವನು ಯಾರಿಗೂ ಹಿಂದೆ ಬೀಳಲಿಲ್ಲ. ಒಂದು ಸಮಯದಲ್ಲಿ ಅವನಿಗೂ ಪಕ್ಷತ್ಯಾಗವಮಾಡಿ ಜಾಕ್ಸನ್ನನ್ನ ಪಕ್ಷವನ್ನು ವಹಿಸಿ ಹೆಚ್ಚು ಆದಾಯವುಳ್ಳ ಅಧಿಕಾರವನ್ನು ಪಡೆದಾತನೊಬ್ಬನಿಗೂ ವಾಗ್ವಾದವು ಬಿದ್ದಿತು. ಚುನಾವಣೆಗೆ ಮುಂಚೆ ಪ್ರಜೆಗಳೆದುರಿಗೆ ಉಪನ್ಯಾಸಮಾಡುತ್ತ ಹೋಗುವಾಗ ಅಬ್ರಹಾಮನು ಸ್ಪ್ರಿಂಗ್ ಫೀಲ್ಡಿಗೆ ಬಂದನು. ಅಲ್ಲಿ ಪಕ್ಷತ್ಯಾಗಿಯು ಸುಂದರವಾದೊಂದು ಮನೆಯೊಂದನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದನು. ಸಿಡಿಲಿನ ಆಘಾತವನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರ ಮನೆಯ ಮೇಲೆ ಕಬ್ಬಿಣದ ಸಲಾಕಿಯೊಂದು ನಿಲ್ಲಿಸಲ್ಪಟ್ಟದ್ದಿತು. ಕಬ್ಬಿಣದ ಸಲಾಕಿಯು ಆ ಉಪಯೋಗವಿನ್ನೂ ಆ ಪ್ರಾಂತದಲ್ಲಿ ಹೊಸದು. ಅವರಿಬ್ಬರಲ್ಲಿ ಮೊದಲು ಮಾತನಾಡಿದ ಆತನು ಅಬ್ರಹಾಮನ ಉದ್ದೇಶವನ್ನು ನಿರರ್ಥಕ ಮಾಡಲಪೇಕ್ಷಿಸಿ ತರುಣನ ಕಾಡುಜನದ ವೇಷವನ್ನೂ ನಡತೆಯನ್ನೂ ಹೀಯಾಳಿಸಿ ಅವನಿನ್ನೂ ಏನೂ ತಿಳಿಯದ ತರಳನೆಂದು ತಿರಸ್ಕಾರಮಾಡಿದನು. ಪ್ರತ್ಯುತ್ತರ ಹೇಳಲೆದ್ದು ನಿಂತ ಅಬ್ರಹಾಮನು ಹೀಗೆಂದನು : '' ರಾಜನೀತಿ ವಿಶಾರದನ ಮಾಯೆ ಮುರುಳುಗಳಲ್ಲಿಯೂ ಚಾತುರ್ಯದಲ್ಲಿಯೂ ನಾನು ಬಳಕೆಯಿಲ್ಲದವನಿರಬಹುದು, ಚಿಕ್ಕವನಿರಬಹುದು. ಆದರೆ ವಯಸ್ಸಿನಲ್ಲಿ ಎಂದಿಗೂ ಅಷ್ಟು ಚಿಕ್ಕವನಲ್ಲ. ಪ್ರಕೃತದಲ್ಲಿ, ತುಂಬಾ ದಿನದವರೆಗೆ ಬದುಕಿರುವುದೂ ಅಥವಾ ಬೇಗ ಸಾಯುವುದೂ, ಚಿಕ್ಕವನಾಗಿರುವುದೂ ಅಥವಾ ವಯಸ್ಸಾದವನಾಗಿರುವುದೂ ಬೇಕಾಗಿಲ್ಲ. ಆದರೆ ಆ ಪುಣ್ಯಾತ್ಮನಹಾಗೆ ಪಕ್ಷತ್ಯಾಗಮಾಡಿಯೂ ಬಹಳ ದಿವಸ ಜೀವಿಸಿರುವುದಕ್ಕಿಂತ ಈಕ್ಷಣವೇ ಸಾಯುವುದು ಉತ್ತಮ. ಪಕ್ಷತ್ಯಾಗಮಾಡಿದುದು ಸಾಲದೆ ಮೂರುಸಾವಿರ ಡಾಲರುಗಳ ಉತ್ಪತ್ತಿಯುಳ್ಳ ಪದವಿಗೆ ನಾನು ಕೈನೀಡಿ ಸ್ವೀಕರಿಸಲಾರೆನು. ಅದಾದಮೇಲೆ—ಅಂದರೆ ಅಂತರಾತ್ಮಕ್ಕೆ ಮೋಸಮಾಡಿದಮೇಲೆ—ದೇವರ ಕೋಪಕ್ಕೆ ಹೆದರಿ ವಜ್ರಘಾತವನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರ ಕಬ್ಬಿಣದ ಸಲಾಕಿಯೆಂಬ ಈ ಕೋಡನ್ನು ಮನೆಯಮೇಲೆ ನೆಡಲಾರೆನು. ''

ಸಭೆಯಲ್ಲಿ ಮೆಂಬರಾಗಿರುವ ಸಮಯದಲ್ಲಿಯೇ ಕೈಲಾದಷ್ಟು ಹೊಡೆದಾಡ

ಬೇಕೆಂದು ಸಂಕಲ್ಪಿಸಿ ಅಬ್ರಹಾಮನು ದೇಶದಲ್ಲೆಲ್ಲಾ ವಿಸ್ತರಿಸುತ್ತಿದ್ದ ದಾಸ್ಯಪದ್ಧತಿಯನ್ನು ತಪ್ಪಿಸಲು ಪ್ರಯತ್ನಮಾಡಿದನು. ಜನಗಳು ಆ ಪದ್ಧತಿಗೆ ತ್ರಿಕರಣಪೂರ್ವಕವಾಗಿ ಆಶ್ರಯವನ್ನು ಕೊಟ್ಟು ಹೆಚ್ಚಿಸುತ್ತಿದ್ದರು. ಧನವೂ ಸೇವೆಯೂ ಲಭಿಸುವಾಗ ಯಾರುತಾನೇ ಅದನ್ನು ಬೇಡವೆನ್ನುವರು ? ಕೆಂಟಕಿಯಲ್ಲಿಯೂ ಇಂಡಿಯಾನ ಮಿಸ್ಸೌರಿ ಸಂಸ್ಥಾನಗಳಲ್ಲಿಯೂ ಗುಲಾಮರ ವ್ಯಾಪಾರವು ದಿನದಿನಕ್ಕೆ ಹೆಚ್ಚುತ್ತಿದ್ದಿತು. ಹೆಚ್ಚಿದಹಾಗೆಲ್ಲಾ ಕೆಲಸಮಾಡಲು ಜನವು ಹೆಚ್ಚುಹೆಚ್ಚಾಗಿ ಒದಗಬೇಕಾಗುತ್ತಿದ್ದಿತು. ಆದಕಾರಣ ಅಲ್ಲಿ ದಾಸ್ಯವು ಬೆಳೆಯುತ್ತ ಬಂದು ಅದನ್ನು ನಿರ್ಮೂಲನಮಾಡುವುದು ಅಸಾಧ್ಯವೆನ್ನುವಂತಾಗುತ್ತಿದ್ದಿತು. ''ಹಿರಿಯಕ್ಕನ ಚಾಳಿ'' ಮನೆಗೆಲ್ಲಾ ಹರಡುತ್ತಿದ್ದಿತು. ಆ ಎರಡು ಸಂಸ್ಥಾನಗಳಲ್ಲಿ ಸರ್ಕಾರವು ಕಾನೂನುಗಳನ್ನು ನಿರ್ಮಿಸಿ ಅದನ್ನು ಪೋಷಿಸಿ ಪ್ರೋತ್ಸಾಹಿಸುತ್ತಿದ್ದಿತಲ್ಲದೆ ಇತರ ರಾಜ್ಯಗಳಲ್ಲಿಯೂ ಅದನ್ನು ಹೆಚ್ಚಿಸಲು ಪ್ರಯತ್ನಿಸುತ್ತಿದ್ದಿತು. ಅದರ ಸಹಾಯವಿರಲಾಗಿ ವಿರೋಧಾಚರಣೆಗೆ ತಲೆಯೆತ್ತಲವಕಾಶವಿರಲಿಲ್ಲ. ದಾಸ್ಯವು ಮಹಾ ಅಪರಾಧಕ್ಕೆ ಸಮವೆಂತಲೂ ಅದರಲ್ಲಿ ಎಳ್ಳಷ್ಟೂ ಧರ್ಮವಿಲ್ಲವೆಂತಲೂ ಅದು ಅಧಮಾಧಮವಾದುದೆಂತಲೂ ಕೆಲವರು ಉದ್ಘೋಷಿಸಲಾರಂಭಿಸಿದ್ದಕ್ಕೆ ಪ್ರತಿಯಾಗಿ ಇತರ ಜನಗಳು ಆಗಾಗ ನಿಬಂಧನೆಗಳನ್ನೇರ್ಪಡಿಸಿ ದಾಸ್ಯವನ್ನು ಸಂಸ್ಥಾಪಿಸಲೇರ್ಪಾಡುಮಾಡುತ್ತಿದ್ದರು. ಇಲಿನ್ವಾದ ಸಭೆಯು ಒಂದಾವೃತ್ತಿ ಕೆಲವು ನಿಬಂಧನೆಗಳನ್ನು ಏರ್ಪಡಿಸಿತು. ಅವುಗಳನ್ನು ಅನುಮೋದಿಸದೆ ಅಬ್ರಹಾಮನೂ ಡಾನ್ ಸ್ಟೋನ್ (Dan Stone) ಎಂಬಾತನೂ ಸೇರಿ ತಮ್ಮ ಅಭಿಪ್ರಾಯಗಳನ್ನು ವಿಸ್ತರಿಸಿ ಒಂದು ಅರ್ಜಿಯನ್ನು ಬರೆದರು.

ಸಭೆಯವರು ಅರ್ಜಿಯನ್ನು ಓದಿ ಪ್ರಕಟಪಡಿಸಿದರು. ತಮ್ಮ ಜೀವಮಾನದಲ್ಲಿ ದಾಸ್ಯವು ನಿರ್ನಾಮವಾಗುವ ಸಂಭವವಿಲ್ಲವೆಂದು ತಿಳಿದಿದ್ದ ಅಬ್ರಹಾಮನ ಸ್ನೇಹಿತರು ಅವರಿಬ್ಬರೂ ಮಾಡಿದುದು ವ್ಯರ್ಥವಾದ ಶ್ರಮವೆಂದುಕೊಂಡರು. ನಮ್ಮ ಕಾಲವನ್ನು ಲೆಕ್ಕವಿಟ್ಟುಕೊಂಡು ನೋಡಲಾಗಿ ಆ ಅರ್ಜಿಯಲ್ಲಿ ಕಂಡುಬಂದ ಧೈರ್ಯವು ಸಾಲದೆಂದು ತೋರುವುದು. ಅಬ್ರಹಾಮನೂ ಅವನ ಸ್ನೇಹಿತನೂ ಅಂಜುತ್ತ ಅಂಜುತ್ತ ಅದನ್ನು ಬರೆದಿರಬಹುದು. ಆದರೂ ಅದು ಆ ಕಾಲದಲ್ಲಿ ತೀಕ್ಷ್ಣವಾದ ಬಾಣವೇ ಆಗಿದ್ದಿತು. ಆ ಪದ್ಧತಿಯನ್ನು ಯಾರಾದರೂ ದೂಷಿಸಿದರೆ ಸಾಕು, ಪ್ರಜೆಗಳು ಆ ದೂಷಣೆಯನ್ನು ದೊಡ್ಡ ಅಪರಾಧದಂತೆ ಎಣಿಸುತ್ತಿದ್ದರು. ಗುಲಾಮರನ್ನಿಟ್ಟುಕೊಂಡಿದ್ದವರೂ ದಾಸ್ಯವನ್ನು ಪ್ರೋತ್ಸಾಹಿಸುತ್ತಿದ್ದವರೂ ಅದರ ಅಧರ್ಮತೆಯನ್ನು ಇತರರ ಬಾಯಿಂದ ಹೊರಡಗೊಡುತ್ತಿರಲಿಲ್ಲ.

1837ರಲ್ಲಿ ಅಬ್ರಹಾಮನು ಲಾಯರ ನಡೆವಳಿಕೆಗಳನ್ನು ತಿಳಿದುಕೊಳ್ಳಲು ಸ್ಪ್ರಿಂಗ್‌ಫೀಲ್ಡಿಗೆ ಹೋಗಿ ವಾಸಮಾಡಿದನು. ಮುಂದೆ ಪ್ರೆಸಿಡೆಂಟನಾಗುವವರೆಗೂ ಆ ಸ್ಥಳವನ್ನು ಬಿಟ್ಟು ಕದಲಲಿಲ್ಲ. ಇದುವರೆಗಿದ್ದ ಸಂಪಾದನೆಯು ಅಲ್ಪವಾಗಿದ್ದಿತು. ಆದರೂ ಅವನು ಅದರೊಳಗೆ ಒಂದು ಭಾಗವನ್ನು ತನ್ನ ಹಿಂದಿನ ಸಾಲಕ್ಕಾಗಿ ಕೊಟ್ಟು ಮಿಕ್ಕದ್ದರಲ್ಲಿ ಜೀವನವನ್ನು ನಡೆಯಿಸುತ್ತಿದ್ದನು. ಇನ್ನುಮುಂದೆ

ಆ ಸಂಪಾದನೆಗೂ ಸೊನ್ನೆಬೀಳುವಂತೆ ತೋರಿತು. ಅವನ ಮನಸ್ಸಿನಲ್ಲಿಯೂ ಅದು ಅಳುಕಿತು. ಸ್ನೇಹಿತನಿಂದ ಕುದುರೆಯೊಂದನ್ನು ಎರವಾಗಿ ತೆಗೆದುಕೊಂಡು ತನ್ನ ಆಸ್ತಿಪಾಸ್ತಿಗಳನ್ನೆಲ್ಲಾ ಅದರ ಮೇಲೆ ಹೇರಿಕೊಂಡು ಆ ಊರಿಗೆ ಹೋದನು. ಅಲ್ಲಿ ಪೂರ್ವಪರಿಚಿತನಾದ ಮನುಷ್ಯನೊಬ್ಬನನ್ನು ಕಂಡು ಸ್ಥಿತಿಗತಿಗಳನ್ನು ವಿಚಾರಿಸಿದನು. ವಾಸಮಾಡುವ ಕೊಠಡಿಯ ಬಾಡಿಗೆಯೂ ಊಟ ಉಪಚಾರಗಳ ವೆಚ್ಚವೂ ಸೇರಿ ತಿಂಗಳಿಗೆ ಹದಿನೆಂಟು ಡಾಲರುಗಳು ಬೇಕಾಗುವುದಾಗಿ ತಿಳಿಯಿತು. ಅದಕ್ಕಿಂತ ಕಡಿಮೆಯ ಹಣದಲ್ಲಿ ಜೀವಿಸಲಾಗುತ್ತಿರಲಿಲ್ಲ.

ಅಬ್ರಹಾಮನು ಖಿನ್ನನಾಗಿ, '' ಅದೇನೂ ಹೆಚ್ಚು ಹಣವಲ್ಲ, ಸುಲಭವೇ. ಆದರೆ ಅಷ್ಟು ಹಣವನ್ನು ಕೊಡಲು ನನಗೆ ಶಕ್ತಿಯಿಲ್ಲ. ಕ್ರಿಸ್‌ಮಸ್ ಹಬ್ಬದ ವರೆಗೆ ನೀನು ಹಣವನ್ನು ಸಾಲವಿತ್ತು ನಾನು ಇಲ್ಲಿಗೆ ಬಂದುದು ಫಲಕಾರಿಯಾದರೆ ನಿನ್ನ ಹಣವನ್ನು ಹಿಂದಕ್ಕೆ ಕೊಡುತ್ತೇನೆ. ಇಲ್ಲದಿದ್ದರೆ ಪ್ರಾಯಶಃ ಸದ್ಯದಲ್ಲಿ ತೀರಿಸಲೇ ಆರೆನು '' ಎಂದನು.

ಸ್ನೇಹಿತನ ಮನಸ್ಸೊಪ್ಪಿ ವಿಚಾರವು ನಿರ್ಣಯಕ್ಕೆ ಬಂದಿತು. ಅತ್ಯಂತ ಸೌಹಾರ್ದದಿಂದ ಅಲ್ಲಿ ವಾಸಮಾಡಲಾರಂಭಿಸಿದನು.

ಇಲಿನ್ವಾ ಸಂಸ್ಥಾನಕ್ಕೆ ಹೊಸದಾಗಿ ಮುಖ್ಯಪಟ್ಟಣವಾದ ಸ್ಪ್ರಿಂಗ್ ಫೀಲ್ಡಿನಲ್ಲಿ ನ್ಯಾಯಸ್ಥಾನವೊಂದು ಏರ್ಪಾಡಾಗಿದ್ದಿತು. ಆ ಊರು ಬಹಳ ಪ್ರಾಮುಖ್ಯತೆಗೆ ಬರುತ್ತಿದ್ದಿತು. ಎಲ್ಲಾ ಕಡೆಗಳಿಂದಲೂ ಜನರು ಅಲ್ಲಿಗೆ ಬಂದು ನೆಲಸುತ್ತಿದ್ದರು. ನ್ಯಾಯವಿಧಾಯಕ ಸಭೆಯೂ (State Legislature) ಅಲ್ಲಿ ಸೇರುತ್ತಿದ್ದುದು ಅದರ ಗೌರವವನ್ನು ಹೆಚ್ಚಿಸಿತು. ನ್ಯಾಯಸ್ಥಾನವು ಇತರ ಕಟ್ಟಡಗಳಂತೆ ಮರದಿಂದಲೇ ಕಟ್ಟಲ್ಪಟ್ಟದ್ದಿತು. ಅದರೊಳಗೆ ಜಡ್ಜಿಯ ಗದ್ದುಗೆಯೂ, ಲಾಯರುಗಳು ಕೂರುವ ಸ್ಥಳವೂ, ಅಪರಾಧಿಗಳ ಸ್ಥಾನವೂ, ಪ್ರೇಕ್ಷಕರು ಕೂರುವ ಪ್ರದೇಶವೂ ವಿಂಗಡಿಸಲ್ಪಟ್ಟದ್ದುವು. ಬಹಳ ಅಪೂರ್ವವಾದ ದೃಶ್ಯವಾದುದರಿಂದ ವಿಚಾರಣೆಯ ಕಾಲದಲ್ಲಿ ಪ್ರೇಕ್ಷಕರ ಸಂಖ್ಯೆಯು ಸಾಮಾನ್ಯವಾಗಿ ಹೆಚ್ಚಾಗಿರುತ್ತಿದ್ದಿತು. ಅಲ್ಲಿಯ ಶೋಕವೂ ಸಂತೋಷವೂ ವೈಚಿತ್ರ್ಯವೂ ವಾಗ್ವೈಖರಿಯೂ ''ಬುದ್ಧಿಯ ಖರ್ಚೂ'' ತರ್ಕವೂ ಪ್ರೇಕ್ಷಕಜನಗಳಿಗೆ ವಿನೋದವನ್ನು ಹೊಂದಿಸುತ್ತಿದ್ದುದಲ್ಲದೆ ಹೆಂಗಸರಿಗೆ ಹರಟುವುದಕ್ಕೆ ಯಥೇಚ್ಛವಾಗಿ ಕಥೆಯನ್ನು ಕಲ್ಪಿಸಿಕೊಡುತ್ತಿದ್ದುವು.

ಲಾಯರುಗಳು ಅಶ್ವಾರೋಹಿಗಳಾಗಿ ಮೊಕದ್ದಮೆಗೋಸ್ಕರ ಒಂದು ಸ್ಥಳದಿಂದ ಮತ್ತೊಂದಕ್ಕೆ ಸಂಚರಿಸುತ್ತಿದ್ದರು. ಒಂದೊಂದುವೇಳೆ ಅವರು ಜಡ್ಜಿಯನ್ನು ಅನುಸರಿಸುತ್ತಲೂ ಇದ್ದರು. ಧರ್ಮಶಾಸ್ತ್ರದ ಪುಸ್ತಕಗಳೂ ಇತರ ಪದಾರ್ಥಗಳೂ ಯಾವಾಗಲೂ ಕುದುರೆಯ ಬೆನ್ನಮೇಲೆ ಇರುತ್ತಿದ್ದುವು. ಕೆಲವು ಸಮಯಗಳಲ್ಲಿ ಅವರು ಹಳ್ಳಿಯ ಜನರ ಮನೆಗೆ ಅತಿಥಿಗಳಾಗಿ ಹೋಗಬೇಕಾಗುತ್ತಿದ್ದಿತು. ಜನರು ಒರಟರಾಗಿ ನಯಭಯಗಳನ್ನರಿಯದವರಾದರೂ ಅಭ್ಯಾಗತನಿಗೆ ಆಸರೆಯನ್ನು ಕೊಡದಂತೆ ಮನೆಯ ಬಾಗಿಲನ್ನು ಹಾಕಲಿಲ್ಲ.

ಪಟ್ಟಣಗಳಲ್ಲಿ ವಾಸಮಾಡಿದರೂ ನೈಸರ್ಗಿಕವಾಗಿ ನಾವು ತರುವ ಸದ್ಬುದ್ಧಿ

(Natural graces) ಯನ್ನು ನಾವು ತೊರೆಯಬೇಕಾಗಿಲ್ಲ. ಸನ್ನಿವೇಶಮಹಿಮೆ ಯಿಂದ ನಾವು ಒಂದೊಂದು ವೇಳೆ ಅದನ್ನು ಉಳಿಸಿಕೊಳ್ಳಲು ಶ್ರಮಪಡಬೇಕಾಗು ತ್ತದೆ. ಆದರೆ ಇತರ ಕಾಲಗಳಲ್ಲಿ ಅವರ ಮಹಿಮೆಯು ನಮ್ಮ ಕಾರ್ಯವೆಲ್ಲದರ ಲ್ಲಿಯೂ ವ್ಯಾಪಿಸಿರುತ್ತದೆ. ಅದು ಅಬ್ರಹಾಮನಲ್ಲಿ ಇದ್ದಿತೆಂಬುದನ್ನು ತಿಳಿಸಲು ಇಷ್ಟುಮಾತು ಹೇಳಬೇಕಾಯಿತು. ಜೊತೆಯ ಲಾಯರುಗಳ ಗುಂಪಿನಲ್ಲಿ ಅದೂ ಇದೂ ವಿಚಾರವನ್ನು ಚರ್ಚಿಸುತ್ತ ಹೋಗುತ್ತಿದ್ದರೂ ಕೂಡ ಒಂದು ತಡವೆ ಅಬ್ರಹಾಮನ ಲಕ್ಷ್ಯವು ಮರದಮೇಲಿದ್ದ ಗೂಡಿನಿಂದ ಕೆಳಗೆ ಬಿದ್ದೊಂದು ಹಕ್ಕಿಯ ಮರಿಯಕಡೆಗೆ ತಿರುಗದಿರಲಿಲ್ಲ. ಸಮಯಸನ್ನಿವೇಶಗಳನ್ನು ಗೌರವಿಸುವುದಿಲ್ಲವೆಂದು ಜತೆಯವರು ಆಕ್ಷೇಪಿಸಿದರೂ ಕೂಡ ಅವನು ಕುದುರೆಯಿಂದಿಳಿದು ಆ ಮರಿಯನ್ನು ಗೂಡಿಗೆ ತಲಪಿಸದಿರಲಿಲ್ಲ. ಹಾಗೆ ಮಾಡದಿದ್ದರೆ ಮುಂದೆ ಅವನ ಮನಸ್ಸು ಅಶಾಂತ ವಾಗಿ ಸಂತಾಪವುಂಟಾಗುತ್ತಿದ್ದಿತು. ಕಥೆಯು ನಿಜವೋ ಸುಳ್ಳೋ ತಿಳಿಯದು. ನಿಜವಾಗಿದ್ದಪಕ್ಷದಲ್ಲಿ ಅಬ್ರಹಾಮನ ದಯಾಶೀಲತೆಯು ವ್ಯಕ್ತವಾಗುತ್ತದೆ. ಕಲ್ಪಿತ ವಾದರೂ ಬಾಧಕವಲ್ಲ. ಪ್ರಾಣಹಿಂಸೆಯನ್ನು ಮಾಡಲೊಲ್ಲೆನೆಂದು ಶಪಥಮಾಡಿ ದವನಿಗೆ ಪ್ರಾಣರಕ್ಷಣೆಯನ್ನು ಮಾಡುವುದು ಅಸಾಧ್ಯವಲ್ಲ.

ಅವನು ಬೆಳೆದಂತೆಯೇ ಬೆಳೆದುಬಂದಿದ್ದ ಸತ್ಯಸಂಧತೆಯು ಅವನನ್ನು ಈಗ ತ್ಯಜಿಸಲಿಲ್ಲ. ಸುಳ್ಳಿದೆಯೆಂದು ಕಂಡುಬರುವ ಮೊಕದ್ದಮೆಯನ್ನು ಅವನು ಹಿಡಿಯುತ್ತಿರಲಿಲ್ಲ. ಕಕ್ಷಿಗಾರನು ಕೊಡುವ ಹೆಚ್ಚು ರುಸುಮಿಗೆ ಕೈಯೊಡ್ಡಿ ಮೋಸವನ್ನು ಕಲಿಯಲಿಲ್ಲ. ಅಂತರಾತ್ಮವೊಂದಿದೆಯೆಂದರಿತು ಅದನ್ನು ಪೂಜಿಸು ವವರಿಗೆ ಮೋಸದ ಬುದ್ಧಿಯು ಬರುವುದಿಲ್ಲ. ಅಬ್ರಹಾಮನ ಅಂತರಾತ್ಮದ ಆರಾ ಧನೆಯು ಇತರರಿಗೆ ವಿಚಿತ್ರವಾಗಿ ಕಾಣಿಸುತ್ತಿದ್ದಿತು. ''ತನ್ನ ಕೈಲಾದುದನ್ನು ಮನಃ ಪೂರ್ವಕವಾಗಿ ಮಾಡಿಬಿಡುವುದು ತನ್ನ ಕೆಲಸ; ಉಳಿದುದು ಭಗವಂತನಿಗೂ ಮಾಡಿದ ಪ್ರಯತ್ನಕ್ಕೂ ಸೇರಿದುದು,'' ಎಂಬುದು ಅವನ ತತ್ವವಾಗಿದ್ದಿತು. ''ವ್ಯಾಜ್ಯಗಳು ಹುಟ್ಟಲು ಅವಕಾಶವನ್ನೇ ಕೊಡಬೇಡ. ಯಾವುದರಲ್ಲಾದರೂ ಮಧ್ಯಸ್ಥಮಾಡಿಕೊಂಡು ಪರಿಹರಿಸುವುದು ಒಳ್ಳೆಯದು. ವ್ಯಾಜ್ಯದಲ್ಲಿ ಒಬ್ಬನು ಗೆದ್ದರೂ ಅವನಿಗೆ ಸೋತವನಿಗಿಂತ ಹೆಚ್ಚಿನ ನಷ್ಟವುಂಟಾಗುತ್ತದೆ. ಕಾಲ ವ್ಯಯವೂ, ಧನವ್ಯಯವೂ, ಶಕ್ತಿವ್ಯಯವೂ ತಿಳಿದ ಅಂಶಗಳೇ. ಲಾಯರಾದವನು ಒಳ್ಳೆಯವನೆನ್ನಿಸಿಕೊಂಡು ನೆಮ್ಮದಿಯನ್ನುಂಟುಮಾಡಲು ಬಹಳ ಅರ್ಹನಾದವನು. ಅಷ್ಟು ಮಾಡುತ್ತಿದ್ದರೇ ಸಾಕು, ಕೆಲಸವು ಬೇಕಾದಷ್ಟಾಗುವುದು.'' ಎಂದು ಆ ವಿಚಿತ್ರ ಲಾಯರು ಹೇಳಿದ್ದಾನೆ. ಪ್ರೆಸಿಡೆಂಟನಾಗಿದ್ದ ಕಾಲದಲ್ಲಿ ಲಿಂಕನ್ನನು ಹೀಗೆಂದನು: ''ಮನುಷ್ಯನು ತನ್ನಿಂದಾಗುವ ಸಾಹಸವನ್ನೆಲ್ಲಾ ಮಾಡಿಬಿಡಲಿ; ಫಲಿತಾಂಶವನ್ನು ಆ ಸಾಹಸವೇ ನೋಡಿಕೊಳ್ಳುವುದು. ನಾಳೆಯ ಕರ್ತವ್ಯವನ್ನು ಮಾಡಲರ್ಹನಾಗುವುದಕ್ಕೆ ಈ ದಿನದ ಕರ್ತವ್ಯವನ್ನು ನಿರಾಲಸವಾಗಿ ಮಾಡುವುದ ಕ್ಕಿಂತ ಉತ್ತಮವಾದ ಉಪಾಯವಿಲ್ಲ. ಇವೆರಡೂ ಪುರುಷನಿಗೆ ಅನುಲ್ಲಂಘ್ಯವಾದ ನಿಯಮಗಳು.''

ಲಿಂಕನ್ನನಿಗೆ ಇಪ್ಪತ್ತೆಂಟು ವರ್ಷ ವಯಸ್ಸಾಯಿತು. ಪ್ರತಿಭೆಯಿಲ್ಲದಿದ್ದರೂ ಅವನಲ್ಲಿದ್ದ ಅಸಾಧಾರಣವಾದ ಧೀಶಕ್ತಿಯು ಪ್ರಕಾಶಕ್ಕೆ ಬಂದಿತು. ಅವನು ಅಲ್ಲಲ್ಲಿ ಉಪನ್ಯಾಸಗಳನ್ನು ಕೊಡುತ್ತ ರಾಜ್ಯದ ಆಡಳಿತದಲ್ಲಿ ವಿಶೇಷವಾದ ಆಸಕ್ತಿಯನ್ನು ತೋರಿಸುತ್ತಿದ್ದನು. ಪ್ರಜಾಪ್ರಭುತ್ವವಿರುವ ರಾಜ್ಯದಲ್ಲಿ ರಾಜಕೀಯಾಂಶಗಳಲ್ಲಿ ಯಾವುದಾದರೊಂದು ಮತವನ್ನು ಅವಲಂಬಿಸುವುದು ಅನಿವಾರ್ಯವಾದುದೆಂದು ತೋರುತ್ತದೆ. ಈಗಿನಕಾಲದಲ್ಲಿ ಶಾಸನಕ್ರಮದ ವಿಚಾರದಲ್ಲಿ ಯಾವ ಪ್ರಜೆಗೂ ಉದಾಸೀನನಾಗಿರಲು ಆಸ್ಪದವಿಲ್ಲವೆಂತಲೂ ಹಾಗೆ ಉದಾಸೀನನಾದವನು ಬುದ್ಧಿಹೀನತೆಯ ಸಾಕ್ಷಾನ್ಮೂರ್ತಿಯೆಂತಲೂ ಸಂಭಾವಿತನೊಬ್ಬನು ಹೇಳಿರುವುದು ಬಹಳ ನಿಜ. ನಾವು ಉಸಿರಾಡುವುದು ಹೇಗೆ ಸಹಜವೋ ಹಾಗೆ ಯಾವುದಾದರೊಂದು ಪಕ್ಷವನ್ನು ವಹಿಸುವುದು ಸಹಜವಾಗುವುದು. ಕಾಲದೇಶಗಳು ಅದನ್ನು ಪೋಷಿಸುವುವು ಅಥವಾ ಬದಲಾಯಿಸುವುವು; ಆದರೆ ಮನಸ್ಸಿನ ಅಭಿಪ್ರಾಯವನ್ನೆಂದಿಗೂ ಅಳಿಸಲಾರವು.

ಆಗಿನ ಪ್ರೆಸಿಡೆಂಟನ ಶಾಸನಕ್ರಮಕ್ಕೆ ವಿರುದ್ಧವಾಗಿ ಮಾತನ್ನಾಡುವವರಿಗೂ ಆಚರಿಸುವವರಿಗೂ ಬಗೆಬಗೆಯ ನಿರ್ಬಂಧಗಳು ಕಲ್ಪಿತವಾಗುತ್ತಿದ್ದುವು. ಅಂಥವರ ಸ್ವಾತಂತ್ರ್ಯಕ್ಕೆ ಕುಂದಕವನ್ನು ತರಲು ಸರ್ಕಾರವು ಪ್ರಯತ್ನಿಸುತ್ತಿದ್ದಿತು. ಅಬ್ರಹಾಮನಿಗೆ ಅದು ಸರಿಬೀಳಲಿಲ್ಲ. ಸ್ವಾತಂತ್ರ್ಯವೂ ದೇಶಸೇವೆಯೂ ಒಂದಕ್ಕೊಂದು ಸಮವೆಂದೂ ಕಾರ್ಯಕಾರಣಭಾವದಿಂದ ಪ್ರವರ್ತಿಸುವುವೆಂದೂ ಭಾವಿಸಿದ್ದ ಲಿಂಕನ್ನನು ಹೆದರದೆ ಸರ್ಕಾರದ ಆ ಪ್ರವರ್ತನೆಯನ್ನು ಖಂಡಿಸುತ್ತ ಅಲ್ಲಲ್ಲಿ ಉಪನ್ಯಾಸಮಾಡಿದನು. ಆ ಸಂದರ್ಭದಲ್ಲಿ, '' ಆ ಸ್ವೇಚ್ಛಾಪ್ರವರ್ತನೆಗೆ ಹೆಗಲನ್ನೊಡ್ಡಿ ಅದನ್ನು ಮಹಾಪ್ರಸಾದವೆಂದು ನಾನು ಎಂದಿಗೂ ಆಶ್ರಯಿಸಿಕೊಂಡಿರುವುದಿಲ್ಲ. ಇಲ್ಲಿ, ಭಗವಂತನ ಸಾಕ್ಷಿಯಾಗಿ, ಜಗತ್ಸಾಕ್ಷಿಯಾಗಿ ಶಪಥಮಾಡುತ್ತೇನೆ :—ನನ್ನ ಪ್ರಾಣವೂ ಸ್ವಾತಂತ್ರ್ಯವೂ ಯಾವ ರಾಜ್ಯದಲ್ಲಿ ಆಶ್ರಯವನ್ನು ಹೊಂದಿರುವುವೋ ಅಂತಹ ರಾಜ್ಯವನ್ನು ಸೇವಿಸುವುದರಲ್ಲಿ ನನ್ನ ಜೀವಮಾನವು ಬದ್ಧನಾಗಿರುತ್ತದೆ. ಅಂತಹ ಸೇವೆಯಲ್ಲಿ ನಿರತನಾಗಲು ನನ್ನ ಅಂತರಾತ್ಮವು ಅನುಮತಿಸಿರುವುದು. ಕರ್ತವ್ಯದೃಷ್ಟಿಯು ಮಾರ್ಗವನ್ನು ತೋರಿಸುವುದು. ಅವುಗಳಿಂದಲೇ ದೇಶಸೇವೆಗಾಗಿ ನಮ್ಮ ದೇಹವೂ ಬುದ್ಧಿಯೂ ಪುಷ್ಟಿಯನ್ನು ಹೊಂದುವುವು. ದುಃಖಪರಂಪರೆಯು ಮುತ್ತಿ ಬರಲಿ; ಕಾರಾಗೃಹವು ನಮ್ಮನ್ನು ನುಂಗಲಿ; ಮರಣವೊದಗಲಿ—ನಾವು ದೇಶಸೇವೆಯಲ್ಲಿ ಹಿಂದೆ ಬೀಳುವುದಿಲ್ಲ.'' ಎಂದು ಪ್ರತಿಜ್ಞೆ ಮಾಡಿದನು.

1840ರಲ್ಲಿ ಪ್ರೆಸಿಡೆಂಟನನ್ನು ಚುನಾಯಿಸುವ ಕಾರ್ಯವೊದಗಿತು. ಪ್ರಜೆಗಳಲ್ಲಿ ಎರಡು ಪಂಗಡವುಂಟಾಗಿ ಒಂದು ಪಂಗಡದವರು ಪುನಃ ಮೊದಲಿನ ಪ್ರೆಸಿಡೆಂಟನಲ್ಲಿ ಪಕ್ಷಪಾತವನ್ನು ತೋರಿಸಿದರು. ಮತ್ತೊಂದರವರು ಹ್ಯಾರಿಸನ್ ಎಂಬಾತನನ್ನು ನೇಮಿಸಲು ಅಪೇಕ್ಷಿಸಿದರು. ವ್ಹಿಗ್ ಸಂಪ್ರದಾಯದವನಾದ ಹ್ಯಾರಿಸನ್ನನ ಪಕ್ಷವನ್ನು ವಹಿಸಿ ಲಿಂಕನ್ನನು ಊರಿಂದೂರಿಗೆ ತಿರುಗುತ್ತಲೂ ಉಪನ್ಯಾಸ

ಮಾಡುತ್ತಲೂ ತನ್ನವನನ್ನು ಚುನಾಯಿಸುವಂತೆ ಜನಗಳನ್ನು ಪ್ರೇರೇಪಿಸುತ್ತಿದ್ದನು. ಅವನ ಉತ್ಸಾಹಕ್ಕೂ ಪ್ರಯತ್ನಕ್ಕೂ ಮಿತಿಯಿರಲಿಲ್ಲ. ತಮ್ಮ ಇಷ್ಟಾರ್ಥವು ನಡೆಯುವುದಕ್ಕಾಗಿ ವ್ಹಿಗ್ಗರು ಹಲವು ಹಂಚಿಕೆಗಳನ್ನು ಮಾಡಿದರು.

ಲಿಂಕನ್ನನೂ ಅವರೊಡನೆ ಸೇರಿದನು. ಆ ಸಮಯದಲ್ಲಿ ಸ್ಪ್ರಿಂಗ್‌ಫೀಲ್ಡಿನಲ್ಲಿ ಜನಗಳನ್ನು ಸಭೆಸೇರಿಸಿ ಎಡ್ವರ್ಡ್ ಬೇಕರ್ ಎಂಬ ಲಿಂಕನ್ನನ ಮುಖ್ಯ ಸ್ನೇಹಿತನು ಅವನಿದ್ದ ಮಹಡಿಯ ಕೆಳಗಿನ ಕೊಠಡಿಯಲ್ಲಿ ನಿಂತು ಮಾತನಾಡುತ್ತಿದ್ದನು. ವಕ್ತೃವಿನ ತಲೆಯ ಮೇಲ್ಗಡೆ ಛಾವಣಿಯಲ್ಲಿ ದೊಡ್ಡದೊಂದು ರಂಧ್ರವಿದ್ದಿತು. ಅದಕ್ಕೆ ಮುಚ್ಚಳವಿದ್ದಿತು. ಪೂರ್ವದಲ್ಲಿ ಆ ರಂಧ್ರದ ಮೂಲಕವಾಗಿ ಕೆಳಗಿನ ಕೊಠಡಿಗೆ ಗಾಳಿಯೂ ಬೆಳಕೂ ಬರುವಂತೆ ಏರ್ಪಾಡಿದ್ದಿತು. ಮಾತಿನ ಶಬ್ದವನ್ನು ಕೇಳಿದ ಅಬ್ರಹಾಮನು ಮುಚ್ಚಳವನ್ನು ಓರೆಮಾಡಿ ತನ್ನ ಸ್ನೇಹಿತನ ಭಾಷಣವನ್ನು ಕೇಳುತ್ತ ಕುಳಿತನು. ಸ್ನೇಹಿತನಿಗೆ ಕ್ರಮವಾಗಿ ಕೋಪವೇರಿ ಆತನು ಹಿಂದಿನ ಪ್ರೆಸಿಡೆಂಟನಲ್ಲಿ ಪಕ್ಷಪಾತವುಳ್ಳವರನ್ನು ಬಾಯಿಗೆ ಬಂದ ಹಾಗೆ ಬೈದುಬಿಟ್ಟನು. ಆ ಪಕ್ಷದವರಾಗಿ ಅಲ್ಲಿದ್ದ ಕೆಲವರು ನಿಂದನೆಯನ್ನು ಕೇಳಿ "ಆ ಭ್ರಷ್ಟನನ್ನು ಹೊರಕ್ಕೆ ಎಳೆದುಹಾಕಿ!" ಎಂದು ಅರಚುತ್ತ ಮುಂದಕ್ಕೆ ನುಗ್ಗಿಬಂದರು. ಅಷ್ಟು ಹೊತ್ತಿಗೆ ಸರಿಯಾಗಿ ರಂಧ್ರದ ಮುಚ್ಚಳವು ಪೂರ್ತಿಯಾಗಿ ತೆರೆದು ಕ್ರಮವಾಗಿ ಎರಡು ಕಾಲುಗಳೂ ದೇಹವೂ ತಲೆಯೂ ಇಳಿದು ಅಬ್ರಹಾಮನು ತನ್ನ ಸ್ನೇಹಿತನ ಪಕ್ಕದಲ್ಲಿ ನಿಂತನು. ಪ್ರತಿಪಕ್ಷದವರು ವಿಸ್ಮಿತರಾದರು. ಅಬ್ರಹಾಮನು ತನ್ನ ಕೈಯನ್ನು ಬೀಸಿ ಗದ್ದಲವನ್ನು ಶಮನಮಾಡಿ ಶ್ರೋತೃಗಳನ್ನು ಕುರಿತು ಹೀಗೆಂದನು: "ಸಂಭಾವಿತರೆ, ನಮ್ಮ ಈ ಒರಟು ನಡತೆಯಿಂದ ದೇಶಕ್ಕೂ ನಮಗೂ ಅಪಮಾನವನ್ನು ತಂದುಕೊಳ್ಳುವುದು ಯುಕ್ತವಲ್ಲ. ನಮ್ಮ ರಾಜ್ಯದಲ್ಲಿ ಜನಗಳಿಗೆ ತಮಗೆ ತೋರಿದ ಹಾಗೆ ಮಾತನಾಡಲು ಸ್ವಾತಂತ್ರ್ಯವುಂಟು. ಸರ್ಕಾರದ ನಿರ್ಬಂಧಗಳಿಲ್ಲ. ಬೇಕರನಿಗೆ ಮಾತನಾಡಲು ಸಂಪೂರ್ಣವಾದ ಸ್ವಾತಂತ್ರ್ಯವಿರುವುದು. ನಿಮಗೂ ಕೂಡ, ಆತನಿಗೆ ಆಟಂಕವನ್ನುಂಟುಮಾಡದಿರುವುದು ನ್ಯಾಯವಾದುದು. ನಾನು ಇಲ್ಲಿ ಆತನನ್ನು ರಕ್ಷಿಸಲು ಸಿದ್ಧನಾಗಿದ್ದೇನೆ. ನನ್ನ ಮಾತನ್ನು ನಿರಾಕರಿಸುವವನು ಆತನನ್ನು ಈ ಸ್ಥಳದಿಂದ ಕೆಳಕ್ಕೆ ಎಳೆದುಹಾಕುವುದಾದರೆ ಹಾಗೂ ಮಾಡಿ ನೋಡಲಿ." ಲಿಂಕನ್ನನ ಧೈರ್ಯವೂ ಬಾಹುಬಲವೂ ಅವನ ನ್ಯಾಯಾನುಪ್ರವೃತ್ತಿಯಂತೆಯೇ ಪ್ರಸಿದ್ಧವಾಗಿದ್ದುದರಿಂದ ಬೇಕರನಿಗೆ ನೈಗಾವಲಾಗಿ, ಮುಂದೆ ಅವನ ಮಾತಿಗೆ ಅಡಚಣೆಯುಂಟಾಗದಂತೆ ಮಾಡಿದುವು.

———

# ೭ನೆಯ ಅಧ್ಯಾಯ

## ವಿವಾಹ

ನ್ಯೂಸೇಲಂನಲ್ಲಿದ್ದಾಗ ಅಬ್ರಹಾಮನಿಗೆ ಅದೇ ಗ್ರಾಮದಲ್ಲಿರುತ್ತಿದ್ದ ಮಿಸ್ ಆನ್ ರಟ್ಲೆಡ್ಜ್ (Miss Anne Rutledge) ಎಂಬಾಕೆಯಲ್ಲಿ ಸ್ನೇಹವೂ ಬರುತ ಬರುತ ಅನುರಾಗವೂ ಉಂಟಾದುವು. ಆದರೆ ಮದುವೆಯಾಗಲು ನಿರ್ಣಯ ಮಾಡಿರಲಿಲ್ಲ. ಲಿಂಕನ್ನನು ಮದುವೆಮಾಡಿಕೊಂಡು ಸುಖದಿಂದಿರುವಂತಹ ಸ್ಥಿತಿಯಲ್ಲಿರಲಿಲ್ಲ. "ಸಾಲದಲ್ಲಿಯೂ ಕಷ್ಟದಾರಿದ್ರ್ಯಗಳಲ್ಲಿಯೂ ಸಿಕ್ಕಿ ನನಗೆ ಮುಂದಿನ ದಾರಿಯೇ ತೋರದಾಗಿದೆ. ಹೀಗಿರುವಾಗ ಮದುವೆಯೆಲ್ಲಿ, ನಾನೆಲ್ಲಿ!" ಎನ್ನುತ್ತಿದ್ದನು. ತನ್ನೊಡನೆ ಮತ್ತೊಂದು ಪ್ರಾಣಿಯನ್ನು ಜೀವನಕ್ಕಾಗಿ ಕಷ್ಟ ಪಡಿಸಲು ಅವನಿಗೆ ಮನಸ್ಸು ಒಡಂಬಡಲಿಲ್ಲ. ಆದರೆ ಅಷ್ಟರೊಳಗೆ ಆಕೆಯು ಸತ್ತುಹೋದಳು. ಈ ದುಃಖಾವಹವಾದ ಸಂಘಟನೆಯಿಂದ ಅವನಿಗೆ ಬುದ್ಧಿಯೇ ತಲೆಕೆಳಗಾಗುವಷ್ಟುಮಟ್ಟಿಗಾಯಿತು. ಅಬ್ರಹಾಮನು ಅದರಿಂದೀಚೆಗೆ ಕೊನೆಯ ವರೆಗೂ ಮೊದಲಿದ್ದಷ್ಟು ಪ್ರಸನ್ನತೆಯಿಂದಿರಲಿಲ್ಲವೆಂದು ಕೆಲವರು ಹೇಳುತ್ತಾರೆ. ಮನುಷ್ಯನು ಎಷ್ಟೊಂದು ಆಶಾಭರಿತನಾಗಿ ಕಾರ್ಯದಲ್ಲಿ ಪ್ರವರ್ತಿಸಿದರೂ ಕೊನೆ ಯಲ್ಲಿ ದೈವೇಚ್ಛೆಯಿದ್ದಂತೆಯೇ ಆಗುತ್ತದೆ. ಅವನು ಓದಿದ್ದ

"Oh, why should the spirit of mortal be proud?"

ಎಂಬ ಪಂಕ್ತಿಪ್ರಮುಖವಾದ ಪದ್ಯಗಳು ಮೃತ್ಯುವನ್ನೂ, ಕ್ಲೇಶವನ್ನೂ, ಆಶಾ ಭಂಗವನ್ನೂ ಜ್ಞಾಪಿಸಿದುವು. ಕವಿಯ ವಾಕ್ಯವನ್ನು ಸಾರ್ಥಕಮಾಡುವುದಕ್ಕೋ ಎಂಬಂತೆ ಸಂಘಟನೆಯೊದಗಿ ಪದ್ಯಗಳು ಅವನ ಹೃದಯದಲ್ಲಿ ಅಳಿಸಲಾಗದ ರೀತಿ ಯಲ್ಲಿ ನಿಂತುವು.

ಅಬ್ರಹಾಮನು ಕೆಲವರಂತೆ "ನಾರೀಸಖ" ನಲ್ಲ. ಸಚ್ಛೀಲವತಿಯರಾದ ಸ್ತ್ರೀಯರ ಸಹವಾಸ ಸಂಭಾಷಣೆಗಳು ಅವನಿಗೆ ಸಂತೋಷವನ್ನುಂಟುಮಾಡತಕ್ಕವು ಗಳಾದರೂ ಅವನು ಹೆಂಗಸರ ನಡುವೆ ಹೆಚ್ಚಾಗಿ ಬೆರೆದುಕೊಂಡು ಹೋಗುತ್ತಿರ ಲಿಲ್ಲ. ಅವನಿಗೆ ಹೆಂಗಸರನ್ನು ಕಂಡರೆ ತುಂಬಾ ಹೆದರಿಕೆಯೆಂದು ಗ್ರಂಥಕರ್ತ ನೊಬ್ಬನು ಹೇಳಿದ್ದಾನೆ. ಕರ್ತವ್ಯಜ್ಞಾನವು ಅವನನ್ನು ಹಿಂದುಹಿಂದಕ್ಕೆ ತರುತ್ತ ದೂರದಲ್ಲಿಯೇ ಇರಿಸಿರುತ್ತಿದ್ದಿತು. ಅಬ್ರಹಾಮನು ಹೊಟ್ಟೆಯಪಾಡಿಗಾಗಿ ಹಗ ಲೆಲ್ಲಾ ಹಸಿವು ದಣಿವೆನ್ನದೆ ದುಡಿಯಬೇಕಾಗಿದ್ದಿತು. ರಾತ್ರಿಯ ಹೊತ್ತು ಹೆಚ್ಚು ವಿಶ್ರಾಂತಿಯಿರಲಿಲ್ಲ. ಅವನ ವ್ಯಾಸಂಗವೂ ಅನುಚಿಂತನವೂ ರಾತ್ರಿಯ ವೇಳೆ ಬಹಳ ಹೊತ್ತಿನವರೆಗೆ ನಡೆಯುತ್ತಿದ್ದುವು. ಸುಖಸಂತೋಷಗಳನ್ನು ಕಾಣದೆಯೂ ಕಾಣಬೇಕೆಂದು ಬಯಸದೆಯೂ ಒಂದೇಸಮವಾಗಿ ಕೆಲಸಮಾಡುತ್ತಿದ್ದನು.

1840ರಲ್ಲಿ ಮಿಸ್ ಮೇರಿ ಟಾಡ್ (Miss Mary Todd) ಎಂಬಾಕೆಯು ಸ್ಪ್ರಿಂಗ್ ಫೀಲ್ಡಿನಲ್ಲಿ ತನ್ನಕ್ಕನ ಮನೆಗೆ ಬಂದಳು. ಆಕೆಯು ಸ್ವಲ್ಪಕಾಲ ಅಲ್ಲಿ ನಿಂತಳು. ಆ ಕಾಲದಲ್ಲಿ ಪ್ರಸ್ತಾಪತ್ವೇನ ಲಿಂಕನ್ನನ ಹೆಸರೂ ಖ್ಯಾತಿಯೂ ಕಿವಿಗೆ ಬಿದ್ದು ಆತನ ಪರಿಚಯವನ್ನು ಸಂಪಾದಿಸಲು ಉತ್ಸುಕಳಾದಳು. ಅವರವರಿಗೆ ಸ್ನೇಹವುಂಟಾಗಿ ಕಾಲಕ್ರಮದಲ್ಲಿ ಅವರು ಪರಸ್ಪರಾನುರಕ್ತರೂ ಆದರು. ಮದುವೆಮಾಡಿಕೊಳ್ಳುವುದಾಗಿ ಇಬ್ಬರೂ ವಾಗ್ದಾನಮಾಡಿಕೊಂಡರು. ಆದರೆ ಸ್ವಲ್ಪದಿನಗಳ ಮೇಲೆ ಮನಸ್ತಾಪವುಂಟಾಗಿ ಲಿಂಕನ್ನನು, ಆಕೆಯು ತನ್ನ ವಾಗ್ದಾನದಂತೆ ನಡೆಯಬೇಕಾದ ಅವಶ್ಯಕತೆಯಿಲ್ಲವೆಂದೂ ತಾನು ಆ ನಿರ್ಬಂಧವನ್ನು ತಪ್ಪಿಸಿ ಆಕೆಗೆ ಸ್ವಾತಂತ್ರ್ಯವನ್ನು ಕೊಟ್ಟಿರುವುದಾಗಿಯೂ ಹೇಳಿದನು. ಮಿಸ್ ಟಾಡಳು ಅದನ್ನು ಅಂಗೀಕರಿಸಲಿಲ್ಲ. ತಾನು ಆತನಿಗೆ ಮಾಡಿದ ವಾಗ್ದಾನವಿನ್ನೂ ವ್ಯರ್ಥವಾಗಿಲ್ಲವೆಂದು ಉತ್ತರಕೊಟ್ಟಳು. ಲಿಂಕನ್ನನು ಚಿಂತಿಸಿ ನೋಡಿದನು. ಈ ವ್ಯವಹಾರದಿಂದ ಆಕೆಗೆ ತನ್ನಲ್ಲಿ ದೃಢವಾದ ಪ್ರೀತಿಯಿರುವುದಾಗಿಯೂ ತಾನು ಮಾತ್ರ ಆಕೆಯನ್ನು ಪ್ರೀತಿಸದೆ ಉಪೇಕ್ಷಿಸಿ ಅನ್ಯಾಯಮಾಡುತ್ತಿರುವುದಾಗಿಯೂ ಹೊಳೆಯಿತು. ಅಪಾರವಾದ ಖೇದವುಂಟಾಯಿತು. ಆ ಪಶ್ಚಾತ್ತಾಪದಿಂದ ಅವನಿಗೆ ಬುದ್ಧಿಯು ವಿಕಲ್ಪವಾಗಿ ಹುಚ್ಚುಹಿಡಿಯುವಂತೆ ತೋರಿತು. ಅವನು ವಾಸವಾಗಿದ್ದ ಮನೆಯ ಯಜಮಾನನು ಈ ದುರ್ದಶೆಯನ್ನು ಕಂಡು, ಸ್ಪ್ರಿಂಗ್ ಫೀಲ್ಡಿನಲ್ಲಿ ತನ್ನ ಕೆಲಸವು ಮುಗಿದುದರಿಂದ ಅವನನ್ನು ಕರೆದುಕೊಂಡು ಕೆಂಟಕಿಗೆ ಹೋದನು. ಅಲ್ಲಿ ಲಿಂಕನ್ನನು ಮೂರು ತಿಂಗಳವರೆಗೆ ವಾಸಮಾಡಿ ದೇಹದಲ್ಲಿ ಆರೋಗ್ಯವನ್ನೂ ಶಕ್ತಿಯನ್ನೂ ಕೂಡಿಸಿಕೊಂಡು ಸ್ಪ್ರಿಂಗ್ ಫೀಲ್ಡಿಗೆ ಹಿಂದಿರುಗಿ ಬಂದನು.

ಆ ಪಟ್ಟಣದಲ್ಲಿ ಐರ್ಲೆಂಡ್ ದೇಶದವನಾದ ಜೇಂಸ್ ಷೀಲ್ಡ್ಸ್ ಎಂಬ ತರುಣನೊಬ್ಬನಿದ್ದನು. ಆತನು ಸರ್ಕಾರದಲ್ಲಿ ಗಣ್ಯವಾದೊಂದು ನೌಕರಿಯಲ್ಲಿರುತ್ತ ಯಾವ ವಿಷಯಕ್ಕಾದರೂ ತಾನು ಸರ್ವಜ್ಞನೆಂದು ಹೇಳಿಕೊಂಡು ಬರುತ್ತಿದ್ದನು. ಆಡಳಿತವಿಚಾರದಲ್ಲಿ ಅವನ ಮತವು ಲಿಂಕನ್ನನ ಮತಕ್ಕೆ ಪ್ರತಿಕೂಲವಾದುದು. ಆತನ ಅಹಂಕಾರವು ಜನರ ಸಹನೆಯನ್ನು ಮೀರಿಸುತ್ತಿದ್ದಿತು. ಸ್ಪ್ರಿಂಗ್ ಫೀಲ್ಡಿಗೆ ಬಂದಕೂಡಲೇ ಲಿಂಕನ್ನನು ಪ್ರಚಾರದಲ್ಲಿದ್ದ ಪತ್ರಿಕೆಯೊಂದರಲ್ಲಿ, ಒಬ್ಬ ವಿಧವೆಯು ಡೆಮೊಕ್ರೆಟರ ಕಾಲದಲ್ಲಿ ಅಧಿಕಾರವು ಹೊಲಸಾಗಿರುವುದೆಂದು ಗೋಳಾಡುವಂತೆ ಪ್ರಬಂಧವನ್ನು ಬರೆದು ಪ್ರಕಟಮಾಡಿದನು. ಅದರೊಳಗೆ ಪ್ರಮುಖಾಧಿಕಾರಿಗಳಲ್ಲೊಬ್ಬನಾದ ಷೀಲ್ಡ್ಸನ ಹೆಸರೂ ಅಲ್ಲಲ್ಲಿ ಬಂದಿದ್ದಿತು. ಕೋಪಿಷ್ಠನಾದ ಅವನು ಪ್ರಬಂಧವನ್ನು ಓದಿ ಕಿಡಿಕಿಡಿಯಾದನು. ಪತ್ರಿಕೆಯ ಮಾರನೆಯ ಸಂಚಿಕೆಯಲ್ಲಿ ಮತ್ತೊಂದು ಪ್ರಬಂಧವು ಪ್ರಕಟವಾಗಿ ಈ ಎರಡು ಪ್ರಬಂಧಗಳ ವಾರ್ತೆಯು ಊರಲ್ಲೆಲ್ಲಾ ಹರಡಿತು. ತನ್ನ ಮಾನವನ್ನೂ ಗೌರವವನ್ನೂ ಉಳಿಸಿಕೊಳ್ಳುವುದಕ್ಕೋಸ್ಕರ ಷೀಲ್ಡ್ಸನು ಯುದ್ಧಮಾಡಲು ಸಿದ್ಧವಾಗಿದ್ದನು.

ಆ ಕಾಲದಲ್ಲಿ ಆ ವಿಧವಾದ ಯುದ್ಧವು ಸಾಮಾನ್ಯವಾಗಿದ್ದಿತು. ಗೌರವವನ್ನುಳಿಸಿಕೊಳ್ಳಲು ಅದಕ್ಕಿಂತ ಉತ್ತಮವಾದ ಮಾರ್ಗವು ಜನಗಳ ಮನಸ್ಸಿಗೆ

ಮತ್ತಾವುದೂ ಹೊಳೆದಿರಲಿಲ್ಲ. ಲಿಂಕನ್ನನು ದ್ವಂದ್ವಯುದ್ಧಕ್ಕೆ ಸಮ್ಮತಿಸಿದನು. ಸರ್ಕಾರದ ಕಾನೂನಿನ ಪ್ರಕಾರ ಆ ವಾಡಿಕೆಯು ಬಾಹ್ಯವಾಗಿದ್ದರೂ ಆಚಾರ ದಲ್ಲಿದ್ದಿತು.

ಮಲ್ಲಯುದ್ಧದ ವೃತ್ತಾಂತವು ಕರ್ಣಾಕರ್ಣಿಕೆಯಾಗಿ ಎಲ್ಲಾ ಕಡೆಗೂ ಹರಡಿತು. ನಿಯಮದ ಪ್ರಕಾರ ಲಿಂಕನ್ನನು ಆಯುಧವಿಂತಹದೆಂದು ಗೊತ್ತು ಮಾಡಿದನು. ಯುದ್ಧವನ್ನು ಮಾಡುವ ದಿನವೂ ಗೊತ್ತಾಯಿತು. ಆದರೆ ಕೊನೆ ಯಲ್ಲಿ ಬೆಟ್ಟವು ಇಲಿಯ ನುರಿಯನ್ನು ಈದಂತೆಯೇ ಆಯಿತು. ಪ್ರಬಂಧಗಳು ಡೆಮೊ ಕ್ರೆಟ್ ಪಕ್ಷದವರ ಮೇಲೆ ಜನಗಳಿಗೆ ಕೋಪವನ್ನುಂಟುಮಾಡಿ ಅಧಿಕಾರವನ್ನು ತಪ್ಪಿಸಲೆಳಸಿದ ಪ್ರಯತ್ನವೇ ವಿನಾ ಸರ್ವಥಾ ಷೀಲ್ಡ್ಸ್ ಸಾಹೇಬನ ಗುಣವಿಮರ್ಶೆ ಯ ಉದ್ದೇಶದಿಂದ ಅಲ್ಲವೆಂಬುದನ್ನು ಕೇಳಿ ಷೀಲ್ಡ್ಸನು ಸಮಾಧಾನಹೊಂದಿ ದನು. ಯುದ್ಧವು ಅಬ್ರಹಾಮನಿಗೆ ಸ್ವಲ್ಪವೂ ಸಮ್ಮತವಾಗಿರಲಿಲ್ಲ. ಆದರೂ ತನ್ನ ಮೋರೆಯನ್ನುಳಿಸಿಕೊಳ್ಳುವುದಕ್ಕೋಸ್ಕರ ಒಪ್ಪಿದ್ದನು. ತನ್ನ ''ಸಮಜಾ ಯಿಷಿ'' ಯಿಂದ ಎದುರಾಳಿಯು ತೃಪ್ತಿಹೊಂದಿ ಯುದ್ಧವು ನಿಲ್ಲಲಾಗಿ ಅವನಿಗೆ ಬಲು ಸಂತೋಷವಾಯಿತು. ಆದರೆ ಉಭಯಪಕ್ಷದ ಇತರರಿಗೆ ವಾಕ್ಕಲಹ ವುಂಟಾಗಿ ಕೆಲವು ಕಾಲದವರೆಗೆ ಗದ್ದಲವು ಅಡಗಲಿಲ್ಲ.

ಲಿಂಕನ್ನನು ಪ್ರೆಸಿಡೆಂಟನಾಗಿದ್ದ ಕಾಲದಲ್ಲಿ ಸೈನ್ಯದ ಹುದ್ದೇದಾರನೊಬ್ಬನು ಮತ್ತೊಬ್ಬನೊಡನೆ ಜಗಳವಾಡಿದನು. ಇಬ್ಬರೂ ಪ್ರೆಸಿಡೆಂಟನ ಹತ್ತಿರಕ್ಕೆ ಬಂದರು. ಆಗ ಪ್ರಾಯಶಃ ತನ್ನ ಹಿಂದಿನ ಅನುಭವವನ್ನು ಜ್ಞಾಪಿಸಿಕೊಂಡು ಅವನು ಹೀಗೆ ಬುದ್ಧಿಹೇಳಿದನು: ''ತಂದೆಯಾದವನು ಮಗನಿಗೆ, 'ಇತರರೊಡನೆ ಜಗಳವಾಡದಿರು ; ಆದರೆ ಜಗಳವುಂಟಾದಲ್ಲಿ ಪ್ರತಿಕಕ್ಷಿಯು ನಿನ್ನ ವಿಷಯದಲ್ಲಿ ನಯಭಯಗಳಿಂದ ನಡೆ ಯುವ ಹಾಗೆ ಮಾಡುವತನಕ ಬಿಡಬೇಡ' ಎಂದು ಬುದ್ಧಿವಾದ ಹೇಳುವುದು ಯುಕ್ತವಾದುದೇ ; ಆದರೆ ಉತ್ಕೃಷ್ಟವಾದುದಲ್ಲ. ಎಂದಿಗೂ ಕಲಹವು ಬೇಡ. ತನ್ನ ಅಭ್ಯುದಯದಲ್ಲಿ ದೃಷ್ಟಿಯಿರುವ ಮನುಷ್ಯನಿಗೆ ಇಂತಹ ಅಲ್ಪವಿಷಯಗಳಲ್ಲಿ ದೃಷ್ಟಿಯಿರದು. ಅವುಗಳಲ್ಲೆಲ್ಲಾ ಮನಸ್ಸಿಟ್ಟಲ್ಲಿ ಗುಣವನ್ನು ಕೆಡಿಸಿಕೊಳ್ಳುವುದು ಎಂದೆಂದಿಗೂ ನಿಶ್ಚಯವಾದುದು. ಕೋಪ ಮೊದಲಾದವುಗಳಿಗೆ ಪರವಶನಾಗು ವುದೇ ಮುಂತಾದ ದುರ್ಮಾರ್ಗಪ್ರವರ್ತನೆಗಳಿಗಂತೂ ಆತನಿಗೆ ಸಮಯವೇ ಸಾಲದು. ನಿನ್ನದೇ ಮುಖ್ಯ ವಿಷಯವೆಂದೂ ನೀನು ಮಾಡುತ್ತಿರುವುದೇ ನ್ಯಾಯ ವಾದುದೆಂದೂ ನಡೆಯಬೇಡ. ಯಾವ ವಸ್ತುವಿನಲ್ಲಿ ನಿನಗೆ ನಿರಾಕ್ಷೇಪವಾದ ಬಾಧ್ಯತೆ ಯಿರುವುದೋ ಅದನ್ನು ಮಾತ್ರವಲ್ಲದೆ ಯಾವ ವಸ್ತುವು ನಿರಾಕ್ಷೇಪವಾಗಿ ನಿನ್ನ ದಾಗಿರುವುದೋ ಅದನ್ನೂ ಕೂಡ ತ್ಯಜಿಸಬೇಕಾದಲ್ಲಿ ತ್ಯಜಿಸು. ದಾರಿಯಲ್ಲಿ ತಿರು ಗಾಡಲು ನನಗೂ ಸಮವಾದ ಅಧಿಕಾರವುಂಟೆಂದು ವಿಜೃಂಭಿಸಿ ಎದುರಿಗೆ ಬರು ತ್ತಿರುವ ನಾಯನ್ನು ಕೆಣಕಿ ಕಚ್ಚಿಸಿಕೊಳ್ಳುವುದಕ್ಕಿಂತ ಅದಕ್ಕೆ ದಾರಿಯನ್ನು ಬಿಟ್ಟುಕೊಡುವುದು ಲೇಸು. ಇಲ್ಲದಿದ್ದರೆ, ನಾಯನ್ನು ಕೊಂದರೂ ಅದು ಕಚ್ಚಿದ ಗಾಯವು ಮಾಯದು. ಸೇತುವೆಯ ಮೇಲೆ ಎರಡು ಹೋತಗಳು ವ್ಯರ್ಥವಾಗಿ

ಹೋರಿದುದು ನಿನಗೆ ಗೊತ್ತಿಲ್ಲದ ವಿಷಯುವೆ ?''

ಮಲ್ಲಯುದ್ಧದ ಪ್ರಸಂಗವನ್ನು ಲಿಂಕನ್ ಮತ್ತು ಮಿಸ್ ಟಾಡರ ಮದುವೆಯು ಅನುಸರಿಸಿತು. ಮಿಸೆಸ್ ಲಿಂಕನ್ನಳು ಪ್ರಫುಲ್ಲಚಿತ್ತಳು, ಜಾಣತನವುಳ್ಳವಳು. ಮದುವೆಯಾದ ಮೇಲೆ ದಂಪತಿಗಳು '' ಗ್ಲೋಬ್ ಟಾವರ್ನ '' ಎಂಬ ಭೋಜನ ಶಾಲೆಯಲ್ಲಿ ವಾಸಕ್ಕೇರ್ಪಡಿಸಿಕೊಂಡರು. ಅಲ್ಲಿಗೂ ಸಭೆಸೇರುತ್ತಿದ್ದ ಮಂದಿ ರಕ್ಕೂ ಹೆಚ್ಚು ದೂರವಿರಲಿಲ್ಲ. ಮದುವೆಯಾದ ತರುಣದಲ್ಲಿ ಲಿಂಕನ್ನನು ತನ್ನ ಸ್ನೇಹಿತನಿಗೆ ಒಂದು ಕಾಗದವನ್ನು ಬರೆದನು. ಅದರಲ್ಲಿ ಈ ವಿಷಯುವಿದ್ದಿತು : '' ನಾನೂ ಪತ್ನಿಯೂ ಬಹಳ ಸುಖದಿಂದಿದ್ದೇವೆ. ಈ ಭೋಜನಶಾಲೆಯಲ್ಲಿರುವುದರ ವೆಚ್ಚವು ಹೆಚ್ಚಾಗುವುದಿಲ್ಲ. ಊಟಕ್ಕೂ ವಾಸಕ್ಕೂ ಒಟ್ಟು ಒಂದು ವಾರಕ್ಕೆ ನಾಲ್ಕು ಡಾಲರುಗಳಾಗುತ್ತವೆ.'' ಅವನ ಆ ಸಂಸಾರದಲ್ಲಿ ಹೆಂಡತಿಯು ಬಹಳ ಸಹಾಯಮಾಡುತ್ತಿದ್ದಳು. ಲಿಂಕನ್ನನು ಪ್ರಾಯಿಕವಾಗಿ ಗೃಹಕೃತ್ಯದ ಕಡೆಗೆ ಗಮನವನ್ನು ಕೊಡುತ್ತಿರಲಿಲ್ಲ. ಆದರೂ ಆಕೆಯು ಕುಂದುಕೊರತೆಗಳಿಲ್ಲದಂತೆ ಸಂಸಾರವನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದಳು. ಅವರು ಕೊನೆಯವರೆಗೂ ಒಬ್ಬರನ್ನೊಬ್ಬರು ಪ್ರೀತಿಸುತ್ತ ಒಬ್ಬರಿಗೊಬ್ಬರು ನೆರವಾಗಿರುತ್ತ ಭೂಮಿಯಲ್ಲಿ ಸ್ವರ್ಗವನ್ನು ಕಲ್ಪಿಸಿಕೊಂಡು ವಾಸಿಸಿದರು. ಮಿಸೆಸ್ ಲಿಂಕನ್ನಳು ಸ್ವಲ್ಪ ಕೋಪಿಷ್ಠೆ ಯಾದರೂ ಲಿಂಕನ್ನನು ಸಹಿಸಿಕೊಂಡು ಸಮಾಧಾನಮಾಡಿಕೊಂಡಿರುತ್ತಿದ್ದನು.

ಹ್ಯಾರಿಸನ್ನನು 1840 ರಲ್ಲಿ ಪ್ರೆಸಿಡೆಂಟನಾದನು. ಲಿಂಕನ್ನನ ಮನೋರ್ಥವು ಕೈಗೂಡಿತು. ಆತನ ವಿಜಯದಿಂದ ಆ ಪಕ್ಷದವರ ಶ್ರಮವು ಸಾರ್ಥಕವಾಯಿತು. ಉಪನ್ಯಾಸಮಂಡಲವು ಮುಗಿಯಿತು. ದೊಂಬರಾಟಗಳ '' ದೊಂಬಿ '' ಯೆಲ್ಲಾ ಅಡಗಿತು. ಹೇಮಂತಋತುವು ಕಳೆಯಿತು. ಆದರೆ ಲಿಂಕನ್ನನು ತನ್ನ ಕರ್ತವ್ಯ ವನ್ನು ಮರೆಯಲಿಲ್ಲ. ಪ್ರಬಂಧಗಳನ್ನು ಬರೆಯುತ್ತಲೂ ಆಗಾಗ ಉಪನ್ಯಾಸ ಮಾಡು ತ್ತಲೂ ಹೆಚ್ಚು ಹೊತ್ತನ್ನು ಸ್ವಂತ ನ್ಯಾಸಂಗಕ್ಕೆ ವಿನಿಯೋಗಿಸುತ್ತಲೂ ಇದ್ದನು.

ಕಾಂಗ್ರೆಸ್ ಸಭೆಯಲ್ಲಿ ಮೆಂಬರಾಗಲು ಅವನ ಮನಸ್ಸಿನಲ್ಲಿ ಕೆಲವು ಕಾಲ ದಿಂದ ಆಸಕ್ತಿಯು ಬಲವಾಗಿದ್ದಿತು. ಆದರೆ ಅವನ ಮುಖ್ಯ ಸ್ನೇಹಿತರಲ್ಲಿ ಕೆಲವರೂ ಸಭಿಕರಾಗಲು ಅವನಂತೆಯೇ ಆತುರರಾಗಿದ್ದರು. ಲಿಂಕನ್ನನು ಸದ್ಭಾವದಿಂದ ಅವರ ಪ್ರಯತ್ನದಲ್ಲಿ ಸಹಾಯಮಾಡುತ್ತ ತನಗಿಂತಲೂ ಅವರೆಲ್ಲರೂ ಶ್ರೇಷ್ಠರಾದವರೆಂದು ತಿಳಿಯುತ್ತ ಅವರಿಗೆ ಮೊದಲು ಅವಕಾಶವನ್ನು ಕೊಡುತ್ತಿದ್ದನು. ಅವರೊಳಗೊಬ್ಬ ನು ಬಂದು ತನ್ನಪರವಾಗಿ ಚೀಟಿಹಾಕಬೇಕೆಂದು ಕೇಳಿದಾಗ ಲಿಂಕನ್ನನು ನಗುತ್ತ '' ಯಜಮಾನನೊಬ್ಬನು ತನ್ನ ಕಾಸ್ತಾರನು ಪ್ರೀತಿಸುತ್ತಿದ್ದ ಹೆಂಗಸನ್ನು ಅವನ ಸಹಾಯದಿಂದಲೇ ಮದುವೆಯಾದ ಹಾಗೆ ನನಗೇ ಗುಟುಕುನೀರು ಬೀಳುತ್ತಿದೆ'' ಎಂದನು. ಆದರೂ ಆತನ ಬಳಿಕವೇ ತಾನು ಸಾಂಗರ್ಮ ಡಿಸ್ಟ್ರಿಕ್ಟಿಗೆ ಪ್ರತಿನಿಧಿ ಯಾದನು.

# ೧ ನೆಯ ಅಧ್ಯಾಯ

## ಕಾಂಗ್ರೆಸ್‌ನಲ್ಲಿ

ಲಿಂಕನ್ನನು ರಾಜತಂತ್ರದಲ್ಲಿ ಬಹಳ ತಿಳಿವಳಿಕೆಯುಳ್ಳವನೆಂದೂ ಅವನ ನುಡಿಯು ಸುಳ್ಳಾಗುವದಿಲ್ಲವೆಂದೂ ಕೆಲವರು ಹೇಳುತ್ತಿದ್ದರು. ಆದರೂ ಒಂದು ಸಮಯದಲ್ಲಿ ಅವನ ಮಾತು ಸುಳ್ಳಾಯಿತು. ಅವನ ಆರಾಧ್ಯದೇವತೆಯಾದ ಹೆನ್ರಿ ಕ್ಲೆಯು ಪ್ರೆಸಿಡೆಂಟನಾಗಲಿಲ್ಲ. ಮತ್ತೊಬ್ಬನು ಆ ಪದವಿಗೇರಿದನು. ತಮಗೆ ಸೋಲುಂಟಾಗುವುದಿಲ್ಲವೆಂದು ದೃಢವಾಗಿದ್ದ ಆ ಪಕ್ಷದವರ ಆಶಾಭಂಗವು ಇಮ್ಮಡಿ ಯಾಯಿತು. ಕ್ಲೆ ಗಾಗಿ ಅವನ ಅನುಚರರನೇಕರು ದುಡಿದಿದ್ದರು. ಪರಾಜಯವು ಅಚಿಂತಿತವಾದುದರಿಂದ ಲಿಂಕನ್ನನು ತನಗೆ ಬಂಧುವಿಯೋಗವುಂಟಾದಂತೆಯೇ ಭಾವಿಸಿ ದುಃಖಿಸಿದನು.

ಆದರೆ ಸ್ವಲ್ಪಕಾಲದೊಳಗೆ ಅವನು ಕ್ಲೆಯ ಗುಣವನ್ನರಿತು, ತಾನು ದುಃಖಿ ಸಿದುದು ವ್ಯರ್ಥವೆಂದುಕೊಂಡನು. ಒಂದು ತಡವೆ ಇತರರ ಜೊತೆಯಲ್ಲಿ ಅವನು ಕ್ಲೆಯ ದರ್ಶನವನ್ನು ಪಡೆಯಲು ಹೋದನು. ದಾಸ್ಯದ ವಿಚಾರದಲ್ಲಿಯೂ ಇತರ ಅಂಶಗಳಲ್ಲಿಯೂ ಕ್ಲೆಯು ಒಂದು ನಿರ್ಣಯಕ್ಕೆ ಬಂದಿದ್ದನೆಂದೂ ಬಹಳ ವಿಚಕ್ಷಣೆ ಯುಳ್ಳವನೆಂದೂ ಪ್ರಸಿದ್ಧಿಯುಂಟಾಗಿದ್ದಿತು. ಕ್ಲೆಯ ಸ್ವಾಭಿಮಾನವೂ ಮಾತೂ ಲಿಂಕನ್ನನಿಗೆ ಅಸಹ್ಯವನ್ನುಂಟುಮಾಡಿದುವು. ತನ್ನ ಸಾಮರ್ಥ್ಯಕ್ಕಾಗಿ ಇತರರು ತನ್ನಲ್ಲಿ ಗೌರವವನ್ನು ತೋರಿಸುವುದು ಉಚಿತವಲ್ಲದೆ ಬೇರೆಯಲ್ಲವೆಂದು ಅವನು ತಿಳಿದಿದ್ದನು. ವಿಗ್ರಹವು ಲಿಂಕನ್ನನ ಮನಸ್ಸಿನಲ್ಲಿ ಉಚ್ಚಸ್ಥಾನದಿಂದ ಕೆಳಕ್ಕೆ ಜಾರಿ ಬಿದ್ದುಹೋಯಿತು. ಸ್ಪ್ರಿಂಗ್‌ಫೀಲ್ಡಿಗೆ ಹಿಂದಿರುಗಿದಮೇಲೆ ಅವನು ಖಿನ್ನ ನಾಗಿ, '' ತನ್ನಲ್ಲಿದ್ದ ಅಭಿಮಾನಜಲರಾಶಿಯೆಲ್ಲಾ ಕ್ಲೆಯ ಪರಿಚಯವುಂಟಾಗಲಾಗಿ ಬತ್ತಿಹೋಯಿತು'' ಎಂದು ಸ್ನೇಹಿತರೊಡನೆ ಹೇಳಿಕೊಂಡನು. ಆ ''ಮಹಾತ್ಮ''ನ ದೆಸೆಯಿಂದ ಒಂದು ವಿಷಯವನ್ನು ತಿಳಿದಂತಾಯಿತು. ಅದನ್ನು ಮುಂದೆ ಮರೆಯಲಿಲ್ಲ.

1846 ರಲ್ಲಿ ಕಾಂಗ್ರೆಸ್‌ನಲ್ಲಿ ಪ್ರತಿನಿಧಿಯಾಗಲು ಪ್ರಯತ್ನಮಾಡಿದನು. ಆದರೆ ಅವನಿಗೆ ಎದುರಾಳಿಯಾಗಿ ಡೆಮೊಕ್ರೆಟ್ ಪಂಗಡದವರೊಳಗೆ ಒಬ್ಬಾತನಿದ್ದನು. ಯಾವ ವಿಷಯದಲ್ಲಾದರೂ ರಂಜಕನಾಗಿ ಮಾತನಾಡುವ ಶಕ್ತಿಯು ಆತನಿಗಿದ್ದಿತು. ತಿಳಿವಳಿಕೆಯು ಬಹಳವಾಗಿದ್ದಿತು. ಅವನು ಸಫಲಪ್ರಯತ್ನನಾಗುವನೆಂದು ಎಲ್ಲರೂ ನಂಬಿದ್ದರು. ಆದರೂ ಕೊನೆಯಲ್ಲಿ ಲಿಂಕನ್ನನಿಗೇ ಚೀಟಿಗಳು ಹೆಚ್ಚಾಗಿ ಬಂದು ಅವನು ಪ್ರತಿನಿಧಿಯಾದನು.

ಲಿಂಕನ್ನನು ಚುನಾವಣೆಗೆ ಮೊದಲು ಸಂಯುಕ್ತಸಂಸ್ಥಾನಗಳಲ್ಲಿ ಹೊಸ ದಾಗಿ ಬೆರೆದಿದ್ದ ಟೆಕ್ಸಾಸ್ ರಾಜ್ಯದ ವಿಷಯುವನ್ನೂ ತೆರಿಗೆಯೊಂದನ್ನು ಕಡಿಮೆ ಮಾಡುವ ವಿಷಯುವನ್ನೂ ಕುರಿತು ಉಪನ್ಯಾಸಮಾಡಿದನು. ಈ ರಾಜ್ಯವನ್ನು ಸೇರಿಸಿಕೊಳ್ಳಲಾಗಿ ಅಮೆರಿಕಕ್ಕೆ ಮೆಕ್ಸಿಕೊ ರಾಜ್ಯದೊಡನೆ ಯುದ್ಧವೊದಗಿತು.* ಯುದ್ಧದಲ್ಲಿ ಕಷ್ಟನಷ್ಟಗಳು ಸ್ವಲ್ಪವಾಗುತ್ತಿರಲಿಲ್ಲ. ಅವುಗಳಿಗೆ ಡೆಮೊಕ್ರೆಟರೇ ಕಾರಣವಾಗಿದ್ದರು. ಆದಕಾರಣ ಡೆಮೊಕ್ರೆಟರ ಪ್ರಾಬಲ್ಯವನ್ನು ಅಡಗಿಸಿದ ಹೊರತು ದೇಶವು ಒಂದು ನೆಲೆಗೆ ಬಂದು ದಾಸ್ಯವು ತಗ್ಗುವುದಿಲ್ಲವೆಂದು ಲಿಂಕನ್ನನು ತನ್ನ ಉಪನ್ಯಾಸದಲ್ಲಿ ಸೂಚಿಸಿದನು. ಲಿಂಕನ್ನನು, ಟೆಕ್ಸಾಸನ್ನು ಸೇರಿಸಿಕೊಳ್ಳಲು ಮೊಂಡತನ ಮಾಡುತ್ತಿದ್ದ ಸರ್ಕಾರದ ಆಚರಣೆಯನ್ನು ಖಂಡಿಸಿದುದಲ್ಲದೆ, ಯುದ್ಧ ವೊದಗಲುಂಟಾದ ಕಾರಣಗಳನ್ನೆಲ್ಲಾ ಪರಾಮರ್ಶಿಸಿ, ಬೀದಿಯಲ್ಲಿ ಹೋಗುವ ಮಾರಿಯನ್ನು ಮನೆಯೊಳಕ್ಕೆ ಕರೆದಂತಾಗಿದೆಯೆಂದು ವಿವರಿಸಿದನು.

ಆ ಯುದ್ಧವು ನ್ಯಾಯವಾದುದಲ್ಲವೆಂದು ಅವನು ಆಕ್ಷೇಪಿಸಿದರೂ ಯುದ್ಧ ಮಾಡುತ್ತಿದ್ದ ಸೈನಿಕರಿಗೆ ಸಹಾಯವನ್ನೊದಗಿಸದಿರಲಿಲ್ಲ. ಅವರ ಸಾಹಸಕ್ಕಾಗಿ ಬಹುಮಾನವೇ ಮೊದಲಾದವುಗಳನ್ನು ಕೂಡಿಸಿದನು. ಕೆಲವು ಕಾಲದ ಮೇಲೆ ಅವನೂ ಸಭೆಯ ಮೆಂಬರಾದ ಡಗ್ಲಸ್ (Douglas) ನೂ ವಿವಾದವನ್ನು ನಡೆ ಯಿಸುತ್ತಿದ್ದಾಗ ಡಗ್ಲಸ್‌ನು "ಮೆಕ್ಸಿಕೋಯುದ್ಧಕಾಲದಲ್ಲಿ ನೀನು ನಿನ್ನ ರಾಜ್ಯಕ್ಕೆ ಅಹಿತವನ್ನೇ ಅಪೇಕ್ಷಿಸಿದೆ" ಎಂದು ತಪ್ಪನ್ನು ಹೊರಿಸಿದನು. "ನಾನು ವ್ಹಿಗ್ಗರ ಸಂಪ್ರದಾಯದವನು. ಆ ಡೆಮೊಕ್ರೆಟರು ತಮ್ಮ ಪ್ರೆಸಿಡೆಂಟನು ಯುದ್ಧವನ್ನಾರಂಭಿ ಸಿದುದೇ ನ್ಯಾಯವೆಂದು ಉದ್ಘೋಷಿಸಿ ಅವರಂತೆಯೇ ನಾನೂ ಹಾಡಬೇಕೆಂದು ಬೋಧಿಸಿದರು. ನಾನು ಅದನ್ನು ಮಾಡಲಿಲ್ಲ. ಆದರೆ ಯುದ್ಧಕ್ಕಾಗಿ ದ್ರವ್ಯಸಹಾ

---

*ಟೆಕ್ಸಾಸ್ ರಾಜ್ಯವು ಮೆಕ್ಸಿಕೋವಿನಂತೆಯೇ ಸ್ಪೇನಿನ ಅಧೀನದಲ್ಲಿದ್ದಿತು. ಆದರೆ 1822 ರಲ್ಲಿ ಅವೆರಡೂ ಪ್ರತಿಭಟಿಸಿ ಪ್ರತ್ಯೇಕನಾದುವು. ಅದು ಕಾಡಿನಿಂದ ತುಂಬಿದ್ದುದರಿಂದ ಹೆಚ್ಚು ಪ್ರಯೋಜನವುಳ್ಳದ್ದಲ್ಲವೆಂದು ಜನರು ಅದರ ವಿಷಯ ದಲ್ಲಿ ಉದಾಸೀನರಾಗಿದ್ದರು. ಆದರೆ ಕಾಲಕ್ರಮದಲ್ಲಿ ಟೆಕ್ಸಾಸ್‌ನಲ್ಲಿ ಜನವಸತಿಯೂ ನಾಗರಿಕತೆಯೂ ಕೈಗಾರಿಕೆಯೂ ಹೆಚ್ಚಿ ಅಲ್ಲಿಯ ಪ್ರಜೆಗಳು ತಮ್ಮ ರಾಜ್ಯವನ್ನೂ ಸಂಯೋಗದೊಳಗೆ ಸೇರಿಸಿಕೊಳ್ಳಬೇಕೆಂದು ಅಮೆರಿಕದ ಸರ್ಕಾರವನ್ನು ಪ್ರಾರ್ಥಿ ಸಿದರು. ಅದೇಮೇರೆಗೆ ಅದು ಒಂದು "ಸಂಸ್ಥಾನ" ವಾಯಿತು. ಅದರಿಂದ ಇಬ್ಬರು ಸೆನೇಟರುಗಳು ಹೆಚ್ಚಿದಂತಾಯಿತು. ಆದರೆ ಆ ಕಾರಣದ ದೆಸೆಯಿಂದ ದಾಸ್ಯಕ್ಕೆ ಬೆಂಬಲವು ಹೆಚ್ಚದಂತೆ ಮಾಡಬೇಕೆಂದು ಪ್ರಜೆಗಳಲ್ಲಿ ಕೆಲವರು ಯೋಚಿಸು ತ್ತಿರುವುದರೊಳಗೆ ಮೆಕ್ಸಿಕೋವಿಗೂ ಟೆಕ್ಸಾಸ್ ಸಂಸ್ಥಾನಕ್ಕೂ ಜಗಳವು ಹತ್ತಿತು. ಅಮೆರಿಕವು ಅದು ಸಂಯೋಗವನ್ನು ಸೇರಿದ್ದಿತಾದಕಾರಣ ಆ ಯುದ್ಧದಲ್ಲಿ ಧನ ಮತ್ತು ಜನಸಹಾಯವನ್ನು ಮಾಡಿತು. ಆದಗೆ ಈ ಮೂಲಕ ಮೆಕ್ಸಿಕೋವಿಗೂ ಅಮೆರಿಕಕ್ಕೂ ಯುದ್ಧನಾರಂಭಿಸಿತು.

ಯವನ್ನು ಮಾಡುವಾಗಲೂ ಸೈನಿಕರಿಗೆ ಆಹಾರಪದಾರ್ಥಗಳನ್ನು ಒದಗಿಸಿಕೊಡು ವಾಗಲೂ ನಾನು ಡಗ್ಲಸ್‌ನು ಮಾಡಿದಂತೆಯೇ ಸಮ್ಮತಿಯನ್ನಿತ್ತೆನು. ಯುದ್ಧ ವೆಸಗಲು ಸೈನಿಕರು ಹೇಗೆ ಕಾರಣವಾದಾರು ? ಆಗದಿರುವಾಗ ಅವರಿಗೆ ಸಹಾಯ ಮಾಡಲು ಆಕ್ಷೇಪಣೆ ಏನುಂಟು ? '' ಎಂದು ಲಿಂಕನ್ನನು ಉತ್ತರಹೇಳಿದನು. ಯುದ್ಧವು ಅಪ್ರಕೃತವೆನ್ನುವುದಾದರೂ ವ್ಹಿಗ್ಗರು ಪ್ರಜೆಗಳ ಇಷ್ಟವನ್ನು ಅನುಸರಿಸಿ ಯುದ್ಧದಲ್ಲಿ ಸಹಾಯಮಾಡಿದರು. ಪ್ರೆಸಿಡೆಂಟನಿಗೂ ಕೂಡ ತನ್ನಾಚರಣೆಯಿಂದ ತನಗೆ ಉಪಕಾರವಾಗಲಿಲ್ಲ. ತಾನು ಮಾಡುತ್ತಿದ್ದುದು ತಪ್ಪೆಂದು ಸಂಪೂರ್ಣವಾಗಿ ಗೊತ್ತಿದ್ದರೂ ಆತನು ಪ್ರಜೆಗಳಿಗೆ ಅದು ಯುಕ್ತವಾದುದೇ ಎಂದು ತಿಳಿಯ ಹೇಳಲು ಕಷ್ಟಪಡುತ್ತಿದ್ದನು. ಆ ಶ್ರಮವನ್ನು ನೋಡಿ ಲಿಂಕನ್ನನು '' ಆತನಿಗೆ ತಾನು ಎಲ್ಲಿ ದ್ದೇನೆ, ಏನುಮಾಡುತ್ತಿದ್ದೇನೆ, ಎಂಬುದೇ ಅರ್ಥವಾಗುವುದಿಲ್ಲ. ತನ್ನ ಯೋಚನೆ ಯನ್ನು ನಮಗೆ ವಿವರಿಸುವುದಕ್ಕೆ ಹೋಗಿ ತನಗೇ ತಿಳಿಯದ ಹಾಗೆ ಮಾಡಿಕೊಳ್ಳು ತ್ತಾನೆ. ಆತನಲ್ಲಿ ಧೈರ್ಯವಿಲ್ಲ, ಸ್ಥೈರ್ಯವಿಲ್ಲ ; ಕ್ಷಣಕ್ಷಣಕ್ಕೂ ಬದಲಾಯಿಸು ತ್ತಾನೆ. ಹೊಸದಾಗಿಯೂ ಅಮೋಘವಾಗಿಯೂ ತೋರುವ ತರ್ಕಗಳು ನಿಷ್ಫಲವಾ ದರೆ, ಹಳೆಯದಾಗಿ ಮೂಲೆಗೊತ್ತರಿಸಿದ್ದ ತರ್ಕಗಳೇ ಹೊಸವೇಷದಿಂದ ಮುಂದೆ ಬರುವುವು. ಆತನ ಬುದ್ಧಿಗೆ ಕೆಲಸವು ತೀರ ಹೆಚ್ಚಾಗಿ ಎಲ್ಲವೂ ಮಂಕುಬಡಿದು ಹೋಗಿದೆ. ನಿರ್ಧಾರಣಶಕ್ತಿಯೇ ಸಾಲದು. ಆತನ ಬುದ್ಧಿಯು, ಸುಡುವ ಕಾವಲಿಯ ಮೇಲೆ ಬಿದ್ದು ಕ್ಷೇಮದ ತಡಿಯನ್ನು ಸೇರಿಕೊಂಡು ಪಾರಾಗುವುದಕ್ಕೆಂದು ಹಿಂದಕ್ಕೂ ಮುಂದಕ್ಕೂ ಓಡಾಡುತ್ತಿರುವ ಚಿಟ್ಟೆಯ ಹುಳುವಿನಂತೆ ಭ್ರಮೆಗೊಂ ಡಿದೆ,'' ಎಂದು ಹೀಯಾಳಿಸಿದನು.

ಈ ಭಾಷಣವು ಸಭೆಯೊಳಗೆ 1848 ರಲ್ಲಿ ನಡೆಯಿತು. ಅದಕ್ಕೆ ಮುಂಚೆ ವ್ಹಿಗ್ಗರು ಫಿಲಡೆಲ್ಫಿಯದಲ್ಲಿ ಜನರಲ್ ಟೆಯಿಲರ್‌ನನ್ನು ಪ್ರೆಸಿಡೆಂಟನನ್ನಾಗಿ ನೇಮಕ ಮಾಡಿದ್ದರು. ಕೆಲವರು ಕ್ಲೆಯನ್ನು ನೇಮಕಮಾಡಿದ್ದರು. ಕ್ಲೆಯ ಸ್ವಭಾವವನ್ನು ಅರಿತಿದ್ದ ಲಿಂಕನ್ನನು ಟೆಯಿಲರ್‌ನಲ್ಲಿ ಪಕ್ಷಪಾತವುಳ್ಳವನಾದನು. ಆ ಪದವಿಗೆ ಟೆಯಿಲರ್‌ನೇ ಹೆಚ್ಚಿನ ಅರ್ಹತೆಯುಳ್ಳವನೆಂದು ಎಲ್ಲರಿಗೂ ಅಭಿಪ್ರಾಯವಿದ್ದಿತು. ಎಂದಿನಂತೆ ಚುನಾವಣೆಯ ಕಾಲದಲ್ಲಿ ಪ್ರತಿಯೊಂದು ಪಂಗಡದವರೂ ತಮಗೆ ಜಯವುಂಟಾಗಲೆಂದು ನಾನಾಪ್ರಯತ್ನಗಳನ್ನು ಮಾಡಿದರು. ಲಿಂಕನ್ನನು ಸುಮ್ಮನೆ ಕೂರಲಿಲ್ಲ. ತನ್ನ ಕಡೆಯವರಿಗೆ, ಹೀಗೆ ಹಾಗೆ ಮಾಡಬೇಕೆಂದು ಉಪಾಯಗಳನ್ನೂ ಸೂಚನೆಗಳನ್ನೂ ಹೇಳಿಕೊಡುತ್ತಿದ್ದನು. '' ಪ್ರತಿಯೊಬ್ಬನೂ ತನಗೆ ಸಾಧ್ಯವಾಗುವ ವೇಷವನ್ನು ಹಾಕಿಕೊಳ್ಳಲಿ. ಕೆಲವರು ಹಾಡಬಲ್ಲರು; ಕೆಲವರು ಸಂಗತವಾಗಿ ಮಾತ ನಾಡಿ ಮೆಚ್ಚಿಸಬಲ್ಲರು. ಆದರೆ ಉಳಿದವರು ಜೈಜೈ ಎಂದು ಕೂಗುವುದಕ್ಕಾದರೂ ಬಲ್ಲರಷ್ಟೆ !'' ಎಂದು ಒಂದು ಕಾಗದದಲ್ಲಿ ಬರೆದಿದ್ದನು.

ಟೆಯಿಲರ್‌ನು ಪ್ರೆಸಿಡೆಂಟನಾದನು. ಡಿಸೆಂಬರ್ ತಿಂಗಳಲ್ಲಿ ಕಾಂಗ್ರೆಸ್ ಸಭೆಯು ಸೇರಿತು. ಅಷ್ಟುಹೊತ್ತಿಗೆ ಆಡಳಿತದ ಸ್ಥಿತಿಯು ಬಹಳ ಬದಲಾಯಿಸಿ ದ್ದಿತು. ವ್ಹಿಗ್ಗರು ಅಧಿಕಾರವನ್ನು ವಹಿಸಿದರು. ಪ್ರಾರಂಭವಾದುದರಿಂದ ಆಸ್ತಿಯು

ಬಹಳವಾಗಿದ್ದಿತು. ಡೆಮೊಕ್ರೆಟರಲ್ಲಿ ಒಡಕು ಉಂಟಾಗಿ, ಅವರಲ್ಲಿ ಉತ್ತರದ ಸಂಸ್ಥಾನಗಳ ಪ್ರತಿನಿಧಿಗಳು ದಕ್ಷಿಣದವರಿಗೆ ವಿರೋಧಿಗಳಾಗಿದ್ದರು. ಅವರೊಳಗೊಬ್ಬನು ಮೆಕ್ಸಿಕೋ ದೇಶದೊಡನೆ ಬೆಳೆದ ಸಂಧಿಯಿಂದ ದೊರೆತ ಕೆಲಿಫೋರ್ನಿಯ ಮತ್ತೂ ನ್ಯೂಮೆಕ್ಸಿಕೊ ಪ್ರಾಂತಗಳಲ್ಲಿ ದಾಸ್ಯವನ್ನು ಸಂಪೂರ್ಣವಾಗಿ ಅಡಗಿಸಬೇಕೆಂದು ಮಸೂದೆಯನ್ನು ಬರೆದು ಸಭೆಯಲ್ಲಿ ಓದಿದನು. ದಕ್ಷಿಣದವರು ಆ ಮಸೂದೆಗೆ '' ಬಹಿಷ್ಕಾರ '' ಹಾಕಿದರು. ಆದರೂ ಉಳಿದ ಸಭಿಕರು ಅನುಮೋದಿಸಿದರು. ಮಸೂದೆಯು ಪ್ರತಿನಿಧಿಗಳ ಸಭೆಯನ್ನು ದಾಟಿ ಸೆನೇಟನ್ನು ಪ್ರವೇಶಿಸಿತು. ಆದರೆ ಅಲ್ಲಿ ದಾಸ್ಯಕ್ಕೆ ಆಶ್ರಯವನ್ನು ಕೊಡುವವರು ಪ್ರಬಲರಾಗಿದ್ದುದರಿಂದ ಅದು ನಷ್ಟವಾಯಿತು.

ಲಿಂಕನ್ನನು ಅದನ್ನು ಅನುಮೋದಿಸಿದನೆಂದು ಹೇಳಬೇಕಾಗಿಲ್ಲ. ಆದರೂ ಈ ಪ್ರಸಕ್ತಿಯಲ್ಲಿ ಮುಂದಾಳಾಗಿ ಹೋಗಿ ವಾದಗಳನ್ನು ನಡೆಯಿಸಲಿಲ್ಲ. ಸ್ವಲ್ಪ ಕಾಲದ ಮೇಲೆ ಅವನು ಕೊಲಂಬಿಯದಲ್ಲಿ ದಾಸ್ಯವನ್ನು ತಪ್ಪಿಸಬೇಕೆಂದು ಮಸೂದೆಯನ್ನು ತಂದನು. ಸಭೆಯು ಯಾವ ಪಟ್ಟಣದಲ್ಲಿ ಕೂಡುತ್ತಿದ್ದಿತೋ ಆ ಪಟ್ಟಣದಲ್ಲಿಯೇ ಜನರು ಗುಲಾಮರ ವ್ಯಾಪಾರವನ್ನು ಮಾಡುವುದು ತೀರ ಹೀನಕೃತ್ಯವೆಂದೂ ಅಸಮಂಜಸವೆಂದೂ ಅವನಿಗೆ ತೋರಿತು. ಗುಲಾಮರು ಅಪರಾಧಿಗಳಂತೆ ಕೈಗೆ ಸಂಕೋಲೆಗಳನ್ನು ಹಾಕಿಸಿಕೊಂಡು ವಾಷಿಂಗ್ಟನ್ನಿನಲ್ಲಿ ತಂಡತಂಡನಾಗಿ ಹೊರಡುವುದನ್ನು ನೋಡಿ ಲಿಂಕನ್ನನಿಗೆ ಬಹಳ ದುಃಖವಾಯಿತು. ಪ್ರತಿನಿಧಿಗಳ ಅಂತಃಕರಣವನ್ನು ಪರೀಕ್ಷಿಸಲು ಅದು ತಕ್ಕ ಸಮಯವಾಗಿದ್ದಿತು. ಕೊಲಂಬಿಯದಲ್ಲಿ ಹುಟ್ಟಿದ್ದವನು ಅದರಲ್ಲಿ ಗುಲಾಮನಾಗಿರಕೂಡದೆಂದೂ ಕಾನೂನಾದ ಕಾಲ ಮೊದಲಾಗಿ ಆ ಡಿಸ್ಟ್ರಿಕ್ಟಿನಲ್ಲಿ ಹುಟ್ಟಿದ ಮಕ್ಕಳು ಜೀವಿತಕಾಲದಲ್ಲಿ ಆ ಪ್ರಾಂತದ ಯಾವ ಭಾಗದಲ್ಲಿಯೂ ದಾಸ್ಯಕ್ಕೊಳಗಾಗಕೂಡದೆಂದೂ ಅವನು ಮಸೂದೆಯನ್ನು ಓದಿದನು. ಆ ಪ್ರಾಂತದಲ್ಲಿ ಸದ್ಯದಲ್ಲಿದ್ದ ಗುಲಾಮರೂ ಕೂಡ ಕಾಲಕ್ರಮದಲ್ಲಿ ಬಂಧನದಿಂದ ವಿಮುಕ್ತರಾಗಬೇಕೆಂದೂ ಅವರಿಗೋಸ್ಕರವಾಗಿ ಸರ್ಕಾರವು ಯಜಮಾನರಿಗೆ ಪರಿಹಾರದ್ರವ್ಯವನ್ನು ಕೊಡಬೇಕೆಂದೂ ಅದರಲ್ಲಿ ನಮೂದಾಗಿದ್ದಿತು. ಈ ಷರತ್ತಿನಿಂದ ಸರ್ಕಾರವು ಪ್ರಜೆಗಳ ಸ್ವಾತಂತ್ರ್ಯವನ್ನೂ ಇತರ ಹಕ್ಕುಗಳನ್ನೂ ರಕ್ಷಿಸಬೇಕೆಂದು ಅರ್ಥವಾಗುವುದು. ಮಸೂದೆಯಲ್ಲಿ ವಿಶೇಷ ಸಂಗತಿಗಳಿರಲಿಲ್ಲ. ಆದರೂ ಆ ಕಾಲದಲ್ಲಿ ಅದು ಸಾಧಾರಣವಾದುದಲ್ಲವೆಂದೇ ಭಾವಿಸಲ್ಪಟ್ಟಿತು. ಸಭೆಯ ಲ್ಲಿ ವಿರೋಧವು ಹೆಡೆಮೆಟ್ಟಿದ ಹಾವಿನಂತೆ ಬುಸ್ಸೆಂದು ಎದ್ದಿತು. ದಾಸ್ಯದ ನಾಶವನ್ನು ಕೋರುವದಾಗಲೀ ಅದರ ಹೆಸರನ್ನು ಎತ್ತುವದಾಗಲೀ ಯಾವುದಾದರೂ ಮಸೂದೆಯು ತಲೆದೋರುವುದಾದರೆ ಅದನ್ನು ಕೂಡಲೇ '' ಕತ್ತು ಕಿವಿಚಿ '' ಸಭೆಯಿಂದ ಮುಂದಕ್ಕೆ ಹೋಗದಂತೆ ಮಾಡಿಬಿಡಬೇಕೆಂದು ದಾಸ್ಯಕ್ಕೆ ಆಶ್ರಯವನ್ನು ಕೊಡಲಿಷ್ಟವುಳ್ಳ ದಕ್ಷಿಣದ ಪ್ರತಿನಿಧಿಗಳು ಸಂಕಲ್ಪಮಾಡಿಕೊಂಡಿದ್ದರು. ಲಿಂಕನ್ನನ ಮಸೂದೆಯು ಒಂದು ಇತ್ಯರ್ಥಕ್ಕೆ ಬರಲೇ ಇಲ್ಲ. ಮುಂದಿನ ಆವೃತ್ತಿ ಸಭೆಯು ನಡೆಯುವುದರೊಳಗೆ ಅಧಿಕಾರದ

ಅವಧಿಯು ಮುಗಿದುಹೋಗಿ ಅವನು ತನ್ನ ಊರಿಗೆ ಹೊರಟುಹೋದನು. ಮುಂದೆ, ಹನ್ನೆರಡು ವರುಷಗಳ ಮೇಲೆ ವಾಷಿಂಗ್ಟನ್ನಿಗೆ ಹೋಗಿ ಸ್ಥಿರವಾಗಿ ನಿಂತು ದಾಸ್ಯವನ್ನು ಒಂದು ಮೂಲೆಯಿಂದ ಮತ್ತೊಂದರವರೆಗೆ ತೊಡೆದುಬಿಡುವವರೆಗೂ ಅವನಿಗೆ ಅದರಮೇಲೆ ಕೈಮಾಡಲು ಅವಕಾಶವು ಸಿಕ್ಕಲಿಲ್ಲ.

ಲಿಂಕನ್ನನು ಮತ್ತೆ ಮೆಂಬರಾಗಲಿಲ್ಲ. ಅವನಂತೆಯೇ ಸಮರ್ಥರಾದ ಇತರ ವ್ಹಿಗ್ಗರು ಪ್ರಯತ್ನಮಾಡುತ್ತಿದ್ದರು. ಅಲ್ಲದೆ ಪ್ರಜೆಗಳು ಒಂದಾವೃತ್ತಿ ಮೆಂಬರಾದವನನ್ನು ಮತ್ತೆ ಚುನಾಯಿಸುತ್ತಿರಲಿಲ್ಲ. ಅವನಿಗೆ ಬದಲು ಸ್ನೇಹಿತನಾದ ಬೇಕರನು ಮೆಂಬರಾದನು. ಮಾಡುವುದಕ್ಕೆ ಯಾವುದಾದರೊಂದು ಕೆಲಸವನ್ನು ಹಚ್ಚಿಕೊಳ್ಳುವ ಉದ್ದೇಶದಿಂದ ಲಿಂಕನ್ನನು ನೌಕರಿಗೆ ಸೇರಲು ಹವಣಿಸಿದನು. ಡೆಮೊಕ್ರೆಟರೆಲ್ಲರೂ ಅಧಿಕಾರವನ್ನು ಬಿಟ್ಟು ಹೊರಟುಹೋದುದರಿಂದ ವ್ಹಿಗ್ಗರಿಗೆ ಅವಕಾಶವು ಅನೇಕವಾಗಿದ್ದಿತು. ಜನರಲ್ ಲ್ಯಾಂಡ್ ಆಫೀಸಿನ ಕಮಿಷನರ ಕೆಲಸವು ತನಗೆ ದೊರೆಯುವುದೆಂದು ಲಿಂಕನ್ನನು ನಂಬಿದನು. ಅದರಿಂದ ಸರ್ಕಾರಕ್ಕೆ ಸೇರಿದ ಭೂಮಿಯನ್ನು ಮಾರುವುದೂ ಜನಗಳಿಗೆ ಹಂಚುವುದೂ ಅವನ ಅಧಿಕಾರಕ್ಕೆ ಒಳಪಡುತ್ತಿದ್ದಿತು. ಆದರೆ ಆ ಕೆಲಸವು ತಪ್ಪಿಹೋಯಿತು. ಒರಗಾ಼ ಪ್ರಾಂತದ ಗೌರ್ನರ್ ಕೆಲಸವನ್ನು ಲಿಂಕನ್ನನು ಅಂಗೀಕರಿಸಲಿಲ್ಲ. ಇದ್ದ ಸ್ಥಳದಲ್ಲಿಯೇ ಒಂದಲ್ಲದಿದ್ದರೆ ಮತ್ತೊಂದು ಕೆಲಸವು ದೊರೆಯುವಾಗ ಒಂದು ಮೂಲೆಗೆ ಹೋಗಿರುವುದು ಅಗತ್ಯವಾಗಿ ತೋರಲಿಲ್ಲ. ಅಲ್ಲದೆ ಗೌರ್ನರ್ ಕೆಲಸದಲ್ಲಿ ಮನಸ್ಸು ಒಪ್ಪಲಿಲ್ಲ. ಮಿಸೆಸ್ ಲಿಂಕನ್ನಳು ಅದನ್ನು ಸ್ವೀಕರಿಸಕೂಡದೆಂದು ನಿರೋಧಿಸಿದಳು. ತೀರಪ್ರದೇಶದಲ್ಲಿದ್ದು ಆಕೆಗೆ ಬೇಸರ ಬಂದಿದ್ದಿತು. ಆಕೆಯು ಮುಂದೆ ಒಂದು ಸಮಯದಲ್ಲಿ, "ನೀನು ನನ್ನ ಮಾತನ್ನು ಕೇಳಿದುದೇ ಅನುಕೂಲವಾಯಿತು. ಆಗ ಅನುಮಾನಮಾಡಿದ್ದೆ. ಒಂದುವೇಳೆ ನನ್ನ ಮಾತನ್ನು ಅಸಡ್ಡೆ ಮಾಡಿ ನೀನು ಆ ಕೆಲಸಕ್ಕೆ ಒಪ್ಪಿಕೊಂಡಿದ್ದರೆ ನಮ್ಮ ಸ್ಥಿತಿಯೇನಾಗಿರುತ್ತಿದ್ದಿತು!" ಎಂದಳು. ನಿಜ. ಆ ಸಮಯದಲ್ಲಿ ಅವನು ಅರ್ಥ ಇಷ್ಟವುಳ್ಳವನಾಗಿದ್ದನು. ಗೌರ್ನರಾದ ಕೆಲವುಕಾಲದಲ್ಲಿಯೇ ಸೆನೇಟಿನ ಮೆಂಬರಾಗಿ ಬರಬಹುದೆಂಬ ಆಸೆಯು ಬಾಧಿಸುತ್ತಿದ್ದಿತು. ಆದರೆ ಹೆಂಡತಿಯ ಪ್ರತಿಷೇಧವು ಆ ಯೋಚನೆಯನ್ನೆಲ್ಲಾ ದೂರಮಾಡಿಬಿಟ್ಟಿತು.

ಪ್ರತಿನಿಧಿಯಾಗಿದ್ದಾಗ ಲಿಂಕನ್ನನು ಸ್ಪ್ರಿಂಗ್‌ಫೀಲ್ಡಿನಲ್ಲಿಯೇ ವಾಸವಾಗಿರುತ್ತಿದ್ದನು. ಸಮ್ಮೇಳನ ಕಾಲದಲ್ಲಿ ಒಂದೊಂದು ವೇಳೆ ಅವನ ಹೆಂಡತಿಯೂ ಅವನೊಡನೆ ವಾಷಿಂಗ್ಟನ್ನಿಗೆ ಹೋಗಿಬರುತ್ತಿದ್ದಳು. ಕಾಂಗ್ರೆಸ್ಸಿನಲ್ಲಿ ತನ್ನ ಸಭಿಕತನವು ಕೊನೆಗೊಂಡಮೇಲೆ ಲಿಂಕನ್ನನು ಸ್ಪ್ರಿಂಗ್‌ಫೀಲ್ಡಿಗೆ ಬಂದನು. ಲಾಯರ ವೃತ್ತಿಯು ಕ್ಷೀಣಗತಿಯನ್ನು ಹೊಂದಿದ್ದಿತು. ಅವನು ಎಲ್ಲವನ್ನೂ ಮೊದಲಿನಿಂದ ಪ್ರಾರಂಭಮಾಡಬೇಕಾಗಿದ್ದಿತು. ಆದರೆ ಕಾಂಗ್ರೆಸ್‌ನಲ್ಲಿ ಪಡೆದ ಖ್ಯಾತಿಯು ಬೆಂಬಲವಾಯಿತು. ವೃತ್ತಿಯನ್ನು ಮತ್ತೆ ಅನುಸರಿಸುವುದು ಕಷ್ಟವಾಗಲಿಲ್ಲ. ಅವನ ಜಾಣತನವೂ ಅಧ್ಯವಸಾಯವೂ ಸಹಾಯಕ್ಕೆ ಬಂದುವು. ಲಿಂಕನ್ನನು

ಆ ನಗರದಲ್ಲಿ ಒಂದು ಮನೆಯನ್ನೂ ಸ್ವಲ್ಪ ಭೂಮಿಯನ್ನೂ ಕ್ರಯಕ್ಕೆ ತೆಗೆದು ಕೊಂಡು ಒಗತನವನ್ನು ಪ್ರಾರಂಭಮಾಡಿದನು. ಮುಂದೆ ಪ್ರೆಸಿಡೆಂಟನಾಗುವ ವರೆಗೂ ಅಲ್ಲಿಂದ ಹೊರಗೆ ಕಾಲಿಡಲಿಲ್ಲ. ಮನೆಯೊಳಗೆ ಅನ್ಯೋನ್ಯವೂ ಸುವ್ಯವ ಸ್ಥೆಯೂ ನೆಲೆಗೊಂಡಿದ್ದುವು. ತನ್ನ ಮಕ್ಕಳೊಡನೆ ಆಡುತ್ತ ಅವರ ಸಹವಾಸದಲ್ಲಿ ಕಾಲವನ್ನು ಕಳೆಯಲು ಅವನಿಗೆ ಬಹಳ ಇಷ್ಟ. ಮಕ್ಕಳಿಗೂ ಕೂಡ ತಂದೆಯಲ್ಲಿ ಪ್ರಾಣ. ಅವನನ್ನು ನೋಡಲು ಹೋದವರು ಅನೇಕರು ಲಿಂಕನ್ನನೇಕೆ ಹೀಗೆ ಮೂರುಹೊತ್ತೂ ಮಕ್ಕಳ ಬಳಿಯಲ್ಲಿ ಆಟವಾಡುತ್ತ ಕಾಲಹರಣಮಾಡುತ್ತಾನೆಂದು ಕೊಳ್ಳುತ್ತಿದ್ದರು. ಹೀಗೆ ಮಕ್ಕಳ ಸಂತೋಷವೇ ತನ್ನ ಸಂತೋಷವೆಂದು ತಿಳಿದು ಅದಕ್ಕೆ ಕೊರತೆ ಬಾರದಿದ್ದಂತೆ ಮಾಡಲು ತಾನು ಬಾಲ್ಯದಲ್ಲಿ ಮೊದಲಿಂದಲೂ ಕಷ್ಟಪಡುತ್ತ ಸುಖಸಂತೋಷಗಳನ್ನು ಅರಿಯದಿದ್ದುದೇ ಕಾರಣವಿರಬಹುದು.

ಬಾಲ್ಯವೆಲ್ಲವನ್ನೂ ತಂದೆಯ ಜೊತೆಯಲ್ಲಿ ಇಲಿನ್ವಾದಲ್ಲಿ ಕಳೆದು ಪ್ರಬುದ್ಧ ನಾದ ಮೇಲೆ ಲಿಂಕನ್ನನು ತನ್ನ ಜೀವನವನ್ನು ಸಂಪಾದಿಸಲು ಅಲ್ಲಿಂದ ''ಕಾಲು ಕಿತ್ತು'' ಹೊರಟನಷ್ಟೆ. ಮಗನು ಹೋದಮೇಲೆ ತಂದೆಯು ಅನೇಕಾವೃತ್ತಿ ಸ್ಥಳಪಲ್ಲಟಮಾಡಿದನು. ಒಂದು ಸ್ಥಳದಲ್ಲಿ ಹೆಚ್ಚು ದಿನಗಳವರೆಗಿರಲು ಆತ ನಿಂದ ಸಾಧ್ಯವೇ ಅಲ್ಲ. ಕೊನೆಗೆ ಅವನು ಅದೇ ನಾಡಿನ ಮತ್ತೊಂದು ಕೌಂಟಿಗೆ ಹೋಗಿ ಅಲ್ಲಿ ಸ್ಥಿರವಾಗಿ ನಿಂತನು. ಮೃತ್ಯುವು 1851ನೆಯ ವರುಷದಲ್ಲಿ ಆತ ನನ್ನು ಗ್ರಾಸಮಾಡಿತು. ಮಗನು, ಹೊಲಗದ್ದೆಗಳಲ್ಲಿ ಮಾಡುತ್ತಿದ್ದ ಕೆಲಸವನ್ನು ಮರೆತು ಇದ್ದಕಡೆಯಲ್ಲಿ ಮಾತನಾಡಲಾರಂಭಿಸಿ ತನ್ನ ವಾಗ್ವಿಭವದಿಂದಲೂ ರಾಜ್ಯ ಕಾರ್ಯಗಳ ಪ್ರಸ್ತಾಪದಿಂದಲೂ ಕೆಲಸಗಾರರ ಗಮನವನ್ನಾಕರ್ಷಿಸಿ ಕಿರುಕುಳ ವನ್ನುಂಟುಮಾಡಿದರೂ, ಕಾಲಕ್ರಮದಲ್ಲಿ ದೇಶದ ಪ್ರಜೆಗಳಲ್ಲಿ ಅಗ್ರಗಣ್ಯನಾಗಿ ಲಾಯರುಗಳಲ್ಲಿ ಶ್ರೇಷ್ಠನಾದುದನ್ನು ನೋಡಿನೋಡಿ ಆನಂದಹೊಂದುತ್ತ ತಂದೆಯು ಸತ್ತನು. ತನ್ನ ಸಾಲವು ತೀರಿದ ಮೇಲೆ ಸಂಪಾದನೆಯಲ್ಲಿ ಏನಾದರೂ ಸ್ವಲ್ಪ ವುಳಿದರೆ ಅದನ್ನು ಒಡನೆಯೇ ಲಿಂಕನ್ನನು ತುದೆತಾಯಿಗಳಿಗೆ ಕಳುಹಿಸಿ ಒತ್ತಾಸೆ ಮಾಡುತ್ತಿದ್ದನು. ಅವರಿಗೆ ಭೂಮಿಯನ್ನು ತೆಗೆದುಕೊಟ್ಟನು. ಆಗಿಂದಾಗ ಇತರ ವಿಧವಾದ ಸಹಾಯವೂ ಉಂಟಾಗುತ್ತಿದ್ದಿತು. ವೃದ್ಧರಾಗಿ ಅಸಹಾಯರಾದ ತಂದೆತಾಯಿಗಳನ್ನು ಕಡೆಗಾಲದಲ್ಲಿ ಸುಖದಿಂದಿಟ್ಟಿರುವುದು ಅವನ ಭಾಗ್ಯವಾಗಿದ್ದಿತು.

ಇನ್ನುಕೆಲವರಿಗೂ ಕೂಡ ಅವನಿಂದ ಸಹಾಯವೊದಗುತ್ತಿದ್ದಿತು. ಬಾಂಧವ್ಯ ಕ್ಕಿಂತಲೂ ಔದಾರ್ಯವು ಅವರನ್ನು ಅವನ ಒತ್ತಾಸೆಗೆ ಬಾಧ್ಯರನ್ನಾಗಿ ಮಾಡಿ ದ್ದಿತು. ಅವನ ಬಲತಮ್ಮನಾದ ಜಾನ್‌ಸ್ಟನ್ನನು ದುಂದುಗಾರನೂ ಸೋಮಾರಿಯೂ ಆದನು. ತೀರ ದುಡ್ಡಿಲ್ಲದೆ ಮಾನಹೋಗುವಂತಹ ಸಂದರ್ಭದಲ್ಲಿ ಅವನು ಲಿಂಕನ್ನ ನಿಗೆ ಸಮಾಚಾರ ಕೊಡುತ್ತಿದ್ದನು. ಲಿಂಕನ್ನನು ಹತ್ತಿರಿದ್ದ ಹಣವನ್ನು ಕಳುಹಿಸು ವುದೇ ಪ್ರತ್ಯುತ್ತರವಾಗುತ್ತಿದ್ದಿತು. ಹೀಗೆ ಎಷ್ಟೋಸಲ ನಡೆಯಿತು. ಕಾಂಗ್ರೆಸ್ ನಿಂದ ಹಿಂದಿರುಗಿ ಬಂದ ತರುಣದಲ್ಲಿ ಅವನು ಜಾನ್‌ಸ್ಟನ್ನನಿಗೆ ಒಂದು ಕಾಗದದಲ್ಲಿ ಹೀಗೆ ಬರೆದನು:—'' ಹಿಂದೆ ಅನೇಕ ಸಮಯಗಳಲ್ಲಿ ನಾನು ನಿನಗೆ ದ್ರವ್ಯಸಹಾಯ

ವನ್ನು ಮಾಡಿವಾಗೆಲ್ಲಾ ನೀನು 'ಇನ್ನು ಚಿಂತೆಯಿಲ್ಲ, ಜೀವನಪಥವು ಸುಗಮ ವಾಗುವುದು' ಎಂದು ಬರೆದಿರುವೆ. ಆದರೆ ಒಂದುವಾರ ಹೋಗುವುದರೊಳಗೆ ನಿನಗೆ ಮೊದಲಿನ ನಿರ್ಗತಿಕತೆಯೇ ಪ್ರಾಪ್ತವಾಗಿರುವುದು.'' ಆದರೆ ಮೊದಲಿಂದ ಕೊನೆಯುವರೆಗೂ ನಿಷ್ಠುರದಿಂದ ಕಾಣಲು ಅವನಿಂದ ಆಗುತ್ತಿರಲಿಲ್ಲ. ಅವನ ಅಲಸತೆಯಿಂದಲೂ, ಕಷ್ಟಪಡಲು ಇಷ್ಟವಿಲ್ಲದುದರಿಂದಲೂ, ಸಣ್ಣ ಕೆಲಸವೂ ಅಲ್ಪ ಸಂಪಾದನೆಯೂ ಮಾನಕ್ಕೆ ತಡೆಯುವುದಿಲ್ಲವೆಂದು ತನ್ನನ್ನು ತಾನು ಗೌರ ವಿಸಿಕೊಳ್ಳುವುದರಿಂದಲೂ ತೊಂದರೆಯೆಲ್ಲಾ ಬರುವುದೆಂದು ಪ್ರೀತಿಪೂರ್ವಕವಾದ ಮಾತಿನಿಂದ ತೋರಿಸಿ, ಉತ್ತಮಸ್ಥಿತಿಯು ಬರುವುದನ್ನು ಕಾಯುತ್ತ ನಿರುದ್ಯಮ ನಾಗಿರುವುದಕ್ಕಿಂತಲೂ ಇರುವ ಸ್ಥಿತಿಯಿಂದಲೇ ತೃಪ್ತಿಹೊಂದಿ ಹೇಗೋ ಹಾಗೆ ತೇಲಿಕೊಂಡು ಹೋಗುವುದು ಸಾಧುವೆಂದು ಬುದ್ಧಿಹೇಳಿದನು. ಅದೇವರ್ಷ ನೊವೆಂಬರ್‌ನಲ್ಲಿ ಬರೆದ ಕಾಗದದ ಬುದ್ಧಿವಾದವು ಈ ರೀತಿಯಾಗಿತ್ತು. ''ಪ್ರಿಯ ಸಹೋದರ, ನಾನು ಮೊನ್ನೆ ದಿನ ಚಾರ್ಲ್ಸ್‌ಟನ್ನಿಗೆ ಬರಲಾಗಿ, ನೀನು ಊರಲ್ಲಿ ರುವ ಭೂಮಿಯನ್ನು ಮಾರಿಬಿಟ್ಟು ಮಿಸ್ಸೌರಿಗೆ ಹೋಗಲು ತವಕಿಸುತ್ತಿರುವುದಾಗಿ ಕೇಳಿದೆನು. ಆ ವಿಷಯವನ್ನು ಆಗಿನಿಂದ ಯೋಚಿಸಿದೆನು. ನೀನು ಮಾಡ ಬೇಕೆಂದಿರುವುದು ಮೂಢತನವಲ್ಲದೆ ಮತ್ತೇನೂ ಅಲ್ಲ. ಇಲ್ಲಿ ಮಾಡದಿರುವುದೇನು, ನೀನು ಮಿಸ್ಸೌರಿಗೆ ಹೋಗಿ ಕಡಿಯುವುದೇನು ? ಇಲ್ಲಿಗಿಂತ ಆ ಭೂಮಿಯು ಫಲವತ್ತರವಾಗಿದೆಯೇನು ? ಇಲ್ಲಿ ಕೆಲಸಮಾಡಬೇಕಾಗುತ್ತದೆಯೆನ್ನುವುದಾದರೆ, ಕೆಲಸಮಾಡದೆಯೇ ಅಲ್ಲಿ ಧಾನ್ಯವನ್ನೂ ಗೋಧಿಯನ್ನೂ ಬೆಳೆಯನ್ನೂ ಎತ್ತಲಾಪೆ ಯಾ ? ಅಥವಾ ಇಲ್ಲಿಯಹಾಗಲ್ಲದೆ, ಅಲ್ಲಿ ನಿನಗೆ ಇತರರಾರಾದರೂ ಕೆಲಸಮಾಡಿಕೊ ಡುತ್ತಾರೆಯೆ ? ಈ ಭ್ರಮೆಯೆಲ್ಲಾ ಏತಕ್ಕೆ? ನೀನು ಕಷ್ಟಪಡಬಲ್ಲೆಯಾದರೆ ಇರುವ ಸ್ಥಳಕ್ಕಿಂತ ಮತ್ತೊಂದು ಉತ್ತಮವಲ್ಲ. ಕಷ್ಟಪಡಲಾರೆಯಾದರೆ ನಿನಗೆ ಎಲ್ಲಿ ಹೋದರೂ ಉದ್ಧಾರವಿಲ್ಲ. ಸ್ಥಳದಿಂದ ಸ್ಥಳಕ್ಕೆ ಬದಲಾಯಿಸುವುದರಿಂದ ಒಳ್ಳೆ ಯದೇನೂ ಆಗುವುದಿಲ್ಲ. ಈವರ್ಷ ನೀನು ಯಾವ ಬೆಳೆಯನ್ನೂ ಎತ್ತಲಿಲ್ಲ. ಭೂಮಿಯನ್ನು ಮಾರಿಬಿಡಬೇಕೆಂದು ಮಾತ್ರ ಅಪೇಕ್ಷಿಸುತ್ತೀಯೆ. ಬಂದ ಹಣ ವನ್ನು ಚೆಲ್ಲಾಡಿಬಿಟ್ಟರೆ ನಿನ್ನ ಕೈ ಕಡಿಯುವುದು ನಿಂತೀತು. ಮನಸ್ಸಿಗೆ ಹಿತವುಂ ಟಾದೀತು, ಅಲ್ಲವೆ ! ಭೂಮಿಯನ್ನು ಮಾರಿಬಿಡು ; ಆಮೇಲೆ ನನ್ನಾಣೆಗೂ ಹೇಳುತ್ತೇನೆ, ನಿನಗೆ ನಿನ್ನ ಸಮಾಧಿಗಾಗುವಷ್ಟು ಪ್ರದೇಶವೂ ಇರುವುದಿಲ್ಲ. ಜಮೀನಿನ ಹಣದಲ್ಲಿ ಅರ್ಧವು ನೀನು ಇಲ್ಲಿಂದ ಅಲ್ಲಿಗೆ ಹೋಗುವುದರೊಳಗೆ ವೆಚ್ಚ ವಾಗಿ ಹೋಗುತ್ತದೆ. ಉಳಿದ ಅರ್ಧವನ್ನು ಕುಡಿದು ತಿಂದು ದುಂದುಮಾಡಿಬಿಡು ತ್ತೀಯೆ. ಒಂದುಕಾಸಿನ ಅಗಲವುಳ್ಳ ಪ್ರದೇಶವನ್ನೂ ನೀನು ಕೊಳ್ಳುವುದಿಲ್ಲ. ಊರಾಗುವುದೂ ಇಲ್ಲ. ಈ ಆಚರಣೆಗೆ ನಾನು ಖಂಡಿತವಾಗಿಯೂ ಒಪ್ಪುವು ದಿಲ್ಲ. ಭೂಮಿಯನ್ನು ಮಾರಕೂಡದು. ಅದರಿಂದ ನಿನಗೆ ಕ್ಷೇಮವುಂಟು. ನಿನಗಿಂತಲೂ ಹೆಚ್ಚಾಗಿ ಮಾತೆಗೆ ಅದರಿಂದ ಕ್ಷೇಮವುಂಟು. ಪೂರ್ವದಿಕ್ಕಿನಲ್ಲಿ ರುವ ನಲವತ್ತು ಎಕರೆಗಳನ್ನು ಮಾತೆಯು ಜೀವಿಸಿರುವವರೆಗೂ ಇಟ್ಟುಕೊಳ್ಳ

ಬೇಕೆಂಬುದು ನನ್ನ ಅಭಿಮತ. ನೀನು ಅದರಲ್ಲಿ ವ್ಯವಸಾಯ ಮಾಡದಿದ್ದಲ್ಲಿ ಇತರರಿಗೆ ವ್ಯವಸಾಯಕ್ಕೆ ಕೊಡುವೆನು. ಅವರಾದರೂ ಮಾತೆಯನ್ನು ಕೈಬಿಡದೆ ಪೋಷಿಸುವರು. ಆಕೆಯ ಜೀವನವು ಅನಾಯಾಸವಾಗಿ ನಡೆಯುವುದು. ಆಕೆಯ ವಿಚಾರಣೆಯಲ್ಲಿರುವ ಆ ಎರಡು ನಾಲ್ವತ್ತೆಕರೆಗಳ ಭೂಮಿಯನ್ನು ಮಾತೆಯು ಇಷ್ಟಪಟ್ಟಲ್ಲಿ ನಿನಗೆ ಕೊಡಬಹುದು. ಅದಕ್ಕಾಗಿ ನನಗೇನೂ ಧನ್ಯವಾದಗಳು ಬೇಕಿಲ್ಲ. ಆದರೆ ನಾನು ಬರೆದಿರುವುದಕ್ಕೆ ತಪ್ಪು ಅರ್ಥವನ್ನು ಕಲ್ಪಿಸಿಕೊಳ್ಳ ಕೂಡದು. ಹೀಗೆ ಬರೆಯಲು ನನಗೆ ಯಾವ ವಿಧವಾದ ದುರಭಿಪ್ರಾಯವೂ ಇಲ್ಲ. ನಿನಗೆ ನಿಜವನ್ನು ತೋರಿಸುವುದಕ್ಕಾಗಿ ಇಷ್ಟೆಲ್ಲಾ ಬರೆದಿರುವೆನು. ಆ ನಿಜವಾವುದೆಂದರೆ, ನೀನು ಹೊಟ್ಟೆಬಟ್ಟೆಗಳಿಗೆ ಕಷ್ಟಪಡುತ್ತ ದರಿದ್ರನಾಗಿರಲು ವ್ಯರ್ಥವಾಗಿ ಕಾಲವನ್ನು ಕಳೆಯುತ್ತಿರುವುದೇ ಕಾರಣ. ನಿನ್ನ ತರ್ಕಗಳಿಂದಲೂ ಮಿಥ್ಯಾಲಾಪಗಳಿಂದಲೂ ನಿನಗೆ ನೀನೇ ಮೋಸಮಾಡಿಕೊಳ್ಳುವೆ. ದುಡಿದು ಕೆಲಸಮಾಡು ; ನಿನ್ನ ದಾರಿದ್ರ್ಯಕ್ಕೆ ಅದೇ ಮದ್ದು.''

ಇದರಿಂದ ಲಿಂಕನ್ನನಲ್ಲಿ ಆತ್ಮನಿಷ್ಠೆಯೆಷ್ಟಿದ್ದಿತೆಂಬುದು ಗೊತ್ತಾದೀತಲ್ಲವೆ !

---

## ೭ನೆಯ ಅಧ್ಯಾಯ

---

### "ಕಾನ್ಸಾಸ್ ನೆಬ್ರೆಸ್ಕ ಮಸೂದೆ."

1850ನೆಯ ವರ್ಷದಲ್ಲಿ ಅನೇಕರು ದೇಶಸ್ಥಿತಿಯನ್ನು ನೋಡಿ ದಾಸ್ಯವು ಅಮೆರಿಕದಲ್ಲಿ ಬೇರೂರಿ ನಿಂತಿತೆಂದೂ ಅದನ್ನು ಹೊರಡಿಸಲು ಇನ್ನು ಸಾಧ್ಯವಿಲ್ಲವೆಂದೂ ನಿಶ್ಚಯಿಸಿದರು. ಕಾಂಗ್ರೆಸ್ ಸಭೆಯು ಕೆಲವು ಕಾನೂನುಗಳನ್ನು ಆಚರಣೆಗೆ ತಂದು, ದಾಸ್ಯದ ವಿಚಾರವೆಲ್ಲಾ ವ್ಯವಸ್ಥೆಯಾದಂತೆಯೇ ಸರಿಯೆಂದು ಹೇಳಿತು. ಆದರೆ ಅವುಗಳಿಂದ ಸ್ವತಂತ್ರ ರಾಜ್ಯಗಳಿಗಾಗಲೀ ದಾಸ್ಯವನ್ನುಳ್ಳ ಸಂಸ್ಥಾನಗಳಿಗಾಗಲೀ ಅನುಕೂಲವಾಗಲಿಲ್ಲ. ಸ್ವಾತಂತ್ರ್ಯವನ್ನು ಸ್ಥಾಪಿಸಲು ದುಡಿಯುತ್ತಿದ್ದವರು ತಮಗೆ ಧಿಕ್ಕಾರವಾದಂತಾಯಿತೆಂದು ಭಾವಿಸಿದರು. '' ಮನುಷ್ಯನು ತಾನಿನ್ನೂ ಹುಟ್ಟದಿರುವಾಗ ತನ್ನ ದೇಶವು ಹೇಗಿದ್ದಿತೋ ಹುಟ್ಟಿ ಜೀವಿಸಿರುವಾಗಲೂ ಅದೇ ಸ್ಥಿತಿಯಲ್ಲಿರುವುದನ್ನು ನೋಡುತ್ತ ನೋಡುತ್ತ ಇಂಥಾ ಸಮಯದಲ್ಲಿ ಸಾಯುವುದು ಎಷ್ಟು ಕಷ್ಟ ! ರಾಜ್ಯದೊಳಗಿದ್ದೂ ಇಲ್ಲದಹಾಗಾಯಿತು. ಪ್ರಪಂಚದಲ್ಲಿ ಭರವಸೆಯೆಂಬುದು ಅಳಿದು ಹೋಯಿತು. ಅದಕ್ಕೆ ತನ್ನಲ್ಲಿರುವ ಹುಳುಕು ತನಗೇ ತಿಳಿದಿಲ್ಲ. ಏನು ಮಾಡೋಣ ? ಯಾವುದಾದರೂ ಸಾಧ್ಯವೆ ?

ಮಾಡಲು ಸಮರ್ಥರಾದವರು ಯಾರು, ಮಾಡುವುದು ಹೇಗೆ? '' ಎಂದು ಲಿಂಕನ್ನನು ಬಲುವಾಗಿ ಕೊರಗಿದನು.

ಸಂಯುಕ್ತ ಸಂಸ್ಥಾನಗಳಲ್ಲಿ ದಾಸ್ಯವಿಲ್ಲದಿರುವಂಥವುಗಳೂ ದಾಸ್ಯವಿರುವಂಥವುಗಳೂ ಜನಗಳಿಂದ ವಿಂಗಡಿಸಲ್ಪಟ್ಟಿದ್ದುವು. ವಿಸ್ತಾರದಲ್ಲಿ ಮೊದಲನೆಯ ಭಾಗವೇ ಹೆಚ್ಚಾಗಿದ್ದಿತ.. ಮೆಕ್ಸಿಕೊ ಯುದ್ಧದಿಂದ ದೊರೆತ ಕೆಲಿಫೋರ್ನಿಯ ಪ್ರಾಂತದ ಮೇಲೆ ಗೆರೆಯು ಹಾದುಹೋಗುತ್ತಿದ್ದುದರಿಂದ ದಕ್ಷಿಣದವರು ಅದನ್ನು ದಾಸ್ಯವುಳ್ಳದ್ದಾಗಿ ಭಾವಿಸಬೇಕೆಂದೂ ಉತ್ತರದವರು ಸ್ವತಂತ್ರ ಪ್ರಜೆಗಳುಳ್ಳದ್ದಾಗಿ ಭಾವಿಸಬೇಕೆಂದೂ ಚರ್ಚಿಸಿದರು. ಈ ನಡುವೆ ಒಂದು ಸಂಗತಿಯೊದಗಿತು.

ಎರಡು ವರುಷಗಳ ಹಿಂದೆ ಆ ರಾಜ್ಯದಲ್ಲಿ ಚಿನ್ನವು ಹೇರಳವಾಗಿ ಸಿಕ್ಕುವುದೆಂದು ಪತ್ತೆಯಾಗಿ ಎಲ್ಲಾ ಭಾಗಗಳಿಂದಲೂ ಜನರು ಅಲ್ಲಿಗೆ ನುಗ್ಗಿದರು. ಎಲ್ಲಾ ಜಾತಿಯ ಜನರೂ ಅಲ್ಲಿದ್ದರು. ಆಸೆಯೂ ರಾಗದ್ವೇಷಗಳೂ ಹೆಚ್ಚಿ ರಾಜ್ಯವು ಅನಾಯಕವಾಯಿತು. ಆದರೆ ಮಾರನೆಯ ವರ್ಷ ಜನರು ತಮ್ಮೊಳಗೇ ವ್ಯವಸ್ಥೆಮಾಡಿಕೊಂಡು ಶಾಸನಕ್ರಮವೊಂದನ್ನು ಏರ್ಪಡಿಸಿದರು. ಅದರೊಳಗೆ ದಾಸ್ಯವನ್ನು ಖಂಡಿತವಾಗಿ ಸೇರಿಸಕೂಡದೆಂಬ ನಿಯಮವೂ ಇದ್ದಿತು. ಮುಂದೆ ಇನ್ನೆಷ್ಟು ಜನರು ಅಲ್ಲಿ ಹೋಗಿ ವಾಸಮಾಡಿದ್ದರೂ ಆ ನಿಯಮವನ್ನು ತಪ್ಪಿಸಲಾಗುತ್ತಿರಲಿಲ್ಲ.

ಈ ಅಂಶವನ್ನು ಕುರಿತು ದಕ್ಷಿಣವು ಪ್ರತಿಭಟಿಸದಿರಲಿಲ್ಲ. ದಾಸ್ಯವು ಯಾವ ವಿಧದಲ್ಲಿಯೂ ಆಟಂಕವಲ್ಲವೆಂದೂ ಗುಲಾಮನು ಯಜಮಾನನ ಮೇಜ ಕುರ್ಚಿಗಳಿಗಿಂತ ಯಾವ ವಿಧದಲ್ಲಿಯೂ ಹೆಚ್ಚಿನವನಲ್ಲವೆಂದೂ ಅಲ್ಲಿಯ ಜನರು ವಾದಿಸಿದರು.

ಟೆಯಿಲರನು ಪ್ರೆಸಿಡೆಂಟನಾಗಿ ವಾಷಿಂಗ್ಟನ್ನಿಗೆ ಬಂದಾಗ ಉತ್ತರದ ಜನಗಳಲ್ಲಿಯೇ ತಪ್ಪಿದೆಯೆಂದೂ ಅವರೇ ಬಂದ ಮನಸ್ತಾಪಕ್ಕೆ ಕಾರಣರೆಂದೂ ಭಾವಿಸಿದ್ದನು. ಆದರೆ ಕೂಡಲೇ ಆ ಭಾವನೆಯು ವ್ಯತ್ಯಸ್ತವಾಯಿತು. ತಪ್ಪು ದಕ್ಷಿಣದವರದೆಂದು ದೃಢವಾಯಿತು. ಅವನೂ ಗುಲಾಮರನ್ನಿಟ್ಟುಕೊಂಡಿದ್ದ ಯಜಮಾನನು. ಆದರೂ, ಕೆಲಿಫೋರ್ನಿಯದಲ್ಲಿ ದಾಸ್ಯವು ಪ್ರಚಾರಕ್ಕೆ ಬರಬೇಕೆಂದು ದಕ್ಷಿಣವು ಹೇಳುವುದು ಅವನಿಗೆ ನ್ಯಾಯವಾಗಿ ತೋರಲಿಲ್ಲ. ಕೆಲಿಫೋರ್ನಿಯವು ತನಗೆ ತೋರಿದ ಹಾಗೆ ಶಾಸನಕ್ರಮವನ್ನೇರ್ಪಡಿಸಿಕೊಳ್ಳಲೆಂದು ಒಂದು ಸಂದೇಶವನ್ನು ಬರೆದು ಕಳುಹಿಸಿದನು. ಸೆನೇಟಿನ ಮೆಂಬರುಗಳು ಅದನ್ನು ಒಪ್ಪದೆ ಮಧ್ಯಸ್ಥಿಕೆಮಾಡಬೇಕೆಂದರು. ಪ್ರೆಸಿಡೆಂಟನು ಅದನ್ನು ನಿಷೇಧಿಸಿ ತನ್ನ ಮಾತು ಮಾತ್ರವೇ ನಡೆಯುವಂತೆ ಮಾಡಲು ಸಂಕಲ್ಪಿಸಿದನು. ಆದರೆ ಕೊನೆಯವರೆಗೂ ಜೀವಿಸಲಿಲ್ಲ. ಅವನ ಸಾಹಸವು ಫಲಹೊಂದಿದ್ದರೆ ಹತ್ತುವರ್ಷಗಳ ತರುವಾಯ ಭೇದವುಂಟಾಗಲು ಪ್ರಾಯಶಃ ಅವಕಾಶವಿರುತ್ತಿರಲಿಲ್ಲ. ಟೆಯಿಲರನ ಮರಣಾನಂತರ ಶಕ್ತನಲ್ಲದ ವೈಸ್‌ಪ್ರೆಸಿಡೆಂಟನೇ ಆ ಸ್ಥಾನಕ್ಕೆ ಬಂದನು.

ಈ ಸಂದಿಗ್ಧಸಮಯದಲ್ಲಿ ಹೆನ್ರಿ ಕ್ಲೆಯು ಎರಡು ಕಡೆಯವರನ್ನೂ ತೃಪ್ತಿಪಡಿ

ಸುವಂತಹದೊಂದು ಉಪಾಯವನ್ನು ಯೋಚಿಸಿದನು. ಆವನಿಗೆ ಮಧ್ಯಸ್ಥ ಮಾಡಿ, ಜಗಳನಾಡುವ ಜನಗಳನ್ನು ಸಮಾಧಾನಪಡಿಸಲು ಬಲು ಇಷ್ಟ. ಮೂವತ್ತು ವರ್ಷಗಳ ಕೆಳಗೆ ಮಿಸ್ಸೌರಿ ಕಾಂಪ್ರೊಮೈಸ್ ಎಂಬ ಮಧ್ಯಸ್ಥಿಕೆಯನ್ನು ಅವನೇ ರಚಿಸಿದ್ದನು. ಉತ್ತರದವರ ಸಲುವಾಗಿ, ಆ ಸೀಮೆಯು ಸ್ವತಂತ್ರವಾಗಿಯೇ[1] ಸಂಯೋಗವನ್ನು ಸೇರಿಕೊಳ್ಳಬೇಕೆಂತಲೂ, ದಕ್ಷಿಣದವರ ಸಲುವಾಗಿ, ಗುಲಾಮರಾಗಿರುವವರು ಯಜಮಾನರ ಸೊತ್ತಾದ ಕಾರಣ ತಲೆ ತಪ್ಪಿಸಿಕೊಂಡು ಅಲ್ಲಿಗೆ ಓಡುವಪಕ್ಷದಲ್ಲಿ ಅಂಥವರನ್ನು ಹಿಂದಿರುಗಿಸಲು ಕಾಂಗ್ರೆಸ್ ಸಭೆಯು ನಿಬಂಧನೆಯನ್ನು ರಚಿಸಬೇಕೆಂತಲೂ ಸೂಚಿಸಿದನು. ಈ ಹಂಚಿಕೆಯಿಂದ ಸಂಯೋಗವನ್ನುಳಿಸುವುದಾಗಿ ಆತನು ಯೋಚಿಸಿದನು. ಆದರೆ ಮೊದಲನೆಯ ಷರತ್ತಿನಿಂದ ದಕ್ಷಿಣಕ್ಕೂ ಎರಡನೆಯದರಿಂದ ಉತ್ತರಕ್ಕೂ ಅತೃಪ್ತಿಯೂ ಕೋಪವೂ ಉಂಟಾಗುತ್ತಿದ್ದುವು. ಅಲ್ಲದೆ, ಒಂದು ರಾಜ್ಯದಲ್ಲಿ ಸ್ವತಂತ್ರನಾದ ನೀಗ್ರೋವಿದ್ದರೂ ಗುಲಾಮರನ್ನು ಹುಡುಕುವವರು ಅವರನ್ನು ತಲೆತಪ್ಪಿಸಿಕೊಂಡು ಹೋದವರೆಂದು ಹೇಳಿ ಎಳೆದುಕೊಂಡು ಹೋಗಲು ಆಸ್ಪದವುಂಟಾಗುತ್ತಿದ್ದಿತು. ಪುನಃ, ಯಜಮಾನನ ಪದಾರ್ಥವೆನ್ನಿಸಿಕೊಂಡ ಗುಲಾಮನು ಎಂದೆಂದಿಗೂ ಗುಲಾಮನೇ ಎಂದೂ ಅವನಿಗೆ ಸ್ವಾತಂತ್ರ್ಯವಿಲ್ಲವೇ ಇಲ್ಲವೆಂದೂ ಅಂಥವನ ಮಕ್ಕಳು ಮೊಮ್ಮಕ್ಕಳೂ ಕೂಡ ದಾಸರೆಂದು ಭಾವಿಸಲ್ಪಡಬೇಕೆಂದೂ ಅರ್ಥವಾಗುತ್ತಿದ್ದುದರಿಂದ, ದಕ್ಷಿಣದವರಿಗೆ ಆ ಸೂಚನೆಯ ದೆಸೆಯಿಂದ "ಕಪಿಗೆ ಏಣಿಯನ್ನು ಹಾಕಿಕೊಟ್ಟಂತೆ" ಯೇ ಆಗುತ್ತಿದ್ದಿತು.

ಆ ಸೂಚನೆಯು ಕಾನೂನೇ ಆಯಿತು. ದಾಸ್ಯವನ್ನು ನಿಷೇಧಿಸುವವರು "ಇದೇ ಕೊನೆ. ಆ ದುಷ್ಪದ್ಧತಿಯು ಅಡಗಿಹೋಗುವುದು. ಇನ್ನು ಮನಸ್ಸು ನೆಮ್ಮದಿಯಿಂದಿರಬಹುದು," ಎಂದರು. ಆದರೆ ಕೆಲವರಿಗೆ ಅದು ಮೇಲ್ಗಡೆಯಲ್ಲಿ ಮಾತ್ರ ಹಾಗಿರುವುದೆಂದೂ ಹೊಟ್ಟೆಯೊಳಗಿದ್ದ ಜ್ವರವು ಇದ್ದಹಾಗೆಯೇ ಇರುವುದೆಂದೂ ಹೊಳೆಯಿತು. ಸ್ಥಿತಿಯು ಒಂದು ಉಬ್ಬಿಗೆ ಬಂದು ಆಮೇಲೆ ಹೇಗೆಬೇಕಾದರೂ ವ್ಯವಸ್ಥೆಯಾಗಬಹುದು.

ಅವರ ಶಂಕೆಯು ಯಥಾರ್ಥವಾಗುವಂತೆಯೇ ತೋರಿತು. ನಿಬಂಧನೆಯಿಂದ ಉಂಟಾಗಿದ್ದ ತಾತ್ಕಾಲಿಕವಾದ ನೆಮ್ಮದಿಯು ಅಸ್ತವಾಗಿ ಅಶಾಂತತೆಯು ಮತ್ತಷ್ಟು ಪ್ರಬಲವಾಗಿ ಎದ್ದಿತು. ಮೇಲೆ ಹೇಳಿರುವ ಆಕ್ಷೇಪಣೆಗಳು ಜನಗಳ ಮನಸ್ಸಿಗೂ ಸ್ಪಷ್ಟವಾದುವು. ಇದ್ದ ಅಡಚಣೆಗಳೆಲ್ಲಾ ಅನುಭವಕಾಲದಲ್ಲಿ ಕಾಣಿಸಿಕೊಂಡುವು.

ಜನಗಳ ಚಿತ್ತವೃತ್ತಿಯು ಹೇಗೆ ಹೇಗೆ ಮಾರ್ಪಡುವುದೆಂಬುದನ್ನು ಲಿಂಕ

---

[1] ತನ್ನ ಎಲ್ಲೆಯೊಳಗೆ ದಾಸ್ಯಕ್ಕೆ ಸ್ವಲ್ಪವೂ ಅವಕಾಶವನ್ನು ಕೊಡದೆ ಕೇವಲ ಸ್ವತಂತ್ರರಾದ ಪ್ರಜೆಗಳನ್ನುಳ್ಳ ಸಂಸ್ಥಾನವನ್ನು ಸ್ವತಂತ್ರವಾದ ಸೀಮೆಯೆಂದು ಕರೆದಿದೆ. ಮುಂದೆ ಇದೇ ಅರ್ಥ.

ನ್ನನು ಬಹು ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದನು. ಇನ್ನು ಕೆಲವು ಕಾಲದಲ್ಲಿಯೇ ಅಮೆರಿಕದಲ್ಲಿ ಅಲ್ಲೋಲಕಲ್ಲೋಲವುಂಟಾಗುವುದೆಂದು ಅವನಿಗೆ ಅಳುಕಿತು. ನಿಜವಾಗಿ ಒದಗಿದಾಗ ಯಾವ ರೀತಿಯಲ್ಲಿ ಆಚರಿಸುವುದು ಉತ್ತಮ ವೆಂಬುದನ್ನು ಅವನು ಹಗಲೂ ರಾತ್ರಿಯೂ ಆಲೋಚಿಸಿದನು. ಈ ನಡುವೆ ಪ್ರೆಸಿ ಡೆಂಟನನ್ನು ಚುನಾಯಿಸುವ ಸಮಾರಂಭವು ಬಂದಿತು. ಅವನಿಗೆ ಅದು ಶುದ್ಧಾಂಗವಾಗಿ ಬೇಕಾಗಲಿಲ್ಲ. ತನ್ನ ಪಕ್ಷದವನೇ ಪ್ರೆಸಿಡೆಂಟನಾಗಬೇಕೆಂದು ಅವನು ಪೂರ್ವದಂತೆ ಶ್ರಮಪಡಲಿಲ್ಲ. ವ್ಹಿಗ್ಗರು ಪ್ರಮುಖನಿಗೆ ಸಾಕಾದಷ್ಟು ಚೀಟಿಗಳು ಬರದೆ, ಡೆಮೊಕ್ರೆಟರಲ್ಲೊಬ್ಬನು ಪ್ರೆಸಿಡೆಂಟನಾದನು. ಆತನು ದಕ್ಷಿಣ ದವರನ್ನೇ ಆದರಿಸಿ, ಅವರ ಬಲವು ಹೆಚ್ಚಿತು.

ಒರೆಗಾನ್ ಪ್ರಾಂತದ ಗೌರ್ನರ್ ಅಧಿಕಾರವನ್ನು ನಿರಾಕರಿಸಿದ ಮೇಲೆ ಲಿಂಕ ನ್ನನು ಮತ್ತೆ ಯಾವ ನೌಕರಿಯಲ್ಲಿಯೂ ಅಪೇಕ್ಷೆಯಿಲ್ಲದವನಾಗಿ, ತನ್ನ ಲಾಯರ ವೃತ್ತಿಯಲ್ಲಿಯೇ ಆಸ್ಥೆಯನ್ನು ವಹಿಸಿ ಕೆಲಸಮಾಡುತ್ತಾ ಹೊಟ್ಟೆಹೊರೆದುಕೊಂಡಿ ದ್ದನು. ಅವನ ಮೌನಭಾವವನ್ನು ನೋಡಿದವರು ಅವನು ಹುಟ್ಟಿದಂದಿನಿಂದ ಆಡಳಿತದ ಪ್ರಸಕ್ತಿಯಲ್ಲಿ ಕೈ ಹಾಕಿದವನಲ್ಲವೆಂದೂ, ಆಗಾಗ ಪ್ರವೇಶಮಾಡಿದ್ದರೂ ಅದನ್ನೆಲ್ಲಾ ಸಂಪೂರ್ಣವಾಗಿ ಮರೆತುಬಿಟ್ಟನೆಂದೂ ಹೇಳುವಹಾಗಿದ್ದಿತು. ಆದರೆ ವಸ್ತುತಃ ಅವನು ಮರೆಯಲಿಲ್ಲ. ಆಡಳಿತದ ವಿಚಾರಗಳಲ್ಲಿ ಸಂಪೂರ್ಣ ವಾದ ದೃಷ್ಟಿಯಿದ್ದಿತು. ಆ ವಿರಾಮಕಾಲದಲ್ಲಿ ಅವನ ಅಭಿಪ್ರಾಯಗಳು ಪಕ್ವ ವಾಗುತ್ತಿದ್ದುವು. "He was building up his knowledge of ordinary human nature, his insight into popular feeling, his rather slow but sure comprehension of the individual men whom he did know" ಎಂದು ಲಾರ್ಡ್ ಚಾರ್ನ್‌ವುಡ್ ಎಂಬ ಗ್ರಂಥಕಾರನು ಹೇಳಿದ್ದಾನೆ. ಲಿಂಕನ್ನನು ಪುಸ್ತಕಗಳನ್ನು ಹೆಚ್ಚಾಗಿ ಓದುತ್ತಿರ ಲಿಲ್ಲ. ಆದರೆ ಬೈಬಲನ್ನೂ ಷೇಕ್ಸ್‌ಪಿಯರ್ ಬರ್ನ್‌ಸರ ಕವಿತೆಗಳನ್ನೂ ಓದಿ ಓದಿ ಮಂದಟ್ಟುಮಾಡಿದನು. ಅವನು, "My profession as a lawyer has almost superseded the thought of politics in my mind" ಎಂದು ತಾನೇ ಹೇಳಿದನು. ಆಕಾಲದಲ್ಲಿ ಅವನ ಮನಸ್ಸಿನಲ್ಲಿ ಸ್ವಲ್ಪವೂ ಹರ್ಷವಿರ ಲಿಲ್ಲ. ಹೇಳಲಾಗದಂತಹ ಯೋಚನೆಯಾವರಿಸಿ ಪ್ರಸನ್ನತೆಯನ್ನು ಗ್ರಾಸಮಾಡಿದ್ದಿತು.

ಲಿಂಕನ್ನನು ತನ್ನ ಪೂರ್ವದ ಸ್ನೇಹಿತನಾದ ಜೋಷುವಾ ಸ್ಪೀಡ್ (Josua Speed) ಎಂಬಾತನಿಗೆ 1855ರಲ್ಲಿ ಒಂದು ಕಾಗದವನ್ನು ಬರೆದನು. ಅದು ಈಗ ಲಭ್ಯವಾಗಿರುವುದು. ಆ ಕಾಗದದಿಂದ ರಾಜ್ಯಭಾರದ ವಿಷಯದಲ್ಲಿ ಅವನಿಗಿದ್ದ ಅಭಿ ಪ್ರಾಯಗಳು ತಿಳಿದುಬರುವುವು. ಆ ಸಮಯದಲ್ಲಿ ಹಳೆಯ ಅಭಿಪ್ರಾಯಗಳು ಬದಲಾಯಿಸುತ್ತಿದ್ದುವು. ಆದರೆ ಜನಗಳ ಮನಸ್ಸಿನಲ್ಲಿ ಹೊಸದಾದವು ಇನ್ನೂ ಹುಟ್ಟಿರಲಿಲ್ಲ.

*24 August 1855.*

ಜೋಷುವಾ ಸ್ಪೀಡನಿಗೆ,

ನಿನ್ನ ಕಾಗದವು ಇಪ್ಪತ್ತೆರಡನೆಯ ತಾರೀಖಿನಲ್ಲಿ ತಲಪಿತು. ಆಗಿನಿಂದಲೂ ಉತ್ತರ ಬರೆಯಬೇಕೆಂತಲೇ ಯೋಚಿಸುತ್ತಿದ್ದೇನೆ. ಆಡಳಿತದ ವಿಚಾರದಲ್ಲಿ ಈಗ ನೀನೂ ನಾನೂ ದೂರವಾಗಿ ಬೇರೆಯಾದೆವೆಂದು ಬರೆದಿದ್ದೀಯೆ. ಇರಬಹುದು. ಆದರೆ ಅಷ್ಟು ವಿಶೇಷವಾಗಲ್ಲ. ದಾಸ್ಯವು ನನಗೆ ಅಸಹ್ಯವಾದುದೆಂಬುದನ್ನು ನೀನು ಬಲ್ಲೆ. ಅದರಲ್ಲಿ ನ್ಯಾಯವಿಲ್ಲವೆಂದು ನೀನೂ ಒಪ್ಪಿಕೊಳ್ಳುವೆ. ಆದರೆ ಹೊರಗಿನವರು ಯಾರಾದರೂ ಬಂದು, ನಿನ್ನ ಬಳಿಯಲ್ಲಿರುವ ಗುಲಾಮರಿಗೆ ಬಂಧವಿಮೋಚನೆಮಾಡಬೇಕೆಂದು ಹೇಳುವುದಾದರೆ, ಸಂಯೋಗವು ಒಡೆದು ಹೋಗುವುದನ್ನಾದರೂ ಸಹಿಸುವೆನೇ ವಿನಾ ಅದನ್ನು ಮಾಡಲಾರೆನೆಂದು ಹೇಳುತ್ತೀಯೆ. ಗುಲಾಮನ ಮೇಲಿರುವ ಅಧಿಕಾರವನ್ನು ನೀನು ತ್ಯಜಿಸಬೇಕೆಂದು ಯಾರೂ ಹೇಳುವುದಿಲ್ಲ. ನಾನು ಹಾಗೆ ಹೇಳೆನು. ಆ ವಿಚಾರವು ನಿನಗೆ ಸೇರಿದುದು. ಶಾಸನಕ್ರಮದ ಪ್ರಕಾರ ಯಜಮಾನನಿಗೆ ಗುಲಾಮನ ಮೇಲೆ ಬಾಧ್ಯತೆಯಿರುವುದೆಂದು ನಾನೂ ಒಪ್ಪಿಕೊಳ್ಳುತ್ತೇನೆ. ಆದರೆ ಆ ಬಡಪ್ರಾಣಿಗಳನ್ನು ಎಲ್ಲೆಲ್ಲಿಯೂ ಹುಡುಕಿ, ಹಿಂದಕ್ಕೆ ತೆಗೆದುಕೊಂಡು ಹೋಗಿ ಹಿಂಸಿಸುವುದನ್ನು ಮಾತ್ರ ನಾನು ಸಂಪೂರ್ಣವಾಗಿ ದ್ವೇಷಿಸುತ್ತೇನೆ. ಅವರು ದುಡಿದರೂ ಫಲವಿಲ್ಲ. ಆದರೂ ನಾನು ಬಾಯಿಮುಚ್ಚಿಕೊಂಡು ಸುಮ್ಮನಿರುವೆನು. 1848ರಲ್ಲಿ ನೀನೂ ನಾನೂ ಒಂದು ಹಡಗಿನಲ್ಲಿ ಕುಳಿತು ಲೂಯಿಸ್ ವಿಲ್ (Louise Vilie)ನಿಂದ ಸೆಂಟ್ ಲೂಯಿ (St. Louis) ವರೆಗೆ ಹೋದುದು ನಿನಗೆ ನೆನಪಿನಲ್ಲಿರಬಹುದು. ಹಡಗಿನಲ್ಲಿ ಹತ್ತು ಹನ್ನೆರಡು ಜನ ಗುಲಾಮರು ಶೃಂಖಲಾಬದ್ಧರಾಗಿ ಕಷ್ಟ ಪಡುತ್ತಿದ್ದುದನ್ನು ಇಬ್ಬರೂ ನೋಡಿದೆವು. ಅದು ನಿನಗೂ ಜ್ಞಾಪಕವಿರಬಹುದು. ಅದನ್ನು ನೋಡಿ ನಾನು ಬಹಳ ದಿನಗಳವರೆಗೆ ನಿರಂತರವಾಗಿ ಮನಸ್ಸಿನಲ್ಲಿ ಕೊರಗಿದೆನು. ಓಹಿಯೋ ಪ್ರಾಂತಕ್ಕೆ ಹೋದಾಗಲೆಲ್ಲಾ ಅಂತಹ ಕ್ರೂರದೃಶ್ಯಗಳು ಕಂಡುಬರುತ್ತವೆ. ಆದಕಾರಣ, ದುಃಖವನ್ನುಂಟುಮಾಡುವಂಥಾ ಆ ವಿಷಯದಲ್ಲಿ ನನಗೆ ಶ್ರದ್ಧೆಯಿಲ್ಲವೆಂದು ನೀನು ಹೇಳುವುದು ತಪ್ಪು. ಉತ್ತರದಲ್ಲಿ ಲಕ್ಷಾಂತರ ಜನರು ಇದೇ ರೀತಿಯಾಗಿ ಕೊರಗುವರು. ಆದರೂ ಅವರು, ದಾಸ್ಯವು ಎತ್ತಲಾದರೂ ಹೋಗಲಿ, ಸಂಯೋಗವನ್ನು ಮಾತ್ರ ರಕ್ಷಿಸಬೇಕೆಂದು ಸಂಕಲ್ಪ ಮಾಡಿದ್ದಾರೆ. ನಾನು ದಾಸ್ಯಪದ್ಧತಿಯನ್ನು ಖಂಡಿತನಾಗಿ ನಿಷೇಧಿಸುತ್ತೇನೆಂದು ಮತ್ತೆ ಮತ್ತೆ ಹೇಳಬೇಕಾಗಿಲ್ಲ. ಹಾಗೆ ಮಾಡಬೇಕೆಂದು ಅಂತರಾತ್ಮವೂ ದುಃಖಾನುಭವವೂ ಹೇಳುವುವು. ಯಾವ ಕಾಲಕ್ಕೂ ನನ್ನ ಈ ಅಭಿಪ್ರಾಯವು ಬೇರೆಯಾಗಿ ನಾನು ಮತ್ತೊಂದು ವಿಧವಾಗಿ ಚಿಂತಿಸಲಾರೆನು. ಈ ಕಾರಣಕ್ಕಾಗಿ ನೀನೂ ನಾನೂ ದೂರವಾಗಬೇಕೆಂದು ಹೇಳುವುದಾದರೆ ಹಾಗೆಯೇ ಆಗಲಿ. . . .

ಕಾನ್ಸಾಸ್ ರಾಷ್ಟ್ರವು ಚೀಟಿಯ ಮೂಲಕ ಪರೀಕ್ಷೆ ಮಾಡಿ ಸ್ವತಂತ್ರವೆನ್ನಿಸಿಕೊಳ್ಳುವುದಾದರೆ ನನಗೆ ಬಹಳ ಸಂತೋಷವೆಂದು ಹೇಳುವೆ. ಗುಲಾಮರನ್ನಿಟ್ಟು

ಕೊಂಡಿರುವ ಸಂಭಾವಿತರೆಲ್ಲರೂ ಹಾಗೆಯೇ ಹೇಳುತ್ತಾರೆ. ಅದಕ್ಕಾಗಿ ಅವರಿಗೆ ನನ್ನ ಸಹಸ್ರಾರು ವಂದನೆಗಳು. ಅವರ ಆ ಧಾರಾಳದ ಮಾತಿನಲ್ಲಿ ನನಗೆ ಸ್ವಲ್ಪವೂ ಸಂದೇಹವಿಲ್ಲ. ಆದರೆ ಚೀಟಿ ಹಾಕುವ ಸಮಯ ಬಂದಾಗ ಮಾತ್ರ ಎಂದಿಗೂ ತಾವು ಮೊದಲು ಹೇಳಿದಂತೆ ಮಾಡುವುದಿಲ್ಲ. ಗುಟ್ಟಾಗಿ ಬರೆದ ಕಾಗದದಲ್ಲಿ ಕಾನ್ಸಾಸ್ ರಾಷ್ಟ್ರವು ಸ್ವತಂತ್ರವಾಗುವುದೇ ಇಷ್ಟವಾದುದೆಂದು ನೀನು ಬರೆಯಬಹುದು. ಆದರೆ ಪ್ರತಿನಿಧಿಯಾಗಬೇಕೆನ್ನುವವನೊಬ್ಬನು ಬಹಿರಂಗವಾಗಿ ಆ ಮಾತನ್ನು ಹೇಳಿದರೆ ಖಂಡಿತವಾಗಿ ಅವನಿಗೆ ನಿನ್ನ ಚೀಟಿಯು ದೊರೆಯದು. ದಾಸ್ಯವನ್ನುಳ್ಳ ಸಂಸ್ಥಾನದಲ್ಲಿ ಅವನು ಸ್ವಪ್ನದಲ್ಲಿಯೂ ಪ್ರತಿನಿಧಿಯಾಗನು. ಗುಲಾಮರನ್ನು ಹೆಚ್ಚಿಸುವವರೂ ಗುಲಾಮರ ವ್ಯಾಪಾರಮಾಡುವವರೂ ನಿಮ್ಮಲ್ಲಿ ಅತ್ಯಲ್ಪ ಮಂದಿ. ಅವರನ್ನು ನೀವು ಧಾರಾಳವಾಗಿ ದ್ವೇಷಿಸುತ್ತೀರಿ. ಆದರೂ ಕೂಡ, ನೀವು ಹೇಗೆ ನಿಮ್ಮ ವಶದಲ್ಲಿರುವ ನೀಗ್ರೋಗಳಿಗೆ ಯಜಮಾನರೋ ಹಾಗೆ ಅವರು ನಿಮ್ಮ ಯಜಮಾನರು. ನೀವು ಅವರಿಗೆ ಅಡಿಯಾಳಾಗಿರುವಿರಿ. ಆಡಳಿತದಲ್ಲಿ ಅವರ ಮಾತೇ ಮುಂದಾಗಿರುವುದು.

ನನ್ನ ಅಭಿಪ್ರಾಯಗಳೇನೆಂದು ನೀನು ಕೇಳುತ್ತೀಯೆ. ನಾನು ಸಂಪ್ರದಾಯದಲ್ಲಿ ವ್ಹಿಗ್ಗನು. ಕೆಲವರು ಮಾತ್ರ, ಈಗ ವ್ಹಿಗ್ಗರೆಂಬ ಹೆಸರು ತಪ್ಪಿ ಹೋಯಿತೆಂದೂ ನಾನು ಅಬಾಲಿಷನಿಸ್ಟ್ (Abolitionist) ಎಂದೂ ಹೇಳುತ್ತಾರೆ. ನಾನು ವಾಷಿಂಗ್ಟನ್ನಿನಲ್ಲಿದ್ದಾಗ ವಿಲ್ಮಟ್‌ನ ಮಸೂದೆಯು ಚರ್ಚೆಗೆ ಬಂದಿತು. ನಲವತ್ತು ಸಾರಿ ಅದನ್ನು ಅನುಮೋದಿಸಿ ಚೀಟಿ ಹಾಕಿದೆನು. ಆದರೂ ಆ ಕಾರಣದಿಂದ ನೀನು ವ್ಹಿಗ್ಗನಲ್ಲವೆಂದು ಯಾರೂ ನನಗೆ ಹೇಳಲಿಲ್ಲ. ನಾನು ಈಗಲೂ ದಾಸ್ಯವು ಹರಡಕೂಡದೆಂದು ಹೇಳುತ್ತೇನೆ. ನಾನು ''ಏನನ್ನೂ ತಿಳಿಯದವನು'' ಎಂದಿಗೂ ಅಲ್ಲ. ಅಂಥವನು ಹೇಗೆ ತಾನೇ ಆಗಬಲ್ಲೆನು ? ಗುಲಾಮರ ಮೇಲೆ ನಮ್ಮವರು ಮಾಡುವ ಅತ್ಯಾಚಾರವನ್ನು ನೋಡಿ ನನ್ನ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಗುವುದು. ನಮ್ಮವರು ಬರುತ ಬರುತ ನೀಚರಾಗುತ್ತ ಅವರ ನೀಚತನವು ಬಹಳವಾಗಿ ಹೆಚ್ಚುತ್ತಿರುವುದು. ಜನಾಂಗವೆಂದು ಹೇಳಿಕೊಂಡು ಪ್ರಾರಂಭಿಸುವ ಸಮಯದಲ್ಲಿ ನಾವು, '' ಭಗವಂತನಿಂದ ಸೃಷ್ಟರಾದ ಮನುಷ್ಯರೆಲ್ಲರೂ ಸಮಾನರು '' ಎನ್ನುತ್ತ ಹೊರಟೆವು. ಈಗಲಾದರೋ, '' ನೀಗ್ರೋಗಳು ಹೊರತು ಇತರರೆಲ್ಲರೂ ಸಮಾನರು '' ಎನ್ನುತ್ತಿದ್ದೇವೆ. '' ಏನನ್ನೂ ತಿಳಿಯದವರು '' ಅಧಿಕಾರದಲ್ಲಿದ್ದರೆ, '' ನೀಗ್ರೋಗಳು, ಪರದೇಶದವರು, ಕ್ಯಾಥೊಲಿಕರು, ಇವರು ಹೊರತು ಉಳಿದ ಮನುಷ್ಯರೆಲ್ಲರೂ ಸಮಾನರು '' ಎಂಬುದು ತತ್ವವಾಗುತ್ತಿದ್ದಿತು. ಸ್ಥಿತಿಯು ಇಷ್ಟಕ್ಕೆ ಬಂದರೆ, ನಾನು ಸ್ವಾತಂತ್ರ್ಯವನ್ನು ಪ್ರೀತಿಸುವೆನೆಂದು ನಟಿಸದೆ, ಅದಕ್ಕೆ ಆಶ್ರಯವನ್ನು ಕೊಡೆನೆಂದು ಮುಚ್ಚುಮರೆಯಿಲ್ಲದೆ ಹೇಳುವ ಮತ್ತಾವುದಾದರೊಂದು ರಾಜ್ಯಕ್ಕೆ ಹೊರಟು ಹೋಗುವೆನು. ರಷ್ಯದಲ್ಲಿ ನಿರಂಕುಶಪ್ರಭುತ್ವವು ಸಂಪೂರ್ಣವಾಗಿರುವುದು. ಅಲ್ಲಿ ಬೂಟಾಟಿಕೆಯು ಬೆರೆದು ಅದಕ್ಕೆ ಕಳಂಕವನ್ನು ತಂದಿಲ್ಲ.

ಮೇರಿಯು (ಮಿಸೆಸ್ ಲಿಂಕನ್ನಳು) ಅಕ್ಟೋಬರ್‌ನಲ್ಲಿ ಒಂದೆರಡು ದಿನಗಳ

ಮಟ್ಟಿಗೆ ಲೂಯಿಸ್‌ವಿಲ್ಲಿಗೆ ಬರುವಳು. ಮಿಸೆಸ್ ಸ್ಪೀಡಳಿಗೆ ನನ್ನ ವಂದನೆಗಳು. ಮೇಲೆ ಹೇಳಿರುವ ವಿಷಯದಲ್ಲಿ ಆಕೆಯು ನನ್ನಂತೆಯೇ ಅಭಿಪ್ರಾಯವುಳ್ಳವಳು. ನೀನು ಹಾಗಲ್ಲ. ಆದರೂ ನೀನು ನನ್ನ ಪರಮಸ್ನೇಹಿತನೇ.

ಅಬ್ರಹಾಮ್ ಲಿಂಕನ್."

ಮಿಸ್ಸೌರಿ ಒಡಂಬಡಿಕೆಯನ್ನು ಸರ್ಕಾರವು ರದ್ದುಮಾಡಲಾಗಿ ಲಿಂಕನ್ನನು "ಕಣ್ಣುಬಿಟ್ಟನು." ಹಿಂದಿದ್ದ ಜಡತ್ವವೆಲ್ಲಾ ತಟ್ಟನೆ ಮಾಯವಾಯಿತು. ಆ ಪ್ರಸಂಗವು ತನ್ನನ್ನು "ರಣಭೂಮಿಗೆಳೆದು ಬಿಟ್ಟಿತು" ಎಂದು ಅವನು ಹೇಳಿದನು. ದಿಗಿಲು ಹೊಂದಿದನು: ಸ್ವಾತಂತ್ರ್ಯಕ್ಕೂ ದಾಸ್ಯಕ್ಕೂ ಮತ್ತೆ ಯುದ್ಧವು ಹತ್ತಿ ಕೊಂಡಿತು. ಆ ಒಡಂಬಡಿಕೆಯು ರದ್ದಾಗಲಾಗಿ ದಾಸ್ಯವು ಹದ್ದು ಮೀರಿ ಉತ್ತರ ವನ್ನು ಪ್ರವೇಶಿಸಲು ಅವಕಾಶವುಂಟಾದಂತಾಯಿತು. ಅದರ ಸಹಾಯದಿಂದ ಹಿಂದೆ ದಾಸ್ಯಕ್ಕೆ ಒಂದು ಎಲ್ಲೆ ಕಟ್ಟನ್ನು ನಿರ್ಮಿಸಿದಹಾಗಾಗಿದ್ದಿತು. ಮಿಸ್ಸೌರಿಯು ದಾಸ್ಯವನ್ನು ಪ್ರೋತ್ಸಾಹಿಸುವ ದಕ್ಷಿಣದ ಸಂಸ್ಥಾನಗಳಲ್ಲೊಂದಾಯಿತೆಂದು ನಿರ್ಣೀತವಾಗಿದ್ದಿತು. ಹಾಗಲ್ಲದಿದ್ದರೆ ಉತ್ತರದವರು ಹೆಚ್ಚಿನ ಬಲವುಳ್ಳವರಾಗಿ ಅಧಿಕಾರವನ್ನು ಈ ಮೊದಲೇ ವಹಿಸಿರುತ್ತಿದ್ದರು. ಆದರೆ ಪ್ರಕೃತದಲ್ಲಿ, ಸಂಯೋಗ ವನ್ನು ಬೆರೆಯಲಾತುರವಾಗಿದ್ದ ಕಾನ್ಸಾಸ್ ನೆಬ್ರೆಸ್ಕರಾಜ್ಯಗಳು ಅದೇ ಸ್ಥಿತಿಯ ಲ್ಲಿದ್ದುವು. ಅವುಗಳ ವಿಷಯದಲ್ಲಿ ಸೆನೇಟಿನ ಮೆಂಬರಾದ ಡಗ್ಲಸ್ (Douglas) ಎಂಬಾತನು ಸಭೆಯಲ್ಲಿ ಆಯೆರಡು ರಾಜ್ಯಗಳ ಶಾಸನಕ್ರಮವನ್ನು ವಿವರಿಸಿ, ಅವು ಉತ್ತರದ ಅಥವಾ ದಕ್ಷಿಣದ ಪಕ್ಷವನ್ನು ಸೇರುವುದನ್ನು ಅಲ್ಲಿಯ ಪ್ರಜೆಗಳೇ ವ್ಯವಸ್ಥೆಮಾಡಿಕೊಳ್ಳಬೇಕೆಂದು ಸೂಚಿಸಿದನು. ಅವನ ಸಲಹೆಯು ದೇಶದ ಕಟ್ಟಳೆಯಾದರೆ ಮಿಸ್ಸೌರಿ ಒಡಂಬಡಿಕೆಯು ರದ್ದಾಗುವುದು. ಡಗ್ಲಸ್‌ನ ಸಲಹೆ ಯಿಂದ ಆಯೆರಡು ರಾಜ್ಯಗಳ ವಿಚಾರವು ಒಂದು ಇತ್ಯರ್ಥಕ್ಕೆ ಬರುವುದಾದರೂ ಮತ್ತೊಂದು ದಿಕ್ಕಿನಲ್ಲಿ ಅನರ್ಥವುಂಟಾಗುತ್ತಿದ್ದಿತು. ಇಡೀರಾಜ್ಯದಲ್ಲಿ ಪ್ರಜೆಗಳಿಗೆ ಭೇದಬುದ್ಧಿಯುಂಟಾಗಿ ಮುಂದೆ ಪ್ರಾರಂಭವಾದ ಅಂತಃಕಲಹವೂ ಇನ್ನೂ ಶೀಘ್ರ ವಾಗಿಯೇ ಮೊದಲಾಗುತ್ತಿದ್ದಿತು. ಲಿಂಕನ್ನನ ಮನಸ್ಸಿಗೆ ಈ ಅಂಶವು ಹೊಳೆಯಿತು. ಲಾಯರ ವೃತ್ತಿಯನ್ನೂ ಹೊಟ್ಟೆಯ ಪಾಡನ್ನೂ ನೋಡಿಗೊಳ್ಳುತ್ತ ಕೂರುವುದು ಮೂಢತನವೆನ್ನಿಸಿತು. ತಾಳ್ಮೆಯೂ ತೂಷ್ಣೀಂ ಭಾವವೂ ಇನ್ನು ನ್ಯಾಯವಾಗಿರ ಲಿಲ್ಲ. ಸಭೆಯಲ್ಲಿ ಚರ್ಚೆನಡೆದು ಡಗ್ಲಸ್‌ನ ಮಸೂದೆಯು ಕಾನೂನಾಯಿತು. ಡೆಮೊಕ್ರೆಟರು ತಮ್ಮ ಸಂತೋಷವನ್ನು ತೋರಿಸುವುದಕ್ಕೋಸ್ಕರ ತೋಫನ್ನು ಹಾರಿ ಸಿದರು. ಅವರಿಗೆ ಸಂತೋಷವೇಕೆ ಉಂಟಾಯಿತೆಂಬುದು ನಿಜವಾಗಿ ಆವೆರಡು ರಾಜ್ಯಗಳ ಪ್ರಜೆಗಳು ತಮ್ಮ ತಮ್ಮಲ್ಲಿ ವ್ಯವಸ್ಥೆಮಾಡಿಕೊಳ್ಳುವ ಸಂದರ್ಭದಲ್ಲಿ ನಡೆದ ಸಂಗತಿಗಳ ಸ್ವಭಾವದಿಂದ ಪತ್ತೆಯಾಗುತ್ತದೆ.

ಮಸೂದೆಯು ಕಾನೂನಾಗಿ ಪ್ರಚಾರಕ್ಕೆ ಬಂದಿತೋ ಇಲ್ಲವೋ ಎನ್ನುವಷ್ಟ ರೊಳಗೆ ಇತರ ರಾಜ್ಯಗಳಿಂದ ಜನರು ಕಾನ್ಸಾಸ್ ಮತ್ತೂ ನೆಬ್ರೆಸ್ಕಗಳಿಗೆ ನುಗ್ಗ

ಲಾರಂಭಿಸಿದರು. ಭೂಮಿಯನ್ನು ತಾವು ಆಕ್ರಮಿಸಿ ಆ ರಾಷ್ಟ್ರಗಳಲ್ಲಿ ಸ್ವಾತಂತ್ರ್ಯ
ವನ್ನು ಸ್ಥಾಪಿಸಬೇಕೆಂದು ನಿಶ್ಚಯಿಸಿ ಉತ್ತರಭಾಗದಿಂದ ಸಾವಿರಾರು ಜನರು ಆತುರ
ದಿಂದ ಅಲ್ಲಿಗೆ ಒಕ್ಕಲು ಹೋದರು. ಅವುಗಳನ್ನು ತಮಗೆ ಉಳಿಸಿಕೊಳ್ಳಬೇಕೆಂಬ
ಉದ್ದೇಶದಿಂದ ದಕ್ಷಿಣದವರೂ ನುಗ್ಗಿದರು. ಕಾನ್ಸಾಸ್ ರಾಜ್ಯವು ಹತ್ತಿರದಲ್ಲಿದ್ದು
ದರಿಂದ ಅದು ಮೊದಲು ದಕ್ಷಿಣದ ಜನಗಳಿಂದ ತುಂಬಿತು. ಅಯೋವಾದವರೂ
ಇಲ್ಲಿನ್ವಾದವರೂ ನೆಬ್ರೆಸ್ಕಕ್ಕೆ ತಮ್ಮವರನ್ನು ಕಳುಹಿಸಿದರು. ಕೆಲವುಕಾಲ ಮಾತ್ರ
ವಿದ್ದು ಆ ಮೇಲೆ ಹಿಂದಿರುಗಿದರೆ, ಆಕ್ರಮಿಸಲು ದಕ್ಷಿಣದವರಿಗೆ ಆಸ್ಪದವನ್ನು
ಕೊಟ್ಟಂತಾಗುವುದೆಂಬ ಭಯದಿಂದ ಉತ್ತರದ ಪ್ರಜೆಗಳು ಸಂಘಗಳನ್ನೇರ್ಪಡಿಸಿ
ಕೊಂಡು ಗುಂಪು ಗುಂಪಾಗಿ ಬಂದು ಹೊಸರಾಜ್ಯದಲ್ಲಿ ಶಾಶ್ವತವಾಗಿ ನೆಲಸಿದರು.
ಮೂರುತಿಂಗಳೊಳಗಾಗಿ ಆವೆರಡು ರಾಜ್ಯಗಳಲ್ಲಿ ಯಾವುದರಲ್ಲಿಯೂ ‘‘ಇರುವೆಯು
ಗೂಡುಮಾಡಿಕೊಳ್ಳುವಷ್ಟು’’ ಸ್ಥಳವಿರಲಿಲ್ಲ. ಅಲ್ಲಿನ ಜನಗಳಲ್ಲಿ ಫ್ರೀಸ್ಟೇಟ್
(Free State) ಜನಗಳೆಂದೂ ‘‘ಪ್ರೋಸ್ಲೇವರಿ(Pro-slavery) ಜನಗಳೆಂದೂ
ಎರಡು ಪಂಗಡಗಳಾದುವು.

ಕಾಂಗ್ರೆಸ್ ಸಭೆಯು ಮುಕ್ತಾಯವಾಗಿ ಪ್ರತಿನಿಧಿಗಳು ಉತ್ತರದ ಬೊಬ್ಬೆ
ಯನ್ನು ಕೇಳಿ ವಿಸ್ಮಯಹೊಂದುತ್ತ ತಮ್ಮ ಸ್ಥಳಗಳಿಗೆ ಹೋದರು. ಡಗ್ಲಸ್‌ನು
ಜನರು ತನ್ನನ್ನು ‘‘ಉತ್ತರದವನಾದರೂ ದಕ್ಷಿಣದ ಮತವುಳ್ಳವ’’ನೆಂದು ದ್ವೇಷಿಸು
ವುದನ್ನು ಕಂಡು, ಕುತರ್ಕದಿಂದಲೂ ವಾಕ್ಕೌಶಲದಿಂದಲೂ ಅವರನ್ನು ಸಮಾಧಾನ
ಪಡಿಸುತ್ತೇನೆಂಬ ಧೈರ್ಯದಿಂದ ಇಲ್ಲಿನ್ವಾಗೆ ಹೋದನು. ಕಾನ್ಸಾಸ್ ನೆಬ್ರೆಸ್ಕ
ಮಸೂದೆಯು ಸಾಧುವಾದುದೆಂಬುದನ್ನು ಸಾಧಿಸಲು ಅವನು ನಿಶ್ಚಯಿಸಿದ್ದನು.
ಆದರೆ ಜನಗಳು ಅವನ ಭಾಷಣವನ್ನು ಕೇಳಲು ಸಂಪೂರ್ಣವಾಗಿ ನಿರಾಕರಿಸಿ
ಬಿಟ್ಟರು. ಎಲ್ಲಾ ವಿಧವಾದ ಬಹಿಷ್ಕಾರವೂ ಆಯಿತು. ಡಗ್ಲಸ್‌ನು ನಿರ್ವಾಹ
ವಿಲ್ಲದವನಾಗಿ ಸ್ಪ್ರಿಂಗ್ ಫೀಲ್ಡಿಗೆ ಹೋದನು.

ಆ ವರ್ಷ ಅಕ್ಟೋಬರ್ ತಿಂಗಳಲ್ಲಿ ಸ್ಪ್ರಿಂಗ್ ಫೀಲ್ಡಿನಲ್ಲಿ ವ್ಯವಸಾಯದ
ಪ್ರದರ್ಶನವೊಂದು ನಡೆಯಿತು. ಅದನ್ನು ನೋಡುವುದಕ್ಕೋಸ್ಕರ ನಾನಾ ಭಾಗ
ಗಳಿಂದ ಜನರು ಅಲ್ಲಿಗೆ ಬಂದು ಸೇರಿದ್ದರು. ಡಗ್ಲಸ್‌ನಿಗೆ ಅದು ತಕ್ಕ ಸಮಯ
ವಾಗಿದ್ದಿತು. ಆದುದರಿಂದಲೇ ಅವನು ಚಿಕಾಗೋವಿನಿಂದ ಅಲ್ಲಿಗೆ ಹೋದನು.
ಆತನು ಭಾಷಣಮಾಡುವನೆಂಬ ವಾರ್ತೆಯು ಕಿವಿಗೆ ಬಿದ್ದಿತು. ಪ್ರತ್ಯುತ್ತರ
ವಾದಿಯಾಗಿ ಲಿಂಕನ್ನನು ನಿಲ್ಲುವನೆಂದು ಜನರು ನಿರೀಕ್ಷಿಸಿದರು. ಮಿಸ್ಸೌರಿ ಒಡಂ
ಬಡಿಕೆಯನ್ನು ರದ್ದುಮಾಡಿದುದು ಮುಂದೆ ಪ್ರಳಯವು ಸಂಭವಿಸುದಕ್ಕೆ ಸೂಚನೆ
ಯೆಂದು ಅವನ ಮನಸ್ಸಿನಲ್ಲಿ ಭಯವು ನಾಟಿದ್ದಿತು. ಆದುದರಿಂದ ಅವನು ಈ
ಸಮಯವನ್ನವಲಂಬಿಸಿ ಡಗ್ಲಸ್‌ನು ತಂದಿಟ್ಟ ಅನರ್ಥವನ್ನು ವಿವರಿಸಿ ಜನಗಳಿಗೆ
ನಿಜಸ್ಥಿತಿಯನ್ನು ತಿಳಿಸಲು ನಿಶ್ಚಯಿಸಿದನು. ಗೊತ್ತುಮಾಡಿದ್ದ ದಿನ ಡಗ್ಲಸ್‌ನು
ಉಪನ್ಯಾಸಮಾಡಿದನು. ಸಂಸ್ಥಾನದಲ್ಲಿ ಇತರ ಪ್ರದೇಶಗಳಲ್ಲಿ ಮಾಡಿದ ಉಪ
ನ್ಯಾಸಗಳಿಂದ ಜನಗಳ ಮನಸ್ಸು ಸ್ವಲ್ಪವೂ ತಿರುಗಿರಲಿಲ್ಲ. ಆದಕಾರಣ ಅವನು ಈ

ಸಮಯವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳಬೇಕಾಗಿದ್ದಿತು. ತಾನು ಮಾಡಿದುದು ಪ್ರಜೆಗಳ ಸೌಖ್ಯಕ್ಕೋಸ್ಕರವೆಂದೂ, ಪ್ರಜಾಸಮುದಾಯವನ್ನು ಉತ್ತರದ ರಾಜ್ಯಗಳವರು, ದಕ್ಷಿಣದ ರಾಜ್ಯಗಳವರು ಎಂದು ಅಲ್ಪ ಬುದ್ಧಿಯುಳ್ಳವರಂತೆ ಭಾವಿಸಿ ಪಕ್ಷಪಾತವನ್ನು ತೋರಿಸುತ್ತಿಲ್ಲವೆಂತಲೂ ಅವನು ವಾದಿಸಿದನು. ತನ್ನ ಭಾಷಣವು ಹೃದಯಂಗಮವಾಗಲು ಎಷ್ಟು ಮಾಡಬೇಕೋ ಅದಷ್ಟನ್ನೂ ಮಾಡದೆ ಬಿಡಲಿಲ್ಲ. ಕೊನೆಯಲ್ಲಿ ನೋಡಲಾಗಿ ಜನಗಳು ಅವನ ಮತವನ್ನು ಅಂಗೀಕರಿಸದೆ ತಲೆದೂಗುತ್ತಿದ್ದರು. ಅವನ ಮಸೂದೆಯಿಂದ ಹೊಸದಾಗಿ ಮತ್ತೆರಡು ರಾಜ್ಯಗಳಲ್ಲಿ, ದಾಸ್ಯವು ಕಾಲಿಡಲು ಅವಕಾಶವಾಯಿತೆಂಬುದು ಅವರ ಆಕ್ಷೇಪಣೆಯಾಗಿದ್ದಿತು.

ಮಾರನೆಯ ದಿನ ಲಿಂಕನ್ನನು ಪ್ರತಿಯಾಗಿ ಭಾಷಣಮಾಡಿದನು. ಅವನ ಮಾತು ಎಂದಿನಷ್ಟು ಸರಸವಾಗಿಲ್ಲವೆಂದು ಜನರು ಗೊಣಗುವುದನ್ನು ನೋಡಿ ಅವನು, '' ಸಭಾಸದರೆ, ಪರಿಹಾಸಕ್ಕೂ ವಿನೋದಕ್ಕೂ ಇದು ಕಾಲವಲ್ಲ. ಕಾರ್ಯವು ಗುರುತರವಾದದ್ದು. ಇಲ್ಲಿ ನಾನು ಜನಗಳನ್ನು ನಗಿಸುವುದಕ್ಕಾಗಲೀ ಅವರ ಪ್ರಶಂಸೆಗೆ ಪಾತ್ರನಾಗುವುದಕ್ಕಾಗಲೀ ಮಾತನಾಡುತ್ತಿಲ್ಲ. ನನ್ನ ಅಭಿಪ್ರಾಯವನ್ನು ನಿಮಗೆ ತಿಳಿಸುವುದು ನನ್ನ ಉದ್ದೇಶ—ಕ್ಷಮಿಸಬೇಕು '' ಎಂದು ವಿನಯದಿಂದ ಹೇಳಿದನು. '' ಜನರು ಸ್ವಚ್ಛಂದರಾಗಿರಬೇಕು ; ಅಥವಾ ಸೊಂಟಕಟ್ಟಿ ನಿಂತು ಯಜಮಾನನ ಆಜ್ಞೆಯನ್ನು ಪಾಲಿಸುತ್ತ ಬಿದ್ದಿರಬೇಕು. ಈಗ ಸ್ಥಿತಿಯು ಅಷ್ಟಕ್ಕೆ ಬಂದಿರುವುದು.''

ತನ್ನ ಮಾತಿನಲ್ಲಿ ದೋಷವಾಗಲೀ ಅಸಾಮಂಜಸ್ಯವಾಗಲೀ ತೋರ್ಪಟ್ಟಲ್ಲಿ ತತ್‌ಕ್ಷಣವೇ ಮಿ॥ ಡಗ್ಲಸ್‌ರವರು ಆಕ್ಷೇಪಿಸಿ ತಪ್ಪನ್ನು ತಿದ್ದಬಹುದೆಂದು ಪ್ರಾರ್ಥಿಸಿ ಅವನು ಪ್ರಾರಂಭಿಸಿದನು. ಅಷ್ಟು ಅವಕಾಶವು ಸಿಕ್ಕಿದುದೇ ಸಾಕೆಂದು ಡಗ್ಲಸ್‌ನು ಕ್ಷಣಕ್ಷಣಕ್ಕೂ ಲಿಂಕನ್ನನ ಮಾತಿಗೆ ವಿಘ್ನವನ್ನು ತರುತ್ತ ಅಪ್ರಯುಕ್ತವಾದ ಪಶ್ನೆಗಳಿಂದಲೂ ಚರ್ಚೆಗಳಿಂದಲೂ ಆತನನ್ನು ಬೇರೆಯ ದಾರಿಗೆಳೆಯಲು ಪ್ರಾರಂಭಿಸಿದನು. ಲಿಂಕನ್ನನು ಅವುಗಳಿಗೆಲ್ಲಾ ಸಮಾಧಾನವನ್ನು ಹೇಳಿದನು. ಆದರೆ ಬರುತ ಬರುತ ಆಕ್ಷೇಪಣೆಗಳು ತೀರ ಹೆಚ್ಚಾಗಿ ಅಸಾಧ್ಯವಾದುವು. ಕೊನೆಗೆ ಅವನು, '' ಈ ಅಪಲಾಪಗಳಿಗೆಲ್ಲಾ ಉತ್ತರ ಹೇಳಲು ಕಾಲವಿಲ್ಲ. ನಾನು ಹೇಳುವುದೆಲ್ಲಾ ನ್ಯಾಯವಾಗಿಯೇ ಇರುವುದೆಂದು ಭಾವಿಸಿ ಮುಂದೆ ಹೋಗುವೆನು. ಜಡ್ಜ್ ಡಗ್ಲಸ್‌ರವರು ಇನ್ನು ನನ್ನನ್ನು ತಿದ್ದಬೇಕಾಗಿಲ್ಲ,'' ಎಂದು ಹೇಳಿದನು. ಅವನ ಉಪನ್ಯಾಸವು ಆ ಬಳಿಕ ನಿರ್ವಿಘ್ನವಾಯಿತು. ಒಟ್ಟು ಮೂರು ಗಂಟೆಯೂ ಹತ್ತು ನಿಮಿಷಗಳವರೆಗೆ ಮಾತನಾಡಿದನು. ಶ್ರೋತೃಗಳು ಶಬ್ದಮಾಡದಂತೆ ಕುಳಿತು ಏಕಚಿತ್ತರಾಗಿ ಕೇಳಿದರು. ಪ್ರಶಂಸೆಗಳಿಗೆ ಎಣೆಯಿರಲಿಲ್ಲ. ನೆಬ್ರಸ್ಕ ಮಸೂದೆಯನ್ನು ಅವನು ಖಂಡಿಸಿದುದು ಬಹಳ ನ್ಯಾಯವಾಗಿದ್ದಿತೆಂದು ಎಲ್ಲರೂ ಹೇಳಿದರು.

ಡಗ್ಲಸ್‌ನು ಯಾವುದೊಂದು ವಿಚಾರದಲ್ಲಿಯೂ ನಿರ್ಣಯವನ್ನು ಜನಗಳ ಪಾಲಿಗೇ ಬಿಟ್ಟು ಅವರಿಗೆ ಸಂಪೂರ್ಣವಾದ ಅಧಿಕಾರವನ್ನು ಕೊಡುವುದು ಸರ್ಕಾರದ

ಧರ್ಮವೆಂಬುದರ ಮೇಲೆ ಬಹಳ ಹೊತ್ತಿನವರೆಗೆ ಉಪನ್ಯಾಸಮಾಡಿದನು. ಪ್ರಜೆಗಳು ವ್ಯವಸ್ಥೆಮಾಡಬಲ್ಲವರಾಗಿರುವಾಗ ಒಂದು ಪ್ರಸಂಗದಲ್ಲಿ ಇತರರು ಪ್ರವೇಶಿಸಿದರೆ ಪ್ರಜೆಗಳ ನಿರ್ಣಯಶಕ್ತಿಗೆ ಅವಮಾನವನ್ನು ತಂದಂತಾಯಿತೆಂದನು. ಆ ಅಭಿಪ್ರಾಯಕ್ಕೆ ಉತ್ತರವಾಗಿ ಲಿಂಕನ್ನನು ''ಸರಿ, ಸರಿ! ಸ್ವರಾಜ್ಯಕ್ಕಿಂತಲೂ ಉತ್ತಮವಾದುದು ಮತ್ತೊಂದಿಲ್ಲ. ಕಾನ್‌ಸಾಸ್ ಮತ್ತು ನೆಬ್ರಸ್ಕದ ನಿವಾಸಿಗಳು ಸ್ವರಾಜ್ಯಕ್ಕೆ ಅರ್ಹರಲ್ಲದಿದ್ದಮೇಲೆ ಮತ್ತಾರೂ ಅರ್ಹರಲ್ಲ. ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಯಥಾರ್ಥವಾದ ಸ್ವರಾಜ್ಯಕ್ಕೂ ಡಗ್ಲಸ್‌ನು ಉಪದೇಶಿಸುವ ಸ್ವರಾಜ್ಯಕ್ಕೂ ಸಾವಿರಾರು ಮೈಲಿಗಳ ಅಂತರವಿರುವುದು. ಸ್ವರಾಜ್ಯವನ್ನು ಪಡೆದ ಮನುಷ್ಯನು ತನಗೆ ತಾನು ಸ್ವಾಮಿಯಾಗಿರುವನು. ಒಬ್ಬನು ಮತ್ತೊಬ್ಬನ ಮೇಲೆ ಸ್ವಾಮಿತ್ವವನ್ನು ತೋರಿಸಬಹುದೆಂದು ಅವನು ಎಂದಿಗೂ ಆ ಶಬ್ದದಿಂದ ಅರ್ಥಮಾಡನು. ಬಿಳಿಯ ಜನವು ತನ್ನನ್ನು ತನಗೆ ಅಧೀನಮಾಡಿಕೊಂಡರೆ ಅದು ಸ್ವರಾಜ್ಯವೆನ್ನಿಸುವುದು. ಅದು ಸ್ವಾಧೀನ್ಯವಾಗುವುದು. ಗುಲಾಮನೊಬ್ಬನು ಅವನ ಅಧೀನದಲ್ಲಿದ್ದರೆ ಅದು ಸ್ವರಾಜ್ಯವಲ್ಲ; ಸ್ವ-ಆಧೀನ್ಯವಲ್ಲ. ಗುಲಾಮನೂ ಒಬ್ಬ ಮನುಷ್ಯನು. ಒಬ್ಬನು ಮತ್ತೊಬ್ಬನನ್ನು ಅಧೀನದಲ್ಲಿಟ್ಟುಕೊಂಡರೆ ಅದು ಬಲಾತ್ಕಾರ. ಆದರಲ್ಲಿ ನೀತಿತಾನೆ ಯಾವುದಿದ್ದೀತು? ಕಾಲವು ಕಳೆದ ಹಾಗೆಲ್ಲಾ ನಾವು ಪ್ರಬೋಧೆ ಹೊಂದುತ್ತ ಪೂರ್ವಿಕರ ದುಷ್ಟವಾದ ಆಚಾರವನ್ನೆಲ್ಲಾ ಬಿಡುತ್ತಿದ್ದೇವೆ. ಸುಮಾರು ಎಂಭತ್ತು ವರ್ಷಗಳ ಹಿಂದೆ ನಮ್ಮ ತತ್ವವೇ ಬೇರೆಯಾಗಿದ್ದಿತು. ಆ ತತ್ವಕ್ಕೆ ಆಗ ಯಾವ ಅರ್ಥ, ಈಗ ಯಾವ ಅರ್ಥ!''

ಲಿಂಕನ್ನನು ಈರೀತಿಯಾಗಿ ಮಾತನಾಡಿದನು. ಮುಂದೆ ಪಿಯೋರಿಯದಲ್ಲಿಯೂ ಅವರಿಗೆ ಸ್ಪರ್ಧೆ ಹತ್ತಿತು. ಅಲ್ಲಿ ಅವನು ಹೀಗೆಂದನು: ''ಡಗ್ಲಸ್‌ನು ಹೇಳುವಂತೆ ಅಮೆರಿಕದ ಸರ್ಕಾರವು ಬಿಳಿಯ ಜನಕ್ಕೋಸ್ಕರವಾಗಿ ನಿರ್ಮಿತವಾದುದೇ—ನೀಗ್ರೋವಿಗೋಸ್ಕರವಲ್ಲ. ನನ್ನ ಅಭಿಪ್ರಾಯವೂ ಅದೇ. ಆದರೆ ಆತನು ಒಂದು ವಿಷಯವನ್ನು ಮರೆತಿದ್ದಾನೆ. ಅದರಿಂದಲೇ ಇಷ್ಟೆಲ್ಲಾ ತಪ್ಪಾದ ಅರ್ಥವುಂಟಾಗುತ್ತಿದೆ. ನೆಬ್ರಸ್ಕಮಸೂದೆಯಲ್ಲಿರುವ ನ್ಯೂನತೆಯೇ ಅದು. ಜಡ್ಜ್ ಡಗ್ಲಸ್‌ನು ಸಿದ್ದಿಯವನೂ ಕೂಡ ಮನುಷ್ಯನೆಂಬುದನ್ನು ಸ್ಮರಣೆಯಲ್ಲಿಟ್ಟಿಲ್ಲ. ಆದಕಾರಣ ಸಿದ್ದಿಯವನಿಗೆ ನಿರ್ಬಂಧವನ್ನು ಕಲ್ಪಿಸುವುದು ನ್ಯಾಯವೋ ಅಲ್ಲವೋ ಆತನ ಯೋಚನೆಗೆ ಬಂದಿಲ್ಲ. ನಿಮ್ಮ ನೆರೆಯವನು ತನ್ನ ಹಿತ್ತಲಲ್ಲಿ ಹೊಗೆಯ ಸೊಪ್ಪನ್ನು ಬೆಳೆದರೂ ಅಥವಾ ದನಕರುಗಳನ್ನು ಕೂಡಿದರೂ ನಿಮಗೆ ಆ ವಿಷಯವು ಎಷ್ಟು ಮುಖ್ಯವಾದುದೋ ಅದೇ ಪ್ರಕಾರದಲ್ಲಿ ನೆಬ್ರಸ್ಕದಲ್ಲಿ ದಾಸ್ಯವಿರುವುದೂ ಸ್ವಾತಂತ್ರ್ಯವಿರುವುದೂ ಆತನಿಗೆ ಅಷ್ಟು ಪ್ರಕೃತವಾದುದು.''.

ಡಗ್ಲಸ್‌ನಿಗೆ ಬಹಳ ಕೋಪ ಬಂದಿತು. ಲಿಂಕನ್ನನ್ನು ಒಳ್ಳೆಯ ಮಾತಿನಲ್ಲಿಯೇ ಬೈಯುತ್ತಿದ್ದಾನೆಂದು ದೂರಿದನು. ಮುಂದೆ ಅವರಿಬ್ಬರಿಗೂ ಜಿಜ್ಞಾಸೆಯು ನಡೆಯಲಿಲ್ಲ. ಡಗ್ಲಸ್‌ನು ಲಿಂಕನ್ನನನ್ನು ಕುರಿತು, ''ನಮ್ಮ ಸಂಯುಕ್ತ ಸಂಸ್ಥಾನಗಳ ಸೆನೇಟಿನಲ್ಲಿರುವವರೆಲ್ಲರಿಗಿಂತಲೂ ನಿನಗೆ ದಾಸ್ಯ ಪದ್ಧತಿಯ ಗುಣಾವ

ಗುಣಗಳು ಚೆನ್ನಾಗಿ ಗೊತ್ತಿವೆ. ನಿನ್ನೊಡನೆ ಚರ್ಚೆಮಾಡುವುದರಿಂದ ನನಗೇನೂ ಲಾಭವಾಗಲಾರದು. ಸೆನೇಟಿನಲ್ಲಿ ನನ್ನ ಮಸೂದೆಗೆ ಎದ್ದ ವಿರೋಧಕ್ಕಿಂತಲೂ ನಿನ್ನೊಬ್ಬನಿಂದಾದ ವಿರೋಧವು ಬಲವತ್ತರವಾಗಿರುವುದು,'' ಎಂದನು.

ಈ ಉಪನ್ಯಾಸಗಳು ನಡೆದು ಇನ್ನೂ ಬಹಳ ದಿನಗಳಾಗಿರಲಿಲ್ಲ. ಜನರು ಉಪನ್ಯಾಸಕರ ಮಾತು ಇನ್ನೂ ತಮ್ಮ ಕಿವಿಯೊಳಗೆ ಬೀಳುತ್ತಿದೆಯೆನ್ನುತ್ತಿದ್ದರು. ಅಷ್ಟರೊಳಗೆ ಹೊಸಬನೊಬ್ಬ ಸೆನೇಟರನ್ನು ಚುನಾಯಿಸುವ ಸಂಭ್ರಮವೊದಗಿತು. ವ್ಹಿಗ್ಗರು ಲಿಂಕನ್ನನನ್ನು ಚುನಾಯಿಸಿ ಅವನಿಗೆ ಸಹಾಯಮಾಡಲು ಸಿದ್ಧರಾದರು. ಅವನಿಗೂ ಕೂಡ ಆ ಪದವಿಯು ಆಶಯದ ಚರಮ ಸೀಮೆಯಾಗಿದ್ದಿತು. ಸೆನೇಟಿನ ಸಭಿಕನು ಆರು ವರ್ಷಗಳ ತನಕ ಕೆಲಸದಲ್ಲಿರಬಹುದಾಗಿದ್ದಿತು. ಅನೇಕ ತಡವೆ ಲಿಂಕನ್ನನು ಆ ಪದವಿಯನ್ನು ಬಯಸಿ ನಿರಾಶೆಯನ್ನು ಹೊಂದಿದ್ದನು. ನೋಡಲಾಗಿ ಡೆಮೊಕ್ರೆಟರ ಕಡೆಯಲ್ಲಿ ನೆಬ್ರೆಸ್ಕಮಸೂದೆಗೆ ವಿರೋಧಿಯಾದವನೊಬ್ಬನು ಅದೇ ಪ್ರಯತ್ನದಲ್ಲಿದ್ದನು. ಅವನು ದಾಸ್ಯವನ್ನು ದ್ವೇಷಿಸುವವನು. ಸಭೆಯಲ್ಲಿ ಡಗ್ಲಸ್‌ನ ಅಥವಾ ಅವನ ಅನುಚರರ ಆಟವು ಸಾಗದಂತೆ ಮಾಡುವುದು ಅವಶ್ಯಕವಾಗಿದ್ದಿತು. ತಾನು ಸೆನೇಟರಾಗಲು ಪ್ರಯತ್ನಿಸಿದರೆ ಚೀಟಿಗಳೂ ತನಗೂ ಆ ಡೆಮೊಕ್ರೆಟ್-ದಾಸ್ಯದ್ವೇಷಿಗೂ ಬಿದ್ದು ಸಂಖ್ಯೆಯು ದುರ್ಬಲವಾಗುವುದು. ಹಾಗೆ ಮಾಡುವುದಕ್ಕೆ ಬದಲಾಗಿ ತಾನು ಪ್ರಯತ್ನಮಾಡದೆ ನಿಂತುಬಿಟ್ಟರೆ ತನಗೆ ಬರುತ್ತಿದ್ದ ಚೀಟಿಗಳೂ ಆತನ ಹೆಸರಿಗೆ ಹೋಗುವುವೆಂದೂ ಅದರಲ್ಲಿ ಬಹಳ ಗುಣವುಂಟೆಂದೂ ಯೋಚಿಸಿ ಲಿಂಕನ್ನನು ತಟಸ್ಥನಾದನು. ಅಷ್ಟೇ ಅಲ್ಲದೆ, ತನ್ನವರನ್ನೂ ಆತನಿಗೆ ಚೀಟಿ ಹಾಕುವಂತೆ ಪ್ರೇರೇಪಿಸಿದನು. ಡಗ್ಲಸ್‌ನು ಮತ್ತೆ ಮೆಂಬರಾಗಕೂಡದೆಂಬುದು ಅವನ ಸಂಕಲ್ಪವಾಗಿದ್ದಿತು. ತನ್ನ ಏಳಿಗೆಯನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ಕೆಲಸ ಮಾಡಿ ದೇಶದ ಕ್ಷೇಮವನ್ನು ನಿರಾಕರಿಸುವುದು ಸರ್ವಥಾ ಸಮ್ಮತವಲ್ಲವೆಂದು ಯೋಚಿಸಿ ಅವನು ತಟಸ್ಥನಾಗಿದ್ದುಬಿಟ್ಟನು.

ಲಿಂಕನ್ನನ ಇಷ್ಟಾರ್ಥವು ನೆರವೇರಿತು. ಮತ್ತೊಬ್ಬನಿಗೇ ಹೆಚ್ಚು ಚೀಟಿಗಳು ದೊರೆತವು. ಅವನು ನೇಮಕವಾದನು.

---

## ೭ನೆಯ ಅಧ್ಯಾಯ

---

### ೧. "ರಿಪಬ್ಲಿಕನ್" ಪಂಗಡ.

ವಾಷಿಂಗ್ಟನ್ನಿನಲ್ಲಿ ತೋಪು ಹಾರಲಾಗಿ ಅದನ್ನು ಕೇಳಿದವರೆಲ್ಲರೂ ಡಗ್ಲಸ್‌ನ ಕ್ಯಾನ್ಸಾಸ್ ನೆಬ್ರೆಸ್ಕ ಮಸೂದೆಯು ಕಾನೂನಾಯಿತೆಂದು ತಿಳಿದರು. ಕೆಲವರಿಗೆ

ಇಷ್ಟಾರ್ಥವು ಕೈಗೂಡಿದಂತಾಗಿ ಸಂತೋಷದಿಂದ ಮುಖವು ಅರಳಿತು. ಮತ್ತೆ ಕೆಲವರು ಹುಬ್ಬು ಗಂಟಿಕ್ಕಿ ಮುಖವನ್ನು ತಗ್ಗಿಸಿದರು. ಕಾನೂನಿನ ಗುಣಾವ ಗುಣಗಳನ್ನು ಜನರು ಗುಂಪುಗುಂಪಾಗಿ ಕುಳಿತು ಚರ್ಚಿಸಿದರು. ಆದರೆ ಇಬ್ಬರಿಗೂ ಒಂದು ವಿಷಯವು ನಿರ್ಧರವಾಯಿತು. ದಾಸ್ಯವನ್ನು ಪ್ರೋತ್ಸಾಹಿಸುವವರಿಗೆ ವಿಜಯ ವುಂಟಾಗಿ ಆ ಆಚಾರವು ಅಲ್ಲಿ ನೆಲೆಗೊಂಡಿತು. ಹೆಚ್ಚಿನ ಧೈರ್ಯವುಳ್ಳವರು '' ಆದುದರಿಂದಲೇ ನಾವು ಮತ್ತಷ್ಟು ಜೋರಾಗಿ ಹೊಡೆದಾಡಿ ಕಷ್ಟಪಡಬೇಕು '' ಎಂದು ಹೇಳುವುದನ್ನು ಕೇಳಿ, ಅಷ್ಟು ಧೈರ್ಯವಿಲ್ಲದವರು, ದೊಡ್ಡದಾಗಿ ನಿಟ್ಟುಸಿರು ಬಿಡುತ್ತ ಅಲ್ಲಿಂದ ಎದ್ದು ಹೋದರು. ದೇಶದಲ್ಲಿ ಭವಿಷ್ಯತ್ತು ರಜನೀಮುಖವಾ ಗಿದೆಯೆಂದು ಅವರಿಗೆ ಹೆದರಿಕೆಯಾಯಿತು. ಕೊನೆಯಲ್ಲಿ ಸ್ಥಿತಿಯು ಯಾವ ನೆಲೆಗೆ ಬರುವುದೋ ಹೇಳಬಲ್ಲವರಾರು ?

ಜನರ ಮನಸ್ಸಿನ ಅನಿಷ್ಟೋತ್ಪ್ರೇಕ್ಷೆಯು ನಿಜವಾಗುವಂತೆಯೇ ಕಾಣಿಸಿತು. ತಲೆ ತಪ್ಪಿಸಿಕೊಂಡು ಹೋಗಿ ಬಾಸ್ಟನ್ನಿನಲ್ಲಿ ಅಡಗಿದ್ದ ಗುಲಾಮನೊಬ್ಬನು ಪೋಲೀ ಸಿನವರ ಕೈಗೆ ಸಿಕ್ಕಿಬಿದ್ದು ಯಜಮಾನನ ಬಳಿಗೆ ಒಯ್ಯಲ್ಪಟ್ಟನು. ಯಜಮಾ ನನ ಸೊತ್ತಾದುದರಿಂದ ಅವನಿಗೆ ಸ್ವಾತಂತ್ರ್ಯವಿರಲಿಲ್ಲ. ಆದರೆ, ಜನರು ಸುತ್ತಲೂ ಮುತ್ತಿಕೊಂಡು ಚಿತ್ರಹಿಂಸೆಮಾಡುತ್ತ ಅವನನ್ನು ದರದರನೆ ಎಳೆದುಕೊಂಡು ಹೋಗುವುದನ್ನು ನೋಡಿದವರಿಗೆ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಯಿತು. ಅವರು ಮರುಗಿದರು. ಎಲ್ಲರೂ ತಮ್ಮೊಳಗೆ, ಒಬ್ಬನು ಮತ್ತೊಬ್ಬನ ಮೇಲೆ ಅಧಿಕಾರವನ್ನು ತೋರಿಸುವುದು ಧರ್ಮವಾದುದೆ ? ಎಂದು ಕೇಳತೊಡಗಿದರು. ಆ ಪ್ರಶ್ನೆಯು ಮತ್ತೆ ಮತ್ತೆ ಅವರ ಹೃದಯದಲ್ಲಿ ಉತ್ಪನ್ನವಾಯಿತು.

ಈ ರೀತಿಯಲ್ಲಿ ಪ್ರಜೆಗಳ ಮನಸ್ಸಿನಲ್ಲಿ ವಿಧವಿಧವಾಗಿ ಅಭಿಪ್ರಾಯಗಳು ಹುಟ್ಟುತ್ತಿರಲಾಗ ಸಭೆಯ ಪಂಗಡಗಳಲ್ಲಿ ಬದಲಾವಣೆಯು ನಡೆಯುತ್ತಲಿದ್ದಿತು. ಡೆಮೊಕ್ರೆಟರು ದಾಸ್ಯಕ್ಕೆ ಆಶ್ರಯದಾತರೆನ್ನಿಸಿಕೊಂಡುಬಿಟ್ಟರು. ವ್ಹಿಗ್ಗರಲ್ಲಿ ಒಡಕು ಹುಟ್ಟಿ ತಮ್ಮ ಸಂಪ್ರದಾಯಗಳಿಂದ ಒಬ್ಬರಿಗೊಬ್ಬರು ದೂರವಾಗುತ್ತಿದ್ದರು.

ಅವುಗಳ ನಡುವೆ ಹೊಸದೊಂದು ಪಂಗಡವು ಆಕಾರಹೊಂದುತ್ತಿದ್ದಿತು. ಆ ಪಂಗಡದಲ್ಲಿ ಸೇರಿಕೊಳ್ಳುವವರಿಗೆ ದಾಸ್ಯದಲ್ಲಿ ದ್ವೇಷವಿದ್ದರೆ ಸಾಕು. ಇಂಥ ವರು ಅಂಥವರೆಂಬ ಪ್ರಭೇದವಿರಲಿಲ್ಲ. ಅವರು '' ರಿಪಬ್ಲಿಕರ್'' ರೆಂದು ಹೆಸರಿಟ್ಟು ಕೊಂಡು ಬಲಗೊಳ್ಳುತ್ತ ಬಂದರು. ಲಿಂಕನ್ನನು ಅವರಲ್ಲಿ ಮುಂದಾಳಾಗಿ ಕೆಲಸಮಾಡುತ್ತ ಆ ಪಂಗಡದ ಸಂಕಲ್ಪವು ಸಾಂಗವಾಗಲು ಸಹಾಯಮಾಡುತ್ತಿದ್ದನು.

ರಿಪಬ್ಲಿಕರ್ ಪಕ್ಷದ ತತ್ವವು ಸಾಮಾನ್ಯವಾದುದು. ದಾಸ್ಯಕ್ರಮವು ನಿನ್ನೆ ಯಾವಯಾವ ಕಡೆಯಲ್ಲಿ ಇದ್ದಿತೋ ಅಲ್ಲಿ ಈ ದಿನವೂ ಇರಲಿ. ಆದರೆ ಆ ಎಲ್ಲೆ ಯನ್ನು ಮೀರಿ ಹೊರಕ್ಕೆ ಕಾಲಿಟ್ಟು ಹರಡುವುದಕ್ಕೆ ಮಾತ್ರ ಅದಕ್ಕೆ ಎಂದಿಗೂ ಅವಕಾಶವನ್ನು ಕೊಡಕೂಡದು. ಹೀಗೆ ಮಾಡುವುದು ಶಾಸನಕ್ರಮವನ್ನೂ ಸಂಯೋ ಗವನ್ನೂ ಸಂರಕ್ಷಿಸುವುದಕ್ಕಾಗಿ ಅವಶ್ಯಕವಾದುದು. ಧರ್ಮವು ದಾಸ್ಯದ ವಿಸ್ತಾರ ದಲ್ಲಿ ಸಮ್ಮತಿಸುವುದಿಲ್ಲ. ಈ ಭಾವನೆಯು ಉತ್ತರದ ವ್ಹಿಗ್ಗರ ಮತ್ತು ಡೆಮೊ

ಕ್ರೆಟರ ಮನಸ್ಸಿನಲ್ಲಿ ಮೊದಲಿಂದಲೂ ಇದ್ದಿತು. ಆದರೆ ಅದನ್ನು ಸೂಕ್ಷ್ಮವಾಗಿ ಪರಿಶೀಲಿಸಿ ತತ್ವವನ್ನಾಗಿ ಯಾರೂ ಇಟ್ಟುಕೊಂಡಿರಲಿಲ್ಲ. ಕೆಲವರು ದಾಸ್ಯವನ್ನು ಬಹಳವಾಗಿ ದ್ವೇಷಿಸುತ್ತ ಅದರ ಕಡೆಗೆ ಹೆಚ್ಚಾಗಿ ಗಮನವನ್ನು ನೀಡಿದರೂ ಕೂಡ, ಸಂಯೋಗಕ್ಕೆ ಅಪಾಯವುಂಟಾಗುವ ಸಂದರ್ಭದಲ್ಲಿ ಯಾವುದಾದರೊಂದು ಕಾರಣ ವನ್ನು ಹೇಳಿಕೊಳ್ಳುತ್ತ ದಾಸ್ಯದ ವಿಷಯವನ್ನು ಮೂಲೆಗೊತ್ತರಿಸಲು ಸಿದ್ಧರಾ ಗಿದ್ದರು. ಕೆಲವರು ಕೆಲವು ವಿಧವಾದ ಅಭಿಪ್ರಾಯಗಳಿದ್ದರೂ ಸಂದಿಗ್ಧಸಮಯ ದಲ್ಲಿ ಆಚರಣೆಯು ಹೇಗಿರಬೇಕೆಂಬುದನ್ನೂ ಮೂಲತತ್ವಗಳು ಯಾವ ರೂಪವನ್ನು ಹೊಂದುವುವೆಂಬುದನ್ನೂ ತಿಳಿಯಲಾರದಿದ್ದರು. ಲಿಂಕನ್ನನು ವ್ಯವಹಾರವಿವರಣೆ ಯಲ್ಲಿ ತಪ್ಪು ಮಾಡುತ್ತ, ಸೂಕ್ಷ್ಮಸಮಯದಲ್ಲಿ ಅನುಮಾನಮಾಡಿ ಕೆಡಿಸುತ್ತಿ ದ್ದರೂ, ರಾಜನೀತಿಯನ್ನು ತಿಳಿದವರಲ್ಲಿರಬೇಕಾದ ಮುಖ್ಯ ಗುಣಗಳು ಕೆಲವಿಲ್ಲದಿ ದ್ದರೂ, ಇಂತಹ ವಿಚಾರಗಳಲ್ಲಿ ಮಾತ್ರ ಸ್ಪಷ್ಟವಾದ ತಿಳುವಳಿಕೆಯುಳ್ಳವನಾಗಿ ಇತರರ ಮನಸ್ಸನ್ನೂ ತನ್ನೊಡನೆ ಒಯ್ಯುತ್ತಿದ್ದನು.

ಹೆನ್ರಿಕ್ಲೆಯ ವಿಷಯದಲ್ಲಿ ಒಂದಾವೃತ್ತಿ ಅವನು ಹೇಳಿದ "ಅವನಿಗೆ ತನ್ನ ದೇಶದಲ್ಲಿ ಬಹಳ ಪ್ರೀತಿಯಿರುವುದು. ಅದಕ್ಕೆ ಎರಡು ಕಾರಣಗಳಿರುವವು: ದೇಶವು ತಾನು ಹುಟ್ಟಿದುದು. ಅದಕ್ಕಿಂತಲೂ ಹೆಚ್ಚಾಗಿ, ದೇಶದಲ್ಲಿ ಪ್ರಜೆಗಳಿಗೆ ಸ್ವಾತಂತ್ರ್ಯ ವಿರುವುದು" ಎಂಬ ಮಾತುಗಳು ಲಿಂಕನ್ನನ ವಿಷಯದಲ್ಲಿಯೂ ನಿಶ್ಚಯವಾಗಿರು ವುವು. ತನ್ನ ದೇಶದ ಪ್ರಜೆಗಳು ಒಂದು ಜನಾಂಗವೆನ್ನಿಸಿಕೊಂಡಿರುವುದನ್ನೂ ಪ್ರಚಾರದಲ್ಲಿರುವ ಶಾಸನಕ್ರಮವನ್ನೂ ನೋಡಿ ನೋಡಿ ಅಭಿಮಾನವನ್ನೂ ಪ್ರೀತಿ ಯನ್ನೂ ಹೊಂದುತ್ತಿದ್ದನು. ಶಾಸನಕ್ರಮವೆಂತಹದೆಂಬುದೂ ಅದರ ಬೆಲೆ ಎಂತಹ ದೆಂಬುದೂ ಅವನಿಗೆ ಸ್ಪಷ್ಟವಾಗಿ ಅರಿವಾಗಿದ್ದಿತು. ಪ್ರಾಯಶಃ ಇತರರಿಗೆ ಅಷ್ಟು ಸ್ಪಷ್ಟವಾಗಿ ಗೊತ್ತಿರಲಾರದು. ಆ ಕಾರಣದಿಂದಲೇ ಅವನು, ಮುಂದೆ ಜನಗಳು ಇತರ ವಿಚಾರಗಳಿಗಾಗಿ ಜಗಳವನ್ನು ಹತ್ತಿಸಿಕೊಂಡು ರಾಜ್ಯದ ಐಕಮತ್ಯಕ್ಕೆ ಭಂಗ ವನ್ನುಂಟುಮಾಡುವುದರಲ್ಲಿದ್ದಾಗ, ಎಷ್ಟು ನಷ್ಟವಾದರೂ ಲಕ್ಷ್ಯವಿಡದೆ ಅದನ್ನು ಸಂರಕ್ಷಿಸಿ ಉದ್ಧರಿಸಲು ಪ್ರಯಾಸಪಟ್ಟನು. ಇತರರಿಂದ ಆ ಕೆಲಸವು ಪ್ರಾಯಶಃ ಸಾಧ್ಯವಾಗುತ್ತಿರಲಿಲ್ಲ. ಆದರೆ ಅಮೆರಿಕದವರನ್ನು ಪ್ರತ್ಯೇಕವಾದ ಮತ್ತೂ ಗೌರವ್ಯ ವಾದ ಜನಾಂಗವನ್ನಾಗಿ ಮಾಡಿದ ಮೂಲತತ್ವಗಳನ್ನು ಕಳೆದುಕೊಂಡು ಮಾತ್ರ ಅವನು ಸಂಯೋಗವನ್ನು ರಕ್ಷಿಸಲು ಒಪ್ಪಲಿಲ್ಲ.

ಆ ಮೂಲತತ್ವಗಳು ಸ್ವಾತಂತ್ರ್ಯಪ್ರಕಟಣೆಯಲ್ಲಿ (Declaration of Independence) ಅಡಕವಾಗಿದ್ದುವು. ಅದರ ವಾಕ್ಯರಚನೆಯಲ್ಲಿ ಸ್ವಲ್ಪ ತಪ್ಪಿರ ಬಹುದು; ಆದರೆ ಸಂಯುಕ್ತ ಸಂಸ್ಥಾನಗಳನ್ನು ಏರ್ಪಡಿಸಿದವರು ತಮ್ಮ ಉದ್ದೇ ಶದಲ್ಲಿ ಮಾತ್ರ ಎಂದಿಗೂ ತಪ್ಪಿರಲಿಲ್ಲ. ಮನುಷ್ಯರೆಲ್ಲರೂ ಸಮಾನರು. ಹೆಂಗಸೂ ಗಂಡಸೂ ಸಮಾನರು. 'ಪ್ರಜೆಗಳ ಮನೋಗತ' ವೆಂದು ಹೇಳುತ್ತಾರೆ. ಆ ಪ್ರಜೆಗಳ ಮನೋಗತದಲ್ಲಿ ಸಾರಭೂತವಾದ ಅಂಶವೊಂದು ಅಡಗಿಯೇ ಇರುವುದು. ಪೂರ್ವದಲ್ಲಿ ನಮ್ಮ ಜನರ ಮನಸ್ಸಿನಲ್ಲಿ "ಮನುಷ್ಯರೆಲ್ಲರೂ ಸಮಾನರು" ಎಂಬುದು

ಮುಖ್ಯವಾದ ಅಭಿಪ್ರಾಯವಾಗಿದ್ದಿತು. ಈ ಅಭಿಪ್ರಾಯವು ಈಚೆಗೆ ಕೆಲವು ಕಾರಣಗಳಿಂದ ವಿಪರ್ಯಾಸಹೊಂದಿ ಕೆಲವರು ಅಸಮಾನರಾಗಿರಬಹುದು. ಆದರೆ ಬರುತ ಬರುತ ನ್ಯಾಯವಾದ ಅಭಿಪ್ರಾಯವೇ ಹುಟ್ಟಿ ಸಮಾನತೆಯು ಎಲ್ಲಾ ವ್ಯವಹಾರಗಳ ಮೂಲಕವೂ ತೋರ್ಪಡುವುದು'' ಎಂದು ಲಿಂಕನ್ನನು ಹೇಳಿದನು, ''ಸಮತೆಯು ಜನಗಳೆಲ್ಲರಲ್ಲಿಯೂ ಇರುವುದೆಂದು ನಮ್ಮ ಪೂರ್ವಿಕರು ಹೇಳಲಿಲ್ಲ. ಅಥವಾ ತಮ್ಮ ಪ್ರಯತ್ನದಿಂದ ಸದ್ಯದಲ್ಲಿಯೇ ಅದು ಸಾಧ್ಯವಾಗುವುದೆಂದು ಹೇಳಲಿಲ್ಲ. ಆದರೆ, ಜನಗಳು ತಮ್ಮ ಕಾರ್ಯಗಳ ಬೆಂಬಲದಿಂದ ಅದನ್ನು ಪಡೆಯುವರೆಂದು ಅವರು ನಿರೀಕ್ಷಿಸಿದರು.''

ಬಿಳಿಯ ಜನರೊಳಗೆ ಅದು ಸಾಧ್ಯವಾದಷ್ಟು ಮಟ್ಟಿಗ ಲಭಿಸಿದ್ದಿತು. ಲಕ್ಷಾಂತರ ಜನರು ಆ ರಾಜ್ಯಕ್ಕೆ ಬಂದು ವಾಸಮಾಡುತ್ತ ಇತರ ರಾಜ್ಯಗಳಲ್ಲಿ ಕಾರಣಾಂತರಗಳಿಂದ ದೊರೆಯದಿದ್ದ ಆನುಕೂಲ್ಯಗಳನ್ನೆಲ್ಲಾ ಅಮೆರಿಕದಲ್ಲಿ ಹೊಂದಿ ಜೀವಿಸುತ್ತಿದ್ದರು. ಜರ್ಮನಿಯಿಂದ ಜನಗಳು ತಂಡತಂಡವಾಗಿ ಬಂದು ನೆಲಸಿ, ತಮ್ಮ ರಾಜ್ಯದಲ್ಲಿದ್ದ ನಿರ್ಬಂಧವನ್ನು ತಪ್ಪಿಸಿಕೊಂಡು ಸ್ವತಂತ್ರರಾಗಿದ್ದರು. ಯೂರೋಪಿನ ಇತರ ದೇಶಗಳಿಂದಲೂ ಜನಪ್ರವಾಹವು ಬಂದೊದಗುತ್ತಿದ್ದಿತು.

ಮನುಷ್ಯರು ಸ್ವತಂತ್ರರೆಂದೂ ಸಮಾನರೆಂದೂ ಹೇಳುವುದು ಸುಲಭ. ಬಿಳಿಯ ಜನಗಳಲ್ಲಿ ಆ ತತ್ವಗಳು ಸಾರ್ಥಕವಾದರೂ ಆಗಬಹುದು. ಆದರೆ ನೀಗ್ರೋಗಳ ವಿಷಯದಲ್ಲಿ ಮಾತ್ರ ಅವು ನಿಷ್ಪ್ರಯೋಜಕವಾಗಿದ್ದುವು. ಲಿಂಕನ್ನನು ಹೀಗೆಂದನು: ''ಬಿಳಿಯ ಜನರೂ ಕರಿಯ ಜನರೂ ಸಮಾನರೆಂದೆಣಿಸುವ ವಿವೇಚನೆಯಿಲ್ಲದ ತತ್ವವನ್ನು ಪ್ರಾಯಶಃ ಬಿಳಿಯ ಜನರಲ್ಲಿ ಎಲ್ಲರೂ ತಿರಸ್ಕರಿಸುವರು.'' ಅದೇನೂ ಅತಿಶಯವಲ್ಲ. ಕರಿಯ ಜನರಲ್ಲಿಯೇ ಈ ವಿಧವಾದ ಭೇದಭಾವವುಂಟಾಗುತ್ತದೆ. ವಿದ್ಯಾವಂತರಾಗಿ ಉತ್ತಮಸ್ಥಿತಿಗೆ ಬಂದವರು ತಮಗಿಂತ ಕೆಳಗಿರುವವರನ್ನು ತಿರಸ್ಕಾರದಿಂದ ಕಾಣುತ್ತಾರೆ. ಈ ಎರಡು ಬಗೆಯ ಜನಗಳಲ್ಲಿ ಪರಸ್ಪರವಾಗಿ ಸಂಬಂಧವನ್ನು ಬೆಳೆಯಿಸುವುದು ಲಿಂಕನ್ನನಿಗೆ ಅಸಹ್ಯವಾಗಿದ್ದಿತು. ಬಂಧವಿಮುಕ್ತರಾದರೂ ಆಡಳಿತದ ಭಾಗದಲ್ಲಿ ಪ್ರವೇಶಿಸಲು ಅವರಿಗೆ ಅರ್ಹತೆಯಿರಲಿಲ್ಲ. ಆಫ್ರಿಕದಲ್ಲಿ ಅವರದೇ ಪ್ರತ್ಯೇಕವಾದೊಂದು ಕಾಲೊನಿಯನ್ನೇರ್ಪಡಿಸಿ ವಿದ್ಯೆಯನ್ನೂ ನಾಗರಿಕತೆಯನ್ನೂ ಅವರೊಳಗೆ ಹೆಚ್ಚಿಸಬೇಕೆಂದು ಅವನಿಗೆ ಅಪೇಕ್ಷೆಯಿದ್ದಿತು. ಆದರೆ ಅದನ್ನೂ ಕಾಲಕ್ರಮದಲ್ಲಿ ಸವಿರಾಮವಾಗಿ ನಡೆಯತಕ್ಕದ್ದು! ಯುದ್ಧವು ಮುಗಿದ ಮೇಲೆ ಲಿಂಕನ್ನನು ಜೀವಿಸಿದ್ದ ಪಕ್ಷದಲ್ಲಿ ಆ ಕಾರ್ಯವನ್ನು ಸಾಧಿಸದೆ ಬಿಡುತ್ತಿರಲಿಲ್ಲ. ಈ ಪ್ರಸಕ್ತಿಯಲ್ಲಿ ಹೆಜ್ಜೆ ಹೆಜ್ಜೆಗೂ ಕಷ್ಟವೆದ್ದು ನಿಲ್ಲುತ್ತಿದ್ದಿತು. ಆದರೂ ದಾಸ್ಯವು ಶಾಶ್ವತವಾಗಿ ನಿಲ್ಲುವುದೆಂದು ಭಾವಿಸುವುದು ಶುದ್ಧ ತಪ್ಪು. ಸಂಯೋಗವನ್ನು ರಕ್ಷಿಸುವ ಕೆಲಸವು ಮುಂದೆ ಬಂದು ಅಡ್ಡವಾಗದಿದ್ದ ಪಕ್ಷದಲ್ಲಿ ಅವನು ದಾಸ್ಯದ ಎಲ್ಲೆಯನ್ನು ಸ್ವಲ್ಪ ಸ್ವಲ್ಪವಾಗಿ ಒತ್ತಿಸಿ ಕೊನೆಗೆ ಬತ್ತಿಸಿಬಿಡುತ್ತಿದ್ದನು. ಅವನಿಗೆ ತಾಳ್ಮೆಯು ಬಹಳವಿದ್ದಿತು. ಆದರೆ ದಕ್ಷಿಣದ ಕುತರ್ಕವನ್ನು ಕೇಳಿದಾಗ ಮಾತ್ರ ತಡೆಯಲಾಗದಂತಹ ಕೋಪವುಂಟಾಗುತ್ತಿದ್ದಿತು. ''ನೀಗ್ರೋ ಹೆಂಗ

ಸೊಬ್ಬಳು ನನ್ನ ಗುಲಾಮಳಾಗಿರಲು ನನಗೆ ಇಷ್ಟವಿಲ್ಲವೆಂದಮಾತ್ರಕ್ಕೆ ಆಕೆಯನ್ನು ನನ್ನ ಹೆಂಡತಿಯನ್ನಾಗಿ ಮಾಡಿಕೊಳ್ಳಲು ಇಷ್ಟವುಂಟೆಂದು ನೀವು ಅರ್ಥಮಾಡುವಿರಿ. ಅದು ತೀರ ಮೋಸದ ಮಾತು. ನನಗೆ ಎರಡು ವಿಧವಾಗಿಯೂ ಆಕೆಯು ಅವಶ್ಯಕವಿಲ್ಲ. ಆಕೆಯು ತಂಟೆಗೆ ಹೋಗದಿದ್ದರೆ ಸಾಕು. ಕೆಲವು ವಿಷಯದಲ್ಲಿ ಆಕೆಯು ನನಗೆ ಸಮಾನಳಲ್ಲ. ಆದರೆ, ವೈಬೆವರುವಂತೆ ದುಡಿದು ಸಂಪಾದಿಸುವುದನ್ನು ಅನುಭವಿಸಲು ಆಕೆಯು ನನ್ನಂತೆಯೇ ಬಾಧ್ಯಳು. ನನಗೆ ಮಾತ್ರವೇ ಅಲ್ಲ, ಆಕೆಯು ಆ ವಿಷಯದಲ್ಲಿ ಎಂಥಾ ಮನುಷ್ಯನಿಗಾದರೂ ಸಮಾನಳು.''

'' ದಾಸ್ಯದ ವಿಷಯದಲ್ಲಿಯೂ ಅವರು (ಪೂರ್ವಿಕರು) ನ್ಯಾಯಮಾರ್ಗದಿಂದಲೇ ಪ್ರವರ್ತಿಸಿದರು. ದಾಸ್ಯವು ಪ್ರಚಾರದಲ್ಲಿರಬೇಕೆಂದು ಅವರು ಒಪ್ಪಿಕೊಂಡರು. ಅದು ಅಗತ್ಯವಾಗಿದ್ದಿತು. ಅಷ್ಟು ಹೊರತು ಮತ್ತಾವ ಕಾರಣವೂ ಇರಲಿಲ್ಲ. ಅವರು ಅದನ್ನು ಮೀರಿಯೂ ಪ್ರವರ್ತಿಸಲಿಲ್ಲ. '' ಪೂರ್ವಿಕರು ಇಂಗ್ಲೆಂಡಿಗೆ ವಿರೋಧವಾಗಿ ಪ್ರತಿಭಟಿಸಿ ಸ್ವಾತಂತ್ರ್ಯವನ್ನು ಪಡೆದಮೇಲೆ ಸಂಯೋಗವನ್ನು ನಿರ್ಮಿಸುವಾಗ ಐಕಮತ್ಯವು ಅಗತ್ಯವಾಗಿದ್ದಿತು. ಅಮೆರಿಕದ ಆ ರಾಜ್ಯಗಳು ಒಟ್ಟಾಗಿ ಸೇರಲೊಪ್ಪಿದರೂ ತಮ್ಮ ಕೆಲವು ಆಚಾರಗಳನ್ನೂ ಆನುಕೂಲ್ಯಗಳನ್ನೂ ಬಿಡಲೊಪ್ಪಲಿಲ್ಲ. ಆ ಕಾಲದಲ್ಲಿ ಸಂಯೋಗವು ಮುಖ್ಯವಾಗಿ ಇತರ ಅಂಶಗಳು ಗಣನೆಗೆ ಬರಲಿಲ್ಲ. ದಾಸ್ಯಪದ್ಧತಿಯುಳ್ಳ ರಾಷ್ಟ್ರಗಳ ಮಾತನ್ನು ಗೌರವಿಸಬೇಕಾಗಿ ಬಂದುದರಿಂದ ಶಾಸನಕ್ರಮವನ್ನು ನಿರ್ಮಿಸುವಾಗ ಮುಂದಾಳುಗಳು ದಾಸ್ಯವು ಆಯಾ ರಾಜ್ಯಗಳಲ್ಲಿ ಪ್ರಚಾರದಲ್ಲಿರಬೇಕೆಂದು ಗೊತ್ತುಮಾಡಿದರು. ಸಮಯವು ಅಂಥದಾಗಿದ್ದಿತು. ಪ್ರತ್ಯೇಕವಾದ ಜನಾಂಗವೇರ್ಪಟ್ಟ ಮೇಲೆ ಶಾಸನಕರ್ತರು ತಮಗೆ ಸಾಧ್ಯವಾದಷ್ಟು ಅಧಿಕಾರವನ್ನು ಪ್ರಯೋಗಿಸಿ ದಾಸ್ಯವನ್ನು ಅಡಗಿಸಲು ಪ್ರಯತ್ನಿಸಿದರು. ಸ್ವತಂತ್ರ ರಾಜ್ಯಗಳೂ ಕಾಲಕ್ರಮದಲ್ಲಿ ತಮ್ಮ ಕೈಲಾದ ಸಾಹಸವನ್ನು ಮಾಡಿ ಅದನ್ನು ನಿರ್ನಾಮಮಾಡುವುವೆಂದು ಅವರು ನಿರೀಕ್ಷಿಸಿದರು. ಆದ ಕಾರಣ ಪ್ರಕೃತದಲ್ಲಿ ದಾಸ್ಯವನ್ನು ಹರಡುವುದಕ್ಕೆ ಬದಲಾಗಿ '' ತಮ್ಮ ಪೂರ್ವಿಕರು ಎಲ್ಲಿ ಇಟ್ಟದ್ದರೋ ಆ ಪ್ರದೇಶಕ್ಕೆ ಹಿಂದಿರುಗಿಸುವುದು '' ರಾಜನೀತಿವಿಶಾರದರ ಕರ್ತವ್ಯವಾಗಿದ್ದಿತು.

ನೋಡಲಾಗಿ ಲಿಂಕನ್ನನು ಶಾಸನಕ್ರಮದ ವಾಕ್ಯವನ್ನನುಸರಿಸಿ, ದಾಸ್ಯವನ್ನು ನಿರ್ಮೂಲಮಾಡಬೇಕೆಂಬುದನ್ನು ಬಿಟ್ಟು ಅದು ಹಿಂದೆ ಎಲ್ಲಿದ್ದಿತೋ ಈಗಲೂ ಅಲ್ಲಿರಲೆಂದು ಹೇಳುವುದಕ್ಕೆ ಸಂಯೋಗವನ್ನು ಉಳಿಸಿಕೊಳ್ಳುವುದು ಮೊದಲನೆಯ ಕೆಲಸವೆಂದು ಅವನು ಭಾವಿಸಿದ್ದುದೇ ಕಾರಣವಾಗಿ ತೋರಿಬರುತ್ತದೆ. ಇತರ ಅಂಶಗಳನ್ನು ಲಕ್ಷ್ಯಕ್ಕೆ ತಂದುಕೊಳ್ಳದೆ ಅವನ ಈ ಅಭಿಪ್ರಾಯವೊಂದನ್ನೇ ಪ್ರತ್ಯೇಕಪಡಿಸಿ ನೋಡಿದರೆ ಅವನ ಮಾತಿನಲ್ಲಿ ನ್ಯಾಯವಿರುವಂತೆ ತೋರುವದಿಲ್ಲ. ಅದನ್ನು ಪೂರ್ವದಿಂದಲೂ ದ್ವೇಷಿಸುತ್ತ ಎಂದಿಗೆ ನಾಶಮಾಡೇನೆಂದು ಹಾರೈಸುತ್ತಿದ್ದವನ ಬಾಯಲ್ಲಿ ದಾಸ್ಯವು ಪ್ರಚಾರದಲ್ಲಿರಲೆಂಬ ಮಾತು ನಮಗೆ ಆಶ್ಚರ್ಯವ

ನ್ನುಂಟುಮಾಡುತ್ತದೆ. ಆದರೆ ಇತರ ಅಂಶಗಳನ್ನು—ಅಂದರೆ ಕಾಲದೇಶಗಳನ್ನು—ಲಕ್ಷ್ಯಕ್ಕೆ ತಂದುಕೊಂಡು ನಿಷ್ಪಕ್ಷಪಾತವಾದ ಮನಸ್ಸಿನಿಂದ ವಿಚಾರಮಾಡಿ ನೋಡಿದರೆ ಅವನ ಈ ಅಭಿಪ್ರಾಯವು ಯುಕ್ತವಾಗಿ ಕಾಣಿಸುತ್ತದೆ. ಯುಕ್ತವಾದ ವಿಷಯವು ನ್ಯಾಯಬದ್ಧವಾಗಿರಬಹುದು ಅಥವಾ ಇಲ್ಲದಿರಬಹುದು. ಆದರೆ ಒಂದೊಂದು ಸಮಯದಲ್ಲಿ ಕೇವಲ ನ್ಯಾಯವಾದುದೆಂಬ ಅಂಶವನ್ನು ಹಿಂದಕ್ಕೊತ್ತರಿಸಿ ಯುಕ್ತವಾದುದನ್ನು ಅನುಸರಿಸಬೇಕಾಗುತ್ತದೆ. ಸಂಯೋಗವನ್ನು ಕಾಪಾಡುವುದು ಮುಖ್ಯ ಕಾರ್ಯವಾದುದರಿಂದ ದಾಸ್ಯವು ಪ್ರಚಾರದಲ್ಲಿದ್ದರೂ ಬಾಧಕವಿರಲಿಲ್ಲ. ಒಂದನ್ನು ಉಳಿಸಿಕೊಂಡು ಮತ್ತೊಂದನ್ನು ತುಳಿದುಹಾಕಲು ಏಕಕಾಲದಲ್ಲಿ ಸಾಧ್ಯವಿಲ್ಲವೆಂಬುದನ್ನು ತಿಳಿದೇ ಪ್ರಾಯಶಃ ಲಿಂಕನ್ನನು ಮೇಲೆ ಹೇಳಿರುವಂತೆ ತರ್ಕಿಸಿದನು. ಆದ್ದರಿಂದಲೇ ಅವನು ದಾಸ್ಯವನ್ನು ಏಕಾಏಕಿ ನಿರ್ಮೂಲಮಾಡಬೇಕೆನ್ನುತ್ತಿದ್ದ ಅಬಾಲಿಷಿನಿಸ್ಟ್ (Abolitionist) ಜನಗಳ ಗುಂಪಿಗೆ ಸೇರಲಿಲ್ಲ. ಅವನು ತತ್ವಗಳಲ್ಲಿ "ಮಾಡರೇಟ್" ಮತ್ತು "ಕಾನ್ಸರ್ವೆಟಿವ್" ಆಗಿದ್ದನು. ಸಮಯಸನ್ನಿವೇಶಗಳ ಮಹಿಮೆಯನ್ನರಿತು ವ್ಯವಹರಿಸುವುದನ್ನು ತಿಳಿದ ಆ ವಿವೇಕಿಗೆ, "slavery is violation of eternal right. We have temporised with it from the necessities of our condition; but as sure as god reigns and school-children read, that black foul lie can never be consecrated into God's hallowed truth" ಎಂಬ ಅಭಿಪ್ರಾಯವಿದ್ದಿತು. ಆದರೆ ಅದು ತಪ್ಪೆಂದು ಒಬ್ಬನು ತಿಳಿದರೆ ಸಾಲದು—ಪ್ರಜೆಗಳೆಲ್ಲರೂ ತಿಳಿಯಬೇಕು. ಅವರೆಲ್ಲರೂ ತಿಳಿಯುವಂತೆ ಮಾಡಿದುದು ಲಿಂಕನ್ನನ ಪ್ರಯತ್ನವಾಗಿದ್ದಿತು. ಪ್ರಜೆಗಳಲ್ಲಿ ಕೆಲವರು ದಾಸ್ಯವೇ ಮುಖ್ಯವೆಂದೆಣಿಸಿದರು. ಇನ್ನು ಕೆಲವರು ಸಂಯೋಗವೇ ಮುಖ್ಯವೆಂದು ಭಾವಿಸಿ ದಾಸ್ಯದಲ್ಲಿ ಉದಾಸೀನರಾದರು. ಲಿಂಕನ್ನನು ಅವೆರಡು ಅಂಶಗಳನ್ನೂ ತೂಗಿ ನೋಡಿದನು. ಯಾವುದು ಹೆಚ್ಚಿನ ತೂಕವುಳ್ಳದ್ದೆಂಬುದು ಅವನ ಮುಂದಿನ ವ್ಯವಹಾರದಿಂದ ಗೊತ್ತಾಗುತ್ತದೆ. 1861 ರಲ್ಲಿ ಸಂಯೋಗದ ರಕ್ಷಣೆಗಾಗಿ ಯುದ್ಧಕ್ಕೆರಗಿ 1863 ರಲ್ಲಿ ಗುಲಾಮರ ಬಂಧವಿಮೋಚನೆಯನ್ನು ಕೈಗೆ ತೆಗೆದುಕೊಂಡನು. ಎರಡನ್ನೂ ಏಕಕಾಲದಲ್ಲಿ ಸಾಧಿಸಲಾಗುವುದೇ ಎಂಬುದನ್ನು ಪರೀಕ್ಷಿಸುವುದಕ್ಕೋಸ್ಕರ ಅವನು ಯುದ್ಧವನ್ನು ಪ್ರಾರಂಭಿಸಲು ತಡಮಾಡಿದನು—ದಾಸ್ಯಪದ್ಧತಿಯನ್ನುಳ್ಳ ಸಂಸ್ಥಾನಗಳ ಬಾಧ್ಯತೆಗಳನ್ನು ಗೌರವಿಸಿ ಆ ಮೂಲಕ ಸಂಯೋಗವನ್ನು ಕಾಪಾಡಲಾಗುವುದೇ ಎಂದು ಯೋಚಿಸಿದನು. "ಗುಲಾಮರೆಲ್ಲರನ್ನೂ ಬಿಡುಗಡೆಮಾಡುವುದರಿಂದ ಸಂಯೋಗವು ನಿರಪಾಯವಾಗುವುದಾದರೆ ಹಾಗೆ ಮಾಡುವೆನು. ಒಬ್ಬರನ್ನೂ ಬಿಡಿಸದಿದ್ದಲ್ಲಿ ನಿರಪಾಯವಾಗುವುದಾದರೆ ಹಾಗೆ ಮಾಡುವೆನು; ಕೆಲವರನ್ನು ಬಿಡುಗಡೆಮಾಡಿ ಕೆಲವರನ್ನು ಬಿಡಿಸದಿದ್ದ ಪಕ್ಷದಲ್ಲಿ ಅದು ಉಳಿಯುವುದಾದರೆ ಹಾಗೂ ಮಾಡುವೆನು." ಎಂದನು. ಆದರೂ ಸ್ಪೀಡನಿಗೆ ಬರೆದಿರುವ ಕಾಗದದಲ್ಲಿ ದಾಸ್ಯವು ಅವನಿಗೆ ಎಷ್ಟು ವ್ಯಥೆಯನ್ನುಂಟುಮಾಡುತ್ತಿದ್ದಿತೆಂಬುದು ವ್ಯಕ್ತವಾಗುವುದು. ಅಂತಃ ಕಲಹಕಾಲದಲ್ಲಿ ಅಪಾ

ಯಕ್ಕೆ ಸಿಕ್ಕಿದ್ದುದು ಜನಾಂಗ ; ಅದು ಉಳಿದು ನಡೆದುಕೊಂಡು ಬರುವುದೆಂಬುದು ಎಲ್ಲರಿಗೂ ಯೋಚನೆಯಾಗಿದ್ದಿತು.

ದಾಸ್ಯಕ್ಕೆ ಲಿಂಕನ್ನನು ಮಾಡಿದ ಚಿಕಿತ್ಸೆಯು ಎಲ್ಲರಿಗೂ ತಿಳಿದ ವಿಷಯ. ಅದು ವೈದ್ಯರು ಒಂದೊಂದು ವೇಳೆ ಮಾಡುವ ಸಾಮಾನ್ಯವಾದ ಉಪಾಯ. ರೋಗವು ಪ್ರಮಾದಕ್ಕೆ ಬರುವಹಾಗಿದ್ದಲ್ಲಿ ವೈದ್ಯನು ಅದನ್ನು ಒಮ್ಮಿಂದೊಮ್ಮೆಗೆ ಅಡಗಿಸಿಬಿಡುವುದಿಲ್ಲ. ಹಾಗೆ ಮಾಡಲು ಯತ್ನಿಸಿದಲ್ಲಿ ರೋಗವು ಕೈಮೀರಿ ಹೋದೀತು. ಅವನು ಅದು ಮೊದಲು ಹೆಚ್ಚದಂತೆ ಮಾಡಿ ಆ ಬಳಿಕ ಕ್ರಮವಾಗಿ ತಗ್ಗಿಸುವನು. ರೋಗವು ಕೊನೆಯಲ್ಲಿ ಗುಣಹೊಂದುವುದು. ದಾಸ್ಯವು ಒಂದೆರಡು ವರ್ಷಗಳಲ್ಲಲ್ಲದಿದ್ದರೆ ನೂರು ವರ್ಷಗಳ ಕಾಲದಲ್ಲಿ ನಿರ್ಮೂಲವಾಗಲೆಂದು ಲಿಂಕನ್ನನು ಹೇಳಿದನು. ಸ್ವಲ್ಪ ತಾಳ್ಮೆಯಿದ್ದರೆ ಎಷ್ಟೋ ಕೆಲಸವು ನೆರವೇರುತ್ತಿದ್ದಿತು. ತಾಳ್ಮೆಯಿದ್ದರೂ ದಾಸ್ಯವು ಮಿಸ್ಸೌರಿಯನ್ನು ದಾಟಿ ಕ್ಯಾನಸಾಸನ್ನೂ ಪ್ರವೇಶಿಸದ ಹಾಗೆ ನೋಡಿಕೊಳ್ಳುವುದು ಅವಶ್ಯಕವಾಗಿದ್ದಿತು. ಕ್ಯಾನಸಾಸ್ ರಾಜ್ಯಕ್ಕೆ ದಕ್ಷಿಣದಿಂದಲೂ ನಿವಾಸಿಗಳು ಹೋಗಿ ನೆಲಸಬಹುದು. ಆದರೆ ಅವರೊಡನೆ ದಾಸ್ಯವೂ ಹೋಗಿ ನೆಲಸಕೂಡದು. ಹೀಗೆ ಮಾಡಿ ಕೊನೆಗೆ ಅದನ್ನು ನಾಶ ಮಾಡಲು ಸಾಧ್ಯವಾಗುತ್ತಿದ್ದಿತು.

ಲಿಂಕನ್ನನು 1856ರಲ್ಲಿ ಇಲಿನ್ವಾದಲ್ಲಿಯೂ ಒಂದು ರಿಪಬ್ಲಿಕ್ ಸಂಗಡವನ್ನೇರ್ಪಡಿಸಿದನು. ಅದಕ್ಕಾಗಿ ಬ್ಲೂಮಿಂಗ್ಟನ್ನಿನಲ್ಲಿ ಒಂದು ಉಪನ್ಯಾಸವೂ ಆಯಿತು. ಅವನು ತತ್ಪರನಾಗಿ, ಅತಿ ಗಂಭೀರನಾದ ರೀತಿಯಲ್ಲಿ ಮಾತನಾಡಿದನು. ಕೊನೆಯಲ್ಲಿ, '' ನಾವು ಮಿಸ್ಸೌರಿ ಮಧ್ಯಸ್ಥಿಕೆಯನ್ನು ಊರ್ಜಿತಮಾಡಬೇಕು. ಕ್ಯಾನಸಾಸ್ನಲ್ಲಿ ಸ್ವಾತಂತ್ರ್ಯವನ್ನೇ ಸ್ಥಾಪಿಸುತ್ತೇವೆಂದು ಶಪಥಮಾಡಬೇಕು !.......... ಅಷ್ಟೇ ಅಲ್ಲ. ಕಾರ್ಯದ ಮೂಲಕವೂ ಕೂಡ ನಮ್ಮ ದೇಶಕ್ಕೆ ಸ್ವಾತಂತ್ರ್ಯವೇ ಮುಖ್ಯಾಧಾರವೆಂಬುದನ್ನು ತೋರಿಸಬೇಕು. ಆದರೆ ಇಷ್ಟನ್ನೆಲ್ಲಾ ಮಾಡುವ ಕಾಲದಲ್ಲಿ—ಸ್ವಾತಂತ್ರ್ಯವು ಉಳಿಯಬೇಕಾದರೆ ಇದನ್ನೆಲ್ಲಾ ಮಾಡಿಯೇ ತೀರಬೇಕು —ನಾವು ಸರ್ಕಾರಕ್ಕೂ ಸಂಯೋಗಕ್ಕೂ ದ್ರೋಹಿಗಳಾಗಕೂಡದು. ನಮ್ಮ ಕುತ್ತಗಳು ಸಾವಿರವಿರಲಿ—ಕ್ಯಾನಸಾಸ್ ರಾಜ್ಯವು ದಾಸ್ಯವನ್ನುಳ್ಳ ರಾಜ್ಯವೇ ಆಗಲಿ ; ಅಥವಾ ಅವರ ಕುತ್ತಗಳು ಸಾವಿರವಿರಲಿ—ಮಿಸ್ಸೌರಿ ಒಡಂಬಡಿಕೆಯು ಊರ್ಜಿತವಾಗಲಿ ; ನಾವು ಸಂಯೋಗವನ್ನು ತ್ಯಜಿಸಿ ಪ್ರತ್ಯೇಕವಾಗಿರಬೇಕೆಂದು ಹೇಳುವ ದಕ್ಷಿಣದವರಿಗೆ, 'ನಾವೂ ಸಂಯೋಗವನ್ನು ಬಿಟ್ಟು ಹೋಗುವುದಿಲ್ಲ, ನೀವೂ ಬಿಟ್ಟು ಹೋಗಲಾರರಿ' ಎಂದು ಖಂಡಿತವಾಗಿ ಹೇಳಬೇಕು.''

ಪ್ರಜೆಗಳ ಸ್ವಾತಂತ್ರ್ಯಕ್ಕಾಗಿ ಅವನು ಹೊಡೆದಾಡಿದರೂ ಸಂಯೋಗದಲ್ಲಿ ಒಡಕು ಬರದೆ ಅದು ಅಖಂಡವಾಗಿ ನಿಲ್ಲುವುದಕ್ಕಾಗಿ ಮತ್ತಷ್ಟು ಹೊಡೆದಾಡಿದನು.

ಲಿಂಕನ್ನನು ಇಲಿನ್ವಾದಲ್ಲಿ ಉಪನ್ಯಾಸಮಾಡಿದ ಒಂದೆರಡು ತಿಂಗಳ ಬಳಿಕ

ಪ್ರೆಸಿಡೆಂಟನನ್ನು ಚುನಾಯಿಸುವುದು ಒದಗಿತು. ಡೆಮೊಕ್ರೆಟರು ಡಗ್ಲಸ್‌ನ ನಿರೀಕ್ಷಣೆಯನ್ನು ನಿರಾಕರಿಸಿ ಬುಕೆನನ್ (Bucanan) ಎಂಬಾತನನ್ನು ನೇಮಿಸಿದರು. ರಿಪಬ್ಲಿಕನ್ ಪಂಗಡದವರು ಫ್ರೇಮಾಂಟ್ (Fremont) ಎಂಬಾತನನ್ನು ಕೋರಿದರು. ಆದರೆ ರಿಪಬ್ಲಿಕನ್ ಪಂಗಡವು ಇನ್ನೂ ಹೊಸದು. ಕೆಲವು ಪ್ರಜೆಗಳಿಗೆ ಅದರ ಇರವೇ ಗೊತ್ತಿರಲಿಲ್ಲ. ಕೊನೆಯಲ್ಲಿ ಬುಕೆನನ್ನನೇ ಪ್ರೆಸಿಡೆಂಟನಾದನು. ಡಗ್ಲಸ್‌ನಿಗೆ ಪೂರಾ ಆಶಾಭಂಗವಾಯಿತು. ಪ್ರೆಸಿಡೆಂಟನಾಗುವೆನೆಂದು ಹಲವು ವರ್ಷಗಳಿಂದಲೂ ನಿರೀಕ್ಷಿಸಿದ್ದನು. ಆದರೆ ರಾಜನೀತಿಯಲ್ಲಿ ಅವನಿಗಿದ್ದ ಅಭಿಪ್ರಾಯಗಳು ಜನರ ಪ್ರೀತಿಯಿಂದ ಅವನನ್ನು ದೂರಮಾಡಿದ್ದುವು.

### ೨. ಕಾನ್‌ಸಾಸ್‌ನಲ್ಲಿ ಹೊಡೆದಾಟ.

ಕಾನ್‌ಸಾಸ್ ನೆಬ್ರಸ್ಕ ಮಸೂದೆಯು ಕಾನೂನಾಗುವುದು ತಡವಾಗಲಿಲ್ಲ. ಆದರೆ ಅದರೊಡನೆ ತೊಂದರೆಗಳು ಮೊದಲಾದುವು. ನಿರ್ಣಯವನ್ನು ದೇಶದ ಜನಗಳ ಪಾಲಿಗೇ ಬಿಟ್ಟುಬಿಡಬೇಕೆಂದು ಡಗ್ಲಸ್‌ನು ಹೇಳಿದ್ದನು. ಅದರಂತೆ ನಡೆಯುವುದಾದ ಭಾಗದಲ್ಲಿ ಫಲಿತಾಂಶವೆಂತಹದಾಗುವುದೆಂಬುದನ್ನು ತಿಳಿಯಲು ಎಲ್ಲರೂ ಕುತೂಹಲರಾಗಿದ್ದರು. ನಿಬಂಧನೆಯು ಪ್ರಚಾರಕ್ಕೆ ಬಂದ ಕೂಡಲೇ ಆ ಸ್ಥಳವನ್ನು ಆಕ್ರಮಿಸಲು ಜನರು ''ಹಿಗ್ಗಮುಗ್ಗ'' ಎಳೆಯಲಾರಂಭಿಸಿದರು. ಮಿಸ್ಸೌರಿಯಿಂದ ದೊಡ್ಡದೊಂದು ಗುಂಪೇ ಓಡಿಬಂದಿತು. ಬಂದವರು ಮಾರ್ಗದ ಕಷ್ಟಗಳನ್ನೂ ನಷ್ಟಗಳನ್ನೂ ನೋಡಲಿಲ್ಲ. ಅವರಿಗೆ ತಮ್ಮಲ್ಲಿ ಪ್ರತಿಯೊಬ್ಬನಿಗೂ ಚೀಟಿ ಹಾಕಲು ಅವಕಾಶವು ಸಿಕ್ಕಿದರೆ ಸಾಕಾಗಿದ್ದಿತು. ಅವರ ಸಂಖ್ಯೆ ಹೆಚ್ಚಿದಷ್ಟೂ ಸ್ವಾತಂತ್ರ್ಯಾಪೇಕ್ಷೆಯುಳ್ಳ ಜನರ ಪ್ರಯತ್ನವು ಸಾಗದಂತಾಗುತ್ತಿದ್ದಿತು. ಆ ಜನರಿಗೆ ಮಾನಮರ್ಯಾದೆಗಳೆಂಬುದಕ್ಕೂ ಧರ್ಮವೆಂಬುದಕ್ಕೂ ಅರ್ಥವೇ ಇರಲಿಲ್ಲ. ಅವು ದುರ್ಬಲರಾದವರು ಆತ್ಮರಕ್ಷಣೆಗೋಸ್ಕರ ಕಲ್ಪಿಸಿಕೊಂಡ ಶಬ್ದಗಳಾಗಿದ್ದುವು. ಅವರ ಒರಟುತನವನ್ನೂ ಕಿರಾತಪ್ರವರ್ತನೆಯನ್ನೂ ನೋಡಿ ಔತ್ತರೇಯರು ಅವರಿಗೆ ''border ruffians'' ಎಂದು ಹೆಸರು ಕಟ್ಟಿದರು. ಇವರು ಶಾಶ್ವತನಾಗಿ ನೆಲಸುವಂತಹ ಜನವಲ್ಲ, ದುಡ್ಡಿಗೋಸ್ಕರ ಏನನ್ನು ಬೇಕಾದರೂ ಮಾಡುವಂಥವರು.

ಈ ಕಿರಾತಕರು ಬಂದುಬಂದು ತುಂಬುತ್ತಿರುವುದನ್ನು ಕೇಳಿ ಉತ್ತರದ ರಾಜ್ಯಗಳು ಭಯಗೊಂಡುವು. ಸ್ಪರ್ಧೆ ಹತ್ತಿತು. ದಕ್ಷಿಣದವರ ಪ್ರಯತ್ನವನ್ನು ವ್ಯರ್ಥಮಾಡಲು ಉತ್ತರದಿಂದ ಜನಗಳ ಪ್ರವಾಹವು ರಭಸದಿಂದ ನುಗ್ಗಿತು.

ಗಾಡಿಗಳಲ್ಲಿ ಹೆಂಗಸರು ಮಕ್ಕಳನ್ನೂ ಸರಕುಗಳನ್ನೂ ತುಂಬಿ ಅವರು ನಡೆದರು. ಇಷ್ಟೆಂದು ಎಣಿಸುವ ಹಾಗಿರಲಿಲ್ಲ. ಉತ್ತರದವರು ದಕ್ಷಿಣದವರಿ

ಗಿಂತಲೂ ಹೆಚ್ಚಿನ ದಾರಿಯನ್ನು ಸಾಗಬೇಕಾಗಿದ್ದಿತು. ಧರ್ಮವು ದಾಸ್ಯದ ಮೇಲೆ ಯುದ್ಧಕ್ಕೆ ಹೊರಟಿದೆಯೆಂದೂ ಅವರು ಹೇಳಿಕೊಂಡರು.*

ಹೀಗೆ ಎರಡು ಕಡೆಯಿಂದಲೂ ಜನಪ್ರವಾಹವು ಬರಲಾಗಿ ಕಾರ್ನಸಾಸ್‌ನಲ್ಲಿ ಎರಡು ಪಂಗಡಗಳುಂಟಾದುವು. ಈ ಎರಡು ಪಂಗಡಕ್ಕೂ ನಾಗ್ವಾದವೆದ್ದು ದ್ವೇಷವು ಹೆಚ್ಚಿತು. ಕಡಿದಾಟವು ಉಪಕ್ರಮಿಸಲು ತಡವಿಲ್ಲವೆನ್ನುವಷ್ಟಾಯಿತು. ಪ್ರಜಾಪ್ರಭುತ್ವವನ್ನು ವರ್ಣಿಸುವಾಗ ಡಗ್ಲಸ್‌ನು ಇದನ್ನು ಆಲೋಚಿಸಿರಲಿಲ್ಲ. ಜನಗಳು ಸಮಾಧಾನವಾದ ರೀತಿಯಲ್ಲಿ ಬಂದು ನೆಲಸಿ ನ್ಯಾಯಸಮ್ಮತವಾದ ಮಾರ್ಗದಲ್ಲಿ ವ್ಯವಹರಿಸಿ ಬಗೆಹರಿಸುವರೆಂದು ಅವನು ಭಾವಿಸಿದ್ದನು. ಚೀಟಿ ಹಾಕುವಾಗಲೂ ಕೂಡ ಪ್ರಜೆಗಳು ನ್ಯಾಯವನ್ನೂ ಮರ್ಯಾದೆಯನ್ನೂ ಮೀರುವರೆಂದು ಅವನಿಗೆ ಹೇಗೆ ಗೊತ್ತು? ತಾವು ಮಾಡುವ ಶಾಸನಗಳನ್ನು ತಾವೇ ಉಲ್ಲಂಘಿಸಿದಂತೆ ಅನುಸರಿಸಿ ಬರುವುದರಿಂದ ಅಲ್ಲಿ ಸಮಾಧಾನಕ್ಕೂ ಸೌಖ್ಯಕ್ಕೂ ಕೊರತೆ ಬರದೆಂದು ಅವನು ತಿಳಿದನು. ಸಂಭವಿಸಿದುದು ಅವನು ಹೇಳಿದುದಕ್ಕೆ ಪ್ರತಿಯಾಯಿತು. ಸುಖಕ್ಕೆ ಬದಲಾಗಿ ಹಣಾಹಣಿ ಜಗಳವಾಯಿತು. ಒಬ್ಬನು ಮತ್ತೊಬ್ಬನನ್ನು ಸ್ವಲ್ಪ ರೇಗಿಸಿದರೆ ಸಾಕು—ಅವನು ಮುಂದಿನ ಕ್ಷಣ ಜೀವದಿಂದಿರುತ್ತಿರಲಿಲ್ಲ. ದೊಂಬಿಯೂ ಜಗಳವೂ ನಿತ್ಯವಿಧಿಯಾದುವು. ಧೈರ್ಯದಿಂದ ಹೊರಗೆ ತಿರುಗಲು ಯಾರಿಗೂ ಕಾಲು ಬರುತ್ತಿರಲಿಲ್ಲ. ಯಾರಾದರೂ ಇಬ್ಬರು ದಾರಿಯಲ್ಲಿ ಸಂಧಿಸಿದರೆ ಅವರ ಹೃದಯದಲ್ಲಿ "ಇವನು ನನ್ನ ಶತ್ರುವಿರಬಹುದು" ಎಂಬ ಯೋಚನೆಯು ಅಂಕುರಿಸದಿರುತ್ತಿರಲಿಲ್ಲ.

ಇಷ್ಟು ವಿಘಾತಗಳ ನಡುವೆ, ಜನರು ಅಲ್ಲಿಗೆ ಬಂದು ನೆಲಸಿದರೆನ್ನುವುದರೊಳಗೆ ಚೀಟಿ ಹಾಕಿ ವ್ಯವಸ್ಥೆಮಾಡುವ ಕೆಲಸವೊದಗಿತು. ಅದಕ್ಕೆ ಮುಂಚೆ ದಕ್ಷಿಣದಿಂದ ಬಂದಿದ್ದ ಪ್ರಜೆಗಳಲ್ಲನೇಕರು ಬೇಸರ ಹೊಂದಿ ಮಿಸ್ಸೌರಿಗೂ ಇತರ ರಾಜ್ಯಗಳಿಗೂ ಹಿಂದಿರುಗಿದ್ದರು. ಶಾಶ್ವತವಾಗಿ ನೆಲಸಲು ಏರ್ಪಾಡು ಮಾಡಿದ್ದ ಉತ್ತರದ ಜನಗಳ ಸಂಖ್ಯೆಯೇ ಹೆಚ್ಚಾಗಿ ಕಾರ್ನಸಾಸ್ ರಾಜ್ಯವು ಸ್ವತಂತ್ರವೆನ್ನಿಸಿಕೊಳ್ಳುವಂತೆ ತೋರಿತು. ಆದರೆ ಅಷ್ಟರಲ್ಲಿ, ಚುನಾವಣೆಯ ಕಾಲದಲ್ಲಿ ಹಿಂದೆ ಬೀಳಬಾರದೆಂದು ದೃಢಪಡಿಸಿಕೊಂಡು ಮಿಸ್ಸೌರಿಯು ತನ್ನ ಜನಗಳನ್ನು ಮತ್ತೆ

---

* ಕವಿಯೊಬ್ಬನು ಅವರ ಚಿತ್ತವೃತ್ತಿಯನ್ನು ಹೀಗೆ ವರ್ಣಿಸಿದ್ದಾನೆ.

We cross the prairie as of old
    The pilgrims crossed the Sea.
To make the West, as they the East,
    The homestead of the free.

We go to rear a wall of men
    On Freedom's southern line,
And plant beside the cotton tree
    The rugged Northern priere.

ಕಳುಹಿಸಿತು. ಈ ಹೊಸಪ್ರವಾಹಕ್ಕೆ ನಿಲುಗಡೆಯೇ ಇರಲಿಲ್ಲ. ಬಂದವರು ಚೀಟಿ ಹಾಕಲು ತಮಗೂ ಅಧಿಕಾರಬರಬೇಕೆಂದು ಆರ್ಭಟಿಸಿದರು. ನ್ಯಾಯವನ್ನು ಮೂಲೆಗೊತ್ತರಿಸಿ, ತಮ್ಮ ಪಕ್ಷದ ಕೈ ಮೇಲಾಗುವುದನ್ನು ಮಾತ್ರ ಗುರುತಿನಲ್ಲಿಟ್ಟುಕೊಂಡು ಅವರು ಎಲ್ಲಾ ವಿಧವಾಗಿಯೂ ಪ್ರಯತ್ನಮಾಡಿದರು. ಅವರ ಅತ್ಯಾಚಾರಗಳಲ್ಲಿ ಎಷ್ಟೋ ಮಂದಿ ಕೈಗೆ ಸಿಕ್ಕಿಬಿದ್ದು ಪ್ರಾಣವನ್ನು ನೀಗಿಕೊಂಡರು. ಖೂನಿಯು ಇಲ್ಲದ ದಿನವಿರಲಿಲ್ಲ. ಕಾನ್ಸಾಸ್‌ನಲ್ಲಿ ರಕ್ತವು ಚೆಲ್ಲಾಡಿಹೋಯಿತು. '' ಮನೆಮುರುಕ '' ರ ಹಾವಳಿಯಲ್ಲಿ ಯಾವುದಕ್ಕೂ ಉಳಿಗಾಲವಿರಲಿಲ್ಲ.

ಚೀಟಿ ಹಾಕುವ ಕೆಲಸವು ಮುಗಿದು ದಕ್ಷಿಣದವರೇ ವಿಜಯವನ್ನು ಹೊಂದಿದರು. ಅವರು ಅತ್ಯಂತ ಸಂತೋಷದಿಂದ ತಮಗೆ ಅನುಕೂಲವಾದ ರೀತಿಯಲ್ಲಿ ಶಾಸನಕ್ರಮವನ್ನು ಏರ್ಪಡಿಸಿದರು. ಅವರ ವ್ಯವಹಾರವೆಲ್ಲಾ ಮೋಸದಿಂದಲೂ ಅನ್ಯಾಯದಿಂದಲೂ ತುಂಬಿದೆಯೆಂದು ಪ್ರತಿಭಟಿಸಿ ಸ್ವಾತಂತ್ರ್ಯಕಾಂಕ್ಷಿಗಳು ಆ ಶಾಸನಕ್ರಮವನ್ನು ಗೌರವಿಸದೆ ತಮ್ಮದೊಂದು ಕ್ರಮವನ್ನು ಏರ್ಪಡಿಸಿ ಚಲಾವಣೆಗೆ ತಂದರು.

ಭೇದಬುದ್ಧಿಯನ್ನು ಕಲ್ಪಿಸಿದುದು ಮಾತ್ರವಲ್ಲದೆ ಅದನ್ನು ಸ್ಪಷ್ಟಪಡಿಸಿ ಪ್ರಜೆಗಳು ಪಂಗಡಗಳಾಗಿ ಚದುರಿಹೋಗುವಂತೆ ಮಾಡಿದುದೇ ಡಗ್ಲಸ್‌ನ ಸಲಹೆಯ ಫಲಿತಾಂಶವಾಯಿತು. ಉಭಯಪಕ್ಷದವರೂ ತಮ್ಮ ಶಾಸನಕ್ರಮಗಳನ್ನು ವಾಷಿಂಗ್ಟನ್ನಿಗೆ '' ಮಂಜೂರಾತಿ '' ಗಾಗಿ ಕಳುಹಿಸಿದರು. ಹೊಡೆದಾಟವು ನಡಿಯುತ್ತಲೇ ಇದ್ದಿತು. ಪ್ರೆಸಿಡೆಂಟನು ದಕ್ಷಿಣದವರೇರ್ಪಡಿಸಿದ್ದ ಶಾಸನಕ್ರಮವನ್ನೇ ಅನುಮೋದಿಸಿ, ಅದನ್ನು ಅಂಗೀಕರಿಸದವರು ದಂಗೆಕೋರರಿಗೆ ಸಮರೆಂದೂ ಅವರಿಗೆಲ್ಲಾ ದಂಡನೆಯಾಗಬೇಕೆಂದೂ ಪ್ರಕಟಿಸಿದನು. ಕಾನ್ಸಾಸ್‌ನಲ್ಲಿ ನೆಮ್ಮದಿಯನ್ನು ನೆಲೆಗೊಳಿಸುವುದಕ್ಕಾಗಿ ರಾಜಧಾನಿಯಿಂದ ದಂಡೊಂದು ಹೊರಟಿತು. ಸ್ವಾತಂತ್ರ್ಯಿರಾಧಕರು ಚದುರಿದರು. ದೊಂಬಿಯು ಅಡಗಿತು. ಕಾನ್ಸಾಸ್ ರಾಜ್ಯವನ್ನು ಎಳೆದು ತಂದು ದಾಸ್ಯವೆಂಬ ಸಂಕೋಲೆಗೆ ಒಳಪಡಿಸಿದುದಾಯಿತು.

## ೩. ಡ್ರೆಡ್ ಸ್ಕಾಟ್. (Dread Scott)

ಪ್ರಜೆಗಳ ದೇಶಪ್ರೀತಿಯು ಅತಿಶಯವಾಗಿ ವ್ಯಕ್ತವಾಗಲು ಒಂದು ದೇಶಕ್ಕೆ ಅಪಾಯದ ಸಂಭವವು ಬರಬೇಕು. ಇತರ ಕಾಲಗಳಲ್ಲಿ ಇತರ ರೂಪಗಳಿಂದ ತೋರ್ಪಡುವ ಆ ಗುಣವು ಅಪಾಯ ಸಮಯದಲ್ಲಿ ವೀರಭಾವವನ್ನು ತಾಳುವುದು. ಅಮೆರಿಕದಲ್ಲಿ ಸಂಯೋಗಕ್ಕೆ ತೊಂದರೆಯು ಬರುವುದೆಂದು ಕೆಲವು ಕಾಲ ಮೊದಲ್ಗೊಂಡು ಪ್ರಜೆಗಳಿಗೆ ಆಂತರಿಕನಾಗಿ ಅರಿವಾಗಿದ್ದರೂ ಕೂಡ, ದೇಹಕ್ಕೊದಗುವ ಅಪಾಯವು ವ್ಯಕ್ತವಾಗುವಂತೆ ವ್ಯಕ್ತವಾಗಿರಲಿಲ್ಲ. ಅವರ ಮನಸ್ಸು ಅನ್ಯವಿಷಯಗಳಲ್ಲಿ ಗಮನವಿಡಲು ಇನ್ನೂ ಅವಕಾಶವಿದ್ದಿತು. ಉಳಿದ ವಿಚಾರಗಳನ್ನು ಮೂಲೆಗೆ ತಳ್ಳಿ ಸಂಯೋಗವನ್ನು ರಕ್ಷಿಸಿಕೊಳ್ಳಲು ಸಾಹಸಮಾಡುವ ಚಿತ್ತ

ವೃತ್ತಿಯು ಇನ್ನೂ ಅಂಕುರಿಸಿರಲಿಲ್ಲ—ದೂರದಲ್ಲಿದ್ದಿತು. ಆದಕಾರಣ ಸದ್ಯದಲ್ಲಿ ದಾಸ್ಯಪದ್ಧತಿಯು ಇತರ ಅಂಶಗಳೆಲ್ಲಕ್ಕಿಂತ ಹೆಚ್ಚಾಗಿ ಪ್ರಜೆಗಳ ಮನಸ್ಸನ್ನು ಆಕರ್ಷಿಸಿದ್ದಿತು. ಉತ್ತರದವರು ಅದನ್ನು ನಾಶಮಾಡಲು ಹೇಗೆ ಆತುರಪಡುತ್ತಿದ್ದರೋ ದಕ್ಷಿಣದವರು ಅದನ್ನು ಪೋಷಿಸಲು ಅಷ್ಟು ಆತುರಪಡುತ್ತಿದ್ದರು. ಆ ಪದ್ಧತಿಯು ಉತ್ಕಟಾವಸ್ಥೆಗೆ ಬರುತ್ತಿದ್ದಿತೆಂಬುದರಲ್ಲಿ ಯಾರಿಗೂ ಸಂಶಯವಿರಲಿಲ್ಲ. ಈ ಮತ್ತು ಮುಂದಿನ ಅಧ್ಯಾಯಗಳಲ್ಲಿ ದಾಸ್ಯದ ಈ ಅವಸ್ಥೆಯ ಎರಡು ನಿದರ್ಶನಗಳು ಕಂಡುಬರುವುವು. ಆ ಸಂಬಂಧದಲ್ಲಿ ಒದಗಿದ ಪ್ರಸಂಗಗಳು ದಾಸ್ಯವನ್ನು ಪೋಷಿಸುವ ಪಂಗಡವನ್ನೂ ಸ್ವಾತಂತ್ರ್ಯವನ್ನು ಪೋಷಿಸುವ ಪಂಗಡವನ್ನೂ ದೂರದೂರಕ್ಕೆ ತಳ್ಳಿ ಅವುಗಳಿಗಿದ್ದ ಅಂತರವನ್ನು ಹೆಚ್ಚಿಸಿದುವು. ಲಿಂಕನ್ನನು ಹೇಳಿದ ಹಾಗೆ '' ಸಂಸಾರದಲ್ಲಿ ಒಡಕು '' ಹುಟ್ಟಿತು. ಅಮೆರಿಕವು ಒಟ್ಟಾಗಿ ನಿಂತು ನೆಮ್ಮದಿಯಿಂದ ಬಾಳುವುದೆಂಬುದು ಸ್ವಪ್ನಪ್ರಾಯನಾಗುತ್ತ ಬರುತ್ತಿದ್ದಿತು. ಮೊಂಡತನ ಮಾಡಿ ಅವಿಧೇಯರಾದವರನ್ನು ದಂಡಿಸಿ ಸಂಸಾರವನ್ನು ಅವಿಭಕ್ತವನ್ನಾಗಿ ನೆಲೆಗೊಳಿಸುವ ಸಮಯವು ಸಮಿಾಪಿಸುತ್ತಿದ್ದಿತು.

1857ರಲ್ಲಿ ನೀಗ್ರೋ ಗುಲಾಮನೊಬ್ಬನು ವ್ಯಾಜ್ಯವನ್ನೂ ಹೂಡಿದನು. ಡ್ರೆಡ್ ಸ್ಕಾಟ್ ಎಂಬವನು ಒಬ್ಬ ವೈದ್ಯನ ಬಳಿಯಲ್ಲಿ ಜೀತಗಾರನಾಗಿದ್ದವನು ಸ್ಥಳಪಲ್ಲಟಮಾಡಿದ ವೈದ್ಯನೊಡನೆ ತಿರುಗಿ ಒಂದೂರಿಗೆ ಹೋದನು. ಅಲ್ಲಿ ಅವನಿಗೂ ಬಿಳಿಯಜನನೊಬ್ಬನು ಹೊಸದಾಗಿ ಕೊಂಡಿಟ್ಟುಕೊಂಡಿದ್ದ ಗುಲಾಮ ಹೆಂಗಸಿಗೂ ಪರಿಚಯವುಂಟಾಯಿತು. ಕಾಲಕ್ರಮದಲ್ಲಿ ಆ ಗುಲಾಮನು ಗುಲಾಮಗಿತ್ತಿಯೂ ಗಂಡಹೆಂಡಿರಾದರು. ಒಬ್ಬ ಮಗನು ಹುಟ್ಟಿದನು. ಇಷ್ಟು ದಿನಗಳ ಮೇಲೆ ವೈದ್ಯನಿಗೆ ತನ್ನ ಹಳೆಯ ಊರಿಗೆ ಹೋಗಿ ಸೇರಿಕೊಳ್ಳುವುದೇ ಉತ್ತಮವೆಂದು ತೋರಿತು. ಅವನು ತನ್ನ ಸಾಮಾನುಗಳೊಡನೆ ಗುಲಾಮದಂಪತಿಗಳನ್ನೂ ಅವರ ಮಗುವನ್ನೂ ಕರೆದುಕೊಂಡು ಹಿಂದಿರುಗಿದನು. ಡ್ರೆಡ್‌ಸ್ಕಾಟನು ತನ್ನ ಯಜಮಾನನು ಹೀಗೆ ಮಾಡಿದುದು ಶುದ್ಧಾಂಗನಾಗಿ ತಪ್ಪೆಂದು ಆಕ್ಷೇಪಿಸಿದನು. ಸ್ವತಂತ್ರ ರಾಜ್ಯಕ್ಕೆ ಆತನು ತನ್ನನ್ನು ಕರೆದುಕೊಂಡು ಹೋದುದರಿಂದ ತನಗೆ ಇದ್ದ ಬಂಧವೆಲ್ಲಾ ತಪ್ಪಿತೆಂದೂ ಸ್ವತಂತ್ರನಾದ ಭೂಮಿಯಲ್ಲಿ ಹುಟ್ಟಿದ ಮಗನು ಗುಲಾಮನಾಗಲಾರನೆಂದೂ ಅವನು ವಾದಿಸಿದನು. ಅವನ ವ್ಯಾಜ್ಯವು ಕೋರ್ಟಿಗೆ ಹೋಯಿತು. ಡ್ರೆಡ್‌ಸ್ಕಾಟನು ತನಗೂ ತನ್ನ ಹೆಂಡತಿಮಕ್ಕಳಿಗೂ ಸ್ವಾತಂತ್ರ್ಯವುಂಟಾಗಬೇಕೆಂದು ಕೋರಿದನು.

ಗುಲಾಮನೊಬ್ಬನು ತನ್ನ ಯಜಮಾನನ ಮೇಲೆ ವ್ಯವಹಾರವನ್ನು ಆರಂಭಿಸಿರುವನೆಂಬುದನ್ನು ಕೇಳಿ ಜನಗಳ ಕಿವಿಯು ನೆಟ್ಟಗಾಯಿತು. ಯಜಮಾನರು ಗುಲಾಮರಿಗೆ ಚಿಂತನಶಕ್ತಿಯು ಸ್ವಲ್ಪವೂ ಇಲ್ಲವೆಂತಲೇ ತಿಳಿದಿದ್ದರೂ ಉಂಟೆಂದು ಅವರ ಬೈಬಲು ಹೇಳಿದ್ದರೂ ಅವರು ನಂಬುತ್ತಿರಲಿಲ್ಲ. ಹಾಗಿರುವಲ್ಲಿ ಗುಲಾಮರು ಬುದ್ಧಿಶಕ್ತಿಯುಳ್ಳ ಮನುಷ್ಯರಂತೆ ಮೆರೆಯುವುದು ಅವರಿಗೆ ಮುಟ್ಠಾಳತನವೆನ್ನಿಸಿತು.

ಮೊಕದ್ದಮೆಯು ವಿಧವಿಧವಾಗಿ ತೀರ್ಮಾನವಾಗಲಾಗಿ ವ್ಯಾಜ್ಯವನ್ನು ಹೂಡಿ

ದವರಿಗಾಗಲೀ ಪ್ರತಿಕಕ್ಷಿಗಳಿಗಾಗಲೀ ತೃಪ್ತಿಯುಂಟಾಗಲಿಲ್ಲ. ವ್ಯಾಜ್ಯವು ಸುಪ್ರೀಂ ಕೋರ್ಟಿಗೆ ಹತ್ತಿತು. ಒಂಬತ್ತುಮಂದಿ ಜಡ್ಜಿಗಳು ಅಲ್ಲಿ ಕುಳಿತು ಅದರ ಆದ್ಯಂತ ವಿಚಾರಣೆಯನ್ನು ನಡೆಯಿಸಿದರು. ಜಡ್ಜಿಗಳ ಅಭಿಪ್ರಾಯವು ಬೇರೆ ಬೇರೆಯಾಯಿತು. ಡ್ರೆಡ್‌ಸ್ಕಾಟನಿಗೆ ಪ್ರತಿಕೂಲವಾದವರು ಆರುಮಂದಿಯಾಗಿ, ಮೊಕದ್ದಮೆಯು ವಿರುದ್ಧಾಚರಣೆಯೆಂದು ತೀರ್ಮಾನವಾಯಿತು. "ಗುಲಾಮನು ಸ್ವಾಮಿಯಾದವನ ಆಸ್ತಿಯಲ್ಲೊಂದು ಭಾಗವಾದುದರಿಂದ ಸ್ವತಂತ್ರವಾಗಿ ಹೀಗೆ ಆಚರಿಸಲು ಅವನಿಗೆ ಅಧಿಕಾರವಿಲ್ಲ. ಆಸ್ತಿಯಾದುದರಿಂದ ಯಜಮಾನನು ಅವನನ್ನು ಎಲ್ಲಿಗೆ ಬೇಕಾದರೂ ಒಯ್ಯಬಹುದು. ಯಜಮಾನನು ಸ್ವತಂತ್ರ ರಾಜ್ಯದಲ್ಲಿದ್ದರೂ ಗುಲಾಮನಿಗೆ ಸ್ವಾತಂತ್ರ್ಯವು ಬರದು. ಸ್ಥಳಪಲ್ಲಟವಾಗುವದಕ್ಕೂ ಸ್ವಾತಂತ್ರ್ಯಕ್ಕೂ ಸಂಬಂಧವಿಲ್ಲ" ಎಂದು ಜಡ್ಜಿಗಳು ನಿರ್ಣಯಿಸಿದರು.

ಉತ್ತರವು ಆ ನಿರ್ಣಯವನ್ನು ಅಂಗೀಕರಿಸಲಿಲ್ಲ. ಅದನ್ನು ಆಧಾರವಾಗಿಟ್ಟುಕೊಂಡು ಯಾವ ಯಜಮಾನನು ಬೇಕಾದರೂ ತನ್ನ ಗುಲಾಮರನ್ನು ಕಟ್ಟಿಕೊಂಡು ಬಂದು ಸ್ವತಂತ್ರ್ಯರಾಜ್ಯಗಳಲ್ಲಿ ಸ್ವತಂತ್ರಪ್ರಜೆಗಳ ನಡುವೆ ವಾಸಮಾಡಲು ಧೈರ್ಯವು ಬರುತ್ತಿದ್ದಿತು. ಅದು ನಿಜ. ಜನಗಳು ಹಾಗೇನಾದರೂ ಮಾಡಿದರೆ ಉತ್ತರದಲ್ಲಿಯೂ ದಾಸ್ಯವು ಬೇರೂರಲು ಮೊಕದ್ದಮೆಯ ನಿರ್ಣಯವು ಅವಕಾಶವನ್ನು ಕಲ್ಪಿಸಿಕೊಟ್ಟಂತಾಗುತ್ತಿದ್ದಿತು. ಕಾಲಕ್ರಮದಲ್ಲಿ ಉತ್ತರವು ಮತ್ತೊಂದು ಕಾನ್ಸಾಸ್ ರಾಜ್ಯವಾಗುವುದರಲ್ಲಿ ಸಂಶಯವಿರಲಿಲ್ಲ.

## ೪. ಜಾನ್ ಬ್ರೌನ್ (John Brown)

ಉತ್ತರದಿಂದ ಹೊರಟು ಕಾನ್ಸಾಸ್‌ಗೆ ಬಂದು ಮನೆಮಠಗಳನ್ನು ಹೊಂದಿಸಿಕೊಂಡು ನೆಲಸಿದವರಲ್ಲಿ ಜಾನ್‌ಬ್ರೌನ್ ಎಂಬಾತನೊಬ್ಬನು. ಮತಾಚರಣೆಯಲ್ಲಿ ಆತನು ಬಹಳ ನಿಷ್ಠೆಯುಳ್ಳವನು. ದಾಸ್ಯವೆಂಬ ಶಬ್ದವು ಕಿವಿಗೆ ಬಿದ್ದರೆ ಮಹಾಪಾತಕ ಮಾಡಿದಂತಾಯಿತೆನ್ನುತ್ತಿದ್ದನು. ಗುಲಾಮರ ಸಂಕಟವನ್ನು ನೋಡಿ ಅವನ ಕಣ್ಣಲ್ಲಿ ನೀರು ತುಂಬುತ್ತಿದ್ದಿತು. ಅವನು ಕ್ರಮವಾಗಿ, ಅವರನ್ನೆಲ್ಲಾ ಬಂಧದಿಂದ ಬಿಡಿಸಲು ಪರಮಾತ್ಮನಿಂದ ತನಗೆ ಸಂದೇಶವು ಬಂದಿರುವುದಾಗಿ ಹೇಳತೊಡಗಿದನು. ಹೆಚ್ಚಿನ ಕಲ್ಪನಾಶಕ್ತಿಯು ಮನಸ್ಸಿಗಿದ್ದುದರಿಂದ ಅವನು ತಾನು ಹೇಳುವುದನ್ನು ತಾನೇ ನಂಬಲಾರಂಭಿಸಿದನು. ನೀಗ್ರೋಗಳನ್ನು ಏಕಾಏಕಿಯಾಗಿ ವಿಮೋಚನೆ ಮಾಡಿ ಬಿಳಿಯ ಜನರಂತೆಯೇ ಸ್ವತಂತ್ರರನ್ನಾಗಿ ಮಾಡುವುದು ಸಾಧ್ಯವಲ್ಲವೆಂದು ಊಹಿಸಿ ಅವನು ಕಾಲಕ್ರಮದಲ್ಲಾಗುವ ಬಂಧವಿಮೋಚನೆಯು ನಿಸ್ಸಾರಪ್ರಾಯವಾಗಿ ದೈವಿಕಾಂಶಶೂನ್ಯವಾದ ಕಾರಣ ಸಹನೆಯಿಲ್ಲದವನಾಗಿ, ಅವರ ಅವರ್ಣನೀಯವಾದ ದುಃಖವೊಂದನ್ನೇ ಪ್ರಧಾನವಾಗಿಟ್ಟುಕೊಂಡು ಅವರ ಪರವಾಗಿ ದಂಗೆಯೇಳಲು ಏರ್ಪಾಡು ಮಾಡಿದನು. "ನೀಗ್ರೋವಿನ ಕೈಗೆ ಒಂದು ಕೊಡಲಿಯನ್ನು ಕೊಡು; ಅವನಿಗೆ ಪೌರುಷವು ತಾನಾಗಿಯೇ ಬರುವುದು" ಎಂದು ಅವನು ಹೇಳಿದನು. ಅವನ ಅಭಿಪ್ರಾಯದಲ್ಲಿ, ನೀಗ್ರೋ ಗುಲಾಮನಿಗೆ ಆಯುಧ

ಗಳನ್ನು ಒದಗಿಸಿಕೊಟ್ಟು ಸಹಾಯಮಾಡಿದಲ್ಲಿ ಅವನು ತಾನಾಗಿಯೇ ಹಿಂಸಕರ ಮೇಲೆ ಪ್ರತಿಭಟಿಸಿ ತನ್ನ ಸ್ವಾತಂತ್ರ್ಯವನ್ನು ಪಡೆಯುವನಾಗಿದ್ದನು. ಗುಲಾಮರು ನಾಲ್ವತ್ತು ಲಕ್ಷ ಮಂದಿಯಿರಲಾಗಿ ಸ್ವಾತಂತ್ರ್ಯಸಾಧನೆಯು ಕಷ್ಟವಲ್ಲ.

ಜಾರ್ಜ್‌ಬ್ರೌನನೂ ಮಕ್ಕಳೂ ಇತರ ಕೆಲವರು ಆಪ್ತರೂ ಈ ರೀತಿಯಾಗಿ ಗುಟ್ಟಿನಲ್ಲಿ ಆಲೋಚನೆಮಾಡಿಕೊಂಡು ಆದಾದಷ್ಟು ಆಯುಧಗಳನ್ನು ಸಂಗ್ರಹಿಸಿದರು. ಚೂರಿಗಳ ಅಲಗೆಲ್ಲಾ ಹರಿತವಾದವು. ನ್ಯಾಯಮಾರ್ಗದಲ್ಲಿ ಹೋಗುವ ಜನರು ತಾವು ಮಾಡುತ್ತಿರುವುದರಲ್ಲಿ ತಮಗೆ ನಂಬಿಕೆಯಿದ್ದಲ್ಲಿ, ಹಲವು ಜನರಾದರೂ ಕೂಡ, ರಾಜ್ಯದ ಪ್ರಭುತ್ವವನ್ನೇ ತಲೆಕೆಳಗೆ ಮಾಡಬಲ್ಲರು,'' ಎಂದು ಬ್ರೌನನು ಹೇಳುತ್ತ ತಾನು ಗೊತ್ತುಮಾಡಿಕೊಂಡಿದ್ದಂತೆ ಕಾರ್ಯಾಚರಣೆಯನ್ನು ಉಪಕ್ರಮಿಸಿದನು.

ಈ ನಡುವೆ ಕಾನ್ಸಾಸ್‌ನಲ್ಲಿ ಅವನ ಮಕ್ಕಳಿಬ್ಬರೂ ದಕ್ಷಿಣದ ನಿವಾಸಿಗಳೊಡನೆ ಜಗಳವನ್ನು ತಂದುಕೊಂಡು ಹೊಡೆದಾಡಿ ಮಡಿದರು. ಬ್ರೌನನ ಮನಸ್ಸು ಕಲ್ಲಾಯಿತು. ಅವನ ಪ್ರಯತ್ನಗಳು ದ್ವಿಗುಣವಾದವು.

ತನಗೆ ಭಗವಂತನಿಂದ ಸಂದೇಶವು ಬಂದಿದೆಯೆಂದು ಅವನಿಗಿದ್ದ ನಂಬಿಕೆಯೂ, ದಾರಿಯನ್ನು ತೋರಿಸುವವನೊಬ್ಬನಾದ ಪಕ್ಷದಲ್ಲಿ ಗುಲಾಮರು ಓಡಿಬಂದು ಅವನನ್ನಾಶ್ರಯಿಸುವರೆಂಬ ನಂಬಿಕೆಯೂ ಮುಂದೆ ಒದಗುವ ವಿಪತ್ತಿನ ಮೇಲೆ ಸಾಫಲ್ಯದ ಬಿಳಿಯಾವರಣವನ್ನೂ ಹೊದಿಸಿದುವು. ಮುಂದೆ ದಾರಿಯು ಹೇಗೆ ಹೇಗೆ ತಿರುಗುವುದೆಂಬುದನ್ನು ಬ್ರೌನನು ಒಂದು ಕ್ಷಣವೂ ಪರ್ಯಾಲೋಚಿಸಲಿಲ್ಲ. 1859 ನೆಯ ವರುಷದ ಶರತ್ಕಾಲವು ಬಂದಿತು. ಗುಟ್ಟಾಗಿ ಹೋಗಿ ಹಾರ್ಪರ್ಸ್ ಫೆರ್ರಿ (Harper's Ferry) ಎಂಬ ಊರಿನಲ್ಲಿದ್ದ ಆಯುಧಶಾಲೆಯನ್ನು ಆಕ್ರಮಿಸಲು ನಿಶ್ಚಯಿಸಿದನು. ಆವೂರಿನ ಅಲ್ಪ ಜನಸಂಖ್ಯೆಯೂ ಪ್ರತ್ಯೇಕತೆಯೂ ಆಯುಧಸಮೃದ್ಧಿಯೂ ಅವನ ಭರವಸೆಯನ್ನು ಹೆಚ್ಚಿಸಿದುವು.

ಅವನು ಹದಿನೆಂಟು ಮಂದಿ ಕಟ್ಟಾಳುಗಳೊಡನೆ ಹಾರ್ಪರ್ಸ್‌ಫೆರ್ರಿಗೆ ಬಂದನು. ಬಂದುದು ಯಾರೊಬ್ಬರಿಗೂ ಪತ್ತೆಯಾಗಲಿಲ್ಲ. ಇದ್ದ ಒಬ್ಬನೇ ಕಾವಲುಗಾರನನ್ನು ಕೊಂದು ಆಯುಧಗಳ ಬಂಡಾರವನ್ನು ವಶಪಡಿಸಿಕೊಳ್ಳುವುದು ತಡವಾಗಲಿಲ್ಲ. ಆದರೆ ಮುಂದೆ ತೊಂದರೆಯು ಪ್ರಾರಂಭಿಸಿತು. ಆವೂರಿನ ಜನರು ವಾಷಿಂಗ್ಟನ್ನಿನಿಂದ ಸಣ್ಣದೊಂದು ದಂಡನ್ನು ತರಿಸಿಕೊಂಡು ಯುದ್ಧಮಾಡಿ ಆ ಜನರನ್ನು ಅಡಗಿಸಿದರು. ಬ್ರೌನನೂ ಮತ್ತೈದು ಮಂದಿಯೂ ಸೆರೆಸಿಕ್ಕಿದರು. ಕೆಲವರು ತಲೆ ತಪ್ಪಿಸಿಕೊಂಡು ಓಡಿದರು. ಉಳಿದವರು ಕದನದಲ್ಲಿ ಸತ್ತರು.

ಕಾರಾಗೃಹವಾಸವೂ ತನಿಖೆಯೂ ಮರಣದಂಡನೆಯೂ ಒಂದನ್ನೊಂದು ಅನುಸರಿಸಿದುವು. ಬ್ರೌನನು ಕಳೆಗುಂದಲಿಲ್ಲ. ತಾನು ಮಾಡಲು ಯತ್ನಿಸಿದ್ದಂತಹ ಸತ್ಕಾರ್ಯವು ಮತ್ತೊಂದಿಲ್ಲವೆಂದು ದೃಢವಾಗಿ ನಂಬಿದ್ದ ಅವನಲ್ಲಿ ಹಾರ್ಪರ್ಸ್ ಫೆರ್ರಿಗೆ ಗುಟ್ಟಾಗಿ ಹೊರಟಾಗ ಯಾವ ಧೈರ್ಯವಿದ್ದಿತೋ ಯಾವ ನಿಶ್ಚಯವಿದ್ದಿತೋ ಆ ಧೈರ್ಯ ನಿಶ್ಚಯಗಳು ತನ್ನ ಪ್ರಯತ್ನದ ಪರ್ಯವಸಾನವನ್ನು ಕೇಳಿ ಕುಗ್ಗಲಿಲ್ಲ.

ಒಂದು ಮತವನ್ನವಲಂಬಿಸಿ ಅದನ್ನು ತ್ಯಜಿಸಲೊಲ್ಲದೆ ಪ್ರಾಣತ್ಯಾಗವನ್ನು ಮಾಡುವ ವೀರಮರಣವು ತನಗೆ ಪ್ರಾಪ್ತವಾಯಿತೆಂದು ಅವನು ಸಂತೋಷ ಹೊಂದಿದನು.

ಅವನು ಮಾಡಿದ ಹಂಚಿಕೆಯಿಂದ ಗುಲಾಮರಿಗೆ ಬಿಡುಗಡೆಯಾಗುತ್ತಿರಲಿಲ್ಲ. ಅವನು ಪ್ರಯತ್ನಮಾಡಿದ ಮೇಲೂ ಕೂಡ ಒಬ್ಬನಾದರೂ ತನ್ನ ಯಜಮಾನನ ಮೇಲೆ ತಿರುಗಿ ಬೀಳಲಿಲ್ಲ ; ಬ್ರೌನನ ಪಕ್ಷವನ್ನೂ ವಹಿಸಲಿಲ್ಲ. ದಂಗೆಕೋರರ ಆಗಮನವನ್ನು ಕೇಳಿ ಊರಿನವರು ಸ್ವಲ್ಪ ಗಾಬರಿ ಹೊಂದಿದರು. ಆದರೆ ಆ ಸ್ಥಳವನ್ನು ಬಿಟ್ಟು ಚದುರಿ ಹೋಗುವಷ್ಟು ಯಾರ ಎದೆಯೂ ತಲ್ಲಣಿಸಲಿಲ್ಲ. ಆದರೆ ಆ ಪ್ರಸಂಗವು ತೀರ್ಮಾನ ಹೊಂದಿದ ಮೇಲೆ ಜನರು ಬ್ರೌನನಲ್ಲಿ ಆದರವನ್ನು ತೋರಿಸಲಾರಂಭಿಸಿದರು. ದಾಸ್ಯವನ್ನು ಎಂದಿಗಿಂತ ಸ್ವಲ್ಪ ಹೆಚ್ಚಾಗಿ ಜನರ ಕಣ್ಣಮುಂದಕ್ಕೆಳೆದು ನಿಲ್ಲಿಸಿದಂತಾಯಿತು. ಅದರ ವಿಷಯದಲ್ಲಿ ಜನರ ಅಭಿಮತವು ದೃಢಪಡುವುದಕ್ಕೆ ಸ್ವಲ್ಪ ಸಹಾಯವಾಯಿತು. ಈ ಸಂಬಂಧದಲ್ಲಿ ಲಾಂಗ್ ಫೆಲೊ ಎಂಬ ಅಮೆರಿಕದ ಕವಿಯು ಹಿಂದೆ ಅಮೆರಿಕದವರು ಸ್ವಾತಂತ್ರ್ಯವನ್ನು ತಾವು ಪಡೆಯಲು ಮಾಡಿದ ಪ್ರಯತ್ನದ ಹಾಗೆ ಇದು ಇತರರಿಗೆ ಸ್ವಾತಂತ್ರ್ಯವನ್ನು ಕೊಡಲು ಮಾಡಿದ ಪ್ರಯತ್ನವೆಂದು ಹೇಳಿದ್ದಾನೆ. ಅವನ ಮಾತು ವಾಸ್ತವವಾದದ್ದು. ಆದರೆ ಈ ಸಂದರ್ಭದಲ್ಲಿ ಸಾಹಸವೂ ಶಸ್ತ್ರವೂ ಪ್ರಯೋಜನಕ್ಕೆ ಬರುತ್ತಿರಲಿಲ್ಲ. ಉದ್ದೇಶವು ಪ್ರಶಸ್ಯವಾದುವೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಆದರೆ ಉಪಾಯವು ಎಂದಿಗೂ ಪ್ರಶಸ್ಯವಾದುದಲ್ಲ. ದಂಡೋಪಾಯವು ಸದಾ ಸಾಧುವಾಗದು. ಈ ಕಾರಣದಿಂದಲೇ ಬ್ರೌನನ ಸಾಹಸವು ವಿಫಲವಾಯಿತು. ಏನೂ ತಿಳಿಯದವರೆನ್ನಿಸಿಕೊಂಡ ಗುಲಾಮರಿಗೂ ಕೂಡ ಕಾರ್ಯವು ಕೈಗೂಡುವುದಿಲ್ಲವೆಂಬುದು ಗೊತ್ತಾಗಿರಬಹುದು. ಅವರು ತಟಸ್ಥರಾಗಿದ್ದುಬಿಟ್ಟರು. ಇದನ್ನು ನೋಡಿದರೆ, ಹಿಂದಿನ ಕಾಲದಲ್ಲಿ ಪಿತೂರಿಗಾರರು ದೊರೆಗಳನ್ನೂ ಚಕ್ರವರ್ತಿಗಳನ್ನೂ ಕೊಂದು ಹಾಕಿ ಪ್ರಜೆಗಳ ತೊಂದರೆಯನ್ನು ನಿವಾರಣೆಮಾಡಲು ಮಾಡುತ್ತಿದ್ದ ಏರ್ಪಾಡುಗಳ ನೆನಪುಂಟಾಗುತ್ತದೆ. ಬಹಳ ಆತುರದಿಂದ ಕೆಲಸ ಮಾಡತಕ್ಕ ಮನುಷ್ಯನು ಪ್ರಾಯಶಃ ಹೀಗೆ ಮಾಡಿಯಾನು. ಕಷ್ಟವನ್ನು ತಪ್ಪಿಸುವ ಸಾಧುವಾದ ಉಪಾಯವನ್ನು ಚಿಂತಿಸುವುದನ್ನು ಮರೆತು ಕಷ್ಟವನ್ನು ಮಾತ್ರ ಚಿಂತಿಸುತ್ತಿದ್ದು, ಕೊನೆಗೆ ಯಾವುದಾದರೊಂದು ಮಾರ್ಗವು ಗೊತ್ತಾದರೆ, ಅದರ ಕಾರ್ಯಕಾರಣಗಳನ್ನೂ ಕಷ್ಟಸುಖಗಳನ್ನೂ ಶಕ್ಯಾಶಕ್ಯತೆಗಳನ್ನೂ ಎಣಿಸದೆ, ಅವನು ತನಗೆ ದೇವರಿಂದ ಸಂದೇಶ ಬಂದಿತೆಂದು ಹೇಳಿಕೊಂಡು ಹೊರಟು, ನೋಡದೆಯೇ ಭಾವಿಗೆ ಮಗುಚಿಕೊಳ್ಳುತ್ತಾನೆ. ಒಂಟೆಯನ್ನು ಹತ್ತಿ ಕೈ ನೀಡಿದರೆ ತೆಂಗಿನ ಮರದಲ್ಲಿರುವ ಕಾಯಿ ಎಂದಿಗೂ ಸಿಕ್ಕಲಾರದು. ಪ್ರಯತ್ನ ಮಾಡುವುದು ; ಮಾಡಿ ಬಳಿಕ ತಲೆಯನ್ನು ಒಪ್ಪಿಸುವುದು—ಆಗುವ ಫಲವು ಇಷ್ಟು. ಲೂಯಿ ನೆಪೋಲಿಯನ್ನನ ಮೇಲೆ ಒರ್ಸಿನಿಯು ಕೈಮಾಡಲು ಯತ್ನಿಸಿದುದೂ ಹಾರ್ಪರ್ಸ್ ಫೆರ್‍ರಿಯನ್ನು ಆಕ್ರಮಿಸಲು ಬ್ರೌನನು ಯತ್ನಿಸಿದುದೂ ಒಂದೇ ಆಯಿತು'' ಎಂದು ಲಿಂಕನ್ನನು ಹೇಳಿದನು.

ಇಂತಹ ಶ್ರಮಗಳಿಗೆ ದುರ್ಭೋರ್ಜನವೇ ಫಲವಾಗುತ್ತಿದ್ದಿತು. ಗುಲಾಮರನ್ನು ಹೀಗೆ ಒಮ್ಮಿಂದೊಮ್ಮೆಗೆ ಬಿಡುಗಡೆಮಾಡಿದರೆ ಕಷ್ಟಗಳು ಪರಂಪರೆಯಾಗಿ ಎದುರಿಗೆ ನಿಲ್ಲುತ್ತಿದ್ದುವು. ಅವರಿಗೆ ಆಹಾರವೂ ಇತರ ಸೌಕರ್ಯಗಳೂ ಎಲ್ಲಿಂದ ಬರಬೇಕು? ಸ್ವಾತಂತ್ರ್ಯವನ್ನುಳಿಸಿಕೊಂಡು ಪಶುಪ್ರಾಣಿಗಳಂತೆ ಅರಿಯದವರಾದ ನೀಗ್ರೋಗಳು ಜೀವನವನ್ನು ಹೇಗೆ ಸಂಪಾದಿಸಬೇಕು? ಒಂದು ದಿನ ಆ ಹಂಚಿಕೆಯು ನಡೆಯಬಹುದು, ಒಂದು ವರ್ಷ ನಡೆಯಬಹುದು. ಆದರೆ ಆ ಮೇಲೆ? ಗುಲಾಮನಾದವನು ಸ್ವತಂತ್ರನಾಗಿ ಮತ್ತೆ ಜೀತವನ್ನು ಹುಡುಕಿದರೆ ಕಾಗೆಯು ಗುಂಪನ್ನು ತ್ಯಜಿಸಿ ನವಿಲುಗಳ ಕೈಯಿಂದ ಪೆಟ್ಟುತಿಂದು ಮತ್ತೆ ತನ್ನ ಗುಂಪಿಗೆ ಹಿಂದಿರುಗಿ ತೀರ ಹೊಲಸಾದ ಅವಸ್ಥೆಗೆ ಗುರಿಯಾದ ಕಾಗೆಯಂತಾಗುತ್ತಿದ್ದನು. ಯಜಮಾನನಾದವನು ಆಗ ದಯೆಯನ್ನು ತೋರಿಸುವನೆ? ಯಾವುದೂ ಸಾಧ್ಯವಲ್ಲ. ಲಿಂಕನ್ನನು ಹೀಗೆಂದನು: "ಪ್ರಪಂಚದ ಮೇಲಿರತಕ್ಕ ಅಧಿಕಾರವೆಲ್ಲಾ ನನ್ನ ಕೈಯಲ್ಲಿದ್ದರೂ ಕೂಡ ಈ ದಾಸ್ಯದ ವಿಚಾರದಲ್ಲಿ ಏನು ಮಾಡಬೇಕೋ ಗೊತ್ತಾಗುವುದಿಲ್ಲ. ಗುಲಾಮರೆನ್ನೆಲ್ಲಾ ವಿಮುಕ್ತರನ್ನಾಗಿ ಮಾಡಿ ಲೈಬೀರಿಯಕ್ಕೆ ಕಳುಹಿಸಬೇಕೆಂದು ಮೊದಲು ಅಪೇಕ್ಷೆಯಾಗುವುದು. ಲೈಬೀರಿಯವು ಅವರ ಸ್ವಂತ ದೇಶ. ಅವರನ್ನು ಅಲ್ಲಿಗೆ ಕರೆದುಕೊಂಡು ಹೋಗಿ ಇಳಿಸಿದುದಾಯಿತು. ಅವರು ಒಂದುದಿನ ಹೊಟ್ಟೆಗೆ ತಿಂದು ಇದ್ದಾರು. ಆದರೆ ಮುಂದೆ ಹತ್ತೂದಿನಗಳೊಳಗೆ ಎಲ್ಲರೂ ಸತ್ತು ಹೋಗುವರು. ಹತ್ತೂ ಹತ್ತುದಿನಗಳಿಗೆ ಅವರನ್ನು ಹೊಸಹೊಸದಾಗಿ ಕರೆದುಕೊಂಡು ಹೋಗಲು ನನ್ನ ಹತ್ತಿರ ಹಣವಾಗಲೀ ಹಡಗಾಗಲೀ ಇಲ್ಲ. ಆ ಮೇಲೆ?" ಈ ಪ್ರಶ್ನೆಗೆ ಉತ್ತರವಿರಲಿಲ್ಲ.

---

# ೪ನೆಯ ಅಧ್ಯಾಯ

---

## ವಾದ ಪ್ರತಿವಾದ.

ಕಾನ್ಸಾಸ್ ರಾಜ್ಯದ ಶಾಸನಕ್ರಮವನ್ನು ಪ್ರೆಸಿಡೆಂಟನು ಮಂಜೂರು ಮಾಡಿದರೂ ಕಾಂಗ್ರೆಸ್ ಸಭೆಯು ಅದನ್ನು ಒಪ್ಪಲಿಲ್ಲ. ಅದಕ್ಕೆ ವಿರುದ್ಧವಾಗಿ ಡಗ್ಲಸ್‌ನೇ ಮಾತನ್ನೆತ್ತಿದನು. ಅವನು ಹೇಳಿದ "ಪ್ರಜಾಪ್ರಭುತ್ವ"ವು ಅಲ್ಲಿ ಚಲಾವಣೆಗೆ ಬರದಿದ್ದುದೇ ಅವನ ಆಕ್ಷೇಪಣೆ. "ಜನಗಳು ಚೀಟಿಹಾಕಿ ಯಾವುದೊಂದು ವಿಚಾರವನ್ನೂ ವ್ಯವಸ್ಥೆಮಾಡಲೆಂದು ನಾನು ಹೇಳುವ ತತ್ವ. ಅದರಿಂದ ಪ್ರಜೆಗಳ ಅಭಿಮತವು ಹೀಗೇ ಸರಿಯೆಂದು ಗೊತ್ತಾಗುವುದು. ಆದರೆ ನ್ಯಾಯಮಾರ್ಗವನ್ನು ಬಿಟ್ಟು ಕಾನ್ಸಾಸ್‌ನಲ್ಲಾದ ಹಾಗೆ ಮಾಡಿದರೆ ಅದು ಪ್ರಜಾಪ್ರಭುತ್ವವಲ್ಲ. ಬಲಾತ್ಕಾರವು ನನ್ನ ತತ್ವಕ್ಕೆ ಹಾನಿಯನ್ನು ಮಾತ್ರವೇ ತಂದೀತು.

. . . ಚೀಟಿ ಹಾಕುವ ಕೆಲಸವನ್ನು ಮತ್ತೊಂದು ಸಲ ನ್ಯಾಯಮಾರ್ಗದಲ್ಲಿ ಮಾಡಬೇಕು. ಆಗ ಯಾವರೀತಿ ನಿರ್ಣಯವಾಗುವುದೋ ಅದನ್ನು ಎಲ್ಲರೂ ಅನುಮೋದಿಸುವುದು ಯುಕ್ತವಾದದ್ದು. ಈಯೆರಡನೆಯ ಚುನಾವಣೆಯಿಲ್ಲದಿದ್ದರೆ ಕಾನ್ಸಾಸ್ ರಾಜ್ಯವನ್ನು ಸಂಯೋಗದಲ್ಲಿ ಸೇರಿಸಿಕೊಳ್ಳಕೂಡದು.''

ಡಗ್ಲಸ್‌ನ ಮಾತು ನ್ಯಾಯವಾಗಿದ್ದಿತು. ಪ್ರೆಸಿಡೆಂಟನು ಅವನನ್ನು ಕರೆಯಿಸಿಕೊಂಡು ಅವನೊಡನೆ ಚರ್ಚಿಸಿ ಮನಸ್ಸನ್ನು ಹಿಂದಿರುಗಿಸಲು ಸಾಹಸಮಾಡಿದನು. ಡಗ್ಲಸ್‌ನನ್ನು ಹೆದರಿಸಿದನು. ಯಾವುದಕ್ಕೂ ಡಗ್ಲಸ್‌ನು ಹೆದರಿ ಚಂಚಲನಾಗಲಿಲ್ಲ.

ಕಾಂಗ್ರೆಸ್ ಸಭೆಯಲ್ಲಿ ಕೊನೆಗೆ ಡಗ್ಲಸ್‌ನ ಮಾತೇ ಉಳಿಯಿತು. ಸಭಿಕರು ದಕ್ಷಿಣದವರು ಏರ್ಪಡಿಸಿದ್ದ ಶಾಸನಕ್ರಮವನ್ನು ತಿರಸ್ಕರಿಸಿ ಮತ್ತೊಂದು ಸಲ ನ್ಯಾಯಸಮ್ಮತವಾದ ರೀತಿಯಲ್ಲಿ ವ್ಯವಸ್ಥೆಯಾಗದಿದ್ದರೆ ಕಾನ್ಸಾಸ್ ರಾಷ್ಟ್ರವು ಸಂಸ್ಥಾನ[1]ವಾಗಲು ಅರ್ಹತೆಯನ್ನು ಪಡೆಯಲಾರದೆಂದು ನಿರ್ಣಯಿಸಿದರು.

1858 ನೇ ವರುಷದ ಹಿಮಗಾಲದಲ್ಲಿ ಪುನಃ ಚೀಟಿಹಾಕುವ ಕಾರ್ಯವು ನಡೆಯಿತು. ಕಾನ್ಸಾಸ್‌ನಲ್ಲಿ ದಾಸ್ಯದ ಶಾಸನಕ್ರಮಕ್ಕಿಂತ ಸ್ವತಂತ್ರದ ಕ್ರಮಕ್ಕೆ ಹತ್ತುಸಾವಿರ ಚೀಟಿಗಳು ಹೆಚ್ಚಾಗಿ ಬಂದಿದ್ದುವು. ಕಾಂಗ್ರೆಸ್ ಸಭೆಯು ಅದನ್ನೇ ಅನುಮೋದಿಸಿತು. ಅದು ಉತ್ತರದ ಜಯಭೇರಿಯೆಂದು ಗುಲಾಮರನ್ನಿಟ್ಟುಕೊಂಡಿದ್ದ ಯಜಮಾನರು ಭಾವಿಸಿದರು.

ಸೆನೇಟರುಗಳನ್ನು ಹೊಸದಾಗಿ ಚುನಾಯಿಸುವ ಸಂದರ್ಭದಲ್ಲಿ ಡಗ್ಲಸ್‌ನು ತನ್ನೂರಿಗೆ ಹೋದನು. ಅವನು ಡೆಮೊಕ್ರೆಟರ ಪಂಗಡಕ್ಕೆ ಸೇರಿದವನಾದುದರಿಂದ ರಿಪಬ್ಲಿಕ ಪಂಗಡದವರ ಕಡೆಯೂ ಒಬ್ಬನು ನೇಮಕನಾಗಬೇಕಾಗಿದ್ದಿತು. ಲಿಂಕನ್ನನನ್ನು ಈ ಎರಡನೆಯ ಪಂಗಡದವರು ನೇಮಿಸಿದರು. ಡಗ್ಲಸ್‌ನಿಗೂ ಅವನಿಗೂ ಸ್ಪರ್ಧೆ ಹತ್ತಿತು.

ಆ ಸ್ಪರ್ಧೆಯು ಅಲ್ಪವಾದುದಲ್ಲ. ಡಗ್ಲಸ್‌ನು ಸಾಮಾನ್ಯನಲ್ಲ. ಅದು ಲಿಂಕನ್ನನಿಗೆ ಸ್ಪಷ್ಟನಾಗಿ ತಿಳಿದಿದ್ದಿತು. ಜನಗಳಿಗೆ ದಾಸ್ಯದ ವಿಚಾರದಲ್ಲಿ ಇದ್ದ ವಿವರವನ್ನೆಲ್ಲಾ ವರ್ಣಿಸಬೇಕಾಗಿದ್ದಿತು. ಉಪನ್ಯಾಸಗಳು ಪ್ರಾರಂಭಿಸುವದಕ್ಕೆ ಮೊದಲು ಲಿಂಕನ್ನನು ತಾನು ಬರೆದಿದ್ದುದನ್ನು ಸ್ನೇಹಿತನಾದ ಹರ್ನ್‌ಡರ್ನ ಮುಂದೆ ಓದಿದನು. ಅದರೊಳಗೆ ದಾಸ್ಯಕ್ಕೆ ವಿರುದ್ಧವಾದ ವಿಷಯಕ್ಕಿಂತಲೂ ಐಕಮತ್ಯಕ್ಕೆ ಭಂಗಬರಕೂಡದೆಂಬ ಪೂರ್ವದ ವಿಷಯವೇ ವಿಸ್ತರಿಸಲ್ಪಟ್ಟಿದ್ದಿತು. ''ಒಂದು ಸಂಸಾರ

---

[1] ಸಂಯೋಗದಲ್ಲಿ ಬೆರೆಯದಿದ್ದ ಪ್ರದೇಶಗಳಿಗೆ ರಾಜ್ಯ ಅಥವಾ ರಾಷ್ಟ್ರ ಎಂತಲೂ ಬೆರೆದವುಗಳಿಗೆ ಸಂಸ್ಥಾನವೆಂತಲೂ ಸಂಜ್ಞೆಯನ್ನುಪಯೋಗಿಸಿದ್ದೇನೆ. ಹಿಂದೆ ಅಮೆರಿಕವು ಸ್ವತಂತ್ರವಾದಾಗ ಹದಿಮೂರು ಸಂಸ್ಥಾನಗಳು ಮಾತ್ರವೇ ಸಂಯೋಗವನ್ನು ಏರ್ಪಡಿಸಿಕೊಂಡುವು. ಉಳಿದವು ಕಾಲಕ್ರಮದಲ್ಲಿ ಒಂದೊಂದಾಗಿ ಅದನ್ನು ಸೇರಿಕೊಂಡುವು.

ದಲ್ಲಿ ಒಡಕು ಉಂಟಾದಮೇಲೆ ಅದು ಎಂದಿಗೂ ಒಗ್ಗಟ್ಟಿನಿಂದ ಬಾಳದು. ನಮ್ಮ ಸಂಯುಕ್ತ ಸಂಸ್ಥಾನಗಳಲ್ಲಿ ಅರ್ಧವು ಸ್ವಾತಂತ್ರ್ಯವನ್ನು ಆರಾಧಿಸುತ್ತಲೂ ಉಳಿದ ಅರ್ಧವು ದ್ಯಾಸ್ಯವನ್ನು, ಅಪೇಕ್ಷಿಸುತ್ತಲೂ ಕಡೆಯವರೆಗೆ ನಡೆದುಕೊಂಡು ಬರುವು ದೆಂದು ನನಗೆ ತೋರಲಿಲ್ಲ. '' ಎಂಬ ಅಂಶವು ಅವನ ಪ್ರಬಂಧದ ಸಾರಾಂಶವನ್ನು ತಿಳಿಸುವುದು. ಆ ಸಮಯದಲ್ಲಿ ಆ ಮಾತನ್ನೆತ್ತುವುದರಿಂದ ಕಾರ್ಯಸಿದ್ಧಿಯಾಗ ದೆಂದು ಸ್ನೇಹಿತನು ಸೂಚಿಸಿದರೂ ಲಿಂಕನ್ನನು ಅದನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ''ಏನೇನನ್ನು ಬರೆದಿರುವೆನೋ ಅದನ್ನು ಸ್ವಲ್ಪವೂ ಬದಲಾಯಿಸದೆ ಸಭಿಕರ ಮುಂದೆಯೂ ಹೇಳುವೆನು'' ಎಂದನು. ಹೇಳದೆ ಬಿಡಲಿಲ್ಲ.

ವಾದವು ಏಳು ಸ್ಥಳಗಳಲ್ಲಿ ನಡೆಯಬೇಕೆಂದು ಗೊತ್ತಾಯಿತು. ಉಪನ್ಯಾಸ ವಿಷಯವು ಡ್ರೆಡ್‌ಸ್ಕಾಟನ ಮೊಕದ್ದಮೆಗೂ ಕ್ಯಾನಸಾಸ್‌ನ ಕಲಹಕ್ಕೂ ಸಂಬಂಧ ಪಟ್ಟಿದ್ದಿತು. ಲಿಂಕನ್ನನು ಆ ಪ್ರಸಂಗದಲ್ಲಿ ದಾಸ್ಯದ ವಿಷಯದಲ್ಲಿ ತಾನು ಸ್ಥಿರಪಡಿಸಿ ಕೊಂಡಿದ್ದ ಅಭಿಪ್ರಾಯಗಳನ್ನು ಎಲ್ಲರಿಗೂ ತಿಳಿಯಹೇಳಿದನು. ಆ ಅಭಿಪ್ರಾಯ ಗಳು ಪೂರ್ವಪರಿಚಿತನಾದವುಗಳು. ಅವು ರಿಪಬ್ಲಿಕ್ ಪಂಗಡದ ಜನಗಳ ಮನಸ್ಸಿನ ಲ್ಲಿಯೂ ಸ್ಥಿರಪಟ್ಟಿದ್ದವು. ನೀಗ್ರೋಗಳಿಗೆಲ್ಲಾ ಬಂಧವಿಮೋಚನೆಯಾಗಬೇಕೆನ್ನುವು ದಾದರೆ ಬಿಳಿಯ ಜನರನ್ನೂ ಕರಿಯ ಜನರನ್ನೂ ಒಂದೇ ತೂಕಕ್ಕೆ ತಂದಹಾಗಾ ಯಿತೆಂದೂ ಅಮೇರಿಕವಿರುವುದು ಬಿಳಿಯ ಜನಗಳಿಗೋಸ್ಕರಲೇ ಹೊರತು ಅನ್ಯರಿ ಗೋಸ್ಕರವಲ್ಲವೆಂದೂ ಡಗ್ಲಸ್‌ನು ಆಕ್ಷೇಪಿಸಲಾಗಿ ಲಿಂಕನ್ನನು, '' ಈ ತರ್ಕವನ್ನು ಡಗ್ಲಸ್‌ರವರಿಗೆ ಯಾರು ಸಲಿಸಿದರೋ ಕಾಣೆನು. ಅದು ಶುದ್ಧ ಸುಳ್ಳು. ನೀಗ್ರೋ ಹೆಂಗಸೊಬ್ಬಳು ಗುಲಾಮನಾಗಿರಕೂಡದೆಂದರೆ ಅವಳು ನನ್ನ ಹೆಂಡತಿಯಾಗಬೇ ಕೆಂದು ಹೇಳಿದಂತಾಯಿತೆ? '' ಎಂದು ಪ್ರತ್ಯುತ್ತರ ಹೇಳಿದನು.

ರಾಜ್ಯನಾದ್ಯಂತವೂ ಉತ್ಸುಕವಾಯಿತು. ಅದು ಭೀಮಬಲರಾಮರ ಯುದ್ಧ. ಅಷ್ಟು ಉದ್ದಂಡವಾದ ವಿವಾದವು ಮೊದಲು ಯಾವಾಗಲೂ ನಡೆದಿರಲಿಲ್ಲ. ಸ್ವಾತಂ ತ್ರ್ಯವು ಅಧಿಷ್ಠಾತೃವಾಗಬೇಕೇ ಅಥವಾ ದಾಸ್ಯವು ಅಧಿಷ್ಠಾತೃವಾಗಬೇಕೇ ಎಂಬುದು ಮುಖ್ಯ ವಿಚಾರವಾಗಿದ್ದಿತು. ಆ ವಿಚಾರದ ಸತ್ಯವು ಈಗ ಹೊರಪಡು ವುದೆಂದೂ ಅದನ್ನು ಸುಪ್ರಸಿದ್ಧರಾದ ಇಬ್ಬರು ವಾಗ್ಮಿಗಳ ಬಾಯಿಂದ ಕೇಳುವೆವೆಂದೂ ಜನಗಳು ಊಹಿಸಿದರು. ಕಾಂಗ್ರೆಸ್‌ನಲ್ಲಿ ನಿಬಂಧನೆಗಳು ನಿರ್ಮಿತವಾದರೂ ಅವು ಗಳನ್ನು ಚಲಾವಣೆಗೆ ತರುವುದು ಆಯಾ ಸಂಸ್ಥಾನಗಳ ಪೋಲೀಸ್ ಇಲಾಖೆಯ ಸಹಾಯವಿಲ್ಲದಿದ್ದರೆ ಅಸಾಧ್ಯವಾಗುವುದರಿಂದ ಸಂಸ್ಥಾನಗಳು ಸ್ವತಂತ್ರವಾದವುಗಳೇ ಎಂದು ಡಗ್ಲಸ್‌ನು ವಾದಿಸಿದನು. ಅದೇ ಪ್ರಕಾರದಲ್ಲಿ ''ಬಿಳಿಯ ಜನಗಳಿಗೂ ನೀಗ್ರೋ ಗಳಿಗೂ ಇರುವ ಬಾಧ್ಯತೆಗಳ ಪರಿಮಾಣವನ್ನು ನಿಶ್ಚಯಿಸುವುದಕ್ಕೂ ಸಂಸ್ಥಾನಕ್ಕೆ ಅಧಿ ಕಾರವಿರುವುದು. ಸಹಜವಾಗಿ ಅವರಿಬ್ಬರಿಗೂ ಸಮವಾದ ಬಾಧ್ಯತೆಗಳಿಲ್ಲ. ಸಂಸ್ಥಾನ ದಲ್ಲಿ ದಾಸ್ಯವಿರಬೇಕೋ ಸ್ವಾತಂತ್ರ್ಯವಿರಬೇಕೋ ಅದನ್ನು ಸಂಸ್ಥಾನವೇ ನಿರ್ಣಯಿಸು ವುದು. ಇದರಿಂದ ಸಂಯೋಗಕ್ಕೂ ಭಂಗವು ಬರುವುದಿಲ್ಲ. ಆಡಳಿತಕ್ಕೂ ಅಡಚಣೆ ಯುಂಟಾಗುವುದಿಲ್ಲ'' ಎಂದನು. ಅವನ ಮಾತನ್ನು ನೋಡಿದರೆ ಅವನಿಗೆ ದಾಸ್ಯ

ದಲ್ಲಿ ತೀರ ಔದಾಸೀನ್ಯವೆಂಬುದು ವ್ಯಕ್ತವಾಗುತ್ತಿದ್ದಿತು. "I do not care whether slavery be voted up or voted down" ಎಂದಿದ್ದನು. ಲಿಂಕನ್ನನಿಗೆ ಈ ಔದಾಸೀನ್ಯವು ಸಹಿಸಲಿಲ್ಲ. ಸ್ವತಂತ್ರರಾಗಿ ಬಾಳಬೇಕೆಂದು ಪ್ರತಿಭಟಿಸಿ ರಕ್ತವನ್ನು ಚೆಲ್ಲಾಡಿ ಜನರು ಅದನ್ನು ಪಡೆದು, ಈಗ ಕೆಲವರು ಸ್ವತಂತ್ರರಾಗದೆಯೇ ಜೀವಿಸಲೆಂದು ಹಾರೈಸಿ ಅವರ ದಾಸ್ಯವನ್ನು ಶಾಶ್ವಿತವಾಗಿ ನೆಲೆಗೊಳಿಸುವುದು ಡಗ್ಲಸ್‌ನ ಆ ಭಾವನೆಯೂ ಒಂದೇ ಸಮವಾಗಿ ಅಧರ್ಮನಾದವುಗಳೆಂದು ಅವನಿಗೆ ತೋರಿತು. ಅದು ದ್ರೋಹಾಚರಣೆಗಿಂತ ಕಡಿಮೆಯಾಗಲಿಲ್ಲ. ಡಗ್ಲಸ್‌ನ ಆ ಭಾವನೆಯು ಇದಲ್ಲದೆ ಅವನ ಅಂತರಾತ್ಮದಲ್ಲಿರಲಿಲ್ಲವೆಂತಲೇ ತೋರಿತು. ಡ್ರೆಡ್ ಸ್ಕಾಟನ ವಿಚಾರವನ್ನು ಸ್ಮರಿಸಿಕೊಂಡರೆ ಅದು ಪತ್ತೆಯಾಗುತ್ತದೆ. ಆ ಮೊಕದ್ದಮೆಯ ನಿರ್ಣಯವನ್ನು ಅಂಗೀಕರಿಸುವುದಾದರೆ ಡಗ್ಲಸ್‌ನ "ಪ್ರಜಾಪ್ರಭುತ್ವವು ನಿಷ್ಪ್ರಯೋಜಕವಾಗಿ ಕೇವಲ ಸುಳ್ಳಾಗುತ್ತಿದ್ದಿತು. ಅವೆರಡು ಅಂಶಗಳಿಗೂ ಪರಸ್ಪರ ಸಾಮಂಜಸ್ಯವಿರದೆ ದಾಸ್ಯದಲ್ಲಿ, ಡಗ್ಲಸ್‌ನಿಗಿದ್ದ ಉಪೇಕ್ಷಾಭಾವವು ವೇಷವೆಂದು ಯಾರಿಗಾದರೂ ತೋರುತ್ತಿದ್ದಿತು.

ಹಿಂದೆ 1855 ರಲ್ಲಿ ಪಿಯೋರಿಯದಲ್ಲಿ ಅವರವರಿಗೆ ಸ್ಪರ್ಧೆಯು ನಡೆದು ಆ ಬಳಿಕ ಮುಂದೆ ಎಂದಿಗೂ ಹಾಗೆ ಒಟ್ಟಾಗಿ ನಿಂತು ಚರ್ಚೆಯನ್ನು ನಡೆಯಿಸಕೂಡದೆಂದು ಇಬ್ಬರಿಗೂ ಒಪ್ಪಂದವಾಗಿದ್ದರೂ ಕೂಡ ಈಗ ಮತ್ತೆ ಅವರೇಕೆ ಚರ್ಚೆಗೆ ನಿಂತರೆಂದು ಆಕ್ಷೇಪಿಸಬಹುದು. ಲಿಂಕನ್ನನು ಅದೇ ಪ್ರಕಾರ ನಡೆದರೂ ಡಗ್ಲಸ್‌ನು ಸಮಯ ಸಿಕ್ಕಿದ ಕೂಡಲೇ ಆ ಕರಾರನ್ನು ಉಲ್ಲಂಘಿಸಿದನೆಂದೂ ಆ ಕಾರಣದಿಂದ ಲಿಂಕನ್ನನು ಅವನೊಡನೆ ವಾದವನ್ನು ನಡೆಯಿಸಲು ಆಕ್ಷೇಪಣೆಯಿಲ್ಲವೆಂದೂ ಲಾರ್ಡ್ ಚಾರ್ನ್‌ವುಡ್‌ನು ಅಭಿಪ್ರಾಯಪಡುತ್ತಾನೆ. ಅಲ್ಲದೆ ಇನ್ನೂ ಕೆಲವು ಕಾರಣಗಳನ್ನು ಹೇಳಬಹುದು. ಅವನು ಹುಡುಗನಾಗಿದ್ದಾಗ ಹೊಲಗದ್ದೆಗಳಲ್ಲಿ ಕೋರ್ಟನ್ನೂ ಮೊಕದ್ದಮೆಗಳನ್ನೂ ಕಲ್ಪಿಸಿಕೊಂಡು ವಾದಿಸುತ್ತಿದ್ದುದನ್ನೂ ಆಗಿಂದಾಗ ಕೋರ್ಟುಗಳಿರುವ ಊರಿಗೆ ಹೋಗಿ ಮೊಕದ್ದಮೆಯ ಕಾಲದಲ್ಲಿ ಅಲ್ಲಿ ಕುಳಿತು ಲಾಯರುಗಳು ವಾದಿಸುವುದನ್ನು ಕೇಳುತ್ತಲಿದ್ದುದನ್ನೂ ಅವನು ಲಾಯರ ವೃತ್ತಿಯನ್ನು ಅನುಸರಿಸಿದುದನ್ನೂ ನೋಡಿದರೆ ಉಪನ್ಯಾಸಮಾಡುವುದರಲ್ಲಿಯೂ ವಾಗ್ಮಿತೆಗಾಗಿ ಇತರರೊಡನೆ ಹೋರುವುದರಲ್ಲಿಯೂ ಅವನಿಗೆ ಆಸೆಯು ಪ್ರಬಲವಾಗಿದ್ದಿತು. ಆದಕಾರಣ ಸಮಯವೊದಗಿದರೆ ಅದನ್ನು ಬಿಟ್ಟುಬಿಡಲು ಅವನಿಗೆ ಇಷ್ಟವಿರಲಿಲ್ಲ. ಅಲ್ಲದೆ ಡಗ್ಲಸ್‌ನಲ್ಲಿ ರಾಜನೀತಿಯ ಸಂಬಂಧದಲ್ಲಿ ಸ್ಥಿರಬುದ್ಧಿಯಿಲ್ಲವೆಂದೂ ಸ್ವಪ್ರಯೋಜನಕ್ಕಾಗಿ ಅವನು ನೈತಿಕಾಂಶಗಳನ್ನು ಹೆಚ್ಚಾಗಿ ಲೆಕ್ಕಕ್ಕೆ ತರುತ್ತಿರಲಿಲ್ಲವೆಂದೂ ಲಿಂಕನ್ನನಿಗೆ ಸಂದೇಹವುಂಟಾಯಿತು. ಪ್ರಾಯಶಃ ಡ್ರೆಡ್‌ಸ್ಕಾಟನ ಮೊಕದ್ದಮೆಯೂ ಕ್ಯಾನ್ಸಾಸಿನ "ಪ್ರಜಾಪ್ರಭುತ್ವ" ವೂ ಅವನ ಸಂದೇಹವನ್ನು ಬಲಪಡಿಸಿರಬಹುದು. ಅವನೊಡನೆ ಸ್ಪರ್ಧೆಗೆ ನಿಲ್ಲಲು ಆಡಳಿತದ ವಿಚಾರದಲ್ಲಿ ತಾನು ಮುಂದಟ್ಟು ಮಾಡಿಕೊಂಡಿದ್ದ ತತ್ವಗಳೂ ಕಾರಣವಿರಬಹುದು. ಸಾಮಾನ್ಯವಾಗಿ ತುದಿನಾಲಗೆಯ ಮಾತನ್ನಾಡುತ್ತ ಡಗ್ಲಸ್‌ನ ಹಾಗಿದ್ದರೆ ಆತ್ಮದ್ರೋಹವನ್ನು

ಮಾಡಿದಂತಾಯಿತೆಂದೂ ಯುಕ್ತಿ (Reason) ಯೂ ಶ್ರದ್ಧೆಯೂ ಸಿದ್ಧಾಂತಮಾಡಿ ಕೊಟ್ಟ ಮತವನ್ನಾಶ್ರಯಿಸಿ, ಬರುವ ಅಡಚಣೆಯನ್ನು ಕಡೆಗಂಡು ನಿಲ್ಲಬೇಕೆಂದೂ ಅವನು ಎಣಿಸಿದನು. ಆದ್ದರಿಂದ ಈ ಸಮಯದಲ್ಲಿ ತನ್ನ ಮನಸ್ಸಿನಲ್ಲಿದ್ದುದನ್ನು ರಾಜ್ಯದ ಪ್ರಜೆಗಳಿಗೆ ತಿಳಿಸಿ ಸಮಯ ದೊರೆತಾಗ ಇತರರ ತಪ್ಪುತಿಳಿವಳಿಕೆಯನ್ನು ತಿದ್ದಬೇಕಾದುದು ಕೇವಲ ಕರ್ತವ್ಯನಾಗಿದ್ದಿತು. ಡಗ್ಲಸ್‌ನಿಗೆ ಪ್ರತಿಯಾಗಿ ಉಮೇದುವಾರನಾಗಿ ನಿಂತು ಸೆನೇಟರ್ ಪದವಿಗೆ ಅವನು ಆಸೆಪಡಲಿಲ್ಲ. ದಾಸ್ಯವು ಎಲ್ಲಾ ಕಡೆಯಲ್ಲಿಯೂ ಹರಡಿ ಅದು ಯುಕ್ತವಾದುದೆಂದು ಸರ್ಕಾರವು ಅನುಮೋದಿಸಬೇಕೆಂದು ದಕ್ಷಿಣದ ಜನಗಳು ವಾದಿಸುತ್ತಿರುವಾಗಲೂ ಪ್ರೆಸಿಡೆಂಟನೂ ಕಾಂಗ್ರೆಸ್‌ನ ಅನೇಕ ಸಭಿಕರೂ ಅವರಲ್ಲಿ ಪಕ್ಷಪಾತವನ್ನು ತೋರಿಸಿ ಡ್ರೆಡ್‌ಸ್ಕಾಟನ ಮೊಕದ್ದಮೆಯ ನಿರ್ಣಯವನ್ನು ಪ್ರಶಂಸಿಸುತ್ತಿರುವಾಗಲೂ ತಾನು ಸ್ವಾತಂತ್ರ್ಯವನ್ನು ಆರಾಧಿಸುವ ರಾಜ್ಯದಲ್ಲಿ ಇದ್ದೂ ಕೂಡ ದಾಸ್ಯವನ್ನು ನಿಷೇಧಿಸಿ ಅದನ್ನು ಪ್ರೋತ್ಸಾಹಿಸುವವರ ಆಚರಣೆಯನ್ನು ಖಂಡಿಸದಿದ್ದರೆ ಹೇಡಿಗೆ ಸಮನೆಂದು ಅವನು ನಿಶ್ಚಯಿಸಿದನು. ತನ್ನ ಮನೋನಿಶ್ಚಯವನ್ನು ತಿಳಿಸಲು ಡಗ್ಲಸ್‌ನೊಡನೆ ಪ್ರಾರಂಭಿಸಿದ ವಿವಾದವು ಅವಕಾಶಮಾತ್ರವಾಯಿತು.

ಸ್ಥಿತಿಗತಿಗಳನ್ನು ಸಾವಧಾನವಾಗಿ ಪರಿಶೀಲಿಸಿ ಮುಂದೆ ಒದಗಬಹುದಾದುದನ್ನು ಸ್ಪಷ್ಟವಾಗಿ ಚಿಂತಿಸುವ ಸೂಕ್ಷ್ಮದೃಷ್ಟಿಯು ಎಲ್ಲರಿಗೂ ಬರದು. ದಾಸ್ಯವು ಹಿಂದೆ ಇದ್ದ ರೀತಿಯನ್ನೂ ಹತ್ತುವರ್ಷಗಳಿಂದೀಚೆಗಿದ್ದ ರೀತಿಯನ್ನೂ ಅದರ ವಿಷಯದಲ್ಲಿ ಜನಗಳಿಗಿದ್ದ ಬುದ್ಧಿಯನ್ನೂ ಹೋಲಿಸಿ ಲೆಕ್ಕಹಾಕಿ ಲಿಂಕನ್ನನು ದಕ್ಷಿಣದ ಜನರು ದಾಸ್ಯದ ವಿಷಯದಲ್ಲಿ ಎಂದೂ ಇಲ್ಲದಿದ್ದ ಉತ್ಸಾಹವನ್ನು ತೋರಿಸುತ್ತಿದ್ದಾರೆಂದು ಅವರು ಮೊಂಡತನಕ್ಕಾರಂಭಿಸಿ ಇತರ ಅಂಶಗಳಲ್ಲಿ ಔದಾಸೀನ್ಯವನ್ನು ವಹಿಸುವರೆಂದು ಆದರಿಂದ ಜನಾಂಗವು ಹುಳಿಹಿಂಡಿದ ಹಾಲಿನಂತೆ ಒಡೆದು ಹೋಗುವುದೆಂದೂ ಆದಕಾರಣ ದಾಸ್ಯವನ್ನಡಗಿಸುವುದಕ್ಕಿಂತ ಸಾವಿರ ಪಾಲು ಗುರುತರವಾದ ಮತ್ತೊಂದು ಕಾರ್ಯವಿರುವುದೆಂದೂ ತರ್ಕಿಸಿದ್ದನು. ಈ ವಿಧವಾದ ಅಭಿಪ್ರಾಯವು ಅಂಕುರಿಸಿದುದಕ್ಕೆ ರಿಪಬ್ಲಿಕ್ ಪಂಗಡವು ಹುಟ್ಟಿದುದೇ ಚಿಹ್ನೆ. ಮುಂದೆ ಹತ್ತುವರ್ಷಗಳು ಕಳೆಯುವುದರೊಳಗೆ ಅವನ ಮಾತು ಸಂಪೂರ್ಣವಾಗಿ ನಿಜವಾಯಿತು. ದಕ್ಷಿಣದವರ ನಡತೆಯನ್ನು ನೋಡಿ ಅವನ ಮನಸ್ಸಿನಲ್ಲಿ ಹುಟ್ಟಿದ ಭಯವು ಅಳಿಸಿಹೋಗದಂತೆ ನಿಂತು ಸದಾ ಜಾಗರಿತವಾಗಿದ್ದಿತು. ಅದರ ಸುಳಿವು ಅವನು ಈ ವಾದಸಮಯದಲ್ಲಿ ಮಾಡಿದ ಪ್ರಥಮೋಪನ್ಯಾಸದಿಂದ ತಿಳಿದುಬರುತ್ತದೆ. ದಾಸ್ಯದ ಮಾತನ್ನೂ ಅದರ ದೆಸೆಯಿಂದ ಸಂಯೋಗಕ್ಕೂ ಜನಾಂಗಕ್ಕೂ ಇರುವ ಮುಳಿಯುಮಾತನ್ನೂ ಆಡಿ ಸ್ಥಿತಿಯನ್ನು ಒಡಕು ಹುಟ್ಟುವ ಸಂಸಾರಕ್ಕೆ ಹೋಲಿಸಿದ ಮೇಲೆ ಅವನು ಹೀಗೆಂದನು. "I do not expect the union to be dissolved—I do not expect the house to fall—but I do expect that it will cease to be divided. It will be all one thing or all the other. Either

the opponents of slavery will arrest the further spread of it, and place it where the public mind shall rest in the belief that it is in course of ultimate extinction; or its advocates will push it forward till it shall become lawful alike in all the states, old as well as new—North as well as South."

ಸಭೆಸೇರಿದ ಜನಗಳು ಇತರ ಅಂಶಗಳನ್ನು ಮರೆತರೂ ಲಿಂಕನ್ನನು ಹೇಳಿದ ಉಪಮಾನವನ್ನು ಮರೆಯಲಿಲ್ಲ. ಅದು ಅವರ ಮನಸ್ಸಿನಲ್ಲಿ ಬಹು ಗಟ್ಟಿಯಾಗಿ ನಿಂತಿತು. ಇದ್ದ ವಿಷಯವನ್ನು ಅವನಷ್ಟು ಸ್ಪಷ್ಟವಾಗಿ ಮತ್ತೆ ಯಾರೂ ಪ್ರಜೆಗಳೆದುರಿಗೆ ವಿವರಿಸಿ ಹೇಳಲಿಲ್ಲ. ದಾಸ್ಯಕ್ಕೂ ಅಮೇರಿಕದ ಭವಿಷ್ಯತ್ತಿಗೂ ಇರುವ ಸಂಬಂಧವನ್ನು ಅವನು ಯೋಚಿಸುತ್ತಿರುವಾಗ ಅವನ ಆಪ್ತರು ಆ ಮಾತುಗಳನ್ನು ಕೇಳಿ ಆ ವಿಚಾರದಲ್ಲಿ ಬಾಯಿಬಿಡುವುದು ದಡ್ಡತನವೆಂದರು. ಲಿಂಕನ್ನನು ಲಕ್ಷಿಸಲಿಲ್ಲ. ತಾನು ಆಡಬೇಕೆಂದಿದ್ದುದು ಯಥಾರ್ಥವಾದ ಮಾತು. ಅದನ್ನು ಆಡದೆ ಬಿಡುವುದಿಲ್ಲ; ಅದನ್ನು ಹೇಳಿ ಜನಗಳ ಧಿಕ್ಕಾರವನ್ನಾದರೂ ಪಡೆಯಬಹುದು, ಆದರೆ ಅದನ್ನು ಹೇಳದೆ ಇದ್ದು ಅವರಿಂದ ಸನ್ಮಾನವನ್ನು ಪಡೆದು ಸಹಿಸಲಾರೆನು, ಎಂದನು. ಅವನಾಸ್ಥಿರವಾದ ಸಂಕಲ್ಪವನ್ನು ನೋಡಿ ಹರ್ನ್‌ಡನ್ನನು "It will make you President" ಎಂದು ಶ್ಲಾಘಿಸಿದನು.

ಚುನಾವಣೆಯು ಮುಗಿದು ಡಗ್ಲಸ್‌ನೇ ಜಯಶೀಲನಾದನು. ಇಲಿನ್ವಾದ ಪ್ರಜಾಪ್ರತಿನಿಧಿಸಭೆಯು ಅವನನ್ನೇ ನೇಮಕಮಾಡಿತು. ಆದರೆ ಇದರಿಂದ ಲಿಂಕನ್ನನಿಗೆ ಆಶಾಭಂಗವಾಗಲಿಲ್ಲ. ಒಂದು ಮಾತಿಗೂ ಇನ್ನೊಂದು ಮಾತಿಗೂ ಸಾಮಂಜಸ್ಯವಿಲ್ಲದಂತೆ ಮಾತನಾಡಿ ಹೊರಳಿಕೊಳ್ಳುವುದರಲ್ಲಿ ನಿಪುಣನಾದ ಡಗ್ಲಸ್‌ನನ್ನು ಬಯಲಿಗೆಳೆದು ಮುಂದೆ 1860 ರಲ್ಲಿ ಅವನು ಪ್ರೆಸಿಡೆಂಟನಾಗದಂತೆ ಮಾಡುವದೇ ಲಿಂಕನ್ನನ ಮುಖ್ಯ ಅಪೇಕ್ಷಿತವಾಗಿದ್ದಿತು. ಅದು ಫಲಿಸಿತು. "ನಾನು ಮತ್ತೊಂದರಮೇಲೆ ಗುರಿಯಿಟ್ಟಿದ್ದೇನೆ. ನನ್ನ ಪ್ರಶ್ನೆಗಳಿಗೆ ಡಗ್ಲಸ್‌ನು ಉತ್ತರ ಹೇಳುವುದಾದರೆ ಅವನು ಎಂದಿಗೂ ಪ್ರೆಸಿಡೆಂಟನಾಗಲಾರನು. 1860 ರಲ್ಲಿ ನಡೆಯುವ ಹೋರಾಟವು ಇದಕ್ಕಿಂತ ನೂರುಪಾಲು ಮುಖ್ಯವಾದುದು" ಎಂದು ತನ್ನ ಸ್ನೇಹಿತರೊಡನೆ ಹೇಳಿದ್ದನು. ಪ್ರಕೃತದಲ್ಲಿ ತನಗೆ ಜಯನಾಗದಿದ್ದರೂ ಕರ್ತವ್ಯವನ್ನು ಮಾಡಿದ ತೃಪ್ತಿಯು ಲಭಿಸಿತೆಂದುಕೊಂಡನು. "ನನ್ನ ಕಾಲವು ಕಳೆದುಹೋದರೂ ಮುಂದೆ ಜನಗಳು ನಾನು ಈಗ ಹೇಳಿದ ಮಾತುಗಳನ್ನು ಸ್ಮರಿಸಿಕೊಳ್ಳಲಿ." ಈ ಮಾತಿನಿಂದ ಅವನ ಮನಸ್ಸಿನಲ್ಲಿ ಆ ಕಾಲದಲ್ಲಿ ಖೇದವುಂಟಾಗಿದ್ದಿತೆಂದು ತೋರ್ಪಟ್ಟರೂ ಕೂಡ ಅವನು 1860 ನೆಯ ವರ್ಷದ "ಹೋರಾಟ" ದ ವಿಷಯದಲ್ಲಿ ತಾನು ಮಾಡುವುದೆಲ್ಲವನ್ನೂ ಬಹಳ ದೊಡ್ಡದಾಗಿ ಲೆಕ್ಕಹಾಕಿಕೊಂಡಿದ್ದನು.

———

# ೫ನೆಯ ಅಧ್ಯಾಯ

---

## ಲಿಂಕನ್ನನು ಪ್ರೆಸಿಡೆಂಟನಾದ್ದು.

ಲಿಂಕನ್ನನ ಮನಸ್ಸು ಖಿನ್ನವಾಗಿತ್ತೆಂಬುದರಲ್ಲಿ ಸಂದೇಹವು ತೋರದು. ಪ್ರಾಯಶಃ ಹಿಂದೆ ಅನೇಕವೇಳೆ ಸೋಲೆಂಬುದು ಪರಿಚಿತವಾಗಿದ್ದಕಾರಣ ನಿರಾಶೆಯು ಮೊದಲನೆಯಸಾರಿ ಆಗುವಷ್ಟು ಕಟುವಾಗಿರಲಾರದು. ಪ್ರಾಯಶಃ ಅವನ ಖೇದವು ಅವನ ದುರದೃಷ್ಟವನ್ನು ಸೂಚಿಸುತ್ತ, ನಿರಾಶೆಯನ್ನು ಅಷ್ಟರ ಮಟ್ಟಿಗೆ ಸೂಚಿಸದಿರಬಹುದು. ಆ ಭಾವನೆಗೆ ಮೇಲೆ ಅವನು ಹೇಳಿರುವ ಮಾತು ಸಾಕ್ಷಿಯಾಗಿದೆ. ಅಲ್ಲದೆ, ಸ್ನೇಹಿತನೊಬ್ಬನು ಬಂದು ಅವನನ್ನು ಪ್ರಶ್ನೆಮಾಡಲಾಗಿ ಲಿಂಕನ್ನನು "ಎಡಹೆಬ್ಬೆಟ್ಟನ್ನು ಗಾಯಮಾಡಿಕೊಂಡು ಗಾಯವು ಹೆಚ್ಚಿನದಾದ್ದರಿಂದ ನಗುವುದಕ್ಕೂ ವಯಸ್ಸು ಹೆಚ್ಚಿನದಾದುದರಿಂದ ಅಳುವುದಕ್ಕೂ ಅವಕಾಶವಿಲ್ಲದಿರುವನೊಬ್ಬ ದೊಡ್ಡ ಹುಡುಗನಂತಾಗಿದೆ" ಎಂದು ಉತ್ತರ ಹೇಳಿದನು. ಆದರೆ ಡಗ್ಲಸ್‌ನಿಗುಂಟಾದ ಗೆಲುವು ಅಥರ್ವಾವಾದುದೆಂದು ಅವನು ಭಾವಿಸಿರಲಿಲ್ಲ.

ನಡೆದ ವಾದವಿವಾದಗಳಿಂದ ಅವನ ಕೀರ್ತಿಯು ಹಬ್ಬಿತು. ಉತ್ತರದ ಸಂಸ್ಥಾನಗಳಲ್ಲಿನ ಜನಗಳು ಅವನಿಗೆ ಆಹ್ವಾನವನ್ನು ಕಳುಹಿಸಿ ತಮ್ಮಲ್ಲಿಗೆ ಬರಮಾಡಿಕೊಂಡು ಅವನ ಅಭಿಪ್ರಾಯಗಳನ್ನು ತಿಳಿದುಕೊಳ್ಳುವುದಕ್ಕೆ ಮೊದಲು ಮಾಡಿದರು. ಕಾನ್ಸಾಸ್‌ನಲ್ಲಿಯೂ ಪಶ್ಚಿಮಭಾಗದ ಇತರ ಪ್ರದೇಶಗಳಲ್ಲಿಯೂ ಅವನು ಹಲವು ಉಪನ್ಯಾಸಗಳನ್ನು ಮಾಡಿದನು. ಅವನು ಅದಕ್ಕೆ ಮೊದಲು ಕಾನ್ಸಾಸ್‌ಗೆ ಹೋಗಿರಲಿಲ್ಲ. ಅಲ್ಲಿಯ ಜನರು ಡಗ್ಲಸ್‌ನನ್ನು ವಾದದಲ್ಲಿ ಹಿಂದೆ ಬೀಳಿಸಿದ ಆತನನ್ನು ನೋಡಲು ಬಹಳ ಕುತೂಹಲದಿಂದಿದ್ದರು. ಆ ಬಳಿಕ ಓಹಿಯೋವಿನಲ್ಲಿಯೂ ಸಿನಿಸಿನ್ನಾತಿಯಲ್ಲಿಯೂ ಭಾಷಣಮಾಡಿದನು. ಅಲ್ಲಿಯ ಪ್ರಜೆಗಳು ಸಂಯೋಗವನ್ನು ಬಿಟ್ಟು ಪ್ರತ್ಯೇಕನಾಗುವುದಾಗಿ ಹೆದರಿಸುತ್ತಿದ್ದರು. ಹಾಗೆ ಬೇರೆಯಾದಮೇಲೆ ರಾಜ್ಯವನ್ನೇನುಮಾಡಬೇಕೆಂದಿರುವಿರೆಂದು ಲಿಂಕನ್ನನು ಕೇಳಿದನು.

"ನಮ್ಮಂಥಾ ಧೂರ್ತರ ನೆರೆಯಲ್ಲಿಯೇ ಇಟ್ಟುಕೊಂಡು ಅದನ್ನು ಬಾಳಿಸಿಕೊಂಡು ಹೋಗಬೇಕೆಂದಿರುವಿರಾ ? ಅಥವಾ ನಿಮ್ಮ ಸೀಮೆಯನ್ನೂ ನಮ್ಮ ಸೀಮೆಯನ್ನೂ ವಿಭಾಗಿಸುವ ದೊಡ್ಡದೊಂದು ಗೋಡೆಯನ್ನೆಬ್ಬಿಸಿ. ನಾವು ನಿಮ್ಮಲ್ಲಿಗೆ ಬರದಂತೆಯೂ ನಿಮ್ಮಲ್ಲಿರುವ ಪದಾರ್ಥಗಳನ್ನು ಸಾಗಿಸಿಕೊಂಡು ಹೊರಟು ಹೋಗದಂತೆಯೂ ರಕ್ಷಿಸಿಕೊಳ್ಳುವಿರಾ ?"

ಅವನು 1860 ರಲ್ಲಿ ಕೂಪರ್ ಯೂನಿಯನ್‌ನಲ್ಲಿ ಮಾಡಿದ ಉಪನ್ಯಾಸವು ಇವೆಲ್ಲಕ್ಕಿಂತಲೂ ಪ್ರಸಿದ್ಧವಾದುದ್ದು. ರಾಜ್ಯದಲ್ಲಿ ಪೂರ್ವಭಾಗದ ನಿವಾಸಿಗಳ ನಡುವೆ ನಿಂತು ಹಿಂದೆ ಎಂದೂ ಮಾತನಾಡಿರಲಿಲ್ಲ. ಸಭೆಯು ಜನಗಳಿಂದ ಸ್ಥಳವಿಲ್ಲದಂತೆ ತುಂಬಿದ್ದಿತು. ಲಿಂಕನ್ನನಿಗೂ ವಿಸ್ಮಯವಾಯಿತು. ಅವನ ಮಾತನ್ನು

ಕೇಳಲು ಬಂದಿದ್ದವರಲ್ಲಿ ವಿದ್ಯಾವಂತರೂ ಪಂಡಿತರೂ ಲಾಯರುಗಳೂ ವಾಗ್ಮಿಗಳೂ ಹೆಚ್ಚಾಗಿದ್ದರು. ಭಾಷಣದ ಧ್ವನಿಯು ಪೂರ್ತಿಯಾಗಿ ಬದಲಾಯಿಸಿದ್ದಿತು. ಸಕಲಿಗಳಿಂದಲೂ ಉಪಕಥೆಗಳಿಂದಲೂ ಸಭಿಕರನ್ನು ನಗಿಸಲಿಲ್ಲ. ಮಾತಿನಲ್ಲಿಯೂ ವಿಚಾರವಿವರಣೆಯಲ್ಲಿಯೂ ಅತಿಶಯವಾದ ಗಾಂಭೀರ್ಯವಿದ್ದಿತು. ವಿಷಯವು ಆಡಳಿತವನ್ನು ಕುರಿತಾಗಿದ್ದಿತು. ಅವನು ಪೂರ್ವಿಕರು ಮಾಡಿದ ಶಾಸನಕ್ರಮವನ್ನು ವಿವರಿಸಿ ಅದರ ಅಂತಸ್ಸಾರವಿಂತಹದೆಂಬುದನ್ನು ವರ್ಣಿಸಿದನು. ಆ ವಿಷಯವು ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿದ್ದಿತಾದುದರಿಂದ ಕೇಳುವವರಿಗೆ ವಿಶೇಷ ಆಸಕ್ತಿಯುಂಟಾಗಲಿಲ್ಲ. ಅನೇಕರಿಗೆ ಬೇಸರವಾಯಿತು. ಆದರೆ ಆ ವಿಷಯವು ಬೇಗಲೇ ಮುಗಿದು ಲಿಂಕನ್ನನು ದಾಸ್ಯದ ಮಾತನ್ನೆತ್ತಿದನು. ಎಲ್ಲರೂ ಗಮನವಿಟ್ಟರು. ಅವನ ಬಾಯಿಂದ ಮಾತುಗಳು ತಡೆಯಿಲ್ಲದಂತೆ ಹೊರಟವು. ಸಭಿಕರಿರುವುದೂ ತಾನು ಅವರ ನಡುವೆ ನಿಂತು ಮಾತನಾಡುತ್ತಿರುವುದೂ ಅವನಿಗೆ ಮರೆತುಹೋಯಿತು. ಹಿಂದೆ ಸ್ಪ್ರಿಂಗ್ ಫೀಲ್ಡಿನಲ್ಲೊಂದುಬಾರಿ ಅವನು ಹೀಗೆ ಉಪನ್ಯಾಸಮಾಡಿದ್ದನು. ಲಕ್ಷ್ಯವು ದಾಸ್ಯದ ವಿಚಾರದಲ್ಲಿ ನಿಂತಿತು. ಅವನಿಗೆ ಜನರ ಕಡೆ ಲಕ್ಷ್ಯವಿರಲಿಲ್ಲ. ಶಬ್ದವು ಸ್ವಲ್ಪವೂ ಇರಲಿಲ್ಲ. ಅವನು ಮೊದಲು, '' ಮತ್ತೊಬ್ಬನ ಮೇಲೆ ಅಧಿಕಾರವನ್ನು ತೋರಿಸುವುದು ನ್ಯಾಯವೇ ಅಲ್ಲವೇ ? '' ಎಂಬ ಪ್ರಶ್ನೆಯೊಡನೆ ದಾಸ್ಯದ ವಿಮರ್ಶೆಯನ್ನಾರಂಭಿಸಿದನು. '' ದಾಸ್ಯವು ನ್ಯಾಯಸಮ್ಮತವಾದ ಪಕ್ಷದಲ್ಲಿ ಅದಕ್ಕೆ ವಿರೋಧಭಾವದ ಯಾವ ಮಾತುಗಳನ್ನಾಡುವಿರೋ ಯಾವ ಕಾರ್ಯಗಳನ್ನು ಮಾಡುವಿರೋ ಯಾವ ನಿಬಂಧನೆಗಳನ್ನು ನಿರ್ಮಿಸುವಿರೋ ಯಾವ ಶಾಸನಪದ್ಧತಿಗಳನ್ನು ಏರ್ಪಡಿಸುವಿರೋ ಅವೆಲ್ಲವೂ ತಪ್ಪಾಗುವುವು. ಆಗ ಅವುಗಳಿಗೆ ಅವಕಾಶವನ್ನು ಕೊಡದೆ ಪ್ರತಿಯೊಂದನ್ನೂ ಅಡಗಿಸಬೇಕಾಗುವುದು. ಅದು ನ್ಯಾಯಸಮ್ಮತವಾದಲ್ಲಿ ರಾಜ್ಯದಲ್ಲೆಲ್ಲಾ ವ್ಯಾಪಿಸುವದೂ ಕೂಡ ನ್ಯಾಯಸಮ್ಮತವಾದುದು. ಹಾಗಲ್ಲದೆ, ಅದು ನ್ಯಾಯವಿರುದ್ಧವಾದ ಪಕ್ಷದಲ್ಲಿ ನೀವು ಅದನ್ನು ಹರಡುವುದು ಎಂದಿಗೂ ಧರ್ಮವಾದುದಲ್ಲ. ಕೆಲವರು ಅದು ಯುಕ್ತವಾದುದಲ್ಲವೆನ್ನುತ್ತಾರೆ ಮತ್ತೆ ಕೆಲವರು ಯುಕ್ತವಾದುದೆನ್ನುತ್ತಾರೆ. ಇರುವ ಹುಳುಕೆಲ್ಲಾ ಈ ಭಿನ್ನಾಭಿಪ್ರಾಯದ ದೆಸೆಯಿಂದ. ಇಂತಹ ಸಂದರ್ಭದಲ್ಲಿ ಮಧ್ಯಮಾರ್ಗವು ಸರ್ವೋತ್ತಮವಾದುದೆಂದು ಹೇಳಿಕೊಂಡು ಅದನ್ನು ಅನುಸರಿಸುವುದು ಹೇಡಿಯ ಕೆಲಸ. ಅದರಿಂದ ಯಾವಕಡೆಗೂ ಸೇರಿದಂತಾಗುವುದಿಲ್ಲ—ಸತ್ತಕೂಟವೂ ಅಲ್ಲ, ಇದ್ದಕೂಟವೂ ಅಲ್ಲ. ಯಾವ ವಿಚಾರದಲ್ಲಿ ಒಬ್ಬಿಬ್ಬರು ಮಾತ್ರವೆನ್ನದಂತೆ ಎಲ್ಲರೂ ಚಿಂತೆಯುಳ್ಳವರಾಗಿದ್ದಾರೋ ಅಂಥದರಲ್ಲಿ '' ಆದರೆಷ್ಟೋ ಹೋದರೆಷ್ಟೋ ! '' ಎಂಬ ಅಭಿಪ್ರಾಯವನ್ನು ಹೊಂದಿರುವುದೂ, ಸಂಯೋಗದಲ್ಲಿ ಒಡಕನ್ನುಂಟುಮಾಡಲು ಆತುರರಾಗಿರುವವರನ್ನು ಆಶ್ರಯಿಸುವಂತೆ ಸಂಯೋಗವನ್ನು ರಕ್ಷಿಸಲಾತುರರಾಗಿರುವವರಿಗೆ ಬೋಧಿಸುವುದೂ ಪೌರುಷವಿದ್ದವನು ಮಾಡುವ ಕೆಲಸವಲ್ಲ. ನಾವು ಈ ಬೋಧನೆಗಳನ್ನೂ ಈ ಅಭಿಮತಗಳನ್ನೂ ಸ್ವಲ್ಪವೂ ಮನಸ್ಸಿಗೆ ಹಚ್ಚಿಕೊಳ್ಳಕೂಡದು. ಅಲ್ಲದೆ, ಮತ್ತೊಬ್ಬನು ನಾವು ಮಾಡುವುದನ್ನು ಅಪ

ರಾಧನೆಂದು ಆರೋಪಿಸಿ ಸರ್ಕಾರದಿಂದ ಶಿಕ್ಷೆಮಾಡಿಸುತ್ತಾನೆಂದು ಹೆದರಿ ಕರ್ತವ್ಯವನ್ನು ತ್ಯಾಗಮಾಡುವುದೂ ನಮಗೆ ಯೋಗ್ಯವಾದುದಲ್ಲ. ಶಕ್ತಿಯು ಎಷ್ಟಿದ್ದರೂ ಧರ್ಮದ ಮುಂದೆ ಹಾಯಲಾರದು. ಆದ್ದರಿಂದ ಧರ್ಮದಲ್ಲಿ ಧೈರ್ಯವಿಟ್ಟು ಕೆಲಸಮಾಡಬೇಕು. ನಾವು ಮಾಡುವುದು ನ್ಯಾಯವಾಗಿದೆಯೆಂದು ಅಂತರಾತ್ಮದ ಒಪ್ಪಿಗೆಯಿದ್ದಲ್ಲಿ ಯಾರಿಗೂ ಹೆದರಬೇಕಾದುದಿಲ್ಲ.''

ದಕ್ಷಿಣದವರು ಹೆದರಿಸುತ್ತಿದ್ದುದನ್ನು ಕೇಳಿ ಅವನು ಸಭೆಯಲ್ಲಿ ಹೀಗೆಂದನು : ''ಸಂಯೋಗವನ್ನು ಹಾಳುಮಾಡುತ್ತೇನೆಂದು ನೀವು ಹೇಳುವಿರಿ. ಆಮೇಲೆ ಅದನ್ನು ಹಾಳುಮಾಡಿದ ಅಪರಾದವು ನಮ್ಮ ತಲೆಗೇ ಕಟ್ಟುವುದಲ್ಲವೆ ? ಒಳ್ಳೆಯ ಕೆಲಸವೇ. ಢಕಾಯಿತನೊಬ್ಬನು ನನ್ನ ಬಳಿಗೆ ಬಂದು ತಲೆಯ ಹತ್ತಿರ ಬಾರುಮಾಡಿದ ಪಿಸ್ತೂಲನ್ನು ಹಿಡಿದು 'ಚಲಿಸದೆ ನಿಲ್ಲು : ನಿಂತು ನಿನ್ನ ಹತ್ತಿರವಿರುವುದನ್ನೆಲ್ಲಾ ಈಕಡೆ ಕೊಡು, ಇಲ್ಲದಿದ್ದರೆ ಗುಂಡಿನಿಂದ ಹೊಡೆದುಹಾಕುವೆನು. ಆ ಮೇಲೆ ಖೂನಿಮಾಡಿದ ಅಪರಾಧವು ನಿನ್ನ ಮೇಲೆ ಹೊರುವುದು' ಎನ್ನುವನು ........ಕೊಲ್ಲುತ್ತೇನೆಂದು ಹೆದರಿಸಿ ಹಣವನ್ನು ಕೇಳುವದೂ ಸಂಯೋಗವನ್ನು ಹಾಳುಮಾಡುತ್ತೇನೆಂದು ಹೆದರಿಸಿ ನನ್ನ ಚೀಟಿಯನ್ನು ಕೇಳುವುದೂ ಒಂದೇ—''

ಈ ಉಪನ್ಯಾಸವನ್ನು ಕೇಳಿದಾತನೊಬ್ಬನು ಈ ರೀತಿಯಾಗಿ ಹೇಳಿದನು : ''ಲಿಂಕನ್ನನು ಮಾತನಾಡಲು ಎದ್ದುನಿಂತನು. ನನ್ನ ಮೋರೆಯು ಜೋಲುಬಿದ್ದಿತು. ಅವನು ಬಲು ಎತ್ತರನಾಗಿದ್ದನು. ಉಡುಪು ಉನ್ನತಾಕಾರಕ್ಕೆ ಒಪ್ಪುತ್ತಿರಲಿಲ್ಲ.—ಕುರೂಪಮಾಡುತ್ತಿದ್ದಿತು. ಆತನಿಗಾಗಿ ನಾನು ಮನಸ್ಸಿನಲ್ಲಿಯೇ ಮರುಗಿದೆನು. '' ಆದರೂ ಲಿಂಕನ್ನನು ಮಾತನಾಡಲಾರಂಭಿಸಿದ ಮೇಲೆ ''ಅವನ ರೀತಿಯೇ ಬದಲಾಯಿಸಿತು. ಕಣ್ಣುಗಳು ಕಳೆಗೊಂಡುವು. ಅವನು ಧ್ವನಿಯನ್ನೆತ್ತರಿಸಿದನು. ಮುಖವು ತೇಜಃಪುಂಜವಾಗಿ ಸಭೆಯೆಲ್ಲವನ್ನೂ ಬೆಳಗುವಂತೆ ತೋರಿತು. ಒಂದೂವರೆ ಗಂಟೆಯಷ್ಟು ಹೊತ್ತು ಅವನು ಸಭಿಕರನ್ನು ಆಕರ್ಷಿಸಿ ಸೂತ್ರದ ಬೊಂಬೆಯಂತೆ ಮಾಡಿಕೊಂಡಿದ್ದನು. ಮಾತನಾಡಿದ ಶೈಲಿಯೂ ರೀತಿಯೂ ಅತ್ಯಂತ ಸರಳವಾಗಿದ್ದುವು. ಅವುಗಳಲ್ಲಿ ಬೈಬಲಿನ ಲಾಲಿತ್ಯವು ಲಭ್ಯವಾಗಿದ್ದಿತು.... ಎಲ್ಲರಂತೆ ಗುರುಮುಖದಿಂದ ವಿದ್ಯೆಗಲಿಯದಿದ್ದರೂ ಆ ಮನುಷ್ಯನು ಆತ್ಮನಿಷ್ಠೆಯ ಬಲದಿಂದಲೂ ಸ್ವಂತ ವ್ಯವಸಾಯದ ಬಲದಿಂದಲೂ ತಿಳಿವಳಿಕೆಯನ್ನು ಸಂಪಾದಿಸಿ ದುರ್ವಿದಗ್ಧತೆಯನ್ನರಿಯದಿದ್ದುದೂ ಉದ್ದೇಶವು ಉನ್ನತವಾದರೂ ಭಾವನೆಯಲ್ಲಿ ಸರಳತೆಯನ್ನು ಕಲಿತಿದ್ದುದೂ ವಿಸ್ಮಯವನ್ನುಂಟುಮಾಡದಿರುತ್ತಿರಲಿಲ್ಲ.''

ಅವನ ಭಾಷಣದಿಂದ ಜನಗಳ ಮನಸ್ಸು ಹೇಗೆ ಆಶ್ಚರ್ಯದಿಂದಲೂ ಗೌರವದಿಂದಲೂ ತುಂಬಿತೆಂಬುದಕ್ಕೆ ಒಂದು ಉದಾಹರಣೆಯನ್ನು ಹೇಳಿದರೆ ಸಾಕಾಗಿದೆ. ಕೇಳಲು ಬಂದಿದ್ದ ಯೇಲ್ ಕಾಲೇಜಿನ (Yale college) ಪ್ರೊಫೆಸರೊಬ್ಬನು ಬೆರಗುಬಡೆದು ಅವನು ಮಾತನಾಡುವ ರೀತಿಯನ್ನೂ ವಿಚಾರವನ್ನೂ ಗುರುತುಹಾಕಿಕೊಂಡು ಹೋಗಿ ಮಾರನೆಯದಿನ ಶಾಲೆಯಲ್ಲಿ ತನ್ನ ವಿದ್ಯಾರ್ಥಿಗಳಿಗೆ ಮಾದರಿಯ ಉಪನ್ಯಾಸವೆಂದು ಅದನ್ನು ಕೊಂಡಾಡಿ ವಿವರಿಸಿದನು. ಅವನಿಗೆ

ಅಷ್ಟರಲ್ಲಿ ತೃಪ್ತಿಯಾಗಲಿಲ್ಲ. ಲಿಂಕನ್ನನನ್ನು ಅನುಸರಿಸಿ ಮೆರಿರ್ಡ (Meridan) ಗೆ ಹೋಗಿ ಅಲ್ಲಿಯೂ ಕೂಡ ಕರ್ಣಾನಂದವನ್ನು ಅನುಭವಿಸಿದನು. ಮಾರನೆಯ ದಿನ ಪತ್ರಿಕೆಗಳಲ್ಲಿ ಉಪನ್ಯಾಸವಲ್ಲದೆ ಮತ್ತೊಂದು ವಿಷಯವಿರಲಿಲ್ಲ.

ಸೇರಿದ್ದ ಜನರಿಗೆ ಸಂತೋಷವನ್ನುಂಟುಮಾಡಿ ಅವರಿಂದ ಗೌರವವನ್ನು ಪಡೆಯುವುದಕ್ಕಾಗಿ ಲಿಂಕನ್ನನು ಮಾತನಾಡಿದವನಲ್ಲ. ಅವನು ಹೇಳಿದುದು ಮನವರಿಕೆಯಿಂದ ಮನಸ್ಸಿನಲ್ಲಿ ಪರ್ಯಾಲೋಚಿಸಿದುದನ್ನು ಮನಸ್ಸಿನಲ್ಲಿಯೇ ಇಟ್ಟುಕೊಳ್ಳಗೊಡಿಸದ ಒಂದು ತರಹದ ಆಂತರಿಕನಿರ್ಬಂಧದಿಂದ. ಪ್ರಾಯಶಃ ಎಲ್ಲರ ಅನುಭವವೂ ಅದೇರೀತಿಯಾಗಿರುವುದು. ತಾನು ಹೇಳುತ್ತಿರುವುದೂ ಸಾಧಿಸುತ್ತಿರುವುದೂ ಯುಕ್ತವಾದುದೆಂದು ಜನಗಳಿಗೆ ತಿಳಿಯಪಡಿಸಿ ಅವರನ್ನು ನ್ಯಾಯವಾದ ಮಾರ್ಗಕ್ಕೆ ತರಬೇಕೆಂಬುದು ಅವನ ಆಶಯವಾಗಿದ್ದಿತು. ಉಪನ್ಯಾಸಮಧ್ಯದಲ್ಲಿ ಮಾತನ್ನು ನಿಲ್ಲಿಸಿ ಅವನು ಸುತ್ತಲೂ ನೋಡಿದನು. ಎಲ್ಲರೂ ನೀರವರಾಗಿ ಕೇಳುತ್ತಿದ್ದರು. ತಾನು ಹೇಳುತ್ತಿದುದು ಅಲ್ಲಿದ್ದವರ ಹೃದಯವನ್ನು ಹೊಕ್ಕಿರುವುದೆಂಬುದನ್ನು ನೋಡಿ ಅವನಿಗೆ ಬಹಳ ತೃಪ್ತಿಯುಂಟಾಯಿತು. (A single speech like this at the Cooper Institute might be enough to show a later time that Lincoln was a man of great intellect'' ಎಂದು ಲಾರ್ಡ್ ಚಾರ್ನ್‌ವುಡ್‌ನು ಹೇಳಿದ್ದಾನೆ.

'' ಪ್ರೆಸಿಡೆಂಟ್ ಪದವಿಗೆ ಉಮೇದುವಾರನೆಂದು ನಿನ್ನ ಹೆಸರನ್ನು ಹಾಕಿಕೊ '' ಎಂದು ಸ್ನೇಹಿತರಾದವರು ಸೂಚಿಸಿದರು. ಲಿಂಕನ್ನನು '' ನಿಜವಾಗಿ ಹೇಳುತ್ತೇನೆ : ಆ ಪದವಿಗೇರಲು ನನಗೆ ಶಕ್ತಿಸಾಲದೆಂದು ತೋರುತ್ತದೆ '' ಎಂದು ಉತ್ತರ ಹೇಳಿದನು. ಅವನ ದೃಷ್ಟಿಯು ಅಷ್ಟುದೂರ ಹೋಗಿರಲಿಲ್ಲ. ಸೆನೇಟಿನ ಮೆಂಬರಾಗಬೇಕೆಂದು ಅವನು ಬಹಳ ಬಯಸಿದ್ದನು. ಡಗ್ಲಸ್‌ನ ದೆಸೆಯಿಂದ ಅದು ಕೈಗೂಡಿರಲಿಲ್ಲ. ಆದಕಾರಣ, ಸ್ನೇಹಿತರ ಸೂಚನೆಯನ್ನು ಕೇಳಿದಾಗ ಅವನು, ಪ್ರೆಸಿಡೆಂಟನಾಗಲು ಪ್ರಯತ್ನಿಸಿದರೆ ಕೊನೆಯಲ್ಲಿ ಅದಲ್ಲದಿದ್ದರೆ ಮಂತ್ರಿತ್ವವಾದರೂ ಲಭಿಸುವುದೆಂದು ಯೋಚಿಸಿದನು. ತಾನು ಈ ಪ್ರಯತ್ನದಲ್ಲಿ ಜಯಹೊಂದುವೆನೆಂದು ಅವನು ಊಹಿಸಿರಲಿಲ್ಲ.

ಆದರೆ ಪ್ರೆಸಿಡೆಂಟನ ಸ್ಥಾನವು ಏಕಾಏಕಿ ಸಿಕ್ಕುತ್ತಿರಲಿಲ್ಲ. ಮೊದಲು ಎರಡು ಹಂತಗಳನ್ನು ದಾಟಬೇಕಾಗಿದ್ದಿತು. ಆ ವರುಷದ ಮೇ ತಿಂಗಳಲ್ಲಿ ರಿಪಬ್ಲಿಕ್ ಸಂಗಡದವರು ಚಿಕಾಗೋವಿನಲ್ಲಿ ಸಭೆ ಸೇರುವವರಾಗಿದ್ದರು. ಅಲ್ಲಿ ಸಭಿಕರೆಲ್ಲರಿಂದಲೂ ಚೀಟಿಯನ್ನು ಪಡೆದು ಅನ್ವೇಷಿ (candidate) ಯೆನ್ನಿಸಿಕೊಳ್ಳಬೇಕಾಗಿದ್ದಿತು. ಆ ಸಂಗಡದವರು ಅಧಿಕಸಂಖ್ಯಾತರಾಗಿದ್ದುದರಿಂದ ಅವರ ಒಪ್ಪಿಗೆಯನ್ನು ಪಡೆದಾತನು ಪ್ರೆಸಿಡೆಂಟನಾದಂತೆಯೇ ಎಂದು ಭಾವಿಸಬಹುದಾಗಿದ್ದಿತು. ಸಿಂಹಾಸನವನ್ನೇರುವುದು ಸುಲಭ, ಆದರೆ ರಾಜ್ಯಕಾರ್ಯವನ್ನು ನಿರ್ವಹಿಸುವುದು ಸುಲಭವಲ್ಲ. ಆಗಿನ ಸ್ಥಿತಿಯಲ್ಲಿ, ಯಾವನು ಪ್ರೆಸಿಡೆಂಟನಾದರೂ ಸಂಯೋಗವನ್ನು ರಕ್ಷಿಸುವ ಕೆಲಸವು ಅವನೆದುರಿಗೆ ಬೆಟ್ಟವಾಗಿ ನಿಲ್ಲುತ್ತಿ

ದ್ದಿತು. ಅದು ಮೊದಲನೆಯ ಕೆಲಸವಾಗುತ್ತಿದ್ದಿತು. ವಿಭಾಗವುಂಟಾಗುವುದು ಖಂಡಿತವೆಂದು ಅನೇಕರು ಭಯಪಡುತ್ತಿದ್ದರು. ಹೀಗೆ ಭಯಪಡಲು, ಡೆಮೊಕ್ರೆಟರು ಚಾರ್ಲ್ಸ್ಟನ್ನಿನಲ್ಲಿ ಸೇರಿ ರಾಜ್ಯವು ಉತ್ತರ ದಕ್ಷಿಣಗಳೆಂದು ಎರಡು ಗುಂಪಾಗಿ ಹೋಗಬೇಕೆಂಬದಾಗಿ ನಡೆವಳಿಕೆಯನ್ನು ಮಾಡಿದ್ದುದೇ ಕಾರಣ. ಆ ಕಾಲದಲ್ಲಿ ದಕ್ಷಿಣದವರೂ ಉತ್ತರದವರೂ ಪ್ರತಿನಿಧಿಗಳು ಸಮ್ಮೇಳನಕ್ಕೆ ಬಂದಿದ್ದರೂ ಕೂಡ ಅಂತರಂಗದಲ್ಲಿ ಮೊದಲಿನ ವೈಷಮ್ಯವು ಇದ್ದೇ ಇದ್ದಿತು. ಆದರೆ ಮುಂದೆ ಸ್ಥಿತಿಯು ತೀರ ಹೊಲಸಾಯಿತು. ದಾಸ್ಯದ ವಿಚಾರದಲ್ಲಿ ಅವರವರೊಳಗೇ ಭೇದವುಂಟಾಯಿತು. ಐಕಮತ್ಯವುಂಟಾಗುವುದೆಂದಿದ್ದ ಅಲ್ಪಸ್ವಲ್ಪ ಭರವಸೆಯೂ ಆ ಭೇದದ ದೆಸೆಯಿಂದ ತಪ್ಪಿಹೋಯಿತು. ಡಗ್ಲಸ್‌ನು ದಾಸ್ಯವು ಪ್ರಚಾರದಲ್ಲಿರುವುದಕ್ಕೂ ಇಲ್ಲದಿರುವುದಕ್ಕೂ ಸಂಸ್ಥಾನಗಳ ಮೇಲೆ ಭಾರಹಾಕಿಬಿಟ್ಟನು. ದಕ್ಷಿಣದವರು ಆ ಅಭಿಪ್ರಾಯಕ್ಕೆ ಒಡಂಬಡಲಿಲ್ಲ. ಅವರು ಆ ಪರಿಷತ್ತಿನಲ್ಲಿ, ಸಂಸ್ಥಾನದಲ್ಲಿ ದಾಸ್ಯವು ಪ್ರಚಾರದಲ್ಲಿರುವುದು ಸರ್ಕಾರದ ಮೇಲೆ ನಿರ್ಭರವಾಗಿಲ್ಲವೆಂದೂ ಅದು ಸಾರ್ವಜನಿಕನಾಗಲು ಅರ್ಹವಾದುದೆಂದೂ ಕಾಂಗ್ರೆಸ್ ಸಭೆಯು ಪ್ರತಿಯೊಂದು ಸಂಸ್ಥಾನದಲ್ಲಿಯೂ ಅದನ್ನು ಸಂಸ್ಥಾಪಿಸಿ ರಕ್ಷಿಸಲು ಏರ್ಪಾಡು ಮಾಡಬೇಕೆಂದೂ ಅಪೇಕ್ಷಿಸಿದರು. ಉತ್ತರದ ಪ್ರತಿನಿಧಿಗಳು ಅದನ್ನು ಸರ್ವಥಾ ನಿರಾಕರಿಸಿದರು. ಒಂದು ಪಂಗಡದ ಮಾತು ಮತ್ತೊಂದಕ್ಕೆ ಸರಿಬೀಳಲಿಲ್ಲ. ದಕ್ಷಿಣದ ಪ್ರತಿನಿಧಿಗಳಲ್ಲಿ ಜಾರ್ಜಿಯದವರು ಹೊರತು ಉಳಿದ ಹತ್ತಿಯ ವ್ಯವಸಾಯವನ್ನುಳ್ಳ ಸಂಸ್ಥಾನಗಳ ಪ್ರತಿನಿಧಿಗಳು ಸಭೆಯಿಂದ ಎದ್ದು ಹೊರಟು ಹೋದರು. ಅಲ್ಲಿಯೇ ಉಳಿದವರು ಬಹು ಸ್ವಲ್ಪ ಮಂದಿಯಾಗಲಾಗಿ ಮತ್ತೊಂದಾವೃತ್ತಿ ಸಂಮೇಳನವನ್ನು ನಡೆಯಿಸಲು ಗೊತ್ತುಮಾಡಬೇಕಾಯಿತು. ಆದರೂ ಆಗಲೂ ಹೀಗೆಯೇ ಭಿನ್ನಾಭಿಪ್ರಾಯಗಳೂ ಛಲವೂ ಹುಟ್ಟಿ ಯಾವ ಕೆಲಸವೂ ಸಾಗಲಿಲ್ಲ. ಮುಖ್ಯನಾಗಿ, ಅವರಲ್ಲಿ ಒಡಕು ಹುಟ್ಟಲಾಗಿ ಲಿಂಕನ್ನನ ಮಾರ್ಗವು ನಿರಾಯಾಸವಾಯಿತು. ಹಾಗಲ್ಲದೆ ಡೆಮೊಕ್ರೆಟರು ಒಂದುಗೂಡಿ ನಿಂತಿದ್ದರೆ ರಿಪಬ್ಲಿಕ್ಕ ಪಂಗಡಕ್ಕೆ ತಲೆಯೆತ್ತಿ ನಿಲ್ಲಲು ಸ್ವಲ್ಪವೂ ಅವಕಾಶವಿರುತ್ತಿರಲಿಲ್ಲ.

ಈ ಭೇದಬುದ್ಧಿಯ ದೆಸೆಯಿಂದ ಡೆಮೊಕ್ರೆಟರಿಗೆ ಮುಂದೆ ಇಪ್ಪತ್ತು ನಾಲ್ಕು ವರ್ಷಗಳವರೆಗೆ ಅಧಿಕಾರವು ಕೈತಪ್ಪಿಹೋಯಿತು. ಈ ಪ್ರಮೇಯದಲ್ಲಿ ಮತ್ತೊಂದು ಪಂಗಡವು ಮುಖ್ಯವಾದ ಪಾತ್ರವನ್ನು ವಹಿಸಿತು. ಪೂರ್ವದ ವ್ಹಿಗ್ ಸಂಪ್ರದಾಯವನ್ನು ಅನುಸರಿಸುತ್ತ ಬಂದಿದ್ದವರು ಬಾಲ್ಟಿಮೋರಿನಲ್ಲಿ ಸಭೆ ಸೇರಿ ಇತರರಂತೆ ತಮ್ಮ ಕಡೆಯಿಂದಲೂ ಪ್ರೆಸಿಡೆಂಟನ ಅಧಿಕಾರಕ್ಕೆ ಉಮೇದುವಾರನೊಬ್ಬನನ್ನು ಆರಿಸಿಕೊಂಡರು. ಆ ಗುಂಪಿನವರು ಸಂಯೋಗವನ್ನು ರಕ್ಷಿಸಲು ಸಂಕಲ್ಪಮಾಡಿದ್ದರು. ಆದರೆ ಒಂದು ದೌರ್ಬಲ್ಯವಿದ್ದಿತು. ಪ್ರಕೃತ ವಿಚಾರವನ್ನು ಬಿಟ್ಟು ನಾಳೆ ಬರುವ ವಿಷಯಕ್ಕೆ ಗಮನವನ್ನು ಕೊಟ್ಟು ಅವರು ಅಣಿಮಾಡಿಕೊಳ್ಳುವಂತಹ ವಿವೇಕಶಾಲಿಗಳು. ನಾಳೆಯು ಮುಖ್ಯವಾಗಿ ಈ ದಿನವನ್ನು ಮರೆಯುತ್ತಿದ್ದರು. ಸಂಯೋಗವನ್ನು ಕಾಪಾಡಿಕೊಳ್ಳುವ ಆತುರದಲ್ಲಿ

ಅವರು ದಾಸ್ಯದ ವಿಷಯವನ್ನು ಉಪೇಕ್ಷಿಸಿಬಿಟ್ಟರು. ದಾಸ್ಯದಲ್ಲಿ ಕುಹಕಕ್ಕಾಗಿಯೋ ಅಥವಾ ನಿಜವಾಗಿಯೋ ಔದಾಸೀನ್ಯವನ್ನು ತೋರಿಸುತ್ತಿದ್ದ ಜನಗಳನ್ನು ಲೆಕ್ಕದಿಂದ ಬಿಟ್ಟುಬಿಟ್ಟರೆ ಅಮೆರಿಕದಲ್ಲಿ 1860 ನೆಯ ವರ್ಷದಲ್ಲಿ ಇಡೀ ಜನಾಂಗವು ಮೂರು ಪಂಗಡವಾಗಿದ್ದಿತೆಂದು ಹೇಳಬಹುದು. ಹೀಗೆ ತಂಡತಂಡವಾಗಲು ದಾಸ್ಯವೇ ಕಾರಣವಾಗಿದ್ದಿತು. ಅಮೆರಿಕದ ಪರಿಣಾಮವು ಯಾವ ಪಂಗಡದ ಉಮೇದುವಾರನು ಪ್ರೆಸಿಡೆಂಟನಾಗುವನೆಂಬುದರಲ್ಲಿ ಅವಲಂಬನವನ್ನು ಪಡೆದಿದ್ದಿತು. ಆದರೆ ಆಗಿನ ಸ್ಥಿತಿಯಲ್ಲಿ ವ್ಹಿಗ್ಗರ ಪಕ್ಷವಾಗಲೀ ಡೆಮೊಕ್ರೆಟರ ಪಕ್ಷವಾಗಲೀ ಮುಂದೆ ಹಿಡಿದು ಬರುವಹಾಗಿಲ್ಲ. ವ್ಹಿಗ್ಗರಲ್ಲಿ ಸಂಖ್ಯೆಯು ಕಡಿಮೆ. ಡೆಮೊಕ್ರೆಟರಲ್ಲಿ ಭಿನ್ನ ಭಾವಗಳು ಹೆಚ್ಚು. ಆದಕಾರಣ ರಿಪಬ್ಲಿಕನರ ಪಂಗಡದವರಿಗೇ ಅಧಿಕಾರವನ್ನು ವಶಪಡಿಸಿಕೊಳ್ಳಲು ಅವಕಾಶವು ಹೆಚ್ಚಾಗಿದ್ದಿತು. ಅಮೆರಿಕದ ಭವಿತವ್ಯತೆಯು, ರಿಪಬ್ಲಿಕ್ ಸಂಪ್ರದಾಯದ ಪ್ರೆಸಿಡೆಂಟನು ಆ ಪಕ್ಷದ ತತ್ವಗಳನ್ನು ದೃಢವಾದ ಸಂಕಲ್ಪದಿಂದ ಸ್ಥಾಪಿಸುವುದರಿಂದಲೋ, ಚಂಚಲವಾದ ಮನಸ್ಸಿನಿಂದ ಹಿಂದೆಗೆಯುವುದರಿಂದಲೊ ಅಥವಾ ವಿವೇಕಯುಕ್ತವಾದ ಮಾರ್ಗವನ್ನು ಅವಲಂಬಿಸುವುದರಿಂದಲೋ ರೂಪಗೊಳ್ಳುತ್ತಿದ್ದಿತು. ಆ ರಾಜ್ಯವು ದಾರಿಯು ಕವಲೊಡೆಯುವಂತಹ ಸ್ಥಿತಿಯನ್ನು ತಲಪಿದ್ದಿತೆಂದು ಚಾರ್ನ್‌ವುಡ್‌ನು ವರ್ಣಿಸುತ್ತಾನೆ.

"ನೀನೂ ಒಬ್ಬ ಉಮೇದುವಾರನೆಂದು ಹೆಸರುಹಾಕಿಕೊ" ಎಂದು ಸ್ನೇಹಿತರು ಹೇಳಿದಾಗ ಲಿಂಕನ್ನನು ತನಗೆ ಅಷ್ಟು ಶಕ್ತಿಯಿಲ್ಲವೆಂದು ಉತ್ತರ ಹೇಳಿದ್ದನಷ್ಟೆ. ಅವನ ಬಾಯಿಂದ ಹೊರಟ ಈ ಅಭಿಪ್ರಾಯವು ಮನಸ್ಸಿನಲ್ಲಿ ಹುಟ್ಟಿದುದು, ಉಪಚಾರಕ್ಕೆ ಹೇಳಿದುದಲ್ಲ. ಆ ಸಮಯದಲ್ಲಿ ಅವನ ಮನಸ್ಸು ವ್ಯಥೆಯಿಂದ ಪರ್ಯಾಪ್ತವಾಗಿದ್ದಿತು. ಆದರೂ ಕೂಡಲೆ ಬದಲಾಯಿಸಿತು. ಲಿಂಕನ್ನನು ಸಲಹೆಕೊಟ್ಟ ತನ್ನ ಸ್ನೇಹಿತರನ್ನು ಆ ರೀತಿ ಪ್ರೇರಿಸಿದನೋ ಇಲ್ಲವೋ ತಿಳಿಯದು. ಅವರು ಮಾತ್ರ ಕೃತನಿಶ್ಚಯರಾಗಿರುವುದನ್ನು ಅರಿತವನಾಗಿ ತನ್ನಿಂದಾಗುವ ಪ್ರತಿಯೊಂದು ಸಹಾಯವನ್ನೂ ಅವರಿಗೆ ಮಾಡಿದನು. ಹರ್ನ್‌ಡರ್ ಎಂಬ ಚರಿತ್ರಕಾರನು, ಲಿಂಕನ್ನನು ಮಹದಾಕಾಂಕ್ಷೆಯುಳ್ಳವನೆಂದು ಮತ್ತೆ ಮತ್ತೆ ಹೇಳಿದ್ದಾನೆ. ಅದನ್ನು ನಾವೂ ನಿಜವೆಂದು ಅಂಗೀಕರಿಸಬೇಕು. ಆದರೆ ಪರೋಪಕಾರಕ್ಕಾಗಿ ಹೆಚ್ಚಿನ ಅವಕಾಶವನ್ನೂ ಅನುಕೂಲವನ್ನೂ ಅಪೇಕ್ಷಿಸುವುದು ಮಹದಾಕಾಂಕ್ಷೆಯೆನ್ನಿಸಿಕೊಳ್ಳುವುದಾದರೆ, ಮಹತ್ತಾದ ಆಕಾಂಕ್ಷೆಯನ್ನು ಖಂಡಿಸಿ ಮಟ್ಟುಮಾಡಬೇಕೆಂದು ಹೇಳುವವರ ಮಾತನ್ನು ಬಾಯಿಂದ ಹೊರಡುವ ಮೊದಲೇ ಅಡಗಿಸಬೇಕು. ಮನುಷ್ಯನು ತನ್ನಲ್ಲಿರುವ ಶಕ್ತಿಯನ್ನು ತಾನು ತಿಳಿದು ಅದಕ್ಕೆ ಅನುಗುಣವಾಗಿ ಅಪೇಕ್ಷೆಪಡುವುದು ಆಕಾಂಕ್ಷೆಯೆನ್ನಿಸಿಕೊಳ್ಳುವುದು. ಇದುವರೆಗೂ ಲಿಂಕನ್ನನು ಮಂತ್ರಿಯಾಗಬೇಕೆಂದು ಅಪೇಕ್ಷಿಸಿದನು. ಅದು ಅವನ ಆಕಾಂಕ್ಷೆಯ ಚರಮಸೀಮೆಯಾಗಿದ್ದಿತು. ಆ ಅಧಿಕಾರದಿಂದ ಅವನು ಹೆಚ್ಚು ಅವಕಾಶವನ್ನು ಹೊಂದಿ ದೇಶಸೇವೆಯನ್ನು ಮಾಡಬಹುದೆಂದು ನಂಬಿದನು. ಅಂತಹ ಆಕಾಂಕ್ಷೆಯು ಪೂರ್ತಿಗೊಳ್ಳಲು ಅವಕಾಶವನ್ನು ಕೊಡುವುದು ಸರ್ವೋಚಿತನ

ದುದು. ಲಿಂಕನ್ನನಲ್ಲಿದ್ದ ಸಾಮರ್ಥ್ಯವನ್ನು ಬಲ್ಲ ರಿಪಬ್ಲಿಕ್ ಸಂಗಡದ ಜನಗಳು ತಮ್ಮೊಳಗೆ ಅವನಿಗೆ ಸಮಾನನಾದವನು ಇಲ್ಲವೆಂದು ತಿಳಿದಿದ್ದುದರಿಂದಲೇ ಪ್ರೆಸಿಡೆಂಟನ ಸ್ಥಾನಕ್ಕೆ ಅವನನ್ನು ನೇಮಿಸಲು ನಿರ್ಧರಿಸಿದರು. ಆದರೆ ಒಂದು ವಿಷಯ. ಗುಣಪ್ರಶಂಸೆಯಲ್ಲಿ ದೋಷದೌರ್ಬಲ್ಯಗಳು ಮರೆತುಹೋದುವು. ಆದರೆ ನಾವು ಒಂದು ತಕ್ಕಡಿಯಲ್ಲಿನ ತೂಕವು ಹೆಚ್ಚಾಗಿದೆಯೆಂದು ಹೇಳುತ್ತ ಮತ್ತೊಂದರಲ್ಲಿರುವ ಪದಾರ್ಥವನ್ನು ಮರೆಯಲಾದೀತೆ ? ಲಿಂಕನ್ನನು ಹೆಚ್ಚು ವ್ಯವಹಾರವನ್ನು ತಿಳಿದವನಲ್ಲ. ತಾನಿರುವ ಊರಿನ ಅಥವಾ ತಾನಿರುವ ಸಂಸ್ಥಾನದ ಆಡಳಿತವನ್ನು ನಿರ್ವಹಿಸುವುದರಲ್ಲಿ ಚತುರನಿರಬಹುದು. ಆದರೆ ಇಡೀ ರಾಜ್ಯವನ್ನು ನಿರ್ವಹಿಸುವುದರಲ್ಲಿ ಅನುಭವವು ಸಾಲದು. ಮುಖ್ಯಸ್ಥರಾಗಿದ್ದ ಇನ್ನು ಕೆಲವು ಮಂದಿಗಳು ಉಮೇದುವಾರರಾಗಿ ನಿಂತರು. ಆದರೆ ಲಿಂಕನ್ನನಷ್ಟು ತಿಳಿವಳಿಕೆಯು ಯಾರಿಗೂ ಇರಲಿಲ್ಲ. ಸಿವರ್ಡ್ (Seward) ಎಂಬಾತನು ಪ್ರೆಸಿಡೆಂಟನ ಪದವಿಯು ತನಗೆ ನ್ಯಾಯವಾಗಿ ಸಲ್ಲತಕ್ಕದ್ದೆಂದು ಭಾವಿಸಿದನು. ಅವನಂತೆ ಚೇಸ್ (Chase) ಎಂಬಾತನೂ ಒಬ್ಬ ಉಮೇದುವಾರನಾಗಿ ನಿಂತನು. ಚೇಸ್‌ನಿಗೆ ಪ್ರಾಮಾಣಿಕನೆಂದೂ ಧೈರ್ಯಶಾಲಿಯೆಂದೂ ಹೆಸರು ಬಂದಿದ್ದಿತು. ಸಿವರ್ಡನು ಕೆಲಸದಲ್ಲಿ ಬಹಳ ಬುದ್ಧಿವಂತನೆನ್ನಿಸಿಕೊಂಡಿದ್ದನು. ಅವರಲ್ಲಿ ಒಬ್ಬನು ಒಹಿಯೋ ಸಂಸ್ಥಾನದಲ್ಲಿಯೂ ಮತ್ತೊಬ್ಬನು ನ್ಯೂಯಾರ್ಕ್ ಸಂಸ್ಥಾನದಲ್ಲಿಯೂ ಗೌರ್ನರಾಗಿದ್ದನು. ಒಂದು ಸಂಸ್ಥಾನದ ಗೌರ್ನರಾಗುವುದೆಂದರೆ ಸಾಮಾನ್ಯವಾದುದಲ್ಲ. ಸಂಸ್ಥಾನವು ಪ್ರಾಯಶಃ ಆಂತರಿಕವಾದ ಎಲ್ಲಾ ವ್ಯವಹಾರದಲ್ಲಿಯೂ ಸ್ವತಂತ್ರವಾದುದು. ಆದುದರಿಂದ ಕಾರ್ಯಕ್ಷೇತ್ರವು ಚಿಕ್ಕದಾದರೂ ಸಂಸ್ಥಾನದ ಗೌರ್ನರನ ಅಧಿಕಾರವು ಸಂಯುಕ್ತಸಂಸ್ಥಾನಗಳ ಪ್ರೆಸಿಡೆಂಟನ ಅಧಿಕಾರಕ್ಕೆ ಸರಿಗೈಯಾದುದು. ಅದರೊಳಗೂ ದೊಡ್ಡ ದೊಡ್ಡ ಸಂಸ್ಥಾನಗಳ ಗೌರ್ನರಾಗಿದ್ದವರು ಪ್ರೆಸಿಡೆಂಟನ ಪದವಿಗೆ ತರಬೇಕಾದವರೆಂತಲೇ ಹೇಳಬಹುದು. ಸ್ಪರ್ಧೆಯು ಆವರಿಬ್ಬರಿಗೂ ಬೀಳಲಿಲ್ಲ. ಲಿಂಕನ್ನನಿಗೂ ಸಿವರ್ಡನಿಗೂ ಬಿದ್ದಿತು. ಉಳಿದ ಉಮೇದುವಾರರು ಹಿಂದುಳಿದುಹೋದರು. ಸಿವರ್ಡನು ಕೆಲವು ಕಾಲ ಮೊದಲಾಗಿ ತನ್ನ ಗುಂಪಿನವರಿಗೆ ಮುಖಂಡನಾಗಿದ್ದನು. ಲಿಂಕನ್ನನಿಗೂ ಡಗ್ಲಸ್‌ನಿಗೂ ವಿವಾದ ಹತ್ತಿದ್ದಂತೆ ಅವನಿಗೂ ಡಗ್ಲಸ್‌ನಿಗೂ ಪೂರ್ವದಲ್ಲಿ ವಾದವು ನಡೆದಿದ್ದಿತು. ಕೊನೆಯಲ್ಲಿ ಸಿವರ್ಡನು ಸೋತನು. ಆದರೂ ದೊರೆತ ಕೀರ್ತಿಯು ಮಾತ್ರ ಕ್ಷಯಿಸಲಿಲ್ಲ. ಅಂದಿನಿಂದ ಅವನು ಖ್ಯಾತಿಪರ್ವತವನ್ನೇರುತ್ತ ಬಂದಿದ್ದನು. ಮುಂದೆ ಆತನು ಲಿಂಕನ್ನನ ಕೈಕೆಳಗೆ ಮಂತ್ರಿಯಾಗಿದ್ದುಕೊಂಡು ಅತ್ಯಂತ ಶ್ರದ್ಧಾಳುವೂ ವಿಧೇಯನೂ ಆದ ನೌಕರನೆನ್ನಿಸಿಕೊಂಡನು. ಲಿಂಕನ್ನನು ಸಿವರ್ಡನಿಗಿಂತ ಎಷ್ಟೋ ಮುಂದಿದ್ದನು. ಆದರೆ ಉಳಿದವರು ಸಿವರ್ಡನಿಗೆ ಜೊತೆಯಲ್ಲ— ಬಹಳ ಹಿಂದಿದ್ದರು. ಸಿವರ್ಡನ ಅನುಭವವು ಗಾಢವಾದುದಿರಬಹುದು ; ಅದು ಡಗ್ಲಸ್‌ನೊಡನೆ ಚರ್ಚೆ ನಡೆದ ಕಾಲದಲ್ಲಿ ಪ್ರಕಾಶಕ್ಕೆ ಬಂದಿರಬಹುದು. ಆದರೆ ಲಿಂಕನ್ನನಿಗಿದ್ದಷ್ಟು ಕಾರ್ಯನಿರ್ವಾಹಶಕ್ತಿಯು ಅವನಿಗಿರಲಿಲ್ಲ. ಲಿಂಕನ್ನನು

ಒಂದು ವಿಷಯದ ಮುಖ್ಯತತ್ವವನ್ನು ಗ್ರಹಿಸುವುದರಲ್ಲಿ ಬಹು ಸಮರ್ಥನು. ಆದ್ದರಿಂದಲೇ ಡೆಮೊಕ್ರೆಟರ ಮತ್ತೂ "ಉದಾಸೀನರ" ಮತಗಳನ್ನು ಖಂಡಿಸಿ ದೋಷಗಳನ್ನು ತೋರಿಸಿದ್ದನು. ಈಗ—ಅನೇಕ ವರ್ಷಗಳ ಅಭ್ಯಾಸವೂ ಅನುಭವವೂ ದೊರೆತಮೇಲೆ—ಸಿವರ್ಡನ ಸ್ಥಾನವನ್ನು ಆಕ್ರಮಿಸಿ ರಿಪಬ್ಲಿಕ್ಕ ಪಕ್ಷಕ್ಕೆ ಅಗ್ರಗಾಮಿಯಾದನು. ಅವನ ಅವಧಾರಣಾಶಕ್ತಿಯು ಈಗ ತಾರ್ಕಣೆಗೆ ಬಂದಿತು.

ರಿಪಬ್ಲಿಕ್ಕ ಪಕ್ಷದವರು ಚಿಕಾಗೋವಿನಲ್ಲಿ ಸಭೆಸೇರಿದರು. ಉತ್ಸವಗಳಿಗೂ ವಾದ್ಯಘೋಷಗಳಿಗೂ ಇತರ ಪಕ್ಷಾವಲಂಬಿಗಳ ಹಂಚಿಕೆಗಳಿಗೂ ಎಣಿಕೆಯಿರಲಿಲ್ಲ. ಆ ಪಕ್ಷದವರಾಗಿ ಸಿವರ್ಡ್, ಚೇಸ್, ಕೇಮರ್ರಾ ಮತ್ತೂ ಬೇಟ್ಸ್ ಎಂಬ ಮುಖ್ಯಸ್ಥರು ಲಿಂಕನ್ನನಂತೆಯೇ ಉಮೇದುವಾರರಾಗಿದ್ದರು. ಇವರೆಲ್ಲರೊಳಗೆ ಯಾರು ಸರ್ವೋತ್ತಮರೆಂಬುದನ್ನು ಗೊತ್ತುಮಾಡಬೇಕಾಗಿದ್ದಿತು. ಸಿವರ್ಡನು ನೇಮಕವಾಗುವನೆಂದು ರಾಜ್ಯದ ಪ್ರಜೆಗಳು ನಿರೀಕ್ಷಿಸಿದರು. ಆದರೆ ಇತರ ಅನ್ವೇಷಿಗಳು ಅವನಿಗೆ ಕಡಿಮೆಯಾಗಿರಲಿಲ್ಲ. ಅನೇಕ ತಡವೆ ಚೀಟಿಯನ್ನು ಹಾಕಿದುದಾಯಿತು. ಶ್ರಮಪರಿಹಾರಕ್ಕಾಗಿ ಹಣವನ್ನು ಕೊಟ್ಟುದೂ ತೆಗೆದುಕೊಂಡುದೂ ಆಯಿತು. ಸಭಿಕರೊಳಗೆ ಪರಸ್ಪರವಾಗಿ ಕರಾರುಗಳೂ ಷರತ್ತುಗಳೂ ಏರ್ಪಾಡಾದುವು. ಆದರೆ ಇದು ಯಾವುದರಿಂದಲೂ ಫಲಿತಾಂಶವು ವ್ಯತ್ಯಾಸ ಹೆಚ್ಚಾಗಿ ಹೊಂದಲಿಲ್ಲ. ಲಿಂಕನ್ನನು ತನ್ನ ಕಡೆಯವರಿಗೆ ಹಣವನ್ನು ಹಂಚುವುದಕ್ಕೂ ಒಪ್ಪಿಕೊಳ್ಳಲಿಲ್ಲ;[1]

[1] ಲಿಂಕನ್ನನು ತನ್ನ ಚುನಾವಣೆಯಲ್ಲಿ ಸಹಾಯಮಾಡಬೇಕೆಂದು ಯಾವನೋ ಒಬ್ಬಾತನಿಗೆ ನೂರು ಡಾಲರುಗಳನ್ನು ಕೊಡಲು ಒಪ್ಪಿಕೊಂಡನು. ಅದು ಲಂಚವನ್ನು ಕೊಟ್ಟಹಾಗಾಯಿತೆಂದು ಲಾರ್ಡ್ ಚಾರ್ನ್‌ವುಡ್‌ನು ಆಕ್ಷೇಪಿಸುತ್ತಾನೆ. ನನಗೆ ಅದು ಅಲ್ಪವಿಷಯವೆನ್ನಿಸುತ್ತದೆ. ನ್ಯೂನತೆಯಾಗಲೀ ಅತಿರೇಕವಾಗಲೀ ಇಲ್ಲದ ಮನುಷ್ಯನಿಲ್ಲ. ಪ್ರಪಂಚದಲ್ಲಿ ಧರ್ಮರಾಯನಂಥವರನ್ನು ಕಾಣುವುದು ಕಷ್ಟವೇ. ಲಿಂಕನ್ನನು "ಲಂಚ" ಕೊಡಲು ಒಂದು ಕಾರಣವಿದ್ದಿತು. ಮೊದಲಿಂದಲೂ ದಾರಿದ್ರ್ಯವನ್ನು ಹೊರತು ಸಿರಿಯೆಂಬುದನ್ನು ಕಾಣದ ಅವನು, ತಾನು ಹೀಗೆ ಹಿಂದುಳಿದು ಇತರರು ಮುಂದು ಮುಂದಕ್ಕೆ ಬರುವುದಕ್ಕೆ ಧನವೇ ಮುಖ್ಯ ಹೇತುವೆಂದು ತಿಳಿದಿದ್ದನು. ಇದಲ್ಲದೆ ಯಾವ ಕೆಲಸಕ್ಕಾದರೂ ಮೊದಲು ಹಣವನ್ನು ಜಣಜಣವೆನ್ನಿಸುವುದು ಪದ್ಧತಿಯಾಗಿದ್ದಿತು. ಈ ಪದ್ಧತಿಯು ಅದಕ್ಕೆ ಹಿಂದೆ ಇಲ್ಲದಿರಲಿಲ್ಲ, ಈಗ ಇಲ್ಲದಿಲ್ಲ. ಇಂಗ್ಲೆಂಡಿನಲ್ಲಿ ಇಲ್ಲವೆಂತಲೂ ಅಮೆರಿಕದಲ್ಲಿ ಇದೆಯೆಂತಲೂ ಹೇಳುವಹಾಗಿಲ್ಲ. ಲಂಚಕೊಡುವ ಪದ್ಧತಿಯು ಇಲ್ಲದ ದೇಶವೂ ಇಲ್ಲದ ಕಾಲವೂ ಕಂಡುಬಂದಿಲ್ಲವೆಂದು ಹೇಳಿದರೆ ಯಥಾರ್ಥವನ್ನು ಹೇಳಿದಹಾಗಾದೀತು. ಅಮೆರಿಕದಲ್ಲಿ ಆ ಕಾಲದಲ್ಲಿ ಈ ಲಂಚಗಳ ಚಲಾವಣೆಯಿಂದ ದೇಶಕ್ಕೆ ಯಾವ ಹಾನಿಯೂ ಉಂಟಾಗಿರಲಿಲ್ಲ. ಈ ಮಾತನ್ನು ಹೇಳಿದರೆ, ಅದರಿಂದ ಲಂಚವು ನ್ಯಾಯವಾದುದೆಂದೂ ಎಲ್ಲರೂ ಅದನ್ನು ಅಭಿವೃದ್ಧಿಗೆ ತರಬೇಕೆಂದೂ ಹೇಳಿದಹಾಗೆ ಅರ್ಥಮಾಡಿದರೆ ಅನ್ಯಾಯವನ್ನೆಣಿಸಿದಂತಾದೀತು.

ಇತರ ಷರತ್ತುಗಳಿಗೂ ಒಳಗಾಗಲಿಲ್ಲ. ಆದರೂ ಜನರು ಅವನನ್ನು ತ್ಯಜಿಸಿ ಹೋಗಲಿಲ್ಲ. ಅವನ ಕಡೆಯುವರು ಬಹಳಕಾಲದಿಂದ ವ್ಯವಹರಿಸಿದರು. ಲಿಂಕನ್ನನ ಒಡನಾಡಿಯಾದ ಡೆನ್ನಿಸ್ ಹ್ಯಾಂಕ್ಸನು ಅವನು ಹಿಂದೆ ಸೌದೆ ಕಡಿಯುತ್ತಿದ್ದ ವಿಷಯವನ್ನೆತ್ತಿಕೊಂಡು ಸ್ವಲ್ಪ ಆಡಂಬರಮಾಡಿದನು. ಎರಡನೆಯ ತಡವೆ ಚೀಟಿ ಹಾಕಿದ ಮೇಲೆ ಕೇಮರ್ರಾನು ನಿರಾಶನಾಗಿ ಸ್ಪರ್ಧೆಯನ್ನು ಬಿಟ್ಟನು. ಅವನ ಕಡೆಯವರೆಲ್ಲರೂ ಲಿಂಕನ್ನನಿಗೆ ಚೀಟಿಯನ್ನು ಕೊಡುವಂತೆ ಲಿಂಕನ್ನನ ಕಡೆಯವರು ಪ್ರೇರೇಪಿಸಿದರು. ಆ ರೀತಿಯಾಗಿ ಪೆಸಿಲ್ವೇನಿಯದಿಂದ ಪ್ರತಿನಿಧಿಗಳೂ ಜೊತೆಗೆ ಒಹಿಯೋ ಸಂಸ್ಥಾನದವರೂ ಲಿಂಕನ್ನನನ್ನು ಚುನಾಯಿಸಿದರು. ಕೊನೆಯಲ್ಲಿ ಅವನೇ ಜಯಶೀಲನಾದನು.

ನಡೆದ ಚುನಾವಣೆಯಲ್ಲಿ ಫಲವನ್ನು ಸ್ಪಷ್ಟವಾಗಿ ತಿಳಿಯುವುದಕ್ಕೋಸ್ಕರಲೂ ಉಮೇದುವಾರನಾಗಲು ಅರ್ಹತೆಯನ್ನು ಪಡೆಯುವುದಕ್ಕಾಗಿ 233 ಚೀಟಿಗಳು ಯಾರಾದರೊಬ್ಬರಿಗೆ ಬರಬೇಕೆಂಬ ಉದ್ದೇಶದಿಂದಲೂ ಅನೇಕಸಾರಿ ಚೀಟಿಯನ್ನು ಹಾಕಬೇಕಾಯಿತು. ಕೊನೆಯಲ್ಲಿ 235 ಚೀಟಿಗಳನ್ನು ಪಡೆದು ಲಿಂಕನ್ನನೊಬ್ಬನೇ ಉಳಿದನು. ಅವನು ಈ ಚುನಾವಣೆಯಲ್ಲಿ ವಿಜಯಿಯಾಗಿ ಉಮೇದುವಾರನೆನ್ನಿಸಿಕೊಂಡನು. ಆದರೆ ಇನ್ನೂ ಪ್ರೆಸಿಡೆಂಟನಾದಹಾಗಾಗಲಿಲ್ಲ. ರಾಜ್ಯದ ಇತರ ಪಕ್ಷಗಳಿಂದ ನೇಮಿಸಲ್ಪಟ್ಟ ಉಮೇದುವಾರರೊಡನೆ ಚುನಾವಣೆಗೆ ನಿಂತು ಪ್ರಜೆಗಳಿಂದ ಚೀಟಿಗಳನ್ನು ಪಡೆಯಬೇಕಾಗಿದ್ದಿತು.

ಡೆಮೊಕ್ರೆಟರಲ್ಲಿ ಒಂದು ಭಾಗವು ಡಗ್ಲಸ್‌ನನ್ನೂ ಮತ್ತೊಂದು ಬ್ರೆಕಿನ್ ಬ್ರಿಡ್ಜ್ ಎಂಬಾತನನ್ನೂ ಕಾನ್ಸ್ಟಿಟ್ಯೂಷನಲ್ ಯೂನಿಯನ್ ಪಾರ್ಟಿಯೆಂಬ ಸಂಗಡವು ಜಾನ್ ಬೆಲ್ ಎಂಬಾತನನ್ನೂ ಚುನಾಯಿಸಿದುವು. ಈ ನಾಲ್ಕು ಮಂದಿಯಲ್ಲಿ ಒಬ್ಬರನ್ನು ರಾಜ್ಯದ ಪ್ರಜೆಗಳು ಪ್ರೆಸಿಡೆಂಟನನ್ನಾಗಿ ಚುನಾಯಿಸಬೇಕಾಗಿದ್ದಿತು.

ಚುನಾವಣೆಯು ನಡೆಯುತ್ತಿದ್ದಾಗ ಲಿಂಕನ್ನನು ತಂತಿಯ ಮನೆಯಲ್ಲಿ ಕುಳಿತು ಅತ್ಯಂತ ಕಳವಳದಿಂದ ಫಲಿತಾಂಶವನ್ನು ನಿರೀಕ್ಷಿಸಿದನು. ಕ್ಷಣಕ್ಷಣಕ್ಕೂ ಸಮಾಚಾರವು ಬರುತ್ತಿದ್ದಿತು. ಕೊನೆಕೊನೆಗೆ ಅವನಿಗೆ ತಾನಲ್ಲದಿದ್ದಲ್ಲಿ ಮತ್ತೆ

---

ನೀತಿಶಾಸ್ತ್ರದ ಪ್ರಕಾರ ಅದರಂತಹ ಅಪರಾಧವು ಮತ್ತೊಂದಿಲ್ಲ. ಅಥವಾ ನೀತಿಶಾಸ್ತ್ರವನ್ನು ನೋಡದೆಯೇ ಅದು ಅಪರಾಧವೆಂದು ಹೇಳಬಹುದು. ಒಂದೊಂದು ವೇಳೆ ನೀತಿಯ ಅಂಶವನ್ನು ಉಪೇಕ್ಷಿಸಿ ಸ್ವಾರ್ಥವನ್ನು ಸಾಧಿಸುವ ಉಪಾಯವನ್ನು ಮಾಡುವುದು ಅತಿಸಾಮಾನ್ಯವಾದುದು. ಲಿಂಕನ್ನನು ಅದನ್ನು ಮಾಡಿದನು. ಒಂದೇ ಒಂದು ಸಾರಿ ಹಣವನ್ನುಪಯೋಗಿಸಿದಲ್ಲಿ ಬಾಧಕವೇನೂ ಇರದೆಂದು ಅವನು ಯೋಚಿಸಿದನು. ತನ್ನ ಅಭಿವೃದ್ಧಿಯ ಚಿಂತೆಯು ಬಲವಾಯಿತು. ಪ್ರಸಂಗವು ಅಲ್ಪವಾದರೂ ಅದರೊಳಗೆ ಈ ಕೆಲಸವನ್ನು ಮಾಡಬಹುದೇ ಎಂಬ ಸೂಕ್ಷ್ಮ ಜ್ಞಾನವು ಅವನಿಗೆ ಬರಲಿಲ್ಲ.

ಯಾರೂ ಆಗರೆಂಬುದು ದೃಢವಾಯಿತು. ಮನಸ್ಸು ಒಂದು ನೆಲೆಗೆ ಬಂದಿತು. ಕೊನೆಯಲ್ಲಿ ಅವನನ್ನೇ ಚುನಾಯಿಸಿದ ಸುದ್ದಿ ಬಂದಿತು.

ವಿಷಯವು ಮೊದಲೇ ತಿಳಿದಿದ್ದರೂ ಸಭೆಯವರು ಕೆಲವು ಗಂಟೆಗಳಾದ ಮೇಲೆ ತಮ್ಮ ಕಡೆಯಿಂದ ಜನಗಳನ್ನು ಕಳುಹಿಸಿ ವರ್ತಮಾನವನ್ನು ತಿಳಿಸಿದರು. ಅವನಿಗೆ ಜಯವಾದುದಕ್ಕಾಗಿ ಸ್ಪ್ರಿಂಗ್ ಫೀಲ್ಡಿನಲ್ಲಿ ನೂರು ತೋಪುಗಳಾದುವು. ಊರಿನವರಿಗೆ ವಿಚಾರವು ತಿಳಿದು ಎಲ್ಲರೂ ಅವನನ್ನು ಕಂಡು ತಮ್ಮ ಸಂತೋಷವನ್ನು ತೋರ್ಪಡಿಸುವುದಕ್ಕೋಸ್ಕರ ತಂಡತಂಡವಾಗಿ ಅವನ ಮನೆಗೆ ನುಗ್ಗಿದರು. ಎಲ್ಲ ರೊಡನೆಯೂ ಮಾತನಾಡಿ ಎಲ್ಲರಿಗೂ ವಂದನೆಗಳನ್ನು ಸಮರ್ಪಿಸಿ ಕಳುಹಿಸಿದನು.

ಅವನಲ್ಲಿ ಪಕ್ಷಪಾತವನ್ನು ತೋರಿಸಿದವರೆಲ್ಲರೂ ಉತ್ತರದ ಸಂಸ್ಥಾನಗಳ ಪ್ರಜೆಗಳು. ಅವೆಲ್ಲವೂ ಸ್ವತಂತ್ರಸಂಸ್ಥಾನಗಳು. ಲಿಂಕನ್ನನಿಗೆ ಇತರ ಸಂಸ್ಥಾನಗಳ ಬೆಂಬಲವು ಸ್ವಲ್ಪವೂ ಇರಲಿಲ್ಲ. ಕೊನೆಗೆ ಉತ್ತರವೇ ಜಯವನ್ನು ಪಡೆಯಿತು. ಇನ್ನು ದಕ್ಷಿಣದಿಂದ ದಾಸ್ಯವು ಉತ್ತರಕ್ಕೆ ಹರಡುವುದೆಂಬ ಭಯವು ತಪ್ಪಿತು. ಪ್ರತಿಯಾಗಿ ಉತ್ತರದ ಸ್ವಾತಂತ್ರ್ಯವು ದಕ್ಷಿಣದೊಳಕ್ಕೂ ನುಗ್ಗುವುದೆಂದು ಸ್ವತಂತ್ರಸಂಸ್ಥಾನಗಳೆಲ್ಲವೂ ನಂಬಿದುವು. ದಕ್ಷಿಣದವರ ಅಸಮಾಧಾನವನ್ನು ಹೇಳಿತೀರದು. ಲಿಂಕನ್ನನು ಚುನಾಯಿಸಲ್ಪಟ್ಟುದರಿಂದ ಅವರಿಗೆ ವಿಷವನ್ನುಣಿಸಿದಂತಾಯಿತು. ಆ ಚುನಾವಣೆಯನ್ನು ಅವರೆಲ್ಲರೂ ಶಪಿಸಿದರು.

———

# ೧ ನೆಯ ಅಧ್ಯಾಯ

## ವಿವಾದಾಂಶವಿಚಾರ.

ರಿಪಬ್ಲಿಕ್ಕ ಪಂಗಡದವರು ಚೀಟಿ ಕೊಟ್ಟರು. ಲಿಂಕನ್ನನು ಪ್ರೆಸಿಡೆಂಟನಾದನು. ಆದರೆ ಮುಂದಿನ ಪರಿಣಾಮವನ್ನು ಯೋಚಿಸಿದ್ದವರು ಮಾತ್ರ ಒಬ್ಬಿಬ್ಬರು. ಚುನಾವಣೆಯು ಮುಗಿದು ಕೆಲವು ದಿವಸಗಳು ಕಳೆಯುವುದರೊಳಗಾಗಿ ದಕ್ಷಿಣದವರು ವಿಂಗಡವಾಗಲು ಸನ್ನಾಹಮಾಡಿಕೊಂಡರು. ಮುಂದೆ ನಾಲ್ಕು ತಿಂಗಳ ಮೇಲೆ ಲಿಂಕನ್ನನು ಅಧಿಕಾರವನ್ನು ವಹಿಸುವ ಕಾಲಕ್ಕೆ ಸ್ಥಿತಿಯು ಅತ್ಯಂತ ಹೊಲಸಾಯಿತು. ಅಮೆರಿಕದ ಪ್ರಜೆಗಳಲ್ಲಿ ಎರಡು ವಿಧವಾದ ಅಭಿಪ್ರಾಯಗಳಾದುವು—ಅಸಂತೋಷಹೊಂದಿದ ಸಂಸ್ಥಾನಗಳು ಸಂಯೋಗವನ್ನು ತ್ಯಜಿಸಿ ಬೇರೆಯಾಗಬೇಕು; ಅಥವಾ ಉತ್ತರವು ಯುದ್ಧಮಾಡಿ ಅದನ್ನು ಸಂರಕ್ಷಿಸಬೇಕು.

ಒದಗಿದ ಆ ಯುದ್ಧಕ್ಕೆ ಕಾರಣವನ್ನು ನಿರ್ಧರಿಸುವುದು ಕಷ್ಟವೆಂದು ಕೆಲವರು ಹೇಳುತ್ತಾರೆ. ಉತ್ತರಭಾಗದ ಜನಗಳಲ್ಲಿ ಪಕ್ಷಪಾತವುಳ್ಳವರು ಯುದ್ಧವು ನಡೆದುದು ದಾಸ್ಯವನ್ನು ತಪ್ಪಿಸುವುದಕ್ಕೋಸ್ಕರವಲ್ಲದೆ ಅನ್ಯಥಾ ಅಲ್ಲವೆಂದು ಭಾವಿಸಿದರು. ದಾಸ್ಯದಲ್ಲಿ ನಿಶ್ಚಯವಾದ ದ್ವೇಷವುಳ್ಳವರಾದರೂ ಕೂಡ ಅಂಥವರು ಅಮೆರಿಕದ ಸರ್ಕಾರವು ದಾಸ್ಯದಮೇಲೆ ಯುದ್ಧಮಾಡಿದುದು ನ್ಯಾಯವೇ ಎಂದು ಪ್ರಶ್ನೆಹಾಕುತ್ತ ಸಂಶಯಪಡುವರು. ಯುದ್ಧವು ನಡೆದುದು ಐಕಮತ್ಯವನ್ನುಳಿಸಿಕೊಳ್ಳುವುದಕ್ಕೋಸ್ಕರವೆಂದು ಭಾವನೆಯುಳ್ಳ ಮತ್ತೆ ಕೆಲವರು, ಶಾಂತವಾದ ಮಾರ್ಗದಿಂದ ಐಕಮತ್ಯವನ್ನು ನೆಲೆಗೊಳಿಸಲಾಗದಿದ್ದಮೇಲೆ ಯುದ್ಧವು ನೆಲೆಗೊಳಿಸಬಲ್ಲದೇ ಎಂದು ಕೇಳುತ್ತಾರೆ. ಈ ಎರಡು ಬಗೆಯ ಜನರ ಸಂಶಯವನ್ನೂ ಒಂದು ಮಾತಿನಿಂದ ಮುಗಿಸಿ ಯುದ್ಧಕ್ಕೆ ಸಮಂಜಸವಾದ ಕಾರಣವನ್ನು ಹೇಳುವುದು ಸಾಧ್ಯವಲ್ಲ. ಇಂತಹ ಸಮಯದಲ್ಲಿ ಎರಡುಕಡೆಯಿಂದಲೂ ಪ್ರಮಾಣಗಳು ಸಮ್ಮುಖವಾಗುವುವು. ಅವುಗಳನ್ನು ಪರಿಶೀಲಿಸಿ ಭೇದವು ಅಪೇಕ್ಷಿತವಾಗಲು ಕಾರಣಗಳೇನಿರುವುವೆಂಬುದನ್ನು ನಿಶ್ಚಯಿಸಬೇಕು. ಆದುದರಿಂದ, ಮೊದಲು, ದಕ್ಷಿಣ ಭಾಗವು ಅಪೇಕ್ಷಿಸಿದುದೇನು ? ಎಂದು ನಾವು ಕೇಳಿದರೆ ಪ್ರತ್ಯುತ್ತರವು ಈರೀತಿಯಾಗಿರುವುದು, ದಕ್ಷಿಣದವರ ಮನಸ್ಸಿನಲ್ಲಿ ಅತ್ಯಂತ ಗಾಢವಾದ ಅವರ ದೃಷ್ಟಿಯಲ್ಲಿ ಅತ್ಯಂತ ಪ್ರಧಾನವಾದ, ಆಕಾಂಕ್ಷೆಯೊಂದಿದ್ದಿತು. ದಾಸ್ಯವನ್ನು ನಿತ್ಯವನ್ನಾಗಿ ಮಾಡಿ, ಅವಶ್ಯಕವಾದರೆ, ವಿಸ್ತರಿಸುವಂತೆಯೂ ಮಾಡಬೇಕೆಂಬುದು. ಆದರೆ ಈ ಆಕಾಂಕ್ಷೆಯು ದಕ್ಷಿಣದವರೆಲ್ಲರ ಮನಸ್ಸಿನಲ್ಲಿಯೂ ಇರಲಿಲ್ಲ—ಎಲ್ಲರೂ ಏಕಕಂಠದಿಂದ ಅದನ್ನು ಉದ್ಘೋಷಿಸಲಿಲ್ಲ, ಸ್ವಲ್ಪ ಜನರು ದಾಸ್ಯವನ್ನು ವಿಷ

ಕ್ಕಿಂತ ಕಡೆಯಾಗಿ ಎಣಿಸುತ್ತಿದ್ದರು. ಅಂಥವರು ವಿಂಗಡವಾಗಲು ಆತುರರಾಗಿದ್ದುದು ಆಕಾರಣದಿಂದಲ್ಲ. ಹಾಗಿದ್ದಪಕ್ಷದಲ್ಲಿ ಅವರು ಉತ್ತರದ ಪಕ್ಷವನ್ನು ಸೇರಿಕೊಳ್ಳಲು ತಡಮಾಡುತ್ತಿರಲಿಲ್ಲ. ಉತ್ತರದವರು ಸಂಯೋಗಕ್ಕೆ ಭಂಗವು ಎಂದಿಗೂ ಬರಕೂಡದೆಂತಲೂ ಸಂಸ್ಥಾನಗಳವರು ಒಬ್ಬರಿಗೊಬ್ಬರು ನೆರವಾಗಿ ನಿಲ್ಲಬೇಕೆಂತಲೂ, ಅಮೆರಿಕದ ಸಂಸ್ಥಾನಗಳು ಒಂದಾಗಿರಬೇಕೆಂಬ ಉದ್ದೇಶದಿಂದ ಏರ್ಪಾಡಾದ ಶಾಸನನಿಯಮವು ಅನುಲ್ಲಂಘ್ಯನಾದುದೆಂತಲೂ ತಾತ್ಪರ್ಯವುಳ್ಳವರಾಗಿದ್ದರು. ದಕ್ಷಿಣದವರು ಅದಕ್ಕೆ ಒಪ್ಪುತ್ತಿರಲಿಲ್ಲ. ದಾಸ್ಯದಲ್ಲಿ ಕಾರಣವನ್ನು ಕಾಣದಿದ್ದವರು ಪ್ರಜೆಗಳು ತಮ್ಮ ಸಂಸ್ಥಾನಕ್ಕೆ ಮೊದಲು ಶಾಸನಬದ್ಧರಾಗಿರಬೇಕೆಂತಲೂ ತರುವಾಯ ಸಂಯೋಗದ ಸರ್ಕಾರಕ್ಕೆ ವಿಧೇಯರಾಗಿರಬೇಕೆಂತಲೂ ಹೇಳಿದರು. ಅದರಿಂದ, ಸಂಯೋಗದ ವ್ಯವಹಾರವಾವುದಾದರೂ ಸಂಸ್ಥಾನವೊಂದರ ಒಪ್ಪಿಗೆಗೆ ಬರದಿದ್ದರೆ, ಅದಕ್ಕೆ ತನ್ನ ಇಷ್ಟ ಬಂದಂತೆ ಪ್ರವರ್ತಿಸಲು ಸ್ವಾತಂತ್ರ್ಯವುಂಟೆಂಬುದೂ, ಸಂಯೋಗಕ್ಕೆ ವಿಧೇಯವಾಗಿರಬೇಕಾದ ಅವಶ್ಯಕತೆ ಇಲ್ಲವೆಂತಲೂ, ಆದಕಾರಣ ಪ್ರಜೆಯ ವಿಧೇಯತೆಯು ತನ್ನ ಸಂಸ್ಥಾನಕ್ಕೇ ವಿನಾ ಸಂಯೋಗಕ್ಕಲ್ಲವೆಂತಲೂ ಅರ್ಥನಾಗುವುದು. ಉತ್ತರದವರ ಅಭಿಲಾಷೆಯು ಈ ರೀತಿಯಾಗಿದ್ದಿತು—ಅನೇಕರು "ದಕ್ಷಿಣದವರು ದಾಸ್ಯವನ್ನು ವಿಸ್ತರಿಸಲು ಪ್ರಯತ್ನಿಸುತ್ತಿರುವಾಗ ಸಹಿಸಿಕೊಂಡು ಹೊಂದಿಕೆಯಿಂದಿರಲು ನಮಗೆ ಅಗತ್ಯವಿಲ್ಲ" ವೆನ್ನುತ್ತಿದ್ದರು. ಉಳಿದವರು "ಮುಖ್ಯವಾದ ಅಂಶವು ಅದಲ್ಲ; ದಾಸ್ಯಕ್ಕೋಸ್ಕರವೆಂಬ ನೆಪವಿರಲಿ, ಅಥವಾ ಮತ್ತಾವ ನೆಪವಿರಲಿ, ನಾವೆಂದಿಗೂ ದಕ್ಷಿಣದವರು ಸಂಯೋಗಕ್ಕೆ ಭಂಗವನ್ನುಂಟುಮಾಡಿ ಬೇರೆ ಹೋಗಲು ಸಮ್ಮತಿಸೆವು" ಎಂದರು.

ಸಂಯೋಗದ ವಿಚಾರವು ಮುಂದಕ್ಕೆ ಬಂದಿತು. ದಾಸ್ಯದ ಸಂಬಂಧದಲ್ಲಿ ಹುಟ್ಟಿದ ವೈಷಮ್ಯವೂ ಅದರಲ್ಲಿ ಹುಟ್ಟಿದ ವೈಷಮ್ಯವೂ ಬೆರೆದು ಉತ್ತರ ದಕ್ಷಿಣ ಭಾಗಗಳ ಪ್ರಜೆಗಳಿಗೆ ಕಲಹ ಹತ್ತಿತು.

ಸಂಯೋಗವೆಂದರೆ ಉತ್ತರದವರು ಹೇಗೆ ಅರ್ಥಮಾಡಿದರು, ದಕ್ಷಿಣದವರು ಹೇಗೆ ಮಾಡಿದರು ? ಎರಡು ಅರ್ಥಗಳೂ ಒಂದೇರೀತಿಯಾಗಿರಲಿಲ್ಲ. ಅರ್ಥದಲ್ಲಿ ಈ ವ್ಯತ್ಯಾಸವು ಜನರಿಗೆ ಅರಿವಿಲ್ಲದೆಯೇ ಉಂಟಾಗಿದ್ದಿತು. ಅರಿವಾದಾಗ ಅದನ್ನು ತಪ್ಪಿಸುವುದಕ್ಕಾಗುತ್ತಿರಲಿಲ್ಲ. ಉತ್ತರದವನು ನನಗೆ ವಿರುದ್ಧವಾದ ಅಭಿಪ್ರಾಯವೇ ದಕ್ಷಿಣದವನ ಮನಸ್ಸಿನಲ್ಲಿದೆಯೆಂದೂ, ದಕ್ಷಿಣದವನು ಉತ್ತರದವನು ವಿರೋಧಿಯೆಂದೂ ಆರ್ಭಟಿಸಿದರು. ಸಂಯೋಗವು ಉತ್ತರದವರಿಗೆ ಜೀವಕ್ಕಿಂತ ಶ್ರೇಷ್ಠವಾದುದು. ಅದು ಜನಾಂಗದ ಐಕಮತ್ಯವಲ್ಲದೆ ಬೇರೆಯಲ್ಲ; ಅದು ನಿತ್ಯವಾದುದು. "ಒಂದು ಸಂಸ್ಥಾನವು ವಿಯೋಗದ ಸುದ್ದಿಯನ್ನೆತ್ತಿದರೂ ಅಥವಾ ಪ್ರಯತ್ನಿಸಿದರೂ ಆ ಪ್ರಸ್ತಾಪ ಪ್ರಯತ್ನಗಳಿಂದ ಅದು ದ್ರೋಹಮಾಡಿದಂತೆಯೇ ಸರಿ." ದಕ್ಷಿಣದವರಿಗೂ ಸಂಯೋಗವು ಪವಿತ್ರವಾಗಿದ್ದಿತು. ಅದು ಒಂದು ಸಂಸ್ಥಾನವು ನೆರೆಹೊರೆಯ ಸಂಸ್ಥಾನಗಳೊಡನೆ ಮಾಡಿಕೊಂಡ ಕರಾರಲ್ಲದೆ ಬೇರೆಯಲ್ಲ. ಆ ಕರಾರನ್ನು ಅತಿಕ್ರಮಿಸುವುದು ನಷ್ಟಕರ

ವಾದುದು. ಆದರೆ, ಅತಿಕ್ರಮಿಸಿ ಪ್ರತ್ಯೇಕನಾಗುವುದು ಕರ್ತವ್ಯವಾಗಿ ಬಂದಲ್ಲಿ ಆ ಸಂಸ್ಥಾನಕ್ಕೆ ಯಾವಕಾಲಕ್ಕೂ ಅಧಿಕಾರವುಂಟು. ಆ ಅಧಿಕಾರವನ್ನು ಯಾರೂ ಆಕ್ಷೇಪಿಸುವಹಾಗಿಲ್ಲ.

ಇವೆರಡು ಭಾಗಗಳಿಗೂ ನಡುವೆ ಗಡಿಯ ಪಕ್ಕದಲ್ಲಿದ್ದ ಕೆಲವು ಸಂಸ್ಥಾನಗಳು ಒಂದೊಂದುವೇಳೆ ಒಂದೊಂದು ಕಡೆಗೆ ಒತ್ತಿಕೊಳ್ಳುತ್ತಿದ್ದುವು. ಅವುಗಳ ನಿರ್ಣಯವೇನೆಂಬುದನ್ನು ಕಂಡುಹಿಡಿಯಲಾಗುತ್ತಿರಲಿಲ್ಲ. ಲೆಕ್ಕಮಾಡುವಾಗ ಅವುಗಳನ್ನು ಬಿಟ್ಟುಬಿಟ್ಟರೂ ಕೂಡ, ಯುದ್ಧದ ಮೂಲಕ ಸಂಯೋಗವನ್ನು ಕಾಪಾಡಿಕೊಳ್ಳುವುದು ವಿಹಿತವೆ, ಕರ್ತವ್ಯವು ಅಂಥಾ ಸ್ಥಿತಿಗೆ ಬಂದಿದೆಯೆ ? ಎಂದು ಕೇಳುವವರು ಉತ್ತರದಲ್ಲಿ ಕೆಲವರಿದ್ದರು. ಶಾಸನದ ನಿಯಮದ ಪ್ರಕಾರ ಅದು ವಿಹಿತವೆಂಬುದು ಮಾತ್ರ ಎಲ್ಲರಿಗೂ ದೃಢನಾಗಿದ್ದಿತು. ದಕ್ಷಿಣದವರಲ್ಲಿ ಕೆಲವರು ಪ್ರತ್ಯೇಕವಾಗುವಂತಹ ಅವಶ್ಯಕತೆಯು ಬಂದಿಲ್ಲವೆಂದು ಹೇಳುತ್ತಿದ್ದರು. ಆದರೂ, ಯಾವಾಗ ಉತ್ತರದವನೊಬ್ಬನು ಪ್ರೆಸಿಡೆಂಟನಾದನೋ ಆಗಮಾತ್ರ ಅವರು, ತಮ್ಮ ಮನಸ್ಸನ್ನು ಬದಲಾಯಿಸಿ ಪ್ರತ್ಯೇಕನಾಗಿ ಹೋಗುವುದು ಎಲ್ಲಾ ವಿಧದಲ್ಲಿಯೂ ನ್ಯಾಯಸಮ್ಮತವಾದುದೆಂದು ತರ್ಕಿಸಿದರು.

ಹೀಗೆ ವಾದ ಹತ್ತಿತು. ವಾದಿಸುವವರು ತಮ್ಮ ಪ್ರವರ್ತನೆಯಲ್ಲಿಯೂ ತಾವು ಹೇಳುವ ಮಾತಿನಲ್ಲಿಯೂ ನ್ಯಾಯವಿರುವುದೆಂಬುದನ್ನು ತೋರಿಸಲು ಸರ್ವಪ್ರಯತ್ನವನ್ನೂ ಮಾಡುವರು. ಅದರೆ ಈ ವಾದದೊಳಗಿದ್ದುದು ನ್ಯಾಯವಲ್ಲ—ಸ್ವದೇಶಪ್ರೀತಿ. ಹಿಂದೆ ಪ್ರೆಸಿಡೆಂಟನಾಗಲು ಪ್ರಯತ್ನಿಸಿ ವಿಫಲನಾಗಿ ಪ್ರಕೃತದಲ್ಲಿ ಸೆನೇಟಿನ ಮೆಂಬರಾಗಿದ್ದ ಜನರಲ್ ಕಾಸ್‌ನು ತನ್ನ ಸಮಾನಸ್ಕಂಧರೊಡನೆ ಹೀಗೆಂದನು : ''ಇದರ ತಿರುಳೆಲ್ಲಾ ಇಷ್ಟು ; ನೀನು ವರ್ಜಿನಿಯದವನು ; (ಮತ್ತೊಬ್ಬನಿಗೆ) ನೀನು ದಕ್ಷಿಣ ಕೆರೊಲಿನದವನು. ಆದರೆ ನಾನು ಮಿಚಿಗನ್ನಿನವನು ಮಾತ್ರ ಅಲ್ಲ—ಅಮೆರಿಕದವನು.''

ಅಮೆರಿಕದಲ್ಲಿ ಸಂಯೋಗವು ಹೇಗೆ ಹುಟ್ಟಿತೆಂಬುದೂ ಪ್ರಜೆಗಳು ತಮ್ಮದೊಂದು ಜನಾಂಗವನ್ನೇರ್ಪಡಿಸಿಕೊಂಡು ಜೀವಿಸಲುಪಕ್ರಮಿಸಿದುದೂ ತಿಳಿದ ವಿಷಯ. ಆ ಸಮಯದಲ್ಲಿ ಉತ್ತರದಕ್ಷಿಣಭಾಗಗಳೆರಡರಲ್ಲಿಯೂ ಸಂಯೋಗಕ್ಕೆ ಆಟಂಕವನ್ನು ತರುವಂತಹ ಕಾರಣಗಳಿದ್ದುವು. ಒಂದಾದಮೇಲೆ ಒಂದರಂತೆ ಅವು ತೇಲಿಬಂದುವು. ಸಣ್ಣದೊಂದು ನೆಪಸಿಕ್ಕಿದರೂ ಸಾಕು, ಅಲ್ಪವಾದೊಂದು ವಿಷಯದಲ್ಲಿ ವಿವಾದವುಂಟಾದರೂ ಸಾಕು, ನಮಗೆ ಐಕಮತ್ಯವೇ ಬೇಡವೆಂದು ಎರಡುಕಡೆಯವರೂ ಹೇಳಿಬಿಡುತ್ತಿದ್ದರು. ಆದರೆ ಕೂಡಲೇ ದೇಶಾಭಿಮಾನವು ಇಬ್ಬರ ಮನಸ್ಸಿನಲ್ಲಿಯೂ ಹುಟ್ಟಿತು. ಯಾವದೊಂದು ಪ್ರಸಂಗವೂ ಮುಂದೆ ಅದಕ್ಕೆ ಕುಂದಕವನ್ನು ತರಲಿಲ್ಲ. ಮುಂದೆ ಕೆಲವು ರಾಷ್ಟ್ರಗಳು ಸಂಸ್ಥಾನಗಳಾದುವು. ಒಟ್ಟಾಗಿರುವುದರಿಂದ ವ್ಯಾಪಾರಕ್ಕೆ ಹೆಚ್ಚಿನ ಅನುಕೂಲ್ಯಗಳು ಒದಗುವುವೆಂದು ಉತ್ತರದ ಪ್ರಜೆಗಳು ತಿಳಿದರು. ''ನಿನ್ನಲ್ಲಿ ಇಷ್ಟು ದೇಶಪ್ರೀತಿಯುಂಟಾಗಲು ಕಾರಣವೇನು ? '' ಎಂದು ಯಾರಾದರೊಬ್ಬರು ಬಾಸ್ಟನ್ನಿನ ನಿವಾಸಿಯನ್ನು

ಕೇಳಿದ್ದರೆ "ಸಂಯೋಗಕಾಲದಲ್ಲಿ ನನ್ನ ದೇಶವು ಎಷ್ಟೊಂದು ಸಹಾಯ ಮಾಡಿತು!" ಎಂದು ಅವನು ಆನಂದಪಡುತ್ತಿದ್ದನು. ಇತರ ಕೆಲವು ಸಂಸ್ಥಾನಗಳು ತಾವು ವಿಭಾಗವಾಗುವುದಾಗಿ ಹೆದರಿಸಿ ಗರ್ಜಿಸಿದುವು. ಕೆಲವು ಕಾಲದವರೆಗೆ ಅಡಗಿದ್ದ ಆ ತರ್ಜನವು ಮತ್ತೆ ಹೊಸದಾಗಿ ಆರಂಭಿಸಿದ್ದಿತು. ಉತ್ತರದವರು ಒಂದು ಜನಾಂಗವೆಂಬ ಅಭಿಮಾನದಿಂದ ಕಲಹವನ್ನು ಸಮಾಧಾನಕ್ಕೆ ತರಲು ಪ್ರಯಾಸಪಡುತ್ತಿದ್ದರು. ಆದುದರಿಂದ ದಕ್ಷಿಣದವರು ಮಾತ್ರ ಬೇರೆಯಾಗಬೇಕೆಂದು ಹಟಹಿಡಿಯುವುದು ಮರ್ಯಾದೆಯನ್ನತಿಕ್ರಮಿಸಿ ನಡೆದಂತಾಗುವುದಲ್ಲದೆ ಜನಾಂಗವನ್ನು ಏರ್ಪಡಿಸಿದ ಪೂರ್ವಿಕರಿಗೆ ಅಪಮಾನಮಾಡಿದಂತೆಯೂ ಆಗುತ್ತಿದ್ದಿತು. ಹೀಗೆ ಮಾಡಲು ಅಧಿಕಾರವುಂಟೆಂದು ಎಷ್ಟೆಷ್ಟು ಹೇಳಿದರೂ ಅದು ಸತ್ಯವಲ್ಲ.

ಉತ್ತರದಲ್ಲಿ ಈ ವಿಧವಾದ ಅಭಿಪ್ರಾಯವುಂಟಾಗಲು ದಾಸ್ಯದಲ್ಲಿ ಬದ್ಧದ್ವೇಷವಿದ್ದುದೇ ಕಾರಣವಲ್ಲ. ಹಾಗೆ ದ್ವೇಷವುಳ್ಳವರಿಗೆ ರಾಜ್ಯದ ಶಾಸನನಿಯಮದಲ್ಲಾಗಲೀ ಸಂಯೋಗದಲ್ಲಾಗಲೀ ಕವಡೆಯ ಬೆಲೆಯೂ ಇರಲಿಲ್ಲ. ಅವರು, ಅಂತಃ ಕಲಹವನ್ನು ಕಲ್ಪಿಸಿಕೊಂಡು ಒಬ್ಬರಿಗೊಬ್ಬರು ಹೊಡೆದಾಡುವುದಕ್ಕಿಂತಲೂ ನೈತಿಕವಿಷಯವಾದ ಈ ದಾಸ್ಯದಲ್ಲಿ ವಿರುದ್ಧಾಭಿಪ್ರಾಯಗಳನ್ನುಳ್ಳ ಸಂಸ್ಥಾನಗಳು ಸಮಾಧಾನವಾದ ಮನಸ್ಸಿನಿಂದ ಬೇರೆಬೇರೆಯಾಗುವುದು ಉಚಿತವೆಂದು ಸೂಚಿಸಿದರು. ಆದರೆ ದಾಸ್ಯದಲ್ಲಿ ಉದಾಸೀನರಾದವರು ತಮ್ಮ ಸರ್ವಸ್ವವನ್ನೂ ಕೊಟ್ಟು ಸಂಯೋಗವನ್ನುಳಿಸಲು ಬದ್ಧರಾಗಿದ್ದರು. ಅಂಥವರು ದಕ್ಷಿಣದಲ್ಲಿ ಪ್ರತ್ಯೇಕವಾಗಲು ಪ್ರಸ್ತಾಪವೆದ್ದುದನ್ನು ಕೇಳಿ ಕಿಡಿಕಿಡಿಯಾದರು. ಆದರೆ ಒಂದು ಅಂಶವುಂಟು. ಉತ್ತರದಲ್ಲಿದ್ದ ಡೆಮೊಕ್ರೆಟರು ಸಂಯೋಗದ ಬಾಧ್ಯತೆಗಳಿಗಿಂತಲೂ ತಮ್ಮ ಸಂಸ್ಥಾನದ ಹಕ್ಕುಗಳೇ ಹೆಚ್ಚೆಂದು ಭಾವಿಸಿದರು. ಈ ಭಾವನೆಯು ಸ್ವಪ್ರತಿಷ್ಠೆಯಲ್ಲದೆ ಬೇರೆಯಲ್ಲ. ಆದರೆ, ಇದರಿಂದ ಅವರು ವಿಭಾಗವಾಗಲು ಆತುರರಾಗಿದ್ದರೆಂದು ಅರ್ಥವಾಗುವುದಿಲ್ಲ. ಅವರು ತಮ್ಮ ರಾಜ್ಯದ ಹಕ್ಕುಗಳೇ ಹೆಚ್ಚೆಂದು ಹೇಳಿದುದು ನಿಜ; ಹಾಗೆ ಹೆಚ್ಚುಮಾಡುವುದರಿಂದ ಸಂಯುಕ್ತ ಸರ್ಕಾರಕ್ಕೆ ಅನ್ಯಾಯವಾದ ಅಧಿಕಾರವನ್ನು ತೋರಿಸಲು ಅವಕಾಶವು ತಪ್ಪಿ ರಕ್ಷಣೆಯಾಗುವುದೆಂದು ನಂಬಿದರು. ಆದರಿಂದ ಸಂಸ್ಥಾನದ ಸರ್ಕಾರಕ್ಕೆ ಹೆಚ್ಚು ಅಧಿಕಾರವುಂಟಾಗಿ ಪ್ರಜೆಗಳ ಮನಸ್ಸನ್ನು ಮತ್ತಷ್ಟು ಸ್ಫುಟವಾಗಿ ಅನುಸರಿಸಿದಂತಾಗುವುದೆಂದೂ ಅವರಿಗೆ ತೋರಿತು. ಹೀಗೆ ಭಾವಿಸಿದರೆ ಒಂದು ತೊಂದರೆಯು ಬಂದು ಸುತ್ತಿಕೊಳ್ಳುತ್ತಿದ್ದಿತು. ಸಂಯೋಗದ ಸರ್ಕಾರವು ಸಂಯೋಗದ ರಕ್ಷಣೆಯ ಸಲುವಾಗಿ ಯಾವ ಪ್ರಯತ್ನವನ್ನು ಮಾಡುವುದೋ ಊಹಿಸಲಾಗಲಿಲ್ಲ. ಆದರೆ ಸಂಯೋಗವು ಮಾತ್ರ ಸರ್ವಪ್ರಕಾರದಿಂದಲೂ ಸಂರಕ್ಷಿಸಲ್ಪಡಬೇಕಾಗಿದ್ದಿತು. ಮುಂದೆ ಯುದ್ಧವು ಪ್ರಾರಂಭವಾಗಿ ಕಜ್ಜಾಯಕ್ಕೆ ಕಾಸನ್ನು ತೆತ್ತಾದಮೇಲೆ ದಾಸ್ಯದಲ್ಲಿಯೂ ಸಂಸ್ಥಾನದ ಹಕ್ಕುಗಳಲ್ಲಿಯೂ ಸರ್ಕಾರದ ಅಧಿಕಾರದಲ್ಲಿಯೂ ವ್ಯತ್ಯಸ್ತವಾದ ಅಭಿಪ್ರಾಯಗಳು ಎದುರಿಗೆ ನಿಂತು ಉತ್ತರದವರಿಗೆ ತೊಂದರೆಯ

ನ್ನುಂಟುಮಾಡುವಂತೆ ತೋರಿದುವು. ಉತ್ತರವು ಹೆದರಲಿಲ್ಲ, ಹಿಂಜರಿಯಲಿಲ್ಲ, "ಪ್ರತ್ಯೇಕವಾಗಲು ದಕ್ಷಿಣಕ್ಕೆ ಯಾವ ಅಧಿಕಾರವೂ ಇಲ್ಲ; ದಕ್ಷಿಣವು ಸಂಯೋಗವನ್ನು ಬಿಟ್ಟು ಹೋಗಕೂಡದು!" ಎಂದು ಗರ್ಜಿಸಿತು.

ಈ ಅಭಿಮಾನವು ಸ್ವಲ್ಪಮಟ್ಟಿಗೆ ದಕ್ಷಿಣದ ಪ್ರಜೆಗಳಲ್ಲಿಯೂ ಹುಟ್ಟಿದ್ದಿತು. ಆದರೆ ನಿಷ್ಕಲ್ಮಷವಾದ ಹೃದಯಲ್ಲಿ ಹುಟ್ಟಿರಲಿಲ್ಲ—ಆ ಹೃದಯವು ಸ್ವಾರ್ಥದಿಂದ ತುಂಬಿದ್ದಿತು. ಹಿಂದೆ ದಕ್ಷಿಣಭಾಗವೇ ರಾಜ್ಯದ ಆಡಳಿತದಲ್ಲಿ ಪ್ರಾಮುಖ್ಯತೆಯನ್ನು ಹೊಂದಿದ್ದಿತು. ಆಡಳಿತವು ಕೈಯಲ್ಲಿರಲಾಗಿ ಅವರ ದೇಶಪ್ರೀತಿಯು ಅನುಪಮವಾಗಿದ್ದಿತು. ಆ ಪ್ರೀತಿಯ ಬಲದಿಂದಲೇ ಅವರು ಅಧಿಕಾರದಲ್ಲಿ ಬಹಳ ಕಾಲ ನಿಂತರು. ಆದರೆ ಈಚೆಗೆ ಬೇರೊಂದು ಆಶಯವು ಮನಸ್ಸಿನಲ್ಲಿ ಹುಟ್ಟಿ ಸಾರವತ್ತಾಗಿ ಬೆಳೆಯುತ್ತಿದ್ದಿತು. ಉತ್ತರದಲ್ಲಿ ಜನಸಂಖ್ಯೆಯು ದಿನದಿನಕ್ಕೆ ಹೆಚ್ಚಿ ಅವರ ಬಲವು ಪುಷ್ಟಿಹೊಂದುತ್ತ ಬಂದಿದ್ದಕಾರಣ ಆಡಳಿತವು ಕೈಬಿಟ್ಟು ಹೋಗುವುದೆಂಬ ಹೊಸದಾದ ಭಯವುಂಟಾಗಿ ಅಭಿಮಾನವು ವಿಪರ್ಯಾಸಹೊಂದಿತು. ಸಂಯೋಗವು ತಮ್ಮ ಆಶಯಕ್ಕೆ ಅಧೀನವಾಗಿದ್ದರೆ ಮಾತ್ರ ಅದರಂತಹ ಶ್ರೇಷ್ಠವಾದ ಪದಾರ್ಥವು ಮತ್ತೊಂದಿಲ್ಲವೆಂದು ದಕ್ಷಿಣದವರು ಚಿಂತಿಸತೊಡಗಿದ್ದರು. ದಕ್ಷಿಣದವರು ಕೋರುತ್ತಿದ್ದುದು ದಾಸ್ಯವೊಂದು. ಆದರೆ ಸದ್ಯದಲ್ಲಿ ಉತ್ತರವು ಪ್ರಬಲವಾಗಿ ಸರ್ಕಾರವು ಅದರ ಅಧೀನವಾಗುವ ಸ್ಥಿತಿಗೆ ಬಂದಿದ್ದಿತು. ಸಂಪೂರ್ಣವಾಗಿ ಅಧೀನವಾದರೆ ತಮ ಕೋರಿಕೆಯು ಕೈಗೂಡುತ್ತಲೇ ಇರಲಿಲ್ಲ. ಆದುದರಿಂದ ಪ್ರತಿಯೊಂದು ಸಂಸ್ಥಾನವೂ ಸಹಜವಾಗಿ ಸ್ವತಂತ್ರವೆಂಬ ತತ್ವವನ್ನು ಆಯುಧವನ್ನಾಗಿ ಹಿಡಿದು ಹೊರಟರೆ ಉತ್ತರದವರು ಎದುರಾಗಿ ನಿಲ್ಲಲಾರರೆಂದೂ, ಅಧಿಕಾರವು ತಮಗೇ ಉಳಿಯುವುದೆಂದೂ ಅವರು ಯೋಚಿಸಿದರು. ಉತ್ತರದವರೆಲ್ಲರೂ ಸಂಯೋಗವು ಹೇಗೆ ಸಂಕ್ಷೋಭ ಹೊಂದಕೂಡದೆಂಬ ವ್ರತವುಳ್ಳವರಾಗಿದ್ದರೋ ಹಾಗೆ ದಕ್ಷಿಣಸೀಮೆಗಳ ಜನಗಳು ಈ ತತ್ವವನ್ನವಲಂಬಿಸಿದ್ದರು. ಸಂಯೋಗದಗೊಡವೆಗೆ ಹೋದರೆ ದ್ರೋಹಮಾಡಿದಂತಾಗುವುದೆಂದು ಉತ್ತರದವರು ಭಾವಿಸಿದರು. ದಕ್ಷಿಣದವರೂ ಕೂಡ ಸಂಯೋಗದ ಸುದ್ದಿಯನ್ನೆತ್ತಿದವನು ದ್ರೋಹಿಯಾಗುವುದಾಗಿ ಭಾವಿಸಿದರು. ಸಂಯೋಗಕ್ಕಿಂತಲೂ ಸಂಸ್ಥಾನವೇ ಹೆಚ್ಚೆಂದು ತಿಳಿದು ಪೂರ್ವದ ಸಂಪ್ರದಾಯಗಳನ್ನು ಅನುಸರಿಸುವ ದಕ್ಷಿಣ ಕೆರೋಲಿನ ಮತ್ತೂ ವರ್ಜಿನಿಯ ಮೊದಲಾದ ಭಾಗಗಳು ದಕ್ಷಿಣದಲ್ಲಿಯೇ ಅಭಿಮಾನವನ್ನು ತೋರಿಸಿದುದು ಆಶ್ಚರ್ಯವನ್ನುಂಟುಮಾಡಲಾರದು. ಈ ಅಭಿಮಾನವು ಮೊದಲಿಂದಲೂ ಬಂದುದು. ಆದರೆ ಅಲಬಾಮ ಮತ್ತೂ ಮಿಸಿಸಿಪ್ಪಿಯಂತಹ ಭಾಗಗಳಿಗೆ ಮಾತ್ರ ಅದು ಮೊದಲಿಂದಲೂ ಬಂದುದಲ್ಲ. ಅವು ಹೊಸದಾಗಿ ಸಂಸ್ಥಾನಗಳಾದುವು. ಆ ಕಾಲವನ್ನು ಜನಗಳಿನ್ನೂ ಮರೆತಿರಲಿಲ್ಲ. ಆದರೂ ಅವುಗಳಿಗೆ ಅಭಿಮಾನವು ಸಂಯೋಗದಲ್ಲಿರಲಿಲ್ಲ. ಅಥವಾ ಸಂಸ್ಥಾನವೇ ಹೆಚ್ಚೆಂಬ ಭಾವನೆಯೂ ಇರಲಿಲ್ಲ. ಆದುದರಿಂದ ಆ ತತ್ವವನ್ನು ಅವಲಂಬಿಸಿದುದು, ತಮ್ಮಲ್ಲಿ ಪ್ರಚಾರದಲ್ಲಿದ್ದ ದಾಸ್ಯವನ್ನು ಮರೆಹಾಕಿಕೊಂಡು ರಕ್ಷಿಸಲು ಅವು ಮಾಡಿದ ಕುಹಕವೇ ಹೊರತು ಮತ್ತೇ

ನೂ ಅಲ್ಲ. ಈ ಪ್ರವರ್ತನೆಯು ಸಾಮಾನ್ಯವಾದುದು. ಬಲಶಾಲಿಯೊಬ್ಬನ ಮುಂದೆ ತನ್ನ ಆಟವು ಸಾಗದಿದ್ದರೆ ಸ್ವಾರ್ಥಪರನಾದವನು ಆತ್ಮಗೌರವವನ್ನು ನೆಪ ಹೇಳಿ ತನ್ನ ಸ್ವಾರ್ಥಪರತೆಯನ್ನು ಮರೆಮಾಡಿಕೊಳ್ಳುವನು. ಆ ಪದ್ಧತಿಯು ಮಾತ್ರ ಇಲ್ಲದಿದ್ದರೆ ತಮ್ಮ ಸಂಸ್ಥಾನವೇ ಹೆಚ್ಚೆಂಬ ತತ್ವವು ಅವರಿಗೆ ಸ್ವಲ್ಪವೂ ಕೆಲ ಸಕ್ಕೆ ಬರುತ್ತಿರಲಿಲ್ಲ. ಈ ಪ್ರಕಾರವಾಗಿ ಒಟ್ಟನಲ್ಲಿ ಅನೇಕ ದಕ್ಷಿಣದ ರಾಜ್ಯಗಳಲ್ಲಿ ಜನಗಳು ಪ್ರತ್ಯೇಕವಾಗಲು ಇಷ್ಟಪಡದಿದ್ದರೂ ಅಂತಹ ಸಂದರ್ಭ ಬಂದಲ್ಲಿ ಪ್ರತ್ಯೇಕ ವಾಗಲು ಸಂಸ್ಥಾನಕ್ಕೆ ನಿರಾಕ್ಷೇಪನಾದ ಅಧಿಕಾರವುಂಟೆಂದು ಅಭಿಪ್ರಾಯವುಳ್ಳವ ರಾಗಿದ್ದರು. ಆಗ ಸ್ವಾತಂತ್ರ್ಯವು ಅಗತ್ಯನಾಗುತ್ತಿದ್ದಿತು. ಈ ಅಂಶದಲ್ಲಿ ಅವ ರಿಗೆ ಯಾವ ಸಂದೇಹವೂ ಇರುತ್ತಿರಲಿಲ್ಲ.

ಈ ಸಂದರ್ಭದಲ್ಲಿ, ಉತ್ತರದವರು ಹೇಳುತ್ತಿದ್ದುದು ಸರಿಯೆ, ಅಥವಾ ದಕ್ಷಿಣದವರು ಹೇಳುತ್ತಿದ್ದುದು ಸರಿಯೆ? ಎಂಬ ಪ್ರಶ್ನೆಯು ತಾನಾಗಿಯೇ ಹೊರ ಡುವುದು. ಎಲ್ಲರಿಗಿಂತಲೂ ಪ್ರೆಸಿಡೆಂಟನಾದವನಿಗೆ ಈ ವಿಚಾರವು ಅತ್ಯಂತವಾಗಿ ಮುಖ್ಯವಾದುದು. ಒಂದು ಸಿದ್ಧಾಂತಕ್ಕೆ ಬಂದಲ್ಲಿ ಆತನಿಗೆ ವ್ಯವಹರಿಸುವ ಮಾರ್ಗವು ಸುಲಭವಾಗುತ್ತಿದ್ದಿತು. (ಆದರೆ ಆ ಸಿದ್ಧಾಂತದಲ್ಲಿ ಯಾವದೊಂದು ಪಂಗಡದ ಧರ್ಮಪ್ರವರ್ತನೆಯಾಗಲೀ ವಿಚಕ್ಷಣೆಯಾಗಲೀ ನಿರ್ಧರವಾಗುವುದಿಲ್ಲ.) ನಾವು ಆಗ ಪ್ರಚಾರದಲ್ಲಿದ್ದ ಶಾಸನನಿಯಮವನ್ನು ಬಿಟ್ಟು ಹಿಂದಕ್ಕೆ ನೋಡಿದರೆ ಪೂರ್ವಿಕರು ಮಾಡಿಕೊಂಡ ಕರಾರು ಕಂಡುಬರುವುದು. ಅದೇ ಉತ್ಪತ್ತಿಸ್ಥಾನ. ಆ ಕರಾರಿಗೆ '' ಏಕಶಾಸನದ ಮತ್ತು ಶಾಶ್ವತನಾದ ಸಂಯೋಗದ ನಿಯಮಗಳು (Articles of Confederation and Perpetual Union) '' ಎಂದು ಹೆಸರಿದ್ದಿತು. ಪೂರ್ವಿಕರು ಆ ನಿಯಮಗಳನ್ನು ತಿಳಿವಳಿಕೆ ಸಾಲದೆ ಮಾಡಲಿಲ್ಲ; ಸಮಯದಲ್ಲಿ ತಲೆಯನ್ನುಳಿಸಿಕೊಂಡು ಪಾರಾಗುವುದಕ್ಕೋಸ್ಕರ ಮಾಡಲಿಲ್ಲ—ತಲೆ ಯನ್ನು ತೆತ್ತು ಮಾಡಿದರು. ಸಾರೋದ್ಧಾರವಾಗಿ ನಡೆದುಕೊಂಡುಬರುವುದಕ್ಕಾಗಿ ಮಾಡಿದರು. ಆದರೆ ಅವರ ನಿಯಮಗಳಲ್ಲಿ ಒಂದು ಸಂಸ್ಥಾನವು ಸಂಯೋಗ ದಿಂದ ಬೇರೆಯಾಗಬಹುದೆಂಬುದಕ್ಕಾಗಲೀ ಅಥವಾ ಹೋಗಕೂಡದೆಂಬ ಅರ್ಥಕ್ಕಾ ಗಲೀ ಯಾವ ಮಾತನ್ನೂ ಹೇಳಿಲ್ಲ. ಆ ಕಾಲದಲ್ಲಿ ನಿಯಮಗಳನ್ನು ಏರ್ಪಡಿಸಿದ ವಾಷಿಂಗ್ಟನ್ ಮೊದಲಾದ ಮಹಾತ್ಮರು ಒಡಕು ಎಂದಿಗೂ ಹುಟ್ಟದೆಂತಲೇ ದೃಢ ನಾಗಿದ್ದರು. ಎಲ್ಲರೂ ಒಟ್ಟಾಗಿ ಸೇರಿ ಹೊಡೆದಾಡಿ ಸ್ವಾತಂತ್ರ್ಯವನ್ನು ಪಡೆದಿರು ವಾಗ ಎಲ್ಲರೂ ಅದನ್ನು ಅನುಭವಿಸಿಕೊಂಡು ಬರುವರೆಂದೂ ಸ್ವಾತಂತ್ರ್ಯವು ಎಲ್ಲ ರಿಗೂ ಸಮವಾದ ಸ್ವತ್ತಾದ ಕಾರಣ ಅದನ್ನು ಅನುಭವಿಸುವ ಕಾಲದಲ್ಲಿ ತಮ್ಮ ತಮ್ಮೊಳಗೇ ಜನಗಳಿಗೆ ಭೇದ ಬುದ್ಧಿಯು ಹುಟ್ಟದೆಂದೂ ಅವರು ಎಣಿಸಿದರು. ಪ್ರಾಯಶಃ ಈ ಕಾರಣದಿಂದಲೇ ಅವರು ಒಂದು ಸಂಸ್ಥಾನವು ಸಂಯೋಗವನ್ನು ಒಂದಾವೃತ್ತಿ ಸೇರಿಬಿಟ್ಟಮೇಲೆ ಅದು ತನ್ನ ಬುದ್ಧಿಯನ್ನು ಬದಲಾಯಿಸಕೂಡದೆಂದು ಬಲಾತ್ಕರಿಸಲು ಅವಶ್ಯಕತೆಯಿಲ್ಲವೆಂದು ಭಾವಿಸಿದರು. ಹಾಗಿರಲಾಗಿ ದಕ್ಷಿಣದ ವರೇಕೆ ಈಗ ಈ ಭಾವನೆಯನ್ನು ವಹಿಸಿವರೆಂದು ಕೇಳಬಹುದು. ಬಲವಾ

ದೊಂದು ಕಾರಣವಿದ್ದಿತು. ಹಿಂದೆ ಶಾಸನ ನಿಯಮವನ್ನು ಜನಗಳು ಅಂಗೀಕರಿಸಿದನೇಲೆ ಕೆಲವು ಸಂಸ್ಥಾನಗಳಲ್ಲಿ ಅವುಗಳ ಪ್ರತಿನಿಧಿಗಳು ಸಂಸ್ಥಾನಗಳು ಇನ್ನು ಪ್ರತ್ಯೇಕವಾಗಬಹುದೆಂದು ಸಾರಿದರು. ಅವರ ಮಾತನ್ನು ನಡೆಯಿಸಿದ್ದರೆ ಇದಕ್ಕೆ ಮೊದಲೇ ಅನಾಹುತವು ನಡೆದಿರುತ್ತಿದ್ದಿತು. ವಸ್ತುತಃ ಹೀಗೆ ಮಾಡಬೇಕೆಂಬುದನ್ನು ಹೇಳುವವರು ಅವರಲ್ಲ—ಪ್ರಜೆಗಳು. ಪ್ರಜೆಗಳು ಹೇಳುವುದನ್ನು ಅವರ ಮೂಲಕ ಕೇಳಿ ಸರ್ಕಾರವು ಆಚರಿಸಬೇಕು. ಸಾಲವನ್ನು ತೀರಿಸುವುದಾಗಿ ಪತ್ರವನ್ನು ಬರೆದುಕೊಟ್ಟು, ಆಮೇಲೆ ಮತ್ತೊಬ್ಬನ ಸಂಗಡ, ತನಗೆ ಅಂತಹ ಅಗತ್ಯವೇನೂ ಇಲ್ಲವೆಂದು ಹೇಳಿದರೆ ಕೇಳುವವರಾರು ? ಸಂಯೋಗವನ್ನು ಸೇರಿದ ಮೇಲೆ, ಹೊರಗಿನ ರಾಜ್ಯದೊಡನೆ ಯುದ್ಧವು ಸಂಭವಿಸಲಾಗಿ, ವೆಚ್ಚಕ್ಕೆ ದಾರಿಯಾಯಿತೆಂಬ ಭಯದಿಂದ, ಸಂಯೋಗದಗೊಡವೆಗೇ ಬರದಿರುವುದಾಗಿ ಹೇಳಿದರೆ ಸುಮ್ಮನಿರುವವರಾರು? ಒಟ್ಟಿನಲ್ಲಿ, ಸಂಯೋಗವನ್ನು ಬಿಟ್ಟುಹೋಗುವ ಮಾತು ತೀರ ಅಸಮಂಜಸವಾಗಿದ್ದಿತು. ರಾಜ್ಯವನ್ನು ಎಂಭತ್ತು ವರ್ಷಗಳ ಹಿಂದೆ ಏರ್ಪಡಿಸಿದ ಉದ್ದೇಶವು ಈಗ ನಿರರ್ಥಕವಾಗುತ್ತಿದ್ದಿತು. ಆದುದರಿಂದ, ಸರ್ಕಾರವು ತಾನೇ ಸ್ವಾತಂತ್ರ್ಯವನ್ನು ವಹಿಸಿ, ಪ್ರತ್ಯೇಕನಾಗುವುದನ್ನೂ ಇಲ್ಲದುದನ್ನೂ ತನ್ನ ಕೈಯೊಳಗಿಟ್ಟುಕೊಂಡು, ಸಂಯೋಗವನ್ನು ಉಳಿಸಿಕೊಳ್ಳುವುದೊಂದು ಮಾತ್ರವೇ ಉಪಾಯವಾಗಿ ತೋರಿತು.

ಹತ್ತಿಯ ಬೆಳೆಯುಳ್ಳ ಆರು ಸಂಸ್ಥಾನಗಳು ಮೊದಲು ಬೇರೆಯಾದುವು. ಇತರ ಸಂಸ್ಥಾನಗಳೂ ಕೂಡ ತತ್‌ಕ್ಷಣವೇ ಅವುಗಳ ಮೇಲುಪಂಕ್ತಿಯನ್ನು ಅನುಸರಿಸಿದುವು. ಬೇರೆಯಾಗಬೇಕೆನ್ನುವ ಜನಗಳ ಸಂಖ್ಯೆಯು, ತಮ್ಮ ಇಷ್ಟಕ್ಕೆ ಅಡ್ಡಿಮಾಡುವವರಿದ್ದಾರೆಂದು ತಿಳಿದಹಾಗೆಲ್ಲಾ ಹೆಚ್ಚುಹೆಚ್ಚಾಗಿ ಏರಿತು. ವಿದ್ಯಾವಂತರೂ ಅಧಿಕಾರಗಳನ್ನುಳ್ಳವರೂ ದಾಸ್ಯದಲ್ಲಿ ಅಭಿಮಾನವುಳ್ಳ ಇತರ ಪ್ರಭೃತಿಗಳೂ ವಿಭಾಗಾಪೇಕ್ಷೆಯುಳ್ಳವರ ಕಡೆಗೆ ಸೇರಿದರು. ಸಾಮಾನ್ಯ ಜನಗಳೂ ಬಡವರೂ ಮೊದಲೇ ಸೇರಿದ್ದರು. ಅವರು ಹಾಗೆ ಸೇರಲು ಕಾರಣಗಳಿದ್ದುವು. ತಾವು ಬಿಳಿಯಜನರು, ಬಿಳಿಯಜನರಾದ ಮೇಲೆ ಗೌರವವನ್ನೂ ಸ್ವಾತಂತ್ರ್ಯವನ್ನೂ ಉಳಿಸಿಕೊಳ್ಳುವುದಕ್ಕೋಸ್ಕರ ಗುಲಾಮರನ್ನಿಟ್ಟುಕೊಳ್ಳಬೇಕಾಗಿತ್ತು. ಉತ್ತರದವರು ಅದನ್ನು ಸಹಿಸದೆ, ನೀಗ್ರೋಗಳಿಗೆಲ್ಲಾ ವಿಮೋಚನೆ ಮಾಡಬೇಕೆಂದು ಸಂಕಲ್ಪಿಸಿದ್ದುದರಿಂದ ಅಧೀನದಲ್ಲಿರುವ ನೀಗ್ರೋವನ್ನು ಅಧೀನದಲ್ಲೇ ಉಳಿಸಿಕೊಳ್ಳುವ ಸಲುವಾಗಿ ಬೇರೆಯಾಗುವುದು ಮುಖ್ಯವಾದುದು. ದುಷ್ಟರನ್ನು ಕಂಡಲ್ಲಿ ದೂರ ಇರುವುದೇ ಲೇಸು. ಎರಡನೆಯದಾಗಿ, ಮೊದಲು ನೀಗ್ರೋಗಳಿಗೇ ಸ್ವಾತಂತ್ರ್ಯದ ಅಪೇಕ್ಷೆಯಿರಲಿಲ್ಲ. ಅದಕ್ಕಾಗಿ ಅವರು ಗಲಭೆಯನ್ನು ಮಾಡಲಿಲ್ಲ; ಯಾವ ಏರ್ಪಾಡೂ ಇರಲಿಲ್ಲ. ಗುದ್ದಲಿಯನ್ನು ಹಿಡಿದು ಕೆಲಸಕ್ಕೆ ಹೊರಟು ಸಾಮಾನ್ಯಪ್ರಜೆಯಂತಿರಬೇಕೆಂದು ಅನೇಕರ ಮನಸ್ಸಿನಲ್ಲಿರುವುದು ; ಆದರೆ ಗುದ್ದಲಿಯನ್ನು ಮುಂದಿಟ್ಟು ಅದನ್ನು ಕೈಗೆ ತೆಗೆದುಕೊ ಎಂದ ಪಕ್ಷದಲ್ಲಿ ಮನಸ್ಸು ಬರುವುದು ಬಹಳ ಸ್ವಲ್ಪಮಂದಿಗೆ. ಅದೇ ರೀತಿಯಾಗಿ, ಆಶೋತ್ತರವು

ಪ್ರಬಲವಾಗಿದ್ದರೂ ಕೂಡ ಆ ಜನರು ಅಳಿದು ಸುರಿದು ಮಾಡುತ್ತಿದ್ದರೇ ಹೊರತು ಸ್ಥಿರವಾದ ಮನಸ್ಸಿನಿಂದ ಮುಂದೆ ನುಗ್ಗಲಿಲ್ಲ. ಅದಕ್ಕೆ ಜಾರ್ಜ್ ಬ್ರೌನನ ಪ್ರಯತ್ನವೇ ಸಾಕ್ಷಿ. ಹಾಗೆ ಸಾಹಸಮಾಡಿದವರು ಅತ್ಯಲ್ಪಮಂದಿ.

ಹೀಗೆ ಧನಿಕರೂ ಬಡವರೂ ಸಭ್ಯರೂ ಸರಳಸ್ವಭಾವದವರೂ ಶೀಲವಳಿಕೆಯುಳ್ಳವರೂ ವೈದಿಕವರ್ಗದವರೂ ಏಕೀಭವಿಸಿ ಕಾರ್ಯಕ್ಕೆರಗಲು ದಾಸ್ಯವೇ ಕಾರಣ. ಅದನ್ನು ಉಳಿಸುವುದಕ್ಕಾಗಿಯೇ ಅವರು ಸಂಯೋಗದ ನಿರ್ಬಂಧದಿಂದ ದೂರವಾಗಿ ಹೋಗಬೇಕೆಂದರು. ಉತ್ತರದವರಿಗೆ ಅದನ್ನು ಕೇಳಿ ಅತ್ಯಂತ ಆಶ್ಚರ್ಯವಾಯಿತು. "ಹತ್ತಿಪ್ಪತ್ತುಮಂದಿ ದುಷ್ಟರು ಸೇರಿಕೊಂಡು ಜನಗಳ ಕಿವಿಯಲ್ಲಿ ಊದಿ ಹೆದರಿಕೆಯನ್ನು ಹುಟ್ಟಿಸಿದ್ದಾರೆ. ಜನಗಳಿಗೆ ಅವರ ಮೋಸದ ಮಾತಿನಲ್ಲಿ ನಂಬಿಕೆಯುಂಟಾಗಿ ಪ್ರತ್ಯೇಕವಾಗುವುದಕ್ಕೂ ಯುದ್ಧಮಾಡುವುದಕ್ಕೂ ಅಪೇಕ್ಷೆಯು ತಲೆದೋರಿರುವುದು. ದಕ್ಷಿಣದವರ ಪ್ರಯತ್ನವು ದೊಡ್ಡದೊಂದು ಪಿತೂರಿಯಲ್ಲದೆ ಬೇರೆಯಲ್ಲ" ಎಂದು ಅವರು ನಂಬಿದರು. ಲಿಂಕನ್ನನೂ ಕೂಡ ಕಡೆಯವರೆಗೆ ಹಾಗೆಯೇ ನಂಬಿದನು. ಕಡೆಯವರೆಗೂ, ದಕ್ಷಿಣದ ಪ್ರಜೆಗಳು ಬುದ್ಧಿಯನ್ನರಿತುಕೊಂಡು ಸರಿಯಾದ ಮಾರ್ಗಕ್ಕೆ ಬರುವರೆಂತಲೇ ನಂಬಿದನು. ಆದರೆ ಇದು ಶುದ್ಧ ಸುಳ್ಳು, ಬೇರೆ ಯಾವುದೋ ಕಾರಣವಿದೆಯೆಂದು ಕೆಲವರು ಹೇಳಿದರು. 1830ನೆಯ ವರ್ಷದಿಂದೀಚೆಗೆ ದಕ್ಷಿಣದಲ್ಲಿ ಪಕ್ಷಪಾತವುಳ್ಳ ಯಾವನೊಬ್ಬನ ಬಾಯಿಂದಲೂ ದಾಸ್ಯದ ಸಲುವಾಗಲ್ಲದೆ ಮತ್ತೊಂದು ಕಾರಣಕ್ಕಾಗಿ ಪ್ರತ್ಯೇಕವಾಗಲು ಮನಸ್ಸುಂಟಾಯಿತೆಂಬ ಮಾತು ಹೊರಟಿಲ್ಲ. ಐಕಮತ್ಯವು ದಕ್ಷಿಣದವರಿಗೆ ಇಷ್ಟವಾದುದು. ಆದರೆ ಅತ್ಯಂತ ಇಷ್ಟವಾದುದಲ್ಲ. ದಕ್ಷಿಣದ ಸಂಸ್ಥಾನಗಳೂ ಸಂಯೋಗದೊಳಗಿರಬೇಕಾಗಿದ್ದರೆ ಇತರರು ದಾಸ್ಯದ ಮಾತನ್ನೇ ಎತ್ತಕೂಡದಾಗಿದ್ದಿತು. ದಕ್ಷಿಣ ಸರ್ಕಾರದಲ್ಲಿ ವೈಸ್‌ಪ್ರೆಸಿಡೆಂಟನಾದ ಅಲೆಗ್ಸಾಂಡರ್ ಸ್ಟೀವನ್ಸ್ (Alexander Stevans) ಎಂಬಾತನು ವಿಭಾಗವಾಗದೆಯೇ ದಾಸ್ಯವನ್ನು ಪ್ರಚಾರದಲ್ಲಿ ನಿಲ್ಲಿಸಿಕೊಳ್ಳಲು ಸಾಧ್ಯವೆಂದು ಬಹುಕಾಲದಿಂದಲೂ ಹೇಳಿದನು. ಆತನು ಮುಂದೆ ತನ್ನದೊಂದು ಭಾಷಣದಲ್ಲಿ ಹೀಗೆಂದನು: "ಹೊಸದಾಗಿ ಏರ್ಪಾಡಾಗಿರುವ ನಮ್ಮ ಈ ಶಾಸನಕ್ರಮದಲ್ಲಿ ದಾಸ್ಯದ ವಿಷಯದಲ್ಲಿ ಹುಟ್ಟುವ ಭಿನ್ನಾಭಿಪ್ರಾಯಗಳಿಗೆ ಸ್ಥಳವಿಲ್ಲ. ಆ ಚರ್ಚೆಯೆಲ್ಲಾ ಒಂದು ವ್ಯವಸ್ಥೆಗೆ ಬಂದಂತಾಯಿತು. ನಿನ್ನೆತಾನೆ ಸಂಭವಿಸಿದ ಸಂಯೋಗಭಂಗಕ್ಕೆ ಕಾರಣವು ದಾಸ್ಯವೇ? ಪೂರ್ವದಲ್ಲಿ ಜೆಫರ್‌ಸನ್ ಮೊದಲಾದವರು ಸೇರಿ ರಾಜ್ಯಭಾರದ ರೀತಿಯನ್ನೇರ್ಪಡಿಸುವಾಗ ದಾಸ್ಯವು ಎಲ್ಲಾವಿಧದಲ್ಲಿಯೂ ತಪ್ಪೆಂದು ಖಂಡಿಸಿದರು. ಸಮಾಜವೂ ರಾಜನೀತಿಯೂ ಧರ್ಮವೂ ಅದಕ್ಕೆ ಬಹಿಷ್ಕಾರವನ್ನು ಹಾಕಿರುವುವು. ಆದರೆ ಈಗ ನಮ್ಮ ಸರ್ಕಾರವು ಆ ಶಾಸನಕ್ಕೆ ಸಂಪೂರ್ಣವಾಗಿ ವ್ಯತಿರಿಕ್ತವಾದ ತತ್ವವನ್ನು ಆಶ್ರಯಿಸಿರುವುದು. ಅವರು ಬೇಡವೆಂದು ತಿರಸ್ಕರಿಸಿದುದನ್ನು ನಾವು ಬೇಕೆಂದು ಅಪೇಕ್ಷೆಪಟ್ಟು ಅಂಗೀಕರಿಸಿ ಆಧಾರವಾಗಿಟ್ಟುಕೊಂಡಿದ್ದೇವೆ. ಹಾಗೆ ಮಾಡಲು ಕಾರಣವೇನೆನ್ನಬಹುದು. ಹೇಳಬೇಕಾದುದಿಲ್ಲ—ಅದು ಎಲ್ಲರಿಗೂ ಗೊತ್ತೇ

ಇದೆ. ನೀಗ್ರೋವು ಬಿಳಿಯ ಜನಕ್ಕೆ ಸಮನಲ್ಲ. ದಾಸ್ಯವು—ಆ ಶಬ್ದಕ್ಕೆ ಬಿಳಿಯ ಜನದ ಅಧೀನ್ಯವೆಂಬುದೇ ಅರ್ಥ—ಅವನ ಹುಟ್ಟಿಗೆ ಬಂದುದು. ನಮ್ಮ ತತ್ವವು ಸತ್ಯವಾದುದು. ಎಲ್ಲಾ ಪ್ರಕಾರದಲ್ಲಿಯೂ ನ್ಯಾಯವುಳ್ಳದು. ಭಗವಂತನು ಹೀಗೆ ನಿರ್ಣಯಿಸಿದ್ದಾನೆ. ಬಿಳಿಯ ಜನವು ನೀಗ್ರೋವನ್ನು ತನ್ನವಶದಲ್ಲಿಟ್ಟುಕೊಳ್ಳ ಬೇಕೆಂಬುದು ಅವನ ನಿಯಮ. ನೀಗ್ರೋವಿನಲ್ಲಿರುವ ಬುದ್ಧಿಶಕ್ತಿಯೂ ದೇಹ ದಾರ್ಢ್ಯವೂ ಆ ನಿಯಮದ ಯುಕ್ತತೆಯನ್ನು ತಿಳಿಸುವುದು. ಈ ವ್ಯವಹಾರದಿಂದ ಎಲ್ಲರ ಆಕಾಂಕ್ಷೆಯೂ ಈಡೇರಿದಂತಾಗುವುದು. ಭಗವಂತನ ಆಜ್ಞೆಯನ್ನು ನೆರವೇರಿಸಿದಂತಾಗುವುದು, ಆದ್ದರಿಂದ ಇದರಲ್ಲಿ ಏನು ತಪ್ಪಿದೆ?'' ಅವನ ಹಾಗೆಯೇ ಮಿಸ್ಸೌರಿ ಸಂಸ್ಥಾನದ ಸಮ್ಮೇಳನವು ದಾಸ್ಯಕ್ಕೂ ನಮಗೂ ಭೇದವೇ ಇಲ್ಲವೆಂದಿತು.

ಸ್ವಲ್ಪವೂ ಮುಂದಾಲೋಚನೆಯಿಲ್ಲದೆ ಕೆಲಸಮಾಡಿ ಅವಿವೇಕಿಗಳೆಂಬ ನಿಂದೆಗೆ ದಕ್ಷಿಣದವರು ಭಾಗಿಗಳಾಗಿದ್ದಾರೆ. ''ಅವರಿಗೆ ಐಕಮತ್ಯವೇನೋ ಬೇಕಾಗಿದ್ದಿತು. ಆದರೆ ಅದಕ್ಕಿಂತ ಹೆಚ್ಚಾಗಿ ದಾಸ್ಯವು ಬೇಕಾಗಿದ್ದಿತು. ಆ ನಿಮಿತ್ತವಾಗಿ ಸಂಯೋಗವು ನಷ್ಟವಾಗುವುದಾದರೂ ಅವರು ಲಕ್ಷಿಸಲಿಲ್ಲ. ಆದರೆ ವಸ್ತುತಃ ಅವರು ತಮ್ಮ ದಾಸ್ಯಪದ್ಧತಿಯನ್ನು ಹಾಳುಮಾಡಲು ತಾವೇ ಕಾರಣ ರಾದರು. ಹೀಗೆ ಮಾಡಿದುದು ಕೇವಲ ಭಯಭ್ರಾಂತಿಯಿಂದ'' ಎಂಬ ಅಭಿ ಪ್ರಾಯವು ಕೆಲವರಿಗಿರುವುದು. ಅದು ಸರಿಯಲ್ಲ. ಲಿಂಕನ್ನನನ್ನು ಚುನಾಯಿಸಿದ ಮಾತ್ರಕ್ಕೆ ಅಥವಾ ಆಕೂಡಲೇ ದಾಸ್ಯದ ಬೇರಿಗೆ ಕೊಡಲಿಯ ಪೆಟ್ಟು ಬೀಳುತ್ತಿರ ಲಿಲ್ಲ. ಅವನಿಗಿದ್ದ ನಾಲ್ಕು ವರ್ಷಗಳ ಅಧಿಕಾರಕಾಲದಲ್ಲಿ ಸ್ಥಿತಿಯು ಸಾಮಾನ್ಯ ವಾಗಿದ್ದಪಕ್ಷದಲ್ಲಿ ದಾಸ್ಯವನ್ನು ಬುಡಮುಟ್ಟ ನಾಶಮಾಡುವಷ್ಟು ಅವಕಾಶವು ದೊರೆ ಯುತ್ತಿರಲಿಲ್ಲ. ದಾಸ್ಯವನ್ನು ವೃದ್ಧಿಪಡಿಸುವುದಕ್ಕಾಗಿ ಹೊಸದಾಗಿ ಪ್ರದೇಶವನ್ನು ಸಂಪಾದಿಸುವ ಯೋಚನೆಯು ಯಾವುದಾದರೂ ಸಂಸ್ಥಾನದ ಮನಸ್ಸಿನಲ್ಲಿದ್ದಪಕ್ಷದಲ್ಲಿ ಅವನು ಅದನ್ನು ಅಡ್ಡಿಪಡಿಸಬಹುದಾಗಿದ್ದಿತು. ಅಥವಾ ದಾಸ್ಯವನ್ನು ವಿಸ್ತರಿಸ ಬೇಕೆಂದು ಯಾವ ಸಲಹೆ ಬಂದಾಗ್ಯೂ ಅದನ್ನು ತಿರಸ್ಕರಿಸಬಹುದಾಗಿದ್ದಿತು. ಅವನ ತರುವಾಯ ಬರುವ ಪ್ರೆಸಿಡೆಂಟನು ಅದೇ ಸಂಪ್ರದಾಯದವನಾಗಿರಬಹುದು, ಅಥವಾ ಅಲ್ಲದಿರಬಹುದು. ಅಥವಾ ಆತನಾಜ್ಞೆಯು ನಿರಾಕ್ಷೇಪವಾಗಿ ಚಲಾವ ಣೆಗೆ ಬರದಿರಬಹುದು ; ಕಾಂಗ್ರೆಸ್ ಸಭೆಗಳೆರಡರಲ್ಲಿಯೂ ಅವನಿಗೆ ಪ್ರತಿಕಕ್ಷಿಗಳು ಹೆಚ್ಚಾಗಿದ್ದರು. ಶಾಸನಕ್ರಮದ ವಿಷಯದಲ್ಲಿ ಕೆಲವರು ಲಿಂಕನ್ನನಿಗೆ ಪ್ರತಿಕೂಲ ರಾಗಿದ್ದರು. ಅಮೆರಿಕದ ಅಖಿಲಪ್ರಜೆಗಳೂ ಅವನಂತೆಯೇ ಮನಸ್ಸುಳ್ಳವರಾಗಿರ ಲಿಲ್ಲ. ಹಾಗಾದರೆ ದಕ್ಷಿಣದವರು ಸಹನೆಯಿಂದ ಸ್ವಲ್ಪಕಾಲ ಸುಮ್ಮನಿದ್ದು ದಾಸ್ಯ ಪದ್ಧತಿಗೆ ತೊಂದರೆ ಬರದಂತೆ ಏಕೆ ಮಾಡಿಕೊಳ್ಳಬಾರದಾಗಿದ್ದಿತು? ದೆಸೆಯು ತಿರುಗಿ ಮುಂದೆ ತಮ್ಮ ಕೈಯ್ಯೇ ಮೇಲಾಗುವುದೆಂದು ಏಕೆ ನಂಬಲಿಲ್ಲ?

ಆದರೆ ದಕ್ಷಿಣದವನ ಬುದ್ಧಿಯು ಮತ್ತೊಂದು ವಿಧವಾಗಿದ್ದಿತು. ಅವನು ತನ್ನ ಜೀವಕಾಲವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡಿರಲಿಲ್ಲ. ನೀಗ್ರೋ ಗುಲಾ

ಮನು ಆತನಿಗೆ "ಭಗವಂತನ ನಿಯಮದ ಪ್ರಕಾರ ದೊರೆತವನು," ಆದ್ದರಿಂದ ತನಗೆ ಹೇಗೋ ತನ್ನ ಸಂತತಿಗೂ ಹಾಗೆಯೇ ಎಂದು ಭಾವಿಸಿ ಆತನು ಕಾರ್ಯದಲ್ಲಿ ಮುಂದಿನ ದೃಷ್ಟಿಯನ್ನಿಟ್ಟನು. ತನ್ನ ಕಾಲದಲ್ಲಿದ್ದ ಪದ್ಧತಿಗಳೂ ಅನುಕೂಲ್ಯಗಳೂ ಪರಂಪರೆಯಾಗಿ ಬೆಳೆದು ತನ್ನ ಮುಂದೆ ಬರುವವರಿಗೂ ಸಲ್ಲಬೇಕೆಂದು ಅವನು ಆಶಿಸಿದನು. ಒಂದೆರಡು ತಲೆಗೆ ಮೊದಲು ದಾಸ್ಯವು ಆಚರಣೆಯಲ್ಲಿರುವುದು ನ್ಯಾಯವೇ ಎಂಬ ಪ್ರಶ್ನೆಯು ದಕ್ಷಿಣದವರ ಮನಸ್ಸಿನಲ್ಲಿ ಹುಟ್ಟಿ ಅಶಾಂತತೆಯನ್ನುಂಟುಮಾಡಿದ್ದಿತು. ಆದರೆ ಈಚೆಗೆ ಲಾಭದ ಆಸೆಯು ಹೆಚ್ಚಿ ಆ ಭಯವು ತೊಡೆದುಹೋಗಿದ್ದಿತು. ಪ್ರಾಯಃಶಃ ಎಲ್ಲರೂ ಅದನ್ನು ನ್ಯಾಯವೆನ್ನುತ್ತಿದ್ದರು. ಆದರೆ ಲಿಂಕನ್ನನು ಪ್ರೆಸಿಡೆಂಟನಾಗಲಾಗಿ ಅವರಿಗೆ ಅಳುಕಿತು. ದಾಸ್ಯವನ್ನು ಊರ್ಜಿತಸ್ಥಿತಿಯೊಳಗೇ ಇಟ್ಟುಕೊಂಡುಬಂದು ಅದನ್ನು ಶಾಶ್ವತಮಾಡಬೇಕಾದರೆ ಇನ್ನು ತಡಮಾಡಕೂಡದು, ಸುಮ್ಮನಿರಕೂಡದು. ಆ ಪದ್ಧತಿಯು ಅತ್ಯಂತ ತುಚ್ಛನಾದುದೆಂದೂ ಪಾಪಭೂಯಿಷ್ಠವಾದುದೆಂದೂ ಉತ್ತರದವರು ಆರ್ಭಟಿಸಿದರು. ಇದು ಕೇವಲ ಅಭಿಪ್ರಾಯವೆನ್ನಿಸಿಕೊಂಡರೂ ತುಚ್ಛವೆಂಬುದೊಂದು ಮಾತಿನಿಂದ ಉತ್ತರದವರು ತಾವು ಮಾಡಲಪೇಕ್ಷಿಸಿದುದನ್ನೆಲ್ಲಾ ಹೇಳಿಬಿಟ್ಟಿದ್ದರು. ಅವರೂ ಲಿಂಕನ್ನನೂ ಸೇರಿ ಕೈಮಾಡಿದರೆ ದಾಸ್ಯಕ್ಕೆ ಉಳಿಗಾಲವಿರದು. ಆದರೆ ಎಷ್ಟೊಂದು ಬದಲಾವಣೆಗಳನ್ನು ನಡೆಯಿಸಿದರೂ ಅವು ನಾಲ್ಕೈದು ವರ್ಷಗಳ ಮೇಲೆ ಜನಗಳೂ ಸರ್ಕಾರವೂ ಬದಲಾಯಿಸಲಾಗಿ ತೇಲಿಹೋಗದಿರುವುವೇ ಎಂದು ಕೇಳಬಹುದು. ಆದರೆ ಕಾಲವು ಹಿಂದಕ್ಕೆ ಹೆಜ್ಜೆ ಹಾಕುತ್ತಿರಲಿಲ್ಲ. ಸ್ಥಿತಿಯು ಯಾವ ಆಕಾರವನ್ನು ಹೊಂದುವುದೋ ಹೇಳುವುದಕ್ಕಾಗುತ್ತಿರಲಿಲ್ಲ. ಆದ ಬದಲಾವಣೆಗಳನ್ನು ರದ್ದುಮಾಡಿ ಹಿಂದಿದ್ದ ಸ್ಥಳಕ್ಕೆ ಬರುವುದು ಸಾಗದ ಮಾತು. "ನಾವು ಪ್ರತ್ಯೇಕವಾಗುವುದನ್ನು ನಿಶ್ಚಯಿಸುವುದಕ್ಕೆ ಬದಲಾಗಿ ಒಂದು ಗೂಡಿದ್ದರೆ ನಮ್ಮ ಆಚರಣೆಯನ್ನು ಧಿಕ್ಕರಿಸುವವರ ಸಹವಾಸದಿಂದ ನಮಗೆ ಅಧಃಪತನವೇ ಪರಿಣಾಮವಾಗುವುದು" ಎಂದು ದಕ್ಷಿಣದವನು ಹೇಳಿದನು. "ಈ ಸರ್ಕಾರವು ಅರ್ಧ ಪರಾಧೀನವಾಗಿಯೂ ಅರ್ಧ ಸ್ವತಂತ್ರವಾಗಿಯೂ ಬಹಳ ದಿನಗಳವರೆಗೆ ಬಾಳಲಾಗದು ; ಇಬ್ಬರು ಯಜಮಾನರ ಸೇವೆಯನ್ನು ಮಾಡುವುದು ಎಂದಿಗೂ ಸಾಧ್ಯವಲ್ಲ" ಎಂದು ಲಿಂಕನ್ನನು ಹೇಳಿದನು. ದಾಸ್ಯವೃತ್ತಿಯನ್ನು ಆಚರಣೆಯಲ್ಲಿಟ್ಟುಕೊಂಡೂ ಉತ್ತರದ ಇಷ್ಟವನ್ನು ನಡೆಯಿಸುವುದಕ್ಕಾಗುತ್ತಿರಲಿಲ್ಲ. ಆದಕಾರಣ ಮುಂದಿನ ದುರ್ದಶೆಗಳನ್ನೆಲ್ಲಾ ತಪ್ಪಿಸಿಕೊಳ್ಳುವುದಕ್ಕಾಗಿ ಅವರು ವಿಭಾಗವಾಗಲು ನಿಶ್ಚಯಿಸಿದರು.

ದಕ್ಷಿಣವು ತಪ್ಪು ದಾರಿಯಲ್ಲಿ ಹೊರಟಿದ್ದಿತು. ಯುದ್ಧಮಾಡಿ ಅದನ್ನು ಸರಿಯಾದ ದಾರಿಗೆ ತರುವುದು ತಕ್ಕ ಉಪಾಯವಲ್ಲವೆಂದು ಕೆಲವರು ಹೇಳಬಹುದು. ಆದರೆ ಉತ್ತರದವರು ಶಸ್ತ್ರವನ್ನು ಗ್ರಹಿಸುವ ಮೊದಲು ತಾವು ಮಾಡುತ್ತಿರುವುದು ಯುಕ್ತವೇ ಎಂದು ಬಹಳವಾಗಿ ಪರ್ಯಾಲೋಚಿಸಿದರು. ದಕ್ಷಿಣದವರು ಹಾಗೆ ಪರ್ಯಾಲೋಚಿಸಲಿಲ್ಲ. ವಿಭಾಗವು ಉತ್ತರಕ್ಕೆ ಸಮ್ಮತವಾಗಿದ್ದು ದಕ್ಷಿಣದವರು ಬೇರೆ ಹೋಗಿದ್ದಪಕ್ಷದಲ್ಲಿ ಉತ್ತರದ ಜನರೂ ಬೇರೆಯೊಂದು ಸರ್ಕಾರವನ್ನೇರ್ಪಡಿಸಿ

ಕೊಂಡು ಸ್ವಾತಂತ್ರ್ಯದಿಂದ ಬಾಳುವುದು ಕಷ್ಟವಾಗುತ್ತಿರಲಿಲ್ಲ—ಯುದ್ಧವು ತಪ್ಪುತ್ತಿದ್ದಿತು. ಆ ಸನ್ನಿವೇಶದಲ್ಲಿ ಅದು ಸಹಜವೇ ಆಗುತ್ತಿದ್ದಿತು. ದಕ್ಷಿಣವು ದಾಸ್ಯದಲ್ಲಿ ಅವಲಂಬನವನ್ನು ಹೊಂದಿ ಅಲ್ಲಿಯ ಸಂಸ್ಥಾನಗಳು ದಾಸ್ಯದ ಸಲುವಾಗಿ ಒಟ್ಟುಗೂಡಿ ನಿಲ್ಲುತ್ತಿದ್ದುವು. ಇತರ ರಾಜ್ಯಗಳು ಈ ಹೊಸರಾಜ್ಯದ ಆಚರಣೆಗಳನ್ನೂ ಪ್ರಚಾರದಲ್ಲಿದ್ದ ಪದ್ಧತಿಗಳನ್ನೂ ಗೌರವಿಸಬೇಕಾಗಿದ್ದಿತು. ಉತ್ತರವು ಮಾತ್ರ ಧಿಕ್ಕರಿಸುವಹಾಗಿರಲಿಲ್ಲ. ಅಥವಾ ನಮಗೆ ಅದರೊಡನೆ ಸಂಸರ್ಗವೇ ಬೇಡವೆಂದು ಹೇಳುವಹಾಗಿರಲಿಲ್ಲ. ಕಾಲಕ್ರಮದಲ್ಲಿ ಎರಡು ರಾಜ್ಯಗಳ ಇಷ್ಟಾನಿಷ್ಟಗಳಲ್ಲಿ ವಿರೋಧವೆದ್ದು ಜಗಳವು ನಿಶ್ಚಯವಾಗುತ್ತಿದ್ದಿತು. ದಾಸ್ಯವನ್ನು ಹರಡಲು ದಕ್ಷಿಣದವರಿಗೆ ಬಹಳ ಆಸೆಯಿದ್ದಿತು. ಆದಕಾರಣ ಯಾವ ಸಣ್ಣದೊಂದು ಮಾತಿಗೂ ಕಿಡಿಹಾರಿ ಬೆಂಕಿ ಹತ್ತುತ್ತಿದ್ದಿತು. ಅವುಗಳನ್ನು ವ್ಯವಸ್ಥೆಮಾಡಲಾಗುತ್ತಿರಲಿಲ್ಲ. ಹೀಗಿರುವಲ್ಲಿ ದಕ್ಷಿಣವು ಪ್ರತ್ಯೇಕವಾಗುವುದನ್ನು ನೋಡುತ್ತ ನೋಡುತ್ತ ಸುಮ್ಮನಿರುವುದು ಸರಿಯಲ್ಲ. ಜನಾಂಗವು ಒಟ್ಟಾಗಿ ನಿಲ್ಲುತ್ತಿರಲಿಲ್ಲ. ಸಣ್ಣದೊಂದು ನೆಪಸಿಕ್ಕಿದರೂ ಸಾಕು, ಸಂಸ್ಥಾನಗಳು ಒಂದೊಂದಾಗಿ ಕಳಚಿಕೊಳ್ಳುತ್ತಿದ್ದುವು. ಸಂಯೋಗದ ಕೈ ಹಿಂದೆ ಬೀಳುತ್ತಿದ್ದಿತು. ಆಬಳಿಕ ಯಾವ ತತ್ವವನ್ನು ಆಧಾರವಾಗಿಟ್ಟುಕೊಂಡರೂ ಅದನ್ನು ನಿಲ್ಲಿಸುವುದಕ್ಕಾಗುತ್ತಿರಲಿಲ್ಲ. ಶಾಸನಪದ್ಧತಿಯನ್ನು ಚೆನ್ನಾಗಿ ಮುಂದಟ್ಟುಮಾಡಿ ತಿಳಿದವರಿಗೆ ಮಾತ್ರ, ಉತ್ತರಭಾಗವು ಯಾವುದರ ಸಲುವಾಗಿ ಯುದ್ಧಮಾಡುವುದಕ್ಕೂ ಸಿದ್ಧವಾಯಿತೆಂಬುದು ಅರ್ಥವಾಗುತ್ತದೆ. ಉತ್ತರದವರು ದಾಸ್ಯವನ್ನು ನಾಶಮಾಡುವುದಕ್ಕಾಗಲೀ ಇದ್ದ ಭೂಮಿಯನ್ನು ಕಳೆದುಕೊಳ್ಳಲಾಗದ ಯೋಚನೆಗಾಗಲೀ ಯುದ್ಧಮಾಡಿದರೆಂದು ಹೇಳುವುದು ಸರ್ವಥಾ ತಪ್ಪು. ಅವರಿಗೆ ಅಕ್ಕಿಯ ಮೇಲೆ ಆಸೆಯೂ ನೆಂಟರ ಮೇಲೆ ಪ್ರೀತಿಯೂ ಒಟ್ಟಿಗೆ ಇರಲಿಲ್ಲ. ಸಂಯೋಗವು ಸರ್ವಸ್ವವಾಗಿದ್ದಿತು. ಅಂತಹ ಸಂಯೋಗವನ್ನು ಉಳಿಸಿಕೊಳ್ಳುವುದಕ್ಕಾಗಿ ಜೀವವನ್ನು ತೆತ್ತರು. ಆದರೆ, ದಾಸ್ಯದ ದೆಸೆಯಿಂದ ಸಂಯೋಗವು ಅಪಾಯಕ್ಕೊಳಗಾದುದರಿಂದ ಅವರು ಪರೋಕ್ಷವಾಗಿ ದಾಸ್ಯದ ಮೇಲೆಯೂ ಯುದ್ಧಮಾಡಬೇಕಾಯಿತು. ಅವರಲ್ಲಿ ಕೆಲವರಿಗೆ ನಡೆಯುತ್ತಿರುವ ಪ್ರಸಂಗವೇನು, ಅದರೊಳಗೆ ಅಡಗಿರುವ ತತ್ವಗಳೇನು, ಪ್ರಸಂಗದ ಪರಿಣಾಮವೇನು, ಎಂಬ ಅಂಶಗಳೆಲ್ಲವೂ ಸ್ಪಷ್ಟವಾಗಿದ್ದುವು. ಆದರೆ ಪ್ರಜಾಸಾಮಾನ್ಯಕ್ಕೆ ಅಷ್ಟು ಅರ್ಥವಾಗದಿದ್ದರೂ ಕೂಡ ವಿಚಾರವು ಅನುಭವಸಿದ್ಧನಾದ ರೀತಿಯಲ್ಲಿ ಸಂಯೋಗವನ್ನು ರಕ್ಷಿಸಬೇಕೆಂಬ ಅಂಶವು ಮಾತ್ರ ಗೊತ್ತಿದ್ದಿತು. ಆದಕಾರಣವೇ ಉತ್ತರದವರು ಯುದ್ಧಮಾಡುವುದಕ್ಕೆ ಹಿಂದೆಗೆಯಲಿಲ್ಲ. ಯುದ್ಧಕಾಲದಲ್ಲಿಯೂ ಕೂಡ ಹಿಂದೆಗೆಯಲಿಲ್ಲ.

ಅಮೆರಿಕದ ಸರ್ಕಾರವು ಪ್ರಜೆಗಳಿಂದ ಪ್ರಜೆಗಳಿಗೋಸ್ಕರ ಏರ್ಪಾಡಾದರೂ, ಪ್ರಜೆಗಳು ಸ್ವೇಚ್ಛಾಚಾರಿಗಳಾದರೆ ಅವರನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಸರ್ಕಾರದ ಕರ್ತವ್ಯವಾಗಿದ್ದಿತು. ಇಂತಹ ಆಪತ್ಕಾಲದಲ್ಲಿ ಸರ್ಕಾರವು ದುರ್ಬಲವೆನ್ನಿಸಿಕೊಂಡು, ಅಧಿಕಾರವನ್ನು ಹಸ್ತಗತಮಾಡಿಕೊಂಡು ಅತ್ಯಲ್ಪಸಂಖ್ಯೆಯುಳ್ಳ ಪಂಗಡ

ವೊಂದು ದಂಗೆಯೇಳುವುದೇ ಮೊದಲಾದ ಅತ್ಯಾಚಾರವನ್ನು ನಡೆಯಿಸಿದ್ದಭಾಗದಲ್ಲಿ, ಅಮೆರಿಕದಲ್ಲಿ ಪ್ರಚಾರದಲ್ಲಿದ್ದಂತಹ ಶಾಸನಪದ್ಧತಿಯನ್ನೇರ್ಪಡಿಸುವುದರಲ್ಲಿ ಮೂಲ ಕಾರಣವಾಗಿ ಯಾವ ಚರಮೋದ್ದೇಶವು ಅಡಗಿದ್ದಿತೋ ಅದು ನಿಷ್ಫಲವಾಗುತ್ತಿದ್ದಿತು. ದಕ್ಷಿಣದವರು ಈ ವಿಚಾರಗಳನ್ನು ಮನಸ್ಸಿಗೆ ತಂದುಕೊಳ್ಳದೆ ತಪ್ಪುದಾರಿಯನ್ನು ಹಿಡಿದು ಹೊರಡುತ್ತಿದ್ದುದನ್ನು ನೋಡಿ ಲಿಂಕನ್ನನಿಗೆ ಬಹಳ ವ್ಯಥೆಯಾಯಿತು. "ಪ್ರಜೆಗಳ ಸ್ವೇಚ್ಛಾಚಾರವನ್ನು ಅಡಗಿಸಿ ಅವರನ್ನು ವಶದಲ್ಲಿಟ್ಟುಕೊಳ್ಳಲಾರದ ಸರ್ಕಾರವು ತಾನು ಭದ್ರವಾಗಿ ನಿಂತುಕೊಳ್ಳಬಲ್ಲದೇ ಎಂಬುದು ದೊಡ್ಡ ಸಂದೇಹ ವಾಗಿದೆ" ಎಂದನು. ಅವನ ದೇಶಪ್ರೀತಿಯು ಗಾಢವಾದುದು. ಜನಗಳಿಗೆ ಉಪಕಾರಮಾಡಬೇಕೆಂಬುದು ಅವನ ಮುಖ್ಯ ಆಶಯವಾಗಿದ್ದಿತು. ಭಾಷಣಗಳ ಲ್ಲಿಯೂ ಬರೆಯುತ್ತಿದ್ದ ಕಾಗದಪತ್ರಗಳಲ್ಲಿಯೂ ಅದಕ್ಕೆ ನಿದರ್ಶನವು ಅನೇಕವಾಗಿ ರುವುದು. ಅವನು, ಮುಂದೆ, ವಾಷಿಂಗ್ಟನ್ನನ್ನು ಕುರಿತು ಹೊರಟು ಮಾರ್ಗದಲ್ಲಿ ಫಿಲೆಡೆಲ್ಫಿಯದ "Hali of Independence" [1] ಎಂಬ ಕಟ್ಟಡದಲ್ಲಿ ಉಪ ನ್ಯಾಸಮಾಡುತ್ತ ಹೀಗೆಂದನು: "ನನ್ನ ಹೃದಯದಲ್ಲಿ, ಈ ನಮ್ಮ ಸ್ವಾತಂತ್ರ್ಯ ಪ್ರಕಟನೆಯ ದೆಸೆಯಿಂದ ಹುಟ್ಟಿ ರಾಜ್ಯಭಾರಕ್ಕೆ ಸಂಬಂಧಪಡದಿರುವ ಅಭಿಪ್ರಾಯ ಗಳೇ ಇಲ್ಲ. ಸ್ವಾತಂತ್ರ್ಯಪ್ರಕಟನೆಯನ್ನು ಬರೆದು ಅನುಸರಿಸಿ ಆ ಕಾರಣದಿಂದ ನಮ್ಮ ಪೂರ್ವಿಕರು ಎಷ್ಟೋ ವಿಪತ್ತುಗಳಿಗೆ ಗುರಿಯಾದುದು ಜ್ಞಾಪಕಕ್ಕೆ ಬರುತ್ತದೆ. ಈ ಸ್ವಾತಂತ್ರ್ಯವನ್ನು ಸಾಧಿಸುವುದಕ್ಕಾಗಿ ಸೈನ್ಯದ ಹುದ್ದೇದಾರರೂ ಯೋಧರೂ ಅನುಭವಿಸಿದ ಕಷ್ಟಗಳನ್ನು ಎಷ್ಟೋ ತಡವೆ ಸ್ಮರಿಸಿಕೊಂಡಿದ್ದೇನೆ. ಅವರು ಹೀಗೆ ಮಾಡಿದುದಕ್ಕೂ ಅಂದಿನಿಂದ ಇದುವರೆಗೆ ಐಕಮತ್ಯವು ನಿರಾತಂಕ ವಾಗಿ ನಡೆದುಕೊಂಡುಬಂದುದಕ್ಕೂ ಕಾರಣವಾದ ಜೀವರಸವು ಯಾವುದೆಂದು ನನ್ನಲ್ಲಿ ನಾನು ಪ್ರಶ್ನೆಹಾಕಿಕೊಂಡೆನು. ಇಂಗ್ಲೆಂಡಿನ ಸರ್ಕಾರವನ್ನು ನಿರಾಕರಿಸಿ ಪ್ರತ್ಯೇಕವಾದ ಮಾತ್ರಕ್ಕೆ ನಮಗೆ ಸ್ವಾತಂತ್ರ್ಯವು ಬರಲಿಲ್ಲ—ಅದು ಲಭ್ಯವಾದುದು ಸ್ವಾತಂತ್ರ್ಯಪ್ರಕಟನೆಯಲ್ಲಿ ಅಡಕವಾಗಿರುವ ನಮ್ಮ ಪೂರ್ವಿಕರ ಆಶಯದ ಸಹಾಯದಿಂದ. ಸ್ವಾತಂತ್ರ್ಯವು ಶಾಶ್ವತವಾಗಿ ನಿಲ್ಲಬೇಕೆಂದು ಅವರು ಅಪೇಕ್ಷಿಸಿ ದರು." ಪ್ರಜೆಗಳಿಗೆ ಸ್ವಾತಂತ್ರ್ಯವನ್ನುಂಟುಮಾಡಿಕೊಟ್ಟುದು ಒಗ್ಗಟ್ಟನಿಂದಿರುವ ರಾಜ್ಯದಲ್ಲಿ ಒಡಕನ್ನು ತರುವುದಕ್ಕಲ್ಲ. ದುಷ್ಟವಾದ ಆಚಾರವನ್ನು ಹೆಚ್ಚಿಸಿ ದುರ್ಗುಣಗಳನ್ನು ಕಲಿಯುವುದಕ್ಕಲ್ಲ. ವಾಷಿಂಗ್ಟನ್ ಮೊದಲಾದ ಪೂರ್ವಿಕರಿಗೆ ಅಂತಹ ಆಶಯವು ಸ್ವಪ್ನದಲ್ಲಿಯೂ ಇರಲಿಲ್ಲ.

———

[1] ಈ ಪ್ರಾಸಾದದಲ್ಲಿಯೇ ಪೂರ್ವದಲ್ಲಿ ಅಮೆರಿಕದವರು ತಮ್ಮ "Declaration of Independence" ನ ಪತ್ರವನ್ನು ಬರೆದು ರುಜುಹಾಕಿದರು.

# ೭ನೆಯ ಅಧ್ಯಾಯ

## ನೊವೆಂಬರ್ ತಿಂಗಳಿಂದ ವರ್ಷಾಂತದವರೆಗೆ

ಮೇಲೆ ಹೇಳಿರುವ ಕಾರಣಗಳಿಲ್ಲದಿದ್ದರೆ ಯುದ್ಧವು ಒದಗುತ್ತಿರಲಿಲ್ಲ.

ನೊವೆಂಬರ್ ತಿಂಗಳಲ್ಲಿ ಚುನಾಯಿಸಲ್ಪಟ್ಟರೂ ಪ್ರೆಸಿಡೆಂಟನಾದವನಿಗೆ ಮುಂದಿನ ವರ್ಷದ ಮಾರ್ಚಿ ತಿಂಗಳವರೆಗೂ ಪದವಿಯ ಹೆಸರು ಮಾತ್ರ ಬರುತ್ತಿದ್ದಿತು, ಅಧಿಕಾರವು ಬರುತ್ತಿರಲಿಲ್ಲ. ಆದ್ದರಿಂದ ವಾಸ್ತವವಾಗಿ ಬುಕೆನನ್ನನೇ ಅಧಿಕಾರದಲ್ಲಿ ಉಳಿದನು. ಆತನು ದಕ್ಷಿಣದಿಂದ ಬಂದವನಾಗಿ ದಕ್ಷಿಣದಲ್ಲಿಯೇ ಅಭಿಮಾನವುಳ್ಳವನಾದರೂ ಪ್ರತ್ಯೇಕವಾಗಲು ಅಭಿಮತವುಳ್ಳವನಾಗಿರಲಿಲ್ಲ. ಅವನ ಮಂತ್ರಿಸಭೆಯಲ್ಲಿ ಅನೇಕರು ವಿಭಾಗವಾಗಲು ಅಪೇಕ್ಷಿಸಿದರು. ಆದರೆ ಸರ್ಕಾರವು ದಕ್ಷಿಣದವರದಾದರೂ ಉತ್ತರದವರ ಕಡೆಗೆ ಸೇರಿ ಸಂಯೋಗವನ್ನು ಕಾಪಾಡಲು ನಿಶ್ಚಯಿಸಿದ್ದಿತು. ಈ ನಡುವೆ ಲಿಂಕನ್ನನಿಗೆ ಕೆಲಸವೇನೂ ಇರಲಿಲ್ಲ. ಅವನು ದೇಶಕಾಲವನ್ನು ಸೂಕ್ಷ್ಮದೃಷ್ಟಿಯಿಂದ ನೋಡಿಕೊಳ್ಳುತ್ತ ಮುಂದಿನ ಕಾರ್ಯಕ್ರಮವನ್ನು ಗೊತ್ತುಮಾಡಿಕೊಳ್ಳುತ್ತಿದ್ದನು.

ಪ್ರೆಸಿಡೆಂಟನನ್ನು ಚುನಾಯಿಸಿದುದು ನೊವೆಂಬರ್ ಆರನೆಯ ತಾರೀಖಿನಲ್ಲಿ. ನಾಲ್ಕುದಿನಗಳ ತರುವಾಯ ದಕ್ಷಿಣ ಕೆರೊಲಿನದ ವಿಧಿಸ್ಥಾಪಕಸಭೆಯು (Legislature) ಹೊಸದೊಂದು ಸಮ್ಮೇಳನವನ್ನು ನಡೆಯಿಸಿ ವಿಭಾಗವಾಗುವ ವಿಚಾರವನ್ನು ಒಂದು ನಿರ್ಣಯಕ್ಕೆ ತಂದಿತು. ಆ ಸಂಸ್ಥಾನದ ಪ್ರಜೆಗಳು ಉತ್ಕಂಠಿತರಾಗಿ ನಿರ್ಣಯವನ್ನು ನಿರೀಕ್ಷಿಸಿದರು. ಡಿಸೆಂಬರ್ 20ನೆಯ ತಾರೀಖಿನಲ್ಲಿ "ವಿಭಾಗದ ನಿಬಂಧನೆ"ಯು ಪ್ರಕಟವಾಯಿತು. ನಿಬಂಧನೆಯಂತೂ ಆಗಿಹೋಯಿತು. ವಿಭಾಗವಾಗುವುದರಲ್ಲಿ ಸಂಶಯವಿಲ್ಲ. ಆದರೆ ದಕ್ಷಿಣ ಕೆರೊಲಿನವು ಏಕಾಕಿಯಾಗಿ ನಿಲ್ಲುವುದೇ ಅಥವಾ ಇತರ ಸಂಸ್ಥಾನಗಳು ಹಿಂಬಾಲಿಸಿ ಅದಕ್ಕೆ ನೆರವಾಗುವುವೆ? ಇತರ ಸಂಸ್ಥಾನಗಳು ಸುಮ್ಮನಿರಲಿಲ್ಲ. ದಕ್ಷಿಣ ಕೆರೊಲಿನದ ಪ್ರಯತ್ನವನ್ನು ನೋಡಿ ತಾವೂ ವಿಯುಕ್ತವಾಗಬೇಕೇ ಬೇಡವೇ ಎಂಬುದನ್ನು ಕುರಿತು ಯೋಚಿಸಿದುವು. ಆ ರಾಜ್ಯವು ಬೇರೆಯಾಗುವುದನ್ನು ಪೂರ್ವಭಾವಿಯಾಗಿಯೇ ಊಹಿಸಬಹುದಾಗಿದ್ದರೂ ಕೂಡ ಈಗ ಅದು ಪ್ರತ್ಯೇಕವಾದುದು ಕಿವಿಗೆ ಬೀಳಲಾಗಿ ಉತ್ತರದ ಎದೆ ಝುಗ್ಗೆಂದಿತು. ಮೇಲೆ ಹೇಳಿರುವ ಹಾಗೆ, ದಕ್ಷಿಣದಲ್ಲಿ, ತಮಗೆ ಸೇರಿದ ಹಕ್ಕುಗಳನ್ನು ಬಿಟ್ಟುಕೊಡಲು ಜನಗಳಿಗೆ ಇಷ್ಟವಿರಲಿಲ್ಲ; ವಿಭಾಗವಾಗುವುದಕ್ಕೆ ಹಕ್ಕು ಸಂಪೂರ್ಣವಾಗಿ ಉಂಟೆಂಬ ಭಾವನೆಯಿದ್ದಿತು. ಸರ್ವಸ್ವವೇ ಹೋದರೂ ಸಂಯೋಗವನ್ನು ತ್ಯಜಿಸಿಹೋಗಕೂಡದೆಂಬ ಸಂಯೋಗಪ್ರೀತಿಯೇನೂ ಇರಲಿಲ್ಲ; ಆದರೆ ಬೇರೆಯಾಗುವುದಕ್ಕೆ ಮಾತ್ರ

ಬಹಳ ಮಂದಿಗೆ ಬೇಡವಾಗಿದ್ದಿತು. ಹಾಗೆ ತ್ಯಜಿಸಿಹೋಗುವುದು ಯುಕ್ತವೇ ಎಂಬ ಸಂದೇಹವು ತೋರಿದ್ದಿತು. ಸಂಯೋಗದಲ್ಲಿ ಪ್ರೀತಿಯನ್ನಿಡುವುದು ನ್ಯಾಯ ವೆಂದು ಕೆಲವರು ಒತ್ತಿ ಹೇಳಿದರು. ದಾಸ್ಯದ ವಿಷಯದಲ್ಲಿದ್ದ ಚಿತ್ತವೈಷಮ್ಯವು ಹಿಂದುಳಿಯಿತು. ಯಾವುದಾದರೊಂದು ಸಂಸ್ಥಾನವು ಬೇರೆ ಹೋಗುವುದನ್ನಾ ಗಲೀ ದಂಗೆಯೇಳುವುದನ್ನಾಗಲೀ ಮಾಡಿದರೆ ಮುಂದಿನ ಉಪಾಯವೇನೆಂಬುದನ್ನು ಎಲ್ಲರೂ ಆಲೋಚಿಸಲಾರಂಭಿಸಿದರು. ಅಭಿಪ್ರಾಯಗಳು ಭಿನ್ನವಾದುವು. ಗಡಿ ಯಲ್ಲಿದ್ದ ಹಲವು ಸೀಮೆಗಳಲ್ಲಿ ಉತ್ತರವೂ ದಕ್ಷಿಣವೂ ಬೆರೆದಿದ್ದುವು. ಅವುಗಳನ್ನು ಯಾವ ಪಂಗಡಕ್ಕೂ ಸೇರಿಸುವುದಕ್ಕಾಗುತ್ತಿರಲಿಲ್ಲ. ಅಲ್ಲಿನ ಪ್ರಜೆಗಳು ಗುಟ್ಟಾ ಗಿಯೂ ಬಹಿರಂಗವಾಗಿಯೂ ಸಭೆಸೇರಿ ಹಗಲುರಾತ್ರಿಯೆನ್ನದೆ ಚರ್ಚಿಸಿದರು. ಸಭೆಸಭೆಗೆ ಸಂಧಿವಿಗ್ರಹಗಳು ಓಡಾಡಿದುವು. ಕೊನೆಗೆ, ಡಿಸೆಂಬರ್ ತಿಂಗಳಲ್ಲಿ ಸೇರಿದ ಕಾಂಗ್ರೆಸ್ ಸಭೆಯು ವಾದಮಾಡುವವರೊಳಗೆ ಹೊಸಹೊಸದಾಗಿ ಗುಂಪು ಗಳನ್ನೇರ್ಪಡಿಸಿ ವಾದವಿವಾದಗಳನ್ನು ಹೂಡಿತು.

ಪ್ರೆಸಿಡೆಂಟನು ಕಾರ್ಯವನ್ನಾರಂಭಿಸಿ ನಿರ್ವಹಿಸಬೇಕಾಗಿದ್ದಿತು. ಮುಂದೆ ಸಂಭವಿಸಬಹುದಾದುದನ್ನು ಗುಣಿಸಿಕೊಂಡು ಆತನು ಯುದ್ಧಕ್ಕೆ ಮೊದಲೇ ಸನ್ನಾಹ ಮಾಡುವುದು ಅತ್ಯವಶ್ಯಕವಾಗಿದ್ದಿತು. ಹಾಗೆ ಮಾಡಿದ್ದರೆ ಉತ್ತರದ ಸೈನ್ಯಗಳಿಗೆ ಅನುಕೂಲವು ಬಹಳವಿರುತ್ತಿದ್ದಿತು. ಬುಕೆನನ್ನನು ಹಾಗೆ ಮಾಡಲಿಲ್ಲ. " ಈ ಕಾರ್ಯದಲ್ಲಿ ಪ್ರವೇಶಿಸಲು ನನಗೆ ಅಧಿಕಾರವಿಲ್ಲ " ವೆಂದು ಯಾವ ವಿಚಾರಕ್ಕಾ ದರೂ ಉತ್ತರ ಹೇಳುತ್ತ ತಟಸ್ಥನಾಗಿದ್ದುಬಿಟ್ಟನು. ಆದರೆ ಈ ಸಮಯದಲ್ಲಿ ದಕ್ಷಿಣವು ಸೋಮಾರಿಯಾಗಿ ಕೂತಿರಲಿಲ್ಲ—ಅವಕಾಶವನ್ನು ನೋಡಿ ಯುದ್ಧಕ್ಕೆ ಅಣಿಮಾಡಿಕೊಂಡಿತು. ಪ್ರೆಸಿಡೆಂಟನು ಸುಮ್ಮನಿರುವುದಕ್ಕೆ ಬದಲಾಗಿ ಸಂಯೋ ಗದ ರಕ್ಷಣೆಯನ್ನು ಮುಂದಿಟ್ಟುಕೊಂಡು ಹೊರಟು, ದಕ್ಷಿಣ ಕೆರೊಲಿನವು ಬೇರೆ ಯಾದ ತತ್ಕ್ಷಣವೇ ಕಾರ್ಯವನ್ನಾರಂಭಿಸಿ ಉತ್ತರದವರಿಗೆ ದಾರಿಯನ್ನು ತೋರಿ ಸಿದ್ದರೆ, ದಕ್ಷಿಣದಲ್ಲಿ ವಿಭಾಗವಾಗಲೊಡಂಬಡದೆ ವಿರೋಧಿಗಳಾಗಿದ್ದವರಿಗೂ ಗಡಿ ಸೀಮೆಯಲ್ಲಿದ್ದುಕೊಂಡು ಹಿಂದುಮುಂದು ನೋಡುತ್ತಿದ್ದ ಪ್ರಜೆಗಳಿಗೂ ಧೈರ್ಯ ಹೇಳಿದಂತಾಗುತ್ತಿದ್ದಿತು. ಪ್ರಾಯಶಃ ಇನ್ನು ಕೆಲವು ಸಂಸ್ಥಾನಗಳು ಸಂಯೋಗವನ್ನು ತ್ಯಜಿಸುತ್ತಿದ್ದುವು. ಆದರೆ ಪರಿಣಾಮವು ಇಷ್ಟು ದುಃಖಾವಹವಾಗುತ್ತಿರಲಿಲ್ಲ. ಸದ್ಯದಲ್ಲಿ ವಿಭಾಗಾಪೇಕ್ಷಿಗಳು ಧೈರ್ಯದಿಂದ ಮುಂದೆ ನುಗ್ಗಿದರು. ಉತ್ತರ ದವರೂ ಸರ್ಕಾರವೂ ಸುಮ್ಮನಿರಲಾಗಿ ತಾವು ಮಾಡುತ್ತಿರುವುದು ನ್ಯಾಯುವಾದು ದೆಂದೂ ತಮ್ಮನ್ನು ತಡೆಯಲು ಅವರಿಗೆ ಶಕ್ತಿಯಿಲ್ಲವೆಂದೂ ಅವರಿಗೆ ನಂಬಿಕೆ ಬಂದಿತು: ಹೊರಟು, ಹಿಂದಡಿಯಿಡಲಾಗದಿರುವವರೆಗೂ ನುಗ್ಗಿದರು. ಅನಾ ಹುತಗಳು ಬರಬಹುದೆಂಬ ಅಂಶವು ಅವರ ಮನಸ್ಸಿಗೆ ಕಾಣಿಸಿಕೊಳ್ಳಲೇ ಇಲ್ಲ. ಅದು ಹಲವರಿಗೆ ಹೊಳೆದಿರಬಹುದು. ಆದರೆ ಅವರು ಸಾವಿರಕ್ಕೊಬ್ಬರು.

ಬುಕೆನನ್ನನು ಯಾವದೊಂದನ್ನೂ ಮಾಡಲಿಲ್ಲ. ಲಿಂಕನ್ನನು ಅಧಿಕಾರವನ್ನು ವಹಿಸಲಾಗಿ ವಿಚಾರವು ದೊಡ್ಡದೊಂದು ಬೆಟ್ಟವಾಗಿ ನಿಂತಿತು. ದಕ್ಷಿಣ ಕೆರೊ

ಲಿನದ ಪ್ರವರ್ತನೆಯನ್ನು ದಂಗೆಯೆಂದು ಭಾವಿಸಿ ಆ ಕೂಡಲೇ ಅಡಗಿಸುವುದಕ್ಕಾ ಗುತ್ತಿರಲಿಲ್ಲ. ಹಾಗೆ ದಂಡನ್ನೂ ಸರ್ಕಾರದ ಕಾನೂನುಗಳನ್ನೂ ತೆಗೆದುಕೊಂಡು ಹೊರಟಿದ್ದರೆ ಆ ಸಂಸ್ಥಾನದ ಜೊತೆಗೆ ದಕ್ಷಿಣದಲ್ಲಿದ್ದ ಇತರ ಸಂಸ್ಥಾನಗಳೂ ಸೇರಿ ಕೊಂಡು ಬೆಂಬಲವಾಗಿ ನಿಲ್ಲುತ್ತಿದ್ದುವು. ಉತ್ತರವು ಸಮಾಧಾನಮಾಡಿಕೊಳ್ಳಲು ಇಷ್ಟಪಡುತ್ತಿದ್ದಿತು. ಆದರೆ ಈಗ ಅದರ ಪ್ರಯತ್ನವೆಲ್ಲಾ ನಿಷ್ಪ್ರಯೋಜಕವಾಗಿ ಮುಂದೆ ಸರ್ಕಾರದ ಹೆಸರೇ ತೊಡೆದುಹೋಗುತ್ತಿದ್ದಿತು. ಒಂದು ಜಾತಿಯವರಲ್ಲಿ ಇಬ್ಬರು ಪರಸ್ಪರ ಜಗಳನಾಡುತ್ತಿದ್ದರೂ ಮತ್ತೊಂದು ಜಾತಿಯವನು ಬಂದು ಅವರ ಜಾತಿಯನ್ನು ನಿಂದಿಸಲಾರಂಭಿಸಿದರೆ ಇಬ್ಬರೂ ಒಂದಾಗಿ ಎದುರುಬೀಳುವರು. ಅದೇ ಪ್ರಕಾರವಾಗಿ ದಕ್ಷಿಣದ ಸಂಸ್ಥಾನಗಳು ತಮ್ಮಲ್ಲಿ ಯಾವ ವೈಷಮ್ಯವಿದ್ದರೂ ಅದನ್ನು ಮರೆತು ಹೊಂದಿಕೊಂಡು ಉತ್ತರಕ್ಕೆ ಅಭಿಮುಖವಾಗಿ ನಿಲ್ಲುತ್ತಿದ್ದುವು. ಉತ್ತರವು ದೂರದೂರವಾಗುತ್ತಿದ್ದಿತು. ಸಿಟ್ಟೆಬ್ಬಿಸುವಂತಹ ಅಥವಾ ಒರಟಾದ ಮಾರ್ಗಗಳನ್ನು ಅನುಸರಿಸಲು ಸಂಯೋಗದ ಸರ್ಕಾರಕ್ಕೆ ಇಷ್ಟವಿರಲಿಲ್ಲ. ಆದರೆ ಸ್ಥಿತಿಯು ಮಿತಿಯನ್ನು ಮೀರುವಂತಹದಾದರೆ ಅದು ಸಮಸ್ತಶಕ್ತಿಯನ್ನೂ ಉಪ ಯೋಗಿಸಿ ದಕ್ಷಿಣ ಕೆರೊಲಿನವು ವಿಧೇಯವಾಗಿರುವಂತೆ ಮಾಡಬಹುದಾಗಿದ್ದಿತು. ಸರ್ಕಾರಕ್ಕೂ ಆ ಸಂಸ್ಥಾನಗಳಿಗೂ ಸಂಬಂಧವು ತೀರ ಸ್ವಲ್ಪವಾಗಿದ್ದಿತು. ಒಂದೊಂದು ಸಂಸ್ಥಾನದಲ್ಲಿಯೂ ಆ ಸರ್ಕಾರದಿಂದ ಏರ್ಪಾಡಾದ ನ್ಯಾಯಸ್ಥಾನಗಳಿದ್ದುವು. ಆದರೆ ಅಲ್ಲಿನ ಪಂಚಾಯಿತರನ್ನು ನಮ್ಮ ಕಡೆಗೆ ಸೇರಬೇಕು, ಆಕಡೆಗೆ ಹೋಗ ಬೇಕು ಎಂದು ಮೊದಲಾಗಿ ಬಲಾತ್ಕಾರಮಾಡಲಾಗುತ್ತಿರಲಿಲ್ಲ. ನ್ಯಾಯಸ್ಥಾನದಲ್ಲಿ ಪಂಗಡಗಳನ್ನು ಕಲ್ಪಿಸುವುದು ನಡೆಯದ ಮಾತು. ಎರಡನೆಯದಾಗಿ ಟಪ್ಪಾಲು ಇಲಾಖೆಯು ಇದ್ದು ಅದರ ಉತ್ಪತ್ತಿಯು ಸರ್ಕಾರಕ್ಕೆ ಹೋಗುತ್ತಿದ್ದರೂ ದಕ್ಷಿಣ ಕೆರೊಲಿನವು ಅದನ್ನು ತಪ್ಪಿಸಲಿಲ್ಲ. ಟಪ್ಪಾಲಿದ್ದುದರಿಂದ ಆ ಸಂಸ್ಥಾನಕ್ಕೆ ಪ್ರಕೃತದಲ್ಲಿ ಬಹಳ ಆನುಕೂಲ್ಯವಿದ್ದಿತು. ದಕ್ಷಿಣದ ಸಂಸ್ಥಾನಗಳ ಅನೇಕ ಪ್ರದೇಶಗಳಲ್ಲಿ ಬಂದರುಗಳೂ ದುರ್ಗಗಳೂ ಇದ್ದು ಸುಂಕವನ್ನೂ ತೆರಿಗೆ ಯನ್ನೂ ವಸೂಲುಮಾಡುತ್ತಿದ್ದುವು. ಈ ಆದಾಯವು ನಿರಾಟಂಕವಾಗಿ ಮೇಲು ಸರ್ಕಾರದ ಖಜಾನೆಯನ್ನು ತಲಪುವಹಾಗೆ ಮಾಡುವುದು ಅವಶ್ಯಕವಾಗಿದ್ದಿತು. ಅಲ್ಲದೆ ದಕ್ಷಿಣದ ಕೆರೊಲಿನದಲ್ಲಿಯೂ ಉಳಿದ ಸ್ಥಳದಲ್ಲಿಯೂ ಇದ್ದ ದುರ್ಗ ಗಳನ್ನು ಬಲಪಡಿಸಿಕೊಂಡು ಮುಂದೆ ದಕ್ಷಿಣವು ದಂಗೆಯೆದ್ದು ಮೇಲೆರಗುವ ಮಾತು ಸಾಗದಂತೆ ಮಾಡುವುದು ಅತ್ಯವಶ್ಯಕವಾಗಿದ್ದಿತು. ಸರ್ಕಾರದ ಸೈನ್ಯ ದಲ್ಲಿ ಅಧಿಪತಿಯಾದವನೂ ಅಧಿಕಾರಿಗಳಾದವರೂ ಈ ಅಂಶವನ್ನು ಬುಕೆನ ನ್ನನಿಗೆ ಒತ್ತಿ ಒತ್ತಿ ಹೇಳಿದರು. ಚಾರ್ಲ್ಸ್‌ಟನ ದುರ್ಗಗಳಿಗೆ ಅಧಿಪತಿಯಾ ಗಿದ್ದ ಮೇಜರ್ ಆಂಡರ್‌ಸನ ಎಂಬಾತನು ಸರ್ಕಾರವು ಈ ಕೆಲಸಗಳಿಗೆ ಮೊದಲು ಗಮನವನ್ನು ಕೊಡಬೇಕೆಂದು ಸೂಚಿಸಿದನು. ಉತ್ತರದ ಪ್ರಜೆಗಳಿಗೂ ಕೂಡ ಇಂತಹ ಏರ್ಪಾಡುಗಳು ಮುಖ್ಯವಾಗಿ ತೋರಿದುವು.

ಪ್ರೆಸಿಡೆಂಟನು ಕಾರ್ಯದಲ್ಲಿ ಕೈ ಹಾಕಲೂ ಇಲ್ಲ; ತನ್ನ ಉದ್ದೇಶವೇನೆಂಬು

ದನ್ನು ತಿಳಿಸಲೂ ಇಲ್ಲ. ಅದಕ್ಕೆ ಬದಲಾಗಿ ದೊಡ್ಡದಾಗಿ ಸಂದೇಶವೊಂದನ್ನು ಕಳುಹಿಸಿದನು. ''ಪ್ರತ್ಯೇಕವಾಗುವುದು ಅಧರ್ಮವಾದ ಪ್ರವರ್ತನೆ. ಆದುದರಿಂದ ಸಂಸ್ಥಾನವು ಬೇರೆಯಾಗುವುದನ್ನು ನಿರೋಧಿಸಲು ಸರ್ಕಾರಕ್ಕೆ ಅಧಿಕಾರವುಂಟು'' ಎಂಬುದನ್ನು ಬುಕೆನನ್ನನು ಸವಿಸ್ತಾರವಾಗಿ ತನ್ನ ಸಂದೇಶದಲ್ಲಿ ಚರ್ಚಿಸಿದ್ದನು. ಈ ಚರ್ಚೆಯಿಂದ ಎಲ್ಲರಿಗೂ ಒಂದು ಭಾವನೆಯು ಹುಟ್ಟಿತು. ಸರ್ಕಾರವು ಬಾಯಲ್ಲಿ ಮಾತನಾಡಬಲ್ಲದು, ಕೈಯಲ್ಲಿ ಮಾತ್ರ ಏನೂ ಹರಿಯದು. ನಿರೋಧ ಮಾಡಲು ಅದಕ್ಕೆ ಅಧಿಕಾರವಿಲ್ಲ— ಎಂದು ದಕ್ಷಿಣದವರು ಹೇಳತೊಡಗಿದರು. ಅಲ್ಲದೆ ಆ ಸರ್ಕಾರದ ಯಾವ ಪ್ರವರ್ತನೆಗಾದರೂ ಅಧಿಕಾರ ಬರುವುದೆ? ಎಂಬ ಸಂದೇಹವೂ ಅಂಕುರಿಸಿತು.

ನೊವೆಂಬರ್ ತಿಂಗಳಿಗೂ ಮಾರ್ಚಿಯಲ್ಲಿ ಲಿಂಕನ್ನನು ಅಧಿಕಾರವನ್ನು ಪಡೆಯುವುದಕ್ಕೂ ನಡುವೆ ಒಂದು ಸಂಗತಿಯು ನಡೆಯಿತು. ಚಾರ್ಲ್‌ಸ್ಟನ್ ದುರ್ಗಗಳಲ್ಲಿ ರೇವಿನೆದುರಿಗೆ ಒಂದು ಸಣ್ಣ ದ್ವೀಪದ ಮೇಲೆ ಸಮ್‌ಟರ್ (Sumter) ಎಂಬ ಸಣ್ಣ ದುರ್ಗವಿರುವುದು. ಈ ದುರ್ಗವನ್ನುಳಿಸಿಕೊಳ್ಳಬೇಕಾದ ಪಕ್ಷದಲ್ಲಿ ತತ್‌ಕ್ಷಣವೇ ಹಡಗುಗಳನ್ನೂ ಸೈನ್ಯವನ್ನೂ ಸಾಮಗ್ರ್ಯಗಳನ್ನೂ ಕಳುಹಿಸಬೇಕೆಂದು ಬುಕೆನನ್ನನಿಗೆ ಮೊದಲೇ ಸಮಾಚಾರವು ಬಂದಿತು. ದಕ್ಷಿಣ ಕರೊಲಿನದ ಪ್ರತಿನಿಧಿಗಳಾಗಿ ಸಭೆಯಲ್ಲಿದ್ದವರು ಆತನ ಬಳಿಗೆ ಹೋಗಿ ಆ ದುರ್ಗಗಳು ದಕ್ಷಿಣ ಕೆರೊಲಿನದ ಭೂಮಿಯೊಳಗಿದ್ದುದರಿಂದ ತಮ್ಮ ಸರ್ಕಾರಕ್ಕೆ ಸೇರಿದವುಗಳೆಂದು ಅರಿಕೆಮಾಡಿಕೊಂಡು, ಆ ದುರ್ಗಗಳಲ್ಲಿನ ದಂಡಿನ ಸ್ಥಿತಿಯು ಬದಲಾವಣೆ ಹೊಂದದೆ ಹೇಗಿರುವುದೋ ಹಾಗೆಯೇ ಇದ್ದಪಕ್ಷದಲ್ಲಿ ತಮ್ಮ ಸರ್ಕಾರವು ಮುಂದೆ ಅವುಗಳಗೊಡವೆಗೆ ಹೋಗದಂತೆ ಮಾಡುವುದಾಗಿ ನಂಬಿಕೆ ಹೇಳಿದರು. ಅಲ್ಲಿನ ಸೈನ್ಯಗಳಿಗೆ ಸಹಾಯವನ್ನು ಕಳುಹಿಸುವುದಿಲ್ಲವೆಂದು ಅವನಿಂದ ಮಾತು ತೆಗೆದುಕೊಳ್ಳಲು ಅವರು ಪ್ರಯತ್ನಿಸಿದರು. ಬುಕೆನನ್ನನು ಮಾತುಕೊಡಲು ಸಮ್ಮತಿಸಲಿಲ್ಲ. ಆದರೆ ತನ್ನ ದಳವಾಯಿಗಳು ಸೂಚಿಸಿದಂತೆ ಬಲಪಡಿಸುವ ವಿಚಾರವನ್ನೂ ನಿರಾಕರಿಸಿಬಿಟ್ಟನು. ಬಲಪಡಿಸಹೋದರೆ ಯುದ್ಧವು ಪ್ರಾರಂಭವೇ ಆಗುವುದೆಂದು ಅವನು ಹಿಂದೆಗೆದನು. ಡಿಸೆಂಬರ್‌ನ ಕೊನೆಯಲ್ಲಿ ಮೇಜರ್ ಆಂಡರ್ಸನ್ನನು, ಶತ್ರುಗಳು ಮೇಲೆ ಬೀಳಬಹುದು, ಇರುವ ಸೈನ್ಯವು ತೀರ ಸಣ್ಣದು ; ಎಲ್ಲಾ ದುರ್ಗಗಳನ್ನೂ ಕಾಪಾಡಿಕೊಳ್ಳುವುದಕ್ಕಾಗುವುದಿಲ್ಲ—ಎಂದು ಯೋಚಿಸಿ ತನ್ನ ಸೈನ್ಯವೆಲ್ಲವನ್ನೂ ಸಮ್‌ಟರ್ ದುರ್ಗದಲ್ಲಿ ಕೂಡಿಸಿದನು. ಆ ದುರ್ಗವು ಅತ್ಯಂತ ದೃಢವಾದುದು. ಆಂಡರ್‌ಸನ್ನನು ತಾನು ಬರುವಾಗ ಮೊದಲು ವಾಸಮಾಡುತ್ತಿದ್ದ ದುರ್ಗವನ್ನು ಹಾಳುಮಾಡಿ ಬಂದನು. ದಕ್ಷಿಣ ಕೆರೊಲಿನದ ಗೌರ್ನರನು ಪ್ರೆಸಿಡೆಂಟನೊಡನೆ ಮಾಡಿಕೊಂಡಿದ್ದ ಗೊತ್ತಿಗೆಗೆ ಇದು ಪ್ರತ್ಯಕ್ಷವಾದ ಧಿಕ್ಕಾರವೆಂದು ನಿಶ್ಚಯಿಸಿ, ಸಂಯೋಗಕ್ಕೆ ಸೇರಿದುದಾಗಿ ಅಲ್ಲಿದ್ದ ಮದ್ದುಗುಂಡುಗಳ ಸಂಗ್ರಹಶಾಲೆಯನ್ನೂ ಸುಂಕದ ಇಲಾಖೆಯನ್ನೂ ಆಕ್ರಮಿಸಿ ಸಂಸ್ಥಾನದ ಸ್ವಂತ ಉಪಯೋಗಕ್ಕೆ ಇಟ್ಟುಕೊಂಡನು. ಹಿಂದೆ ಈ ಸಂಸ್ಥಾನವು ತನ್ನವರನ್ನು ವಾಷಿಂಗ್ಟನ್ನಿಗೆ

ಕಳುಹಿಸಿ, ದುರ್ಗಗಳನ್ನು ಬಿಟ್ಟುಕೊಡುವಂತೆಯೂ ಅದಕ್ಕಾಗಿ ಹಣವನ್ನು ಸಲ್ಲಿಸುವುದಾಗಿಯೂ ಪ್ರಾರ್ಥಿಸಿದ್ದಿತು. ಸರ್ಕಾರವು ಆ ಪ್ರಾರ್ಥನೆಯನ್ನು ಕಿವಿಯ ಮೇಲೆ ಹಾಕಿಕೊಳ್ಳಲೇ ಇಲ್ಲ. ಈಗ ಆಂಡರ್ಸನ್ನನು ತನ್ನ ಸ್ಥಳವನ್ನು ಬದಲಾಯಿಸಿದನು. ನೋಡಿದವರಿಗೆ ಆ ಆಚರಣೆಯು ಸರ್ಕಾರದ ಆಜ್ಞೆಯಿಂದ ನಡೆದುದೆಂಬಂತೆ ತೋರಿತು. ಈ ಮೂಲಕವಾಗಿ ಸರ್ಕಾರವು ತನ್ನ ಯುದ್ಧಾಪೇಕ್ಷೆಯನ್ನು ತೋರಿಸುತ್ತಿದ್ದಿತೆಂತಲೇ ದಕ್ಷಿಣ ಕೆರೊಲಿನವು ಭಾವಿಸಿತು. ಭಾವಿಸಿ ಅದು, ಆಂಡರ್ಸನ್ನನು ಆ ಕೂಡಲೇ ದುರ್ಗವನ್ನು ಬಿಟ್ಟು ಹೊರಟು ಹೋಗುವಂತೆ ಮಾಡಬೇಕೆಂದು ಸರ್ಕಾರವನ್ನು ಕೋರಿತು. ಬುಕೆನನ್ನನು ಮೇಲೂ ಕೆಳಗೂ ನೋಡಿದನು. ಸಂಸ್ಥಾನದ ಕೋರಿಕೆಯನ್ನು ನಡೆಯಿಸಲು ಒಪ್ಪಿಕೊಂಡನು. ಆದರೆ ವಿಘ್ನಬಂದಿತು. ಪ್ರಧಾನಿಯೊಬ್ಬನು ಪ್ರೆಸಿಡೆಂಟನಲ್ಲಿಗೆ ಬಂದು ಒತ್ತಿಒತ್ತಿ ಹೇಳಿದನು. ಆತನ ಕಿವಿಯು ತಿರುಗಿತು. ದುರ್ಗಗಳನ್ನು ಬಿಟ್ಟುಕೊಡುವ ಬದಲು ಆಂಡರ್ಸನ್ನನ ಬೆಂಬಲಕ್ಕಾಗಿ ಸಮ್ಟರ್ ದುರ್ಗಕ್ಕೆ ಸೈನ್ಯವನ್ನು ಕಳುಹಿಸುವುದಾಗಿ ನಿಶ್ಚಯಿಸಿದನು. ಸಹಾಯವನ್ನು ಕಳುಹಿಸಿದರೆ ಅಡ್ಡಿಮಾಡಬೇಕೆಂದು ಸಂಸ್ಥಾನವು ನಿಶ್ಚಯಿಸಿತು. ಅದರಂತೆ, ಇತರರ ಬಲಾತ್ಕಾರಕ್ಕೆ ಸಗ್ಗಿ ಪ್ರೆಸಿಡೆಂಟನು ಕಳುಹಿಸಿದ ಅಲ್ಪಸೈನ್ಯವು ಬಂದರನ್ನು ತಲಪುವುದರೊಳಗೆ ಆ ಸಂಸ್ಥಾನದ ದಂಡು ಬಂದು ಮದ್ದು ಗುಂಡುಗಳನ್ನು ಹಾರಿಸಿ ಹಿಂದಿರುಗಿ ಓಡುವಂತೆ ಮಾಡಿಬಿಟ್ಟಿತು. ಇದು ನಿಜವಾಗಿ ಯುದ್ಧದ ಪ್ರಾರಂಭವಾದರೂ ಜನಗಳ ಮನಸ್ಸು ಅಸ್ವಸ್ಥನಾಗಲಿಲ್ಲ. ಆ ಸಂಸ್ಥಾನವು ಏನೇನು ಮಾಡಿದರೂ ಬುಕೆನನ್ನನು ಮರುಳಾಗಲಿಲ್ಲವೆಂದು ಉತ್ತರವು ಹೇಳಿಕೊಂಡಿತು. ಅದರ ಮನಸ್ಸಿನ ಚಿಂತೆಯು ಬಹಳಮಟ್ಟಿಗೆ ದೂರವಾಯಿತು. ಸರ್ಕಾರಕ್ಕೆ ಯುದ್ಧವನ್ನು ಮಾಡಿಯಾದರೂ ಅಮೆರಿಕವನ್ನು ಒಗ್ಗಟ್ಟಿನಿಂದ ಉಳಿಸಿಕೊಳ್ಳಲು ಮನಸ್ಸಿದೆಯೆನ್ನುತ್ತ ಉತ್ತರದ ಜನಗಳು ಸಂತುಷ್ಟರಾದರು. ಖಜಾನೆಯ ಸೆಕ್ರೆಟರಿಯು ನ್ಯೂ ಆರ್ಲಿಯರ್ನ್ಸ್‌ನಲ್ಲಿದ್ದ ಕೈಕೆಳಗಿನ ಅಧಿಕಾರಿಗೆ, '' ನಮ್ಮ ಅಮೆರಿಕದ ಬಾವುಟವನ್ನು ಯಾವನಾದರೂ ಕೆಳಕ್ಕೆಳೆದು ಹಾಕಿ ಅಗೌರವವನ್ನು ತೋರಿಸುವುದಾದರೆ ಅವನನ್ನು ತತ್ ಕಣವೇ ಗುಂಡಿನಿಂದ ಹೊಡೆದುಹಾಕು ! '' ಎಂದು ತಂತಿಯನ್ನು ಕೊಟ್ಟನು. ಉತ್ಸಾಹವಿಷ್ಟಿದ್ದರೂ ಆಂಡರ್ಸನ್ನನು ನಿಸ್ಸಹಾಯನಾಗಿಯೇ ಉಳಿದನು. ಆಹಾರ ಪದಾರ್ಥಗಳೂ ಬರಲಿಲ್ಲ, ಸಹಾಯಕ್ಕೆ ಇತರ ಸೈನ್ಯವೂ ಬರಲಿಲ್ಲ. ಮುಂದೆ ದಕ್ಷಿಣದ ದಂಡಿನಲ್ಲಿ ಒಂದು ಭಾಗನಾಗಿ ಸೇರಿಕೊಂಡ ಆ ಸಂಸ್ಥಾನದ ಸೈನ್ಯವೊಂದು ಫಿರಂಗಿಗಳನ್ನು ಒದಗಿಸಿಕೊಂಡು ಸಮ್ಟರ್ ದುರ್ಗವನ್ನು ಪುಡಿಪುಡಿಮಾಡಲು ಸನ್ನಾಹಮಾಡಿತು.[1]

ದಕ್ಷಿಣದವರ ಕುಂದುಕೊರತೆಗಳನ್ನು ನಿವಾರಣೆಮಾಡಿ, ಮತ್ತೆ ಯಾವ ಸಂಸ್ಥಾನವೂ ದಕ್ಷಿಣ ಕೆರೊಲಿನವನ್ನು ಅನುಸರಿಸದಂತೆ ಮಾಡಬೇಕೆಂದು ನೊವೆಂ

---

[1] 5 ನೆಯ ಅಧ್ಯಾಯವನ್ನು ನೋಡಬೇಕು.

ಬರ್ ತಿಂಗಳಿಂದಲೂ ಅನೇಕ ಪ್ರಯತ್ನಗಳು ನಡೆದುವು.

ಉತ್ತರದವರಿಗೆ ದಾಸ್ಯದಲ್ಲಿ ದ್ವೇಷವು ದಿನದಿನಕ್ಕೆ ಹೆಚ್ಚಾಯಿತು. ತಮ್ಮನ್ನು ದ್ವೇಷಿಸುವರೆಂದು ದಕ್ಷಿಣದವರಿಗೆ ಅವರನ್ನು ಕಂಡರೆ ಶೀರ ಆಗದಂತಾಯಿತು. ಎರಡು ಭಾಗಗಳಿಗೂ ಮತ್ತೆ ಹೊಂದಿಕೆಯುಂಟಾಗುವಂತೆಯೇ ತೋರಲಿಲ್ಲ. ಪ್ರಕೃತದಲ್ಲಿ ಆ ಅಂಶವು ಎರಡು ಕಡೆಯುವರ ಮನಸ್ಸಿನಿಂದಲೂ ದೂರವಾಗಿ, ಮುಂದೆ ಸಂಯೋಗವನ್ನು ಸೇರಿ ಸಂಸ್ಥಾನಗಳಾಗುವ ರಾಷ್ಟ್ರಗಳಲ್ಲಿ ಪ್ರಚಾರದಲ್ಲಿದ್ದ ದಾಸ್ಯದ ಪರಿಣಾಮವನ್ನು ಕುರಿತು ಎರಡು ಭಾಗಗಳಿಗೂ ವೈಷಮ್ಯವು ಉಕ್ಕಿತು. ತನ್ನ ವಶದಲ್ಲಿರುವ ಅಧಿಕಾರವನ್ನೆಲ್ಲಾ ಉಪಯೋಗಿಸಿ ದಾಸ್ಯವು ವಿಸ್ತರಿಸದಂತೆ ಮಾಡಬೇಕೆಂಬ ಸಂಕಲ್ಪವುಳ್ಳ ಮನುಷ್ಯನು ಪ್ರೆಸಿಡೆಂಟನಾಗಿ ಚುನಾಯಿಸಲ್ಪಟ್ಟದ್ದ ರಿಂದಲೇ ಆ ಪ್ರಶ್ನೆಯು ಮುಂದಕ್ಕೆ ಬಂದಿತು. ಇತರ ವಿಚಾರಗಳೂ ಇದರೊಳಗೆ ಬೆರೆದುವು. ಓಡಿಹೋಗತಕ್ಕ ಗುಲಾಮರ ವಿಷಯದಲ್ಲಿ 1850 ರಲ್ಲಿ, ಕಲ್ಪಿತ ವಾದ ನಿಬಂಧನೆಯು ಸಾಗದಂತೆ ಮಾಡುವುದಕ್ಕಾಗಿ ಉತ್ತರದವರು "Personal Liberty Laws" ಎಂಬ ಕಟ್ಟಳೆಗಳನ್ನು ಆಚರಣೆಗೆ ತಂದಿದ್ದರು. ವಿಭಾಗಾ ಪೇಕ್ಷೆಗೆ ವಿರೋಧಿಗಳಾದ ಕೆಲವರು ದಕ್ಷಿಣದ ಮುಖ್ಯ ಪ್ರಭೃತಿಗಳು ಈ ಕಟ್ಟಳೆ ಗಳನ್ನು ತಪ್ಪಿಸಬೇಕೆಂದು ಕೇಳಿದರು. ಲಿಂಕನ್ನನಿಗೆ ಅವುಗಳನ್ನು ಸ್ವಲ್ಪಮಟ್ಟಿಗೆ ತಿದ್ದಿ ಪ್ರಚಾರದಲ್ಲಿ ಇಡುವುದು ಯುಕ್ತವಾಗಿ ಕಂಡುಬಂದಿತು. ಆದರೂ ಅವನು ತನ್ನ ಪ್ರಕೃತಸ್ಥಿತಿಯಲ್ಲಿ ಸಂಸ್ಥಾನಗಳ ಆಂತರಿಕಕಾರ್ಯಗಳಲ್ಲಿ ಪ್ರವೇಶಿಸಬಾರ ದೆಂದು ತಡೆದುಕೊಂಡು ಸುಮ್ಮನಾದನು. ಒಟ್ಟಿನಲ್ಲಿ ರಿಪಬ್ಲಿಕ್ ಪಂಗಡದವರಿಗೂ ಅದೇ ಅಭಿಪ್ರಾಯವಿದ್ದಿತು. ಕೆಲವು ಸಂಸ್ಥಾನಗಳು ಆ ನಿಬಂಧನೆಗಳಲ್ಲಿ ಅಲ್ಲಲ್ಲಿ ತಿದ್ದುಪಾಟನ್ನು ಮಾಡಲಾರಂಭಿಸಿದುವು. ದಕ್ಷಿಣದಲ್ಲಿ ಅಶಾಂತತೆಯುಂಟಾಗಲು ಇದು ಕಾರಣವಲ್ಲ. ಆಗಿದ್ದ ಪಕ್ಷದಲ್ಲಿ ಬಹುಬೇಗ ನ್ಯೂನತೆಗಳನ್ನು ನಿವಾರಣೆಮಾಡ ಬಹುದಾಗಿದ್ದಿತು. ಲಿಂಕನ್ನನೇ ಮೊದಲಾದ ರಿಪಬ್ಲಿಕ್ ಪಕ್ಷದ ಮುಖಂಡರು ಸಂಸ್ಥಾನದಲ್ಲಿ ಸ್ಥಾಪಿತವಾಗಿರುವ ದಾಸ್ಯವನ್ನು ಉನ್ಮೂಲನಮಾಡಲಪೇಕ್ಷಿಸಲಿಲ್ಲ. ನಿಬಂಧನೆಗಳಲ್ಲಿಯೂ ಶಾಸನಕ್ರಮದಲ್ಲಿಯೂ ಬದಲಾವಣೆಗಳನ್ನು ಮಾಡಬೇಕೆಂದು ಅವರು ಹೇಳಿದರೂ ಸ್ಥಾಪಿತವಾಗಿ ಪೂರ್ವದಿಂದ ನಡೆದುಬಂದಿರುವ ಆಚಾರವನ್ನು ತಪ್ಪಿಸಬೇಕೆಂದು ಹೇಳುತ್ತಿರಲಿಲ್ಲ. ಸಂಸ್ಥಾನದ ಸ್ವಂತವಿಚಾರಗಳಿಗೆ ಕೈಹಾಕ ಕೂಡದೆಂಬುದೇ ಅವರ ಉದ್ದೇಶ. ಲಿಂಕನ್ನನು ಒಂದು ಕಾಗದದಲ್ಲಿ, " ದಕ್ಷಿಣದಲ್ಲಿ ರುವ ಸಜ್ಜನರ ಮೇಲೆ—ಅಲ್ಲಿಯವರನೇಕರು ಅಂಥವರೆಂತಲೇ ನನ್ನ ಭಾವನೆ — — —ನನ್ನ ಆಕ್ಷೇಪಣೆಯೇನೂ ಇಲ್ಲ. ಆದರೆ ಸದ್ಯದಲ್ಲಿ ಉತ್ತರದಕ್ಷಿಣಗಳೆರಡ ರಲ್ಲಿಯೂ ದುಷ್ಟರ ಕಾಟವು ಪ್ರಬಲವಾಗಿದೆ. ಹೊಸ ವಿಷಯುವು ಯಾವುದಾದರೂ ಸಿಕ್ಕೀತೇ ಎಂದು ಕಾದಿದ್ದು ಅದಕ್ಕೆ ವ್ಯಂಗ್ಯವಾದ ಅರ್ಥಮಾಡಿ ತಪ್ಪು ಹೊರಿಸಲು ಅವರು ಪ್ರಯತ್ನಿಸುತ್ತಾರೆ. ಈ ಪ್ರಕಾರವಾಗಿ ನನ್ನನ್ನು ಬೆದರಿಸಿ ಅವರು ಅಧೈರ್ಯ ವನ್ನೂ ಅವಿವೇಕವನ್ನೂ ತನ್ನ ತಲೆಗೆ ಕಟ್ಟಬೇಕೆಂದು ಇಷ್ಟಪಡುತ್ತಿರಬಹುದು" ಎಂದು ಬರೆದಿದ್ದಾನೆ.

1860 ನೆಯ ವರುಷದ ಡಿಸೆಂಬರ್ ತಿಂಗಳಲ್ಲಿ ಸೆನೇಟ್ ಸಭೆಯು ಹದಿಮೂರು ಮಂದಿಯುಳ್ಳ ಒಂದು ಸಂಘವನ್ನೇರ್ಪಡಿಸಿ ಒಪ್ಪಂದಕ್ಕೆ ಮಾತು ನಡೆಯಿಸಲು ಗೊತ್ತುಮಾಡಿತು. ವ್ಯವಹಾರವು ಅತ್ಯಂತ ಶ್ರದ್ಧೆಯಿಂದ ಸಾಗುವುದನ್ನು ನೋಡಿ ಕೆಲವರು ಭರವಸೆಹೊಂದಿದರು. ಮಂತ್ರಿಯೊಬ್ಬನು ನಿರ್ಣಯನಾಗತಕ್ಕ ಅಂಶಗಳನ್ನೆಲ್ಲಾ ಗುರುತುಹಚ್ಚಿಕೊಟ್ಟನು. ಆದರೆ ಹೊರಗಿದ್ದ ರಾಷ್ಟ್ರಗಳ ವಿಷಯವು ಚರ್ಚೆಗೆ ಬಂದು ಅಭಿಪ್ರಾಯವು ಸರಿಹೊಂದಲೇ ಇಲ್ಲ. ಒಡಂಬಡಿಕೆ ಮಾಡಿಕೊಳ್ಳಲು ರಿಪಬ್ಲಿಕರ್ ಜನಗಳು ಸಿದ್ಧವಾಗಿದ್ದರು. ಉತ್ತರದಲ್ಲಿನ ವ್ಯಾಪಾರಸ್ಥರಂತೂ ಬಲು ಆತುರರಾಗಿದ್ದರು. ನ್ಯೂಯಾರ್ಕ್ ಮೊದಲಾದ ಪಟ್ಟಣಗಳಲ್ಲಿ ವ್ಯಾಪಾರವು ಸುಗಮವಾಗಬೇಕಾದಲ್ಲಿ ದೇಶದಲ್ಲಿ ಶಾಂತಿಯು ಅಗತ್ಯವಾಗಿದ್ದಿತು. ಆದರೆ ಉತ್ತರದಲ್ಲಿ ಇತರ ಪ್ರದೇಶಗಳಲ್ಲಿದ್ದವರಿಗೆ ಅದು ಅಷ್ಟು ಲಕ್ಷ್ಯಕ್ಕೆ ಬರಲಿಲ್ಲ. ನ್ಯಾಯವಾದ ಮಾರ್ಗದಲ್ಲಿ ಹೋಗುತ್ತಿರುವ ತಾವು ಅನ್ಯಾಯಪ್ರವರ್ತನೆಯುಳ್ಳವರಿಗೆ ಎಂದಿಗೂ ಬಿಟ್ಟುಕೊಡಕೂಡದೆಂಬ ನಿಶ್ಚಯವು ಅನೇಕರಲ್ಲಿದ್ದಿತು. ಆದರೆ ಒಟ್ಟಿನಲ್ಲಿ ಒಡಂಬಡಿಕೆಯೇ ಇಷ್ಟನಾದುದೆಂದು ಜನಗಳ ಧ್ವನಿಯಿಂದ ಗೊತ್ತಾಗುತ್ತಿದ್ದಿತು. ಸೆನೇಟಿನ ಸಭೆಯೇರ್ಪಡಿಸಿದ ಸಂಘವು ಯಾವದೊಂದು ನಿರ್ಣಯವನ್ನೂ ಮಾಡಲಾರದೆ ಹೋಯಿತು. ಅದನ್ನು ಏರ್ಪಡಿಸಿದ ಉದ್ದೇಶವು ಸಫಲವಾಗಲಿಲ್ಲ.

ಲಿಂಕನ್ನನ ಅಭಿಪ್ರಾಯವೇನೆಂಬುದು ಅವನು ತನ್ನ ಸ್ನೇಹಿತರಿಗೆ ಬರೆಯುತ್ತಿದ್ದ ಕಾಗದಪತ್ರಗಳಿಂದ ಸ್ಪಷ್ಟವಾಗುವುದು. ಒಡಂಬಡಿಕೆ ಮಾಡಿಕೊಳ್ಳಲು ಸಮ್ಮತಿಸಿ ಒಂದೊಂದಂಶವನ್ನಾಗಿ ಬಿಟ್ಟುಕೊಡುತ್ತ ಬಂದರೆ ನೆರೆಹೊರೆಯ ಪ್ರದೇಶಗಳಲ್ಲಿಯೂ ದಾಸ್ಯವನ್ನು ಹರಡಬೇಕೆಂದು ದಕ್ಷಿಣದವರಿಗೆ ಆಸೆಹುಟ್ಟಿ ಅವರನ್ನು ತಡೆಯುವವರೂ ತೃಪ್ತಿಪಡಿಸುವವರೂ ಇಲ್ಲವಾಗುವುದು. ಆಗ ರಿಪಬ್ಲಿಕನರು ಇದುವರೆಗೆ ಮಾಡಿದ ಸಾಹಸವೆಲ್ಲಾ ವ್ಯರ್ಥವಾಗಿ ಎಲ್ಲವನ್ನೂ ಮತ್ತೆ ''ಮೊದಲಿಂದ ಪ್ರಾರಂಭಮಾಡಬೇಕಾಗು'' ತ್ತಿದ್ದಿತು. ಲಿಂಕನ್ನನಿಗೆ ದಕ್ಷಿಣದಲ್ಲಿಯೂ ಸ್ನೇಹಿತರಿದ್ದರು. ಅಲೆಗ್ಝಾಂಡರ್ ಸ್ಟೀವರ್ನ್‌ಸ್‌ನು ಒಬ್ಬನು. ಲಿಂಕನ್ನನು, ಇದೊಂದು ಅಂಶದಲ್ಲಿ ನನ್ನ ಮನಸ್ಸನ್ನು ತಿರುಗಿಸಲು ಯಾರಿಂದಲೂ ಆಗಲಾರದೆಂದು ಅವನಿಗೆ ಒಂದು ಕಾಗದದಲ್ಲಿ ತಿಳಿಸಿದ್ದಾನೆ. ಅವನು 'ಪದಚಲನ' ಮಾಡಲಿಲ್ಲ. ಆದ ಕಾರಣ ಒಡಂಬಡಿಕೆಯ ಮಾತು ನೀರಮೇಲಣ ಗುಳ್ಳೆಯಂತೆ ನೊಂದಿ ಹೋಯಿತು. ಕಲಹಕ್ಕೆ ಕಿಡಿಹಾರಿ ಹತ್ತಿಕೊಳ್ಳಲು ಈ ಸಂಗತಿಯೇ ಕಾರಣವಾಯಿತೆನ್ನಬಹುದು. ಆದರೆ ಲಿಂಕನ್ನನು ಕಲಹವನ್ನಪೇಕ್ಷಿಸಿ ಆ ರೀತಿಯಾಗಿ ಪ್ರವರ್ತಿಸಲಿಲ್ಲ. ಅಂತಃ ಕಲಹವೇಳುವಷ್ಟುದೂರ ವಿಚಾರವು ಹೋಗುವುದೆಂದು ಅವನು ನಿರೀಕ್ಷಿಸಲಿಲ್ಲ. ಕಲಹವು ಪ್ರಾರಂಭನಾಯಿತು. ಆದರೂ ಅವನು ಆತಂಕಹೊಂದಲಿಲ್ಲ. ''ಸರ್ಕಾರವನ್ನು ತುಳಿದುಹಾಕುವ ಅಭಿಲಾಷೆಯು ದಕ್ಷಿಣಕ್ಕಿಲ್ಲವೆಂತಲೇ ತೋರುತ್ತದೆ'' ಎಂದು ಆ ಸಮಯದಲ್ಲಿ ಆಪ್ತನೊಬ್ಬನೊಡನೆ ಹೇಳಿದನು. ಅವನ ಸ್ವಭಾವವು ಬೆದರಿಕೆಗಂಜುವಂಥದಲ್ಲ. ಕಷ್ಟನಷ್ಟಗಳೆಷ್ಟಾದರೂ ಲಕ್ಷಿಸದೆ ದಕ್ಷಿಣವನ್ನು ಸಮಾಧಾನಪಡಿಸಿ ಯುದ್ಧವು ತಪ್ಪುವಂತೆ ಮಾಡಬೇಕೆಂದು ಅವನಿಗೆ ಸ್ವಲ್ಪವೂ

ಉದ್ದೇಶವಿರಲಿಲ್ಲ. ಪ್ರವಾಹವು ಪ್ರಳಯವನ್ನೇ ಉಂಟುಮಾಡುವುದಾದರೂ ಬಂಡೆಯಂತೆ ಅದರ ಮಧ್ಯದಲ್ಲಿ ಸ್ಥಿರವಾಗಿ ನಿಲ್ಲುವುದರಲ್ಲಿ ಬಹಳ ಗುಣವಿರುವುದೆಂದು ನಂಬಿದ್ದನು. ಸಂಸಾರದಲ್ಲಿ ಒಡಕು ಉಂಟಾದ ಮೇಲೆ ಅದಕ್ಕೆ ಬಾಳುಗಾಲವಿಲ್ಲವೆಂಬುದೊಂದು ವಚನವನ್ನು ಆಧಾರವಾಗಿಟ್ಟುಕೊಂಡು ಪರಿಶೀಲಿಸಿದರೆ ಅವನ ವ್ಯವಹಾರಗಳೆಲ್ಲವೂ ಅರ್ಥವಾಗುವುವು. ಅವನ ಪ್ರಯತ್ನಗಳಿಗೆಲ್ಲಾ ಆ ಅಂಶವು ಕೇಂದ್ರಸ್ಥಾನವಾಗಿರುವುದು. ನಡುವೆ ಬರುವ ತೊಂದರೆಗಳಿಗೆಲ್ಲಾ ಬೆನ್ನನ್ನು ತೋರಿಸುತ್ತ ಹೋದರೆ ಕಾರ್ಯಾವಸಾನವನ್ನು ಮುಟ್ಟಲಾಗುವುದಿಲ್ಲ. ಆದ್ದರಿಂದ ವಿಘ್ನವಿಪತ್ತುಗಳು ಯಾವುವು ಬಂದರೂ ಅವುಗಳನ್ನು ದಾಟಲು ಅವನು ಸಿದ್ಧನಾಗಿದ್ದನು. ಒಂಟಿಗನಾದವನಿಗೆ ಇದು ದೊಡ್ಡ ಭಾರವೇ ಸರಿ. ಆದರೂ ಅವನು ಹೊರಲು ಸಿದ್ಧನಾದುದೇ ಯುಕ್ತನಾದ ಕಾರ್ಯವಾಯಿತು.

ಲಿಂಕನ್ನನು ಕದಲದೆ 'ಪದಚಲನ' ಮಾಡದೆ ನಿಲ್ಲದಿದ್ದರೆ ರಕ್ತಶೋಷಣೆಯು ಬಹಳಮಟ್ಟಿಗೆ ತಪ್ಪುತ್ತಿದ್ದಿತು. ಆದರೆ ಅಮೆರಿಕವು ಒಗ್ಗಟ್ಟಿನಿಂದ ನಿಲ್ಲುತ್ತಿರಲಿಲ್ಲ. ಸಂಸ್ಥಾನಗಳಲ್ಲಿ ಒಂದೊಂದು ಒಂದೊಂದು ದಾರಿಯಲ್ಲಿ ಹೊರಟು, ಪರಸ್ಪರ ದ್ವೇಷವೂ ಕಲಹವೂ ಫಲವಾಗುತ್ತಿದ್ದುವು. ಉತ್ತರಅಮೆರಿಕದಲ್ಲಿ ಸಂಯುಕ್ತಸಂಸ್ಥಾನಗಳೆಂಬ ರಾಜ್ಯವು ಉಳಿಯುತ್ತಿರಲಿಲ್ಲ—ಆ ರಾಜ್ಯದ ಪ್ರಜೆಯೆನ್ನಿಸಿಕೊಳ್ಳುವ ಭಾಗ್ಯವೂ ಅಮೆರಿಕದವರಿಗೆ ಉಳಿಯುತ್ತಿರಲಿಲ್ಲ.

1860 ನೆಯ ವರ್ಷದ ಕೊನೆಯು ಹತ್ತಿರವಾಯಿತು. ಒಂದಾಗುವ ಶಬ್ದವೇ ತಪ್ಪಿಹೋಯಿತು. ಒಂದಾಗುತ್ತಲೊಂದು ಸಂಸ್ಥಾನವು ಸಂಯೋಗದಿಂದ ಕಳಚಿಕೊಳ್ಳುತ್ತಿದ್ದಿತು. ಮಾರನೆಯ ವರುಷ, ಒಪ್ಪಂದದ ನಿಯಮಗಳ ವಿಷಯವನ್ನು ಪ್ರಜೆಗಳೇ ಚೀಟಿಹಾಕಿ ಇತ್ಯರ್ಥಮಾಡಲೆಂದು ಒಬ್ಬಾತನು ಸೂಚಿಸಿದನು. ಅದು ಸಾಗಲಿಲ್ಲ. ಸಿವರ್ಡನು ಅದರಿಂದ ಪ್ರಯೋಜನವಿಲ್ಲವೆಂದೂ ಹಾಗೆ ಮಾಡುವುದು ನ್ಯಾಯಸಮ್ಮತವಾದುದಲ್ಲವೆಂದೂ ಹೇಳಿಬಿಟ್ಟನು. ಮೇಲೆ ಹೇಳಿದ ಸಲಹೆಯು ಗಡಿಯ ಸೀಮೆಗಳಲ್ಲಿ ಮಾತ್ರ ಕೆಲಸಕ್ಕೆ ಬರುತ್ತಿದ್ದಿತು. ಯುದ್ಧವು ಬೇಕೇ ಅಥವಾ ಬೇಡವೇ ಎಂಬುದನ್ನು ಆ ಮೂಲಕ ಇತ್ಯರ್ಥಮಾಡಬಹುದು. ಅಲ್ಲಿಯ ಜನಗಳಿಗೆ ಯುದ್ಧದಲ್ಲಿ ಸಂಮತಿಯು ಸ್ವಲ್ಪವೂ ಇರಲಿಲ್ಲ. ಆದರೆ ಅವರು ಅದರಿಂದ ಮುಂದಕ್ಕೆ ವಿಚಾರವನ್ನು ಪರಿಶೀಲಿಸಿದವರಲ್ಲ. ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಇದ್ದ ಪ್ರಜೆಗಳು ಲೋಕವೇ ತಲೆಕೆಳಗಾದರೂ ಇನ್ನು ಒಂದಾಗುತ್ತಿರಲಿಲ್ಲ. ಒಂದಾಗಲೊಲ್ಲೆವೆನ್ನುವವರೇ ಎರಡು ಭಾಗಗಳಲ್ಲಿಯೂ ಹೆಚ್ಚಾಗಿದ್ದರು. ಆದಕಾರಣ ಮಧ್ಯಸ್ಥಿಕೆಯ ಮಾತೂ ಅದರ ವಿಷಯದಲ್ಲಿ ಜನಗಳಿಗಿದ್ದ ಅಭಿಪ್ರಾಯವೂ ಪ್ರಯೋಜನಕ್ಕೆ ಬರುತ್ತಿರಲಿಲ್ಲ.

ಉತ್ತರದಲ್ಲಿ, ದಾಸ್ಯಪದ್ಧತಿಗೆ ವಿರೋಧಿಗಳಾಗಿದ್ದವರು, ಸಂಯೋಗವನ್ನು ಬಿಟ್ಟು ಹೋಗಲಪೇಕ್ಷಿಸುತ್ತಿರುವ ದಕ್ಷಿಣಕ್ಕೆ ಅನುಮತಿಯನ್ನು ಕೊಟ್ಟುಬಿಡಬಹುದೆಂದೇ ಮೊದಲು ಮೊದಲು ಅಭಿಪ್ರಾಯವನ್ನು ಸೂಚಿಸಿದರು. ಆದರೆ ಆಮೇಲೆ ಪರ್ಯಾಲೋಚಿಸಲಾಗಿ, ಲಿಂಕನ್ನನು ಹೇಳುತ್ತಿದ್ದಂತೆ, ಪ್ರತ್ಯೇಕವಾದ ಮೇಲೆ

ಎರಡು ಭಾಗಗಳಿಗೂ ಸೌಹಾರ್ದವಿರುವುದು ಅಶಕ್ಯವೆಂತಲೂ ಬಹಳ ಇಕ್ಕಟ್ಟಿಗೆ ಬರುವುದೆಂತಲೂ ತಿಳಿದುಬಂದಿತು. ಸೌಹಾರ್ದವು ಉಂಟಾದರೂ ಒಂದು ಗಳಿಗೆಯ ಮೇಲೆ ನಿಲ್ಲುತ್ತಿರಲಿಲ್ಲ. ಆದರೂ ದೊಡ್ಡದೊಡ್ಡ ಪಟ್ಟಣಗಳು ವ್ಯಾಪಾರ ಸಮೃದ್ಧಿಯುಳ್ಳವಾದಕಾರಣ ಅಲ್ಲಿನ ವರ್ತಕಪ್ರಜೆಗಳು ಸಮಾಧಾನವನ್ನುಂಟುಮಾಡಲು ಬಹಳವುಟ್ಟಿನ ಅಪೇಕ್ಷೆಯನ್ನು ತೋರಿಸಿ ಬಹಳ ಪ್ರಯತ್ನಮಾಡಿದರು. ಬಾಸ್ಟನ್ ಪಟ್ಟಣದಲ್ಲಿ ಜಾನ್ ಬ್ರೌನನ ಸ್ಮರಣಾರ್ಥವಾಗಿ ನಡೆಯುತ್ತಿದ್ದ ಸಭೆಗೆ ಅವರು ಅಡ್ಡಿಯನ್ನು ತಂದು ನಿಲ್ಲಿಸಿದರು. ಅಂತಹ ಸಮ್ಮೇಳನಗಳಿಂದ ದಕ್ಷಿಣದವರಿಗೆ ಅವಮಾನವನ್ನೆಣಿಸಿದಂತಾಗಿ ವೈಷಮ್ಯವು ಹೆಚ್ಚುವುದೆಂದು ಕೆಲವರು ಅಭಿಪ್ರಾಯಪಟ್ಟರು. ಆದರೆ ಅಂಥವರು ಒಟ್ಟಿನಲ್ಲಿ ಹೆಚ್ಚು ಮಂದಿಯಿರಲಿಲ್ಲ. ಅಲ್ಲದೆ ಇನ್ನು ಕೆಲವರಲ್ಲಿ ಮನಸ್ಸಿನಲ್ಲಿ ನಿರ್ಣೀತವಾದ ಅಭಿಪ್ರಾಯವು ಹುಟ್ಟಿರಲಿಲ್ಲ. ಅವರು ಇತಿಕರ್ತವ್ಯವಿಮೂಢರಾಗಿದ್ದರು. ಆದರೂ ಅಂತರಾತ್ಮದಲ್ಲಿ ಮಾತ್ರ ಪ್ರಕೃತಸ್ಥಿತಿಯು ಸಮರ್ಪಕವಾಗಿರಲಿಲ್ಲವೆಂದು ಸಂಶಯವು ಇದ್ದೇ ಇದ್ದಿತು. ಅಂಥವರಿಗೆ ತಮ್ಮನ್ನು ಸುರಕ್ಷಿತವಾಗಿ ತಡಿಹಾಯಿಸುವ ಶಕ್ತಿಯುಳ್ಳ ಮುಖಂಡನೊಬ್ಬನು ಬೇಕಾಗಿದ್ದನು. ವಿಚಾರಗಳನ್ನು ಕಲಕದೆ, ಕರ್ತವ್ಯವನ್ನು ತಿಳಿದವನಾಗಿಯೂ, ಯಾವುದರಲ್ಲಿಯೂ ಆತುರಪಡದೆ ಸವಿರಾಮವಾಗಿ, ಸ್ವತಂತ್ರನಾದರೂ ಪ್ರಜೆಗಳ ಹಿತಕ್ಕಾಗಿ ಕೆಲಸ ಮಾಡುವವನಾಗಿಯೂ, ವಿಘ್ನಗಳನ್ನು ಒತ್ತರಿಸಿ ಮುಂದಡಿಯಿಡುವವನಾಗಿಯೂ ಇರುವಂಥವನು ಮುಖ್ಯವಾಗಿ ಬೇಕಾಗಿದ್ದನು. ಅಂಥವನು ಲಿಂಕನ್ನನು.

ದಕ್ಷಿಣದಲ್ಲಿ, ಹೀಗೆ ದೀಪವು ಅಡ್ಡಗೋಡೆಯ ಮೇಲಿರಲಿಲ್ಲ. ಪ್ರತ್ಯೇಕವಾಗುವ ಅಪೇಕ್ಷೆಯು ದಿನದಿನಕ್ಕೆ ಹೆಚ್ಚಿ ದೂರದೂರಕ್ಕೆ ಹರಡುತ್ತಿದ್ದಿತು. ಅದನ್ನು ಅನುಮೋದಿಸದವರು ಅಲ್ಲಿಯೂ ಕೆಲವರಿದ್ದರು. ಆದರೆ ಪ್ರತಿಪಕ್ಷವೆನ್ನಿಸಿಕೊಳ್ಳುವಷ್ಟು ಸಂಖ್ಯೆ ಇರಲಿಲ್ಲ. ವ್ಯಾಪಾರಗಾರರೂ ಸಮಾಜದಲ್ಲಿ ಪುರಸ್ಕಾರಕ್ಕಾಗಿ ಹೋರುವ ಸಾಮಾನ್ಯಪ್ರಜೆಯೂ ವೈದಿಕವರ್ಗದವರೂ ಹೆಚ್ಚಾಗಿದ್ದುದರಿಂದ ಅಲ್ಲಿಯ ಮೂರುಪಾಲು ಜನರಿಗೆ ದಾಸ್ಯದಲ್ಲಿ ನಿಸ್ಸಂದೇಹವಾದ ಪಕ್ಷಪಾತವಿದ್ದಿತು. ಪ್ರತ್ಯೇಕವಾಗಲು ಸಂಸ್ಥಾನಗಳಿಗೆ ಸಂಪೂರ್ಣಸ್ವಾತಂತ್ರ್ಯವುಂಟೆಂದು ಪ್ರಜೆಗಳೆಲ್ಲರ ಮತವಾಗಿದ್ದಿತು. ಅದನ್ನು ಆಗಗೊಡಿಸಕೂಡದೆಂಬ ಉದ್ದೇಶದಿಂದ ಡೇವಿಸ್, ಸ್ಟೀವರ್ನ್ಸ್ ಮೊದಲಾದ ಮುಖ್ಯಸ್ಥರು ಜನಗಳಿಗೆ ನೀತಿ ಹೇಳಿ ತಡೆಯಲು ಯತ್ನಿಸಿದರು. ಅವರ ಮಾತು ನಡೆಯಲಿಲ್ಲ. ಪ್ರವಾಹದ ರಭಸಕ್ಕೆ ಸಿಕ್ಕುವ ಕಸಕಡ್ಡಿಗಳಂತೆ ಕೊಚ್ಚಿಹೋಯಿತು. "ಸ್ವಲ್ಪ ತಾಳಿರಿ; ತೃಪ್ತಿಕರವಾದ ಕಾರಣಗಳಿವೆಯೋ ಎಂಬುದನ್ನು ನೀವೇ ಯೋಚಿಸಿ ಹೇಳಿರಿ. ಮುಂದೆ ನಿಮ್ಮವರೇ ನಿಮ್ಮೆದುರಿಗೆ ಸಂಕಟಪಡುತ್ತ ನಿಂತರೆ ಯಾವರೀತಿಯಾಗಿ ಸಮಾಧಾನವನ್ನು ಹೇಳುವಿರಿ ? ನೀವು ಮಾಡುತ್ತಿರುವುದು ಸಾಧುವಾದುದೆಂಬುದಕ್ಕೆ ಕಾರಣವನ್ನು ಕೇಳುವ ಜನಾಂಗಗಳಿಗೆ ಏನು ಉತ್ತರ ಹೇಳುವಿರಿ ?" ಎಂದು ಸ್ಟೀವರ್ನಸನು ಮಾಡಿದ ಉಪದೇಶವು ಕೇಳುವವರಿಗೆ ಮಾತ್ರವೇ ಹಿತವಾಗಿದ್ದಿತು. ಜನಗಳು ಅವನ ಮಾತನು ಲಕ್ಷ್ಯಕ್ಕೇ ತರಲಿಲ್ಲ.

1861 ನೆಯ ವರ್ಷದ ಫಿಬ್ರವರಿಯ ಹೊತ್ತಿಗೆ ಮಿಸಿಸಿಪ್ಪಿ, ಫ್ಲಾರಿಡ, ಜಾರ್ಜಿಯ, ಅಲಬಾಮ ಮತ್ತು ಲೂಸಿಯಾನಗಳು ದಕ್ಷಿಣ ಕೆರೋಲಿನದ ಮೇಲು ಪಂಕ್ತಿಯನ್ನು ಅನುಸರಿಸಿದ್ದುವು. ಆ ಸಂಸ್ಥಾನಗಳ ಪ್ರತಿನಿಧಿಗಳು ಹೊಸದೊಂದು ಸರ್ಕಾರವನ್ನೇರ್ಪಡಿಸುವುದಕ್ಕೋಸ್ಕರ ಅಲಬಾಮದಲ್ಲಿರುವ ಮಾಂಟ್‌ಗಾಮೆರಿಯಲ್ಲಿ ಸಭೆಗೂಡಿದರು. ಟೆಕ್ಸಾಸ್‌ನಲ್ಲಿ ಜನಗಳು ಅಡ್ಡಿಮಾಡಲು ಬಂದ ಗೌರ್ನರನ್ನು ಲಕ್ಷಿಸದೆ ವಿಯೋಗದ ನಿಯಮಗಳನ್ನು ನಿರ್ಮಿಸಿದರು. ಲಿಂಕನ್ನನು ಅಧಿಕಾರವನ್ನು ವಹಿಸಿ ಯುದ್ಧವು ಪ್ರಾರಂಭಿಸಿದ ತರುಣದಲ್ಲಿ ಅದುವರೆಗೆ ತಡೆದಿದ್ದ ವರ್ಜಿನಿಯ ಉತ್ತರ ಕೆರೊಲಿನ ಮೊದಲಾದ ಇನ್ನು ಕೆಲವು ಸಂಸ್ಥಾನಗಳು ಸಂಯೋಗವನ್ನು ತ್ಯಜಿಸಿದುವು.

ವರ್ಜಿನಿಯಕ್ಕೆ ಸಂಯೋಗವು ಇಷ್ಟವಾದುದೇ ಆಗಿದ್ದಿತು. ಅಲ್ಲಿನ ಜನರಿಗೆ, ಹತ್ತಿಯನ್ನು ಬೆಳೆಯುವ ಇತರ ಸಂಸ್ಥಾನಗಳಿಗೆ ದಾಸ್ಯದಲ್ಲಿ ಇದ್ದಷ್ಟು ಶ್ರದ್ಧೆಯು ಇರಲಿಲ್ಲ. ಅದು ಗಡಿಯ ಸೀಮೆಗಳನ್ನು ತನ್ನ ಕಡೆಗೆಳೆದುಕೊಂಡು ಸಂಯೋಗವನ್ನು ಬಿಟ್ಟುಹೋಗದೆ ಉಳಿಯಬೇಕೆಂದು ಸಾಧಿಸಿತು. ಇಪ್ಪತ್ತೊಂದು ಸೀಮೆಗಳಿಂದ ನಿಯೋಗಿಗಳು ಸಂಧಿಸಿ "Peace Convention" ಎಂಬ ಸಮ್ಮೇಳನವನ್ನು ಏರ್ಪಡಿಸಿದರು. ವಾಷಿಂಗ್ಟನ್ನಿನಲ್ಲಿ ನಡೆದ ಆ ಕೂಟಕ್ಕೆ ಹಳೆಯ ಪ್ರೆಸಿಡೆಂಟನಾದ ಟೆಯಿಲರ್‌ನು ಅಧ್ಯಕ್ಷನಾದನು. ಆದರೆ ವರ್ಜಿನಿಯವು ಸಂಯೋಗವನ್ನು ಬಿಟ್ಟುಹೋಗಲು ಅಧಿಕಾರವು ಮಾತ್ರ ತನಗೆ ಸಂಪೂರ್ಣವಾಗಿ ಉಂಟೆಂದು ಮೊದಲಿನಿಂದಲೂ ಹಟ ಹಿಡಿಯಿತು. ಸಭೆಯ ಕಾರ್ಯವು ಮುಂದಕ್ಕೆ ಸಾಗಲೇ ಇಲ್ಲ.

ಮಾಂಟ್‌ಗಾಮೆರಿಯಲ್ಲಿ ಸೇರಿದ ಸಭೆಯು "ಒಟ್ಟಿನಲ್ಲಿ ವಿಚಕ್ಷಣೆಯಿಂದಲೇ ಜರುಗಿತು," ಎಂದು ಸ್ಟೀವರ್ಟಸನು ಹೇಳಿದನು. ಜನಗಳಿಗೆ ಬೋಧನೆಮಾಡಿ ರಾಜ್ಯದಲ್ಲಿ ಗಲಭೆಯನ್ನುಂಟುಮಾಡುವವರನ್ನು ಆ ಸಭೆಗೆ ಸೇರಿಸಲಿಲ್ಲ. ಅಲ್ಲಿ ಏರ್ಪಾಡಾದ ಸರ್ಕಾರವು ಸ್ವಲ್ಪಹೆಚ್ಚು ಕಡಿಮೆಯಾಗಿ ಸಂಯುಕ್ತಸರ್ಕಾರವನ್ನೇ ಹೋಲುತ್ತಿದ್ದಿತು. ಜೆಫರ್‌ಸನ್ ಡೇವಿಸ್ಸನು ಪ್ರೆಸಿಡೆಂಟನಾದನು. ಆ ಸಮ್ಮೇಳನವು ನ್ಯಾಯವಾದ ರೀತಿಯಲ್ಲಿಯೇ ಸೇರಿದ್ದುದರಿಂದ ಕಾಂಗ್ರೆಸ್ ಎಂದು ಕರೆಯಲ್ಪಟ್ಟು ರಾಜ್ಯಭಾರವನ್ನು ನಡೆಯಿಸಬೇಕೆಂದು ನಿರ್ಣಯವಾಯಿತು.

ಹೊರೆಯು ತಮ್ಮಮೇಲೆ ಬಿದ್ದಿತೆಂತಲೋ ಪ್ರಪಂಚದ ಎಲ್ಲಾ ರಾಜ್ಯಗಳೂ ಇನ್ನುಮುಂದೆ ತಮ್ಮನ್ನು ಪ್ರಬುದ್ಧರೂ ನಿರ್ವಾಹಸಮರ್ಥರೂ ಎಂದು ಭಾವಿಸುವುವೆಂಬ ನಿಮಿತ್ತದಿಂದಲೋ, ಅಥವಾ ಹೃದಯಾಂತರಾಳದಲ್ಲಿ ಅಂಕುರಿಸಿ ಬೆಳೆಯುತ್ತಿದ್ದ ಮತ್ತೊಂದು ಅಭಿಪ್ರಾಯದ ನಿಮಿತ್ತದಿಂದಲೋ, ಆ ಕಾಂಗ್ರೆಸ್‌ನ ಪ್ರತಿನಿಧಿಗಳು, ದಾಸ್ಯವನ್ನು ಆಚರಣೆಯಲ್ಲಿಟ್ಟುಕೊಂಡು ಅದಕ್ಕೆ ಉತ್ತೇಜನವನ್ನು ಕೊಡಬೇಕೆಂದು ಮೊದಲು ಹೇಳಿದ್ದರೂ ಕೂಡ ಅದನ್ನು ಎಂದೆಂದಿಗೂ ತಪ್ಪಿಸಿಬಿಡಲು ಒಂದು ಸಲಹೆಯನ್ನು ತಂದರು. ಒಂದು ನಿಬಂಧನೆ ಏರ್ಪಟ್ಟಿತು. ಆದರೆ ಅನುಷ್ಠಾನವು ಉದ್ದೇಶಕ್ಕೆ ಸಮವಾಗಿರಲಿಲ್ಲ. ಪ್ರೆಸಿಡೆಂಟ್ ಡೇವಿಸ್ಸನು ಅದನ್ನು

ತಪ್ಪಿಸಿ, ಹೆಚ್ಚಾಗಿ ತೃಪ್ತಿಯನ್ನುಂಟುಮಾಡುವ ಮತ್ತೊಂದು ನಿಬಂಧನೆಯು ನಿರ್ಮಾಣವಾಗಬೇಕೆಂದು ಕೋರಿದನು. ಅಧಿಕಾರವನ್ನು ವಹಿಸುವ ಕಾಲದಲ್ಲಿ ಅವನು ಒಂದು ಭಾಷಣವನ್ನು ಮಾಡಿದನು. ಅದರೊಳಗೆ ದಾಸ್ಯದ ಸಂಬಂಧದಲ್ಲಿ ಒಂದು ಮಾತಾದರೂ ಇರಲಿಲ್ಲ. ಇತರರು ತಮ್ಮ ಔದ್ಧತ್ಯವನ್ನು ತೋರಿಸಲಾಗಿ ಹೀಗೆ ಪ್ರತ್ಯೇಕನಾಗಬೇಕಾಯಿತೆಂದೂ "ಐಕಮತ್ಯವನ್ನೂ ಸಮಾಧಾನವನ್ನೂ ನೆಲೆಗೊಳಿಸಲು ದಕ್ಷಿಣವು ಎಷ್ಟೋ ಹೆಣಗಾಡಿ" ತೆಂದೂ ಅವನು ಹೇಳಿದನು. ಹೊಸ ಕಾಂಗ್ರೆಸ್ ಸಭೆಯು ಬೇರೆಹೋದ ಸಂಸ್ಥಾನಗಳಲ್ಲಿ ತತ್ಪೂರ್ವವಾಗಿ ಸಂಯೋಗದ ವಶದಲ್ಲಿದ್ದ ದುರ್ಗಗಳನ್ನೂ ಇತರ ವಸ್ತುಗಳನ್ನೂ ಸ್ವಾಧೀನಕ್ಕೆ ತೆಗೆದುಕೊಳ್ಳಲು ನಿಶ್ಚಯಿಸಿತು. ಬೋರ್‌ಗಾರ್ಡ್ (Beauregard) ಎಂಬ ಸೇನಾಧಿಪತಿಗೆ ಚಾರ್ಲ್ಸ್‌ಟನ್ನಿಗೆ ಹೋಗಿ ಸಮ್‌ಟರ್ ದುರ್ಗಕ್ಕೆ ಮುತ್ತಿಗೆ ಹಾಕುವಂತೆ ಅಪ್ಪಣೆಯಾಯಿತು.

---

# ೩ ನೆಯ ಅಧ್ಯಾಯ

---

## ವಾಷಿಂಗ್ಟನ್ನಿಗೆ ಪ್ರಯಾಣ.

ಮಾರ್ಚಿಯ ತಿಂಗಳಿನ್ನೂ ಬಂದಿರಲಿಲ್ಲನಾಗಿ ಲಿಂಕನ್ನನಿಗೆ ಯಾವ ಸ್ವಾತಂತ್ರ್ಯಕ್ಕೂ ಆಸ್ಪದವಿರಲಿಲ್ಲ. ಮಂತ್ರಿಗಳ ಸಭೆಯನ್ನು ಏರ್ಪಡಿಸಿಕೊಳ್ಳುವುದು ಮೊದಲನೆಯ ಕೆಲಸವಾಗಿದ್ದಿತು. ಆ ವೇಳೆಯಲ್ಲಿ, ಸಲಹೆ ಕೊಡುವುದಕ್ಕೆಂತಲೂ, ಅದಕ್ಕಿಂತಲೂ ಹೆಚ್ಚಾಗಿ, ಅವನಲ್ಲಿ ಅಭಿಮಾನವನ್ನಿಟ್ಟಿರುವ ತಮಗೆ ಸರ್ಕಾರದಲ್ಲಿ ಯಾವುದಾದರೊಂದು ನೌಕರಿಯನ್ನು ಕೊಡಬೇಕೆಂತಲೂ ರಿಪಬ್ಲಿಕ ಪಕ್ಷದವರು ತಂಡತಂಡನಾಗಿ ಅವನಲ್ಲಿಗೆ ಬರಲಾರಂಭಿಸಿದರು. ಅದರಿಂದ ಅವನಿಗೆ ಅನುಚಿಂತನೆಗೆ ಅವಕಾಶವು ತಪ್ಪಿಹೋಯಿತು. ಆದರೂ ತಾಳ್ಮೆಯಿಂದ ಬಂದವರ ಮಾತುಗಳನ್ನು ಕೇಳಿ ಸಮಾಧಾನಕರವಾದ ಉತ್ತರವನ್ನು ಹೇಳಿ ಕಳುಹಿಸುತ್ತಿದ್ದನು. ಮಂತ್ರಿಸಭೆಯನ್ನೇರ್ಪಡಿಸಲು ಸ್ವಲ್ಪ ತಡವಾಯಿತು. ತನ್ನನ್ನು ನೋಡಲು ಬಂದವರ ಚರಿತ್ರೆಯೊಂದೂ ಅವನಿಗೆ ತಿಳಿದಿರಲಿಲ್ಲ. ಅಲ್ಲದೆ, ಆ ಸಮಯದಲ್ಲಿ ತನ್ನ ಪಕ್ಷದವರೆಲ್ಲರೂ ಐಕಮತ್ಯದಿಂದಿರುವುದು ಅಗತ್ಯನಾದುದರಿಂದ ಅವನು ಆಡಳಿತದಲ್ಲಿ ಎಲ್ಲಾ ಜನರ ಅಭಿಪ್ರಾಯವೂ ಸೂಚಿಸಲ್ಪಡುವಂತೆ ಮಾಡಬೇಕೆಂಬ ಉದ್ದೇಶವುಳ್ಳವನಾಗಿದ್ದನು. ಅಭಿಪ್ರಾಯವೊಂದೇ ಅಲ್ಲ. ಎಲ್ಲಾ ಭಾಗಗಳ ಇಷ್ಟವನ್ನೂ ಲೆಕ್ಕಕ್ಕೆ ತರಬೇಕಾಗಿದ್ದಿತು. ಇತರ ಕಾಲುಗಳಲ್ಲಿ ಹಾಗೆ ಮಾಡದಿದ್ದರೂ ಬಾಧಕವಿರುತ್ತಿರಲಿಲ್ಲ. ಈಗಮಾತ್ರ ಎಲ್ಲಾ ಸಂಸ್ಥಾನಗಳಿಗೂ ಸಮಾಧಾನ ಹೇಳುತ್ತ ಅವುಗಳ ಮಾತನ್ನು ಕಿವಿಗೆ ಹಾಕಿಕೊಂಡು ಕೆಲಸಮಾಡಬೇ

ಕಾಗಿದ್ದಿತು. ಆದ್ದರಿಂದ, ಪ್ರೆಸಿಡೆಂಟನಾಗಲು ತನ್ನಂತೆಯೇ ಪ್ರಯತ್ನಿಸಿದ ಮುಖ್ಯಸ್ಥರನ್ನೇ ಚುನಾಯಿಸಿದರೆ ಎರಡೊಂದು ಕಾರ್ಯನಾದೀತೆಂದು ಲಿಂಕನ್ನನು ನಂಬಿದನು.

ಇವರ ಜೊತೆಗೆ ದಕ್ಷಿಣದಿಂದಲೂ ಒಬ್ಬ ಮುಖ್ಯಪ್ರಭೃತಿಯನ್ನು ಬರ ಮಾಡಬೇಕೆಂದು ಲಿಂಕನ್ನನು ಆಲೋಚಿಸಿದನು. ಆದರೆ ಆ ಕೋರಿಕೆಯು ನಡೆ ಯಲಿಲ್ಲ. ಇವರೊಳಗೆಲ್ಲಾ ಸಿವರ್ಡನೇ ಶಕ್ತನಾದನು. ಅವನು ತನ್ನ ಪ್ರಯ ತ್ನವು ವಿಫಲವಾಯಿತೆಂದು ಕೊರಗಿದರೂ ಲಿಂಕನ್ನನಿಗೆ ವಿಧೇಯನಾಗಿ ಅವನಲ್ಲಿ ಸಂಪೂರ್ಣವಾದ ಭಕ್ತಿಯನ್ನಿಟ್ಟಿದ್ದನು. ಲಿಂಕನ್ನನ ಪ್ರಥಮಸಂಭಾಷಣದ ಬರೆ ವಣಿಗೆಯನ್ನು ತಿದ್ದಿಕೊಟ್ಟವನು ಅವನು. ಆದರೆ ಆ ಹಿಂದಿನ ಸಾಯಂಕಾಲ ಸಿವರ್ಡನು ತಾನು ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟಿರುವುದಾಗಿ ಪ್ರೆಸಿಡೆಂಟ ನಿಗೆ ಬರೆದು ಕಳುಹಿಸಿದನು. ಲಿಂಕನ್ನನಿಗೆ ಆಶ್ಚರ್ಯವಾಯಿತು. ಅವನು ಸಿವರ್ಡನ ಬಳಿಗೆ ಹೋಗಿ ವಿವರಿಸಿ, ತಾನು ಬರೆದ ಕಾಗದವನ್ನು ಬದಲುಮಾತನಾಡದೆ ಹಿಂದಕ್ಕೆ ತೆಗೆದುಕೊಳ್ಳುವುದು ಮುಖ್ಯ ಕರ್ತವ್ಯವಾಗಿರುವುದೆಂಬುದನ್ನು ತೋರಿಸಿದನು. ಕೂಲಂಕಷನಾದ ಚೇಸನೂ ಸಭೆಯಲ್ಲಿದ್ದುದರಿಂದ ಸಿವರ್ಡನಿಗೆ ಕೆಲಸದಲ್ಲಿರಲು ಇಷ್ಟವಾಗಲಿಲ್ಲ. ಉತ್ತರದಲ್ಲಿ ಒಗ್ಗಟ್ಟು ಕಿತ್ತುಹೋಗಿ ಜನರು ಚದರಿಹೋಗ ದಂತೆ ನೋಡಿಕೊಳ್ಳುವುದು ಲಿಂಕನ್ನನಿಗೆ ಅಗತ್ಯವಾಗಿದ್ದಿತು. ಆ ಶಕ್ತಿಯು ಅವನಲ್ಲಿ ಇದ್ದೂ ಇದ್ದಿತು. ಎಷ್ಟು ಕಾಲದವರೆಗೆ ಜನರು ಏಕೀಭವಿಸಬೇಕೋ ಅಷ್ಟರವರೆಗೆ ಅವನು ಅವರಲ್ಲಿ ಭೇದಗಳಿಗೆ ಅವಕಾಶವುಂಟಾಗಗೊಡುತ್ತಿರಲಿಲ್ಲ. ಅವನಿಲ್ಲದಿದ್ದರೆ ಪರಸ್ಪರ ವಿರೋಧವುಳ್ಳವರಾಗಿ ಒಬ್ಬರಿಗೊಬ್ಬರು ಸರಿಬೀಳದಿದ್ದ ಆ ಅಧಿಕಾರಿಗಳು ಒಂದು ಗಳಿಗೆಯೂ ಒಟ್ಟುಗೂಡಿ ಕೆಲಸಮಾಡುತ್ತಿರಲಿಲ್ಲ.

ಫೆಬ್ರುವರಿ ಹನ್ನೊಂದನೆಯ ತಾರೀಖಿನಲ್ಲಿ ಲಿಂಕನ್ನನು ಸ್ಪ್ರಿಂಗ್ ಫೀಲ್ಡಿ ನಿಂದ ಹೊರಟನು. ಸ್ಟೇಷನ್ನಿನಲ್ಲಿ ಗಾಡಿಯ ಮುಂಭಾಗದಲ್ಲಿ ನಿಂತು ಅವನು ತನ್ನನ್ನು ಸಾಗಕಳುಹಿಸಲು ಜೊತೆಯಲ್ಲಿ ಬಂದಿದ್ದವರಿಗೆ ಹೀಗೆಂದನು. ''ನಿಮ್ಮೆಲ್ಲ ರನ್ನೂ ಬಿಟ್ಟು ಹೋಗಬೇಕೆಂದರೆ ಮನಸ್ಸಿಗೆ ಬಹಳ ದುಃಖವುಂಟಾಗುವುದು. ಆ ದುಃಖವು ಎಷ್ಟರಮಟ್ಟಿನದೆಂಬುದನ್ನು ಹೇಳಲು ಇತರರಿಗೆ ಸಾಧ್ಯವಿಲ್ಲ. ಈ ಸ್ಥಳಕ್ಕೂ ಈ ಸ್ಥಳದಲ್ಲಿರುವ ಜನಗಳಿಗೂ ನಾನು ಬಹಳ ಋಣಿಯಾಗಿದ್ದೇನೆ. ಇಪ್ಪತ್ತೈದು ವರ್ಷಗಳಕಾಲ ಇಲ್ಲಿ ವಾಸಮಾಡಿದೆನು. ಇಲ್ಲಿಗೆ ಬಂದಾಗ ಇನ್ನೂ ಹುಡುಗತನ. ಹೋಗುವಾಗ ವಯಸ್ಸಾದವನಾಗಿದ್ದೇನೆ. ಮಕ್ಕಳು ಇಲ್ಲಿ ಹುಟ್ಟಿ ದರು. ಅವರೊಳಗೆ ಒಬ್ಬನನ್ನು ಇಲ್ಲಿಯೇ ಮಣ್ಣು ಮಾಡಿದುದೂ ಆಯಿತು. ಈಗ ಇಲ್ಲಿಂದ ಹೊರಟುಹೋದರೆ ಯಾವಾಗಬರುವೆನೋ, ಮತ್ತೆ ಇಲ್ಲಿಗೆ ಬರುವೆನೋ ಇಲ್ಲವೋ ತಿಳಿಯದು. ನನಗೆ ನಿಯಮಿಸಿರುವ ಕಾರ್ಯವಾದರೋ ವಾಷಿಂಗ್ಟ ನ್ನನ ಕಾರ್ಯಕ್ಕಿಂತ ಗುರುತರವಾದುದು. ಆದರೆ ಆತನಿಗೆ ಭಗವಂತನು ಉದ್ದಕ್ಕೂ ಸಹಾಯಮಾಡಿದನು. ಆ ಪರಮಾತ್ಮನ ಅನುಗ್ರಹವು ಅಗತ್ಯವಾದುದು. ಅದಿಲ್ಲದೆ ನನ್ನಪಾಲಿನ ಕೆಲಸವು ಕೈಗೂಡಲಾರದು—ಅನುಗ್ರಹವಿದ್ದರೆ ಮಾತ್ರ

ಕೈಗೂಡದಿರಲಾರದು. ಭಗವಂತನು ನನ್ನೊಡನೆ ಹೋಗಬಲ್ಲನು—ಆದರೆ ನಿಮ್ಮೊಡನೆ ಇಲ್ಲಿಯೇ ಉಳಿಯಲೂ ಬಲ್ಲನು—ಮನುಷ್ಯರ ಹಿತಕ್ಕಾಗಿ ಎಲ್ಲಾಕಡೆಯಲ್ಲಿಯೂ ಇದ್ದಾನೆ. ಆತನಲ್ಲಿ ನಾವು ಭಕ್ತಿಯನ್ನಿಡಬೇಕು. ಆತನ ದಯೆಯಿದ್ದಲ್ಲಿ ಎಲ್ಲವೂ ಒಳ್ಳೆಯದೇ ಆಗುವುದೆಂದು ಸ್ಥಿರವಾಗಿ ನಂಬೋಣ. ಆತನು ನಿಮಗೆ ಮಂಗಳವನ್ನುಂಟುಮಾಡಲಿ. ಇನ್ನು ಹೋಗಿಬರುತ್ತೇನೆ.''

ಲಿಂಕನ್ನನು ಆಡಿದ ಮಾತು ಯಥಾರ್ಥವಾದುದು. ಅವನು ಮಾಡಲು ಹೊರಟದ್ದ ಕಾರ್ಯವು ವಾಷಿಂಗ್ಟನ್ನನ ಕಾರ್ಯಕ್ಕಿಂತ ಕಡಿಮೆಯಾದುದಲ್ಲ. ಆದರೆ ಅದಕ್ಕಾಗಿ ಅವನು ಮಾಡಿಕೊಂಡಿದ್ದ ಸನ್ನಾಹವು ವಾಷಿಂಗ್ಟನ್ನನಿಗಿದ್ದ ಅವಕಾಶಗಳಿಗಿಂತ ಬಹಳ ಕಡಿಮೆಯಾದುದು.

ಸ್ಪ್ರಿಂಗ್ ಫೀಲ್ಡಿನಿಂದ ಹೊರಟವನು ನೆಟ್ಟಗೆ ವಾಷಿಂಗ್ಟನ್ನಿಗೆ ಹೋಗಲಿಲ್ಲ. ದಾರಿಯಲ್ಲಿ ಸಿಕ್ಕುವ ನಾಲ್ಕು ದೊಡ್ಡ ಪಟ್ಟಣಗಳಿಗೂ ಅಲ್ಲಿನ ಜನಗಳ ಆಹ್ವಾನವನ್ನನುಸರಿಸಿ ಹೋದನು. ರೈಲು ನಿಂತಸ್ಥಳಗಳಲ್ಲಿ ಜನಗಳು ಬಂದುಬಂದು ಮುತ್ತಿಕೊಳ್ಳುತ್ತಿದ್ದರು. ಪ್ರೆಸಿಡೆಂಟನನ್ನು ನೋಡಬೇಕೆಂಬ ಮತ್ತು ಅವನ ಭಾಷಣವನ್ನು ಕೇಳಬೇಕೆಂಬ ಕುತೂಹಲವು ಅವರಿಗೆ ಬಹಳವಾಗಿದ್ದಿತು. ಲಿಂಕನ್ನನು ತನ್ನನ್ನು ಪ್ರಾರ್ಥಿಸಿದವರ ಪ್ರಾರ್ಥನೆಯನ್ನು ಸಲ್ಲಿಸದಿರಲಾರದವನು. ಅವನು ನಿಂತಕಡೆಯಲ್ಲೆಲ್ಲಾ ಒಂದೆರಡು ಮಾತನ್ನಾಡುತ್ತಿದ್ದನು. ಆ ಭಾಷಣಗಳಲ್ಲಿ ವಿಶೇಷವೇನೂ ಇರಲಿಲ್ಲ. ತಾನು ಅಸಮರ್ಥನೆಂದೂ ಜನಗಳ ಒತ್ತಾಸೆಯಲ್ಲಿ ನಂಬಿಕೆಯನ್ನಿಟ್ಟಿರುವೆನೆಂದೂ ಪ್ರಜೆಗಳ ದೇಶಭಕ್ತಿಯು ದೃಢವಾಗಿರಬೇಕೆಂದೂ ಹೇಳಿದನು. ಅವನು ಹೇಳಿದುದರಲ್ಲಿ ಮುಚ್ಚುಮರೆಗಳಿರಲಿಲ್ಲ. ಇದ್ದುದನ್ನು ಇದ್ದಹಾಗೆ, ತನ್ನ ಮನಸ್ಸಿಗೆ ಹೇಗೆ ತೋರಿತೋ ಹಾಗೆ ಹೇಳಿದನು. ಇಂತಹ ಸಂಭಾಷಣವು ಕೆಲವರಿಗೆ ರುಚಿಸಲಿಲ್ಲ. '' ಸ್ಥಿತಿಯು ತಲೆಹೋಗುವಂಥದಾದರೂ ಅವನು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತಿಲ್ಲ'' ವೆಂದು ಅಂಥವರು ದೂಷಿಸಿದರು. ಆದರೆ, ಉತ್ತರದಲ್ಲಿರುವ ದೃಢವಾದ ದೇಶಪ್ರೀತಿಯು ಚಂಚಲವಾಗದಂತೆ ಮಾಡಬೇಕೆಂಬುದು ಅವನ ಉದ್ದೇಶವಾಗಿದ್ದಿತು. ದಕ್ಷಿಣದವರು ಚೆನ್ನಾಗಿ ಚಿಂತಿಸುವರೆಂದೂ ಆದ್ದರಿಂದ ಹೆಚ್ಚಾಗಿ ಭಯಪಡುವನಿಮಿತ್ತವಿಲ್ಲವೆಂದೂ ಅವನು ನಂಬಿದ್ದನು. ದಕ್ಷಿಣದಂಗೆಯೆಲ್ಲವೂ ಅವನಿಗೆ ಕೆಲವರ ಚಿತಾವಣೆಯಿಂದಲೆಂಬ ಭಾವನೆಯಿದ್ದಿತು. '' ಯುದ್ಧವೊದಗಿದರೂ ಒದಗಬಹುದು. ಆದರೆ, ಏನಾದರೂ ಮಾಡಿ ಅದನ್ನು ತಪ್ಪಿಸಬೇಕೆಂಬುದು ನನ್ನ ಅಪೇಕ್ಷೆ '' ಎಂದನು. '' ಸರ್ಕಾರವು ಪ್ರವೇಶಮಾಡಬೇಕಾಗಿ ಬಂದಲ್ಲಿ ಮಾತ್ರ ರಕ್ತದ ಕೋಡಿ ಹರಿಯುವುದು. ಆದರೆ ಸರ್ಕಾರವು ತಾನು ಬಲಾತ್ಕರಿಸಲ್ಪಡದಿದ್ದ ಭಾಗದಲ್ಲಿ ಇತರರ ಮೇಲೆ ಬಲಾತ್ಕಾರವನ್ನು ತೋರಿಸುವುದಿಲ್ಲ. ''

ಲಿಂಕನ್ನನು ಸಿಸಿನ್ನಾತಿಗೆ ಹೋದನು. ಅಲ್ಲಿ ಹತ್ತಿರವಿದ್ದ ಕೆಂಟಕ್ಕಿಯ ಸೀಮೆಯಿಂದಲೂ ಜನಗಳು ಬಂದಿದ್ದರು. ಲಿಂಕನ್ನನು ಮುಖ್ಯವಾಗಿ ಅವರನ್ನು ಕುರಿತು, '' ಸಹೋದರರೆ,—ನಿಮ್ಮನ್ನು ಹಾಗೆ ಕರೆಯಬಹುದೆ? ಕರೆಯದೆ ಬೇರೆ

ಯಾಗಿ ಭಾವಿಸಲು ನನಗೆ ಇಷ್ಟವಿಲ್ಲ ; ಅವಶ್ಯಕತೆಯೂ ಕಾಣುವುದಿಲ್ಲ. ಮುಂದಾದರೂ ನೀವು ಸಹೋದರರೇ ಆಗುವಿರಿ. ಆಗದಿದ್ದರೆ ಅದು ನನ್ನ ತಪ್ಪಲ್ಲ'' ಎಂದು ಹೇಳಿದನು.

ಅಲ್ಲಲ್ಲಿ ನಿಲ್ಲುವುದು ಲಿಂಕನ್ನನಿಗೂ ಇಷ್ಟವಾಗಿದ್ದಿತು. ಐಕಮತ್ಯವನ್ನೂ ದೇಶಪ್ರೀತಿಯನ್ನೂ ಸಹನೆಯನ್ನೂ ಸದ್ಗುಣವನ್ನೂ ಹೊಂದಿರುವಂತೆ ಜನಗಳಿಗೆ ಹೇಳಲು ಅದಕ್ಕಿಂತ ಒಳ್ಳೆಯ ಸಮಯವು ಸಿಕ್ಕುತ್ತಿರಲಿಲ್ಲ. ಪಿಟ್ಸ್‌ಬರ್ಗ್‌ನಲ್ಲಿ, ''ಸಂಯೋಗವೆಂಬ ನಮ್ಮ ನಾವೆಯನ್ನು ಈಗಿನ ಪ್ರಯಾಣದಲ್ಲಿ ನಾವೆಲ್ಲರೂ ಒಟ್ಟುಸೇರಿ ಸಂರಕ್ಷಿಸದಿದ್ದಮೇಲೆ ಮತ್ತೊಂದು ಪ್ರಯಾಣದಲ್ಲಿ ಅದನ್ನು ಸುರಕ್ಷಿತ ನಾಗಿ ಕರೆದುಕೊಂಡು ಹೋಗಲಾಗುವುದಿಲ್ಲ'' ವೆಂದನು. ಸಂಯೋಗವನ್ನು ನಾವೆಗೆ ಹೋಲಿಸಲು ಲಾಂಗ್‌ಫೆಲೋವಿನ ಒಂದು ಕವನವು ಅವನ ಸ್ಮರಣೆಗೆ ಬಂದಿರಬಹುದು.[1]

ಮುಂದೆ ಒಂದೂರಿನ ಸ್ಟೇಷನ್ನಲ್ಲಿ ರೈಲು ನಿಂತಿತು. ಅಲ್ಲಿ ಇಳಿದು ಲಿಂಕ ನ್ನನು ತನಗೆ ಪರಿಚಿತಳಾದ ಒಬ್ಬ ಹುಡುಗಿಯು ಅಲ್ಲಿರುವಳೇ ಎಂದು ವಿಚಾರಿಸಿ ದನು. ಆ ಹುಡುಗಿಯು ಸ್ವಲ್ಪಮುಂಚೆ ಲಿಂಕನ್ನನಿಗೆ ಒಂದು ಕಾಗದವನ್ನು ಬರೆದು ಗಡ್ಡಮೀಸೆಗಳನ್ನು ಬೆಳೆಯಿಸುವುದು ಉಚಿತವೆಂದು ತಿಳಿಸಿದ್ದಳು. ಲಿಂಕ ನ್ನನು ತನ್ನ ಹೆಂಡತಿಯ ಒಪ್ಪಿಗೆಯನ್ನು ತೆಗೆದುಕೊಂಡು ಅಂದಿನಿಂದ ಗಡ್ಡಮೀಸೆ ಗಳನ್ನು ಬೆಳೆಯಿಸಿದನು. ಹುಡುಗಿಯಿದ್ದ ಊರಿನ ಹೆಸರು ಜ್ಞಾಪಕಕ್ಕೆ ಬರಲಾಗಿ ಅಲ್ಲಿ ಇಳಿದನು. ಹುಡುಗಿಯು ಜನರ ಮಧ್ಯದಿಂದ ಮುಂದೆ ಬಂದಳು. ಲಿಂಕ ನ್ನನು ನಗುತ್ತ, ''ನೋಡಮ್ಮ, ನೀನು ಅಪೇಕ್ಷಿಸಿದಂತೆ ಇವುಗಳನ್ನು ಬೆಳೆಯಿಸಿ ದ್ದೇನೆ'' ಎಂದನು. ಅದನ್ನು ನೋಡಿದವರು ಸಂತೋಷದಿಂದ ಚೀರಿದರು.

ನ್ಯೂಯಾರ್ಕ್ ಪಟ್ಟಣವು ಸಿಕ್ಕಿತು. ಅಲ್ಲಿ ಜನಗಳ ನಡುವೆ ನಿಂತು ಮಾತ ನಾಡಿದನು. ಮಾತನಾಡುವಸಮಯದಲ್ಲಿ, ಹಿಂದೆ ತಾನು ಹುಡುಗನಾಗಿದ್ದಾಗ ವಾಷಿಂಗ್ಟನ್ನನ ಚರಿತ್ರೆಯನ್ನೋದಿದ್ದುದನ್ನು ತಿಳಿಸಿದನು. ಆಮೇಲೆ, ''ವಾಷಿಂಗ್ಟ ನ್ನನೂ ಅವನ ಜೊತೆಯವರೂ ಯಾವುದನ್ನು ಸಾಧಿಸುವುದಕ್ಕಾಗಿ ಹೊಡೆದಾಡಿ ಪ್ರಾಣಗಳನ್ನು ತೆತ್ತರೋ ಅಂತಹ ಸಂಯೋಗವು ಅಮೂಲ್ಯನಾದುದು. ಅದನ್ನು ಈಗ ಕಡೆಗಾಣಲಾಗಿ ಅವರ ಶ್ರಮವನ್ನು ಕಡೆಗಂಡಂತಾಗಿದೆ........'' ಎಂದು ತಾನು ಇತರ ಸ್ಥಳಗಳಲ್ಲಿ ಹೇಳಿದ್ದ ವಿಷಯವನ್ನು ಒತ್ತಿ ಒತ್ತಿ ಇಲ್ಲಿಯೂ ಹೇಳಿದನು.

ಫಿಲೆಡೆಲ್ಫಿಯಕ್ಕೆ ಹೋಗಿ ಸಂಯುಕ್ತಸಂಸ್ಥಾನಗಳ ನಿಶಾನಿಯನ್ನು ಒಂದು ಕಟ್ಟಡದ ಶಿಖರದಲ್ಲಿ ಏರಿಸುವುದಕ್ಕಿಂತ ಸಂತೋಷಕರವಾದ ಕಾರ್ಯವು

---

[1] "Thou, too, sail on, O Ship of State!
Sail on, O Union, strong and great!
Humanity with all its fears,
With all the hopes of future years,
Is hanging breathless on thy fate!"

ಮತ್ತೊಂದಿರಲಿಲ್ಲ. ಆ ಊರಿನಲ್ಲಿ ಪ್ರಾಣಾಪಾಯವುಂಟೆಂದು ಆಪ್ತರಾದವರು ಹೇಳಿದರೂ ಕೂಡ ಅವನು, '' ಆ ಮಹತ್ಕಾರ್ಯವನ್ನು ನೆರವೇರಿಸುವ ಕಾಲದಲ್ಲಿ ಪ್ರಾಣದಮೇಲೆ ಲಕ್ಷ್ಯವನ್ನಿಡುವುದು ಯುಕ್ತವಲ್ಲ''—ಎಂದು ನಿರ್ಭೀತಿಯಿಂದಿದ್ದನು. ಕಾರ್ಯವು ನೆರವೇರಿತು. ಅವನ ಹರ್ಷಕ್ಕೆ ಮಿತಿಯಿರಲಿಲ್ಲ.

ಈ ನಡುವೆ ದಾರಿಯಲ್ಲಿ ಲಿಂಕನ್ನನನ್ನು ಖೂನಿಮಾಡಿಬಿಡಬೇಕೆಂದು ಮಸಲತ್ತುಗಳು ನಡೆಯುತ್ತಿದ್ದುವು. ಬಾಲ್ಟಿಮೋರ್ ನಗರವು ಅವುಗಳಿಗೆಲ್ಲಾ ಹುತ್ತದಂತಿದ್ದಿತು. ಲಿಂಕನ್ನನಿಗೆ ಬಹಳ ದೂರದಲ್ಲಿದ್ದಾಗಲೇ ಅದರ ಸುದ್ದಿ ಬಂದಿತು. ಆದರೂ ಅವನು ಲಕ್ಷಿಸಲಿಲ್ಲ. ಜೀವವನ್ನು ಹೆಚ್ಚೆಂದು ಎಣಿಸುವವರು ಯಾವ ಕೆಲಸವನ್ನು ಮಾಡುವುದಕ್ಕೂ ಧೈರ್ಯವಿಲ್ಲದವರೆಂದನು. ಆ ವಾರ್ತೆಯನ್ನು ಕೇಳಿ ಅವನ ಸ್ನೇಹಿತರು ಗುಟ್ಟಿನಲ್ಲಿ ಪತ್ತೇದಾರರನ್ನು ನೇಮಿಸಿ ಏರ್ಪಾಡುಮಾಡಿದರು. ಮಸಲತ್ತು ನಡೆಯುತ್ತಿರುವುದು ನಿಜವೆಂಬುದು ಗೋಚರಕ್ಕೆ ಬಂದಿತು. ಅವನು ಹ್ಯಾರಿಸ್‌ಬರ್ಗ್‌ನಲ್ಲಿದ್ದಾಗ, ವಾಷಿಂಗ್ಟನ್ನಿನಲ್ಲಿದ್ದ ಸಿವರ್ಡನಿಂದಲೂ ಜನರಲ್ ಸ್ಕಾಟ್‌ನಿಂದಲೂ ತಂತಿಗಳು ಬಂದುವು. ಬಾಲ್ಟಿಮೋರಿನಲ್ಲಿ ವಾಸಮಾಡುತ್ತಲಿದ್ದ ಗುಲಾಮರ ಯಜಮಾನರು ಖೂನಿಯ ಏರ್ಪಾಡನ್ನು ಮಾಡಿದ್ದರು. ಆದ್ದರಿಂದ ಲಿಂಕನ್ನನು ಮೊದಲು ಗೊತ್ತುಮಾಡಿದ್ದಂತೆ ಬಾಲ್ಟಿಮೋರಿನ ಮೂಲಕ ವಾಷಿಂಗ್ಟನ್ನಿಗೆ ಹೋಗುವುದು ವಿಪನ್ಮಯನಾಗಿದ್ದಿತು. ತಂತಿಗಳು ಬಂದಮೇಲೆ ಅವನು, ಮೊದಲು ಮೊದಲು ಆ ಮಾರ್ಗವಾಗಿಯೇ ಹೋಗಬೇಕೆಂದು ಮಾಡುತ್ತಿದ್ದ ಮೊಂಡತನವನ್ನು ಬಿಟ್ಟು ಅವಶ್ಯಕವಲ್ಲದಿರುವಾಗಲೂ ಕೆಟ್ಟಧೈರ್ಯವನ್ನೇಕೆ ಮಾಡಬೇಕೆಂದು ವಿವೇಕವನ್ನು ತಂದುಕೊಂಡು ಪ್ರಾಣರಕ್ಷಣೆಯ ವಿಷಯವನ್ನು ಚಿಂತಿಸಿದನು. ಹ್ಯಾರಿಸ್‌ಬರ್ಗ್‌ನಿಂದ ಅವನು ಹೊರಡುವನೆಂದು ತಂತಿಯು ಹೊರಡಲಿಲ್ಲ. ಜನಗಳು ತಂತಿಯನ್ನೆಲ್ಲಾ ಕಿತ್ತುಹಾಕಿಬಿಟ್ಟರು. ಆಮೇಲೆ, ಹೊತ್ತಾದಮೇಲೆ ಹೊರಡಬೇಕಾಗಿದ್ದ ರೈಲಿನಲ್ಲಿ ಹೊರಡದೆ, ಇನ್ನೂ ಕೆಲವು ಗಂಟೆಗಳ ಮುಂಚೆಯೇ ಹೋಗುತ್ತಿದ್ದುದರಲ್ಲಿ ವಾಷಿಂಗ್ಟನ್ನಿಗೆ ಪ್ರಯಾಣಮಾಡಿದನು. ರೈಲು ಬಾಲ್ಟಿಮೋರಿನ ಮೂಲಕವಾಗಿಯೇ ಸಾಗಿತು. ಆದರೆ ಅಲ್ಲಿನ ಜನಗಳು ಅವನು ಅಷ್ಟುಬೇಗ ಬರುವನೆಂದು ನಿರೀಕ್ಷಿಸಿರಲಿಲ್ಲ. ಆದಕಾರಣ ಲಿಂಕನ್ನನು ನಿರಪಾಯನಾಗಿ ಮುಂದಕ್ಕೆ ಹೊರಟು ರಾತ್ರಿ ಎರಡು ಗಂಟೆಯ ಹೊತ್ತಿನಲ್ಲಿ ರಾಜಧಾನಿಯನ್ನು ಸೇರಿದನು.

---

# ೪ನೆಯ ಅಧ್ಯಾಯ

## ಪ್ರಥಮಸಂಭಾಷಣ.

ಮಾರ್ಚಿ ನಾಲ್ಕನೆಯ ತಾರೀಖಿನದಿನ ಬುಕೆನನ್ನನು ಕುದುರೆಯ ಗಾಡಿಯನ್ನು ತೆಗೆದುಕೊಂಡು ಲಿಂಕನ್ನನು ಇಳಿದಿದ್ದ ಸ್ಥಳಕ್ಕೆ ಬಂದು ಅವನನ್ನು ಕರೆದುಕೊಂಡು, ಪ್ರೆಸಿಡೆಂಟನಾದವನು ಉಪನ್ಯಾಸಮಾಡಬೇಕಾಗಿದ್ದ ಸ್ಥಳಕ್ಕೆ ಹೊರಟನು. ಮೈದಾನವೊಂದರಲ್ಲಿ ಸಣ್ಣ ಮಂಟಪವೊಂದು ಕಟ್ಟಲ್ಪಟ್ಟಿದ್ದಿತು. ಲಿಂಕನ್ನನು ಅದನ್ನು ಹತ್ತಿ ನಿಂತು ಮಾತನಾಡುವುದನ್ನು ಕೇಳಲು ಸಾವಿರಾರುಜನರು ನಿರೀಕ್ಷಣೆಯಿಂದ ನಿಂತಿದ್ದರು. ಡಗ್ಲಸ್‌ನು ಮಂಟಪದ ಬಳಿಯಲ್ಲಿ ನಿಂತಿದ್ದವನು ಲಿಂಕನ್ನನು ಬಂದಮೇಲೆ ಅವನ ಪಾರ್ಶ್ವವನ್ನು ಸೇರಿದನು. ಪ್ರೆಸಿಡೆಂಟನು ಜಗುಲಿಯನ್ನೇರಿ ನಿಂತು ಮರ್ಯಾದೆಗಾಗಿ ತನ್ನ ತಲೆಯಮೇಲಿಂದ ಟೋಪಿಯನ್ನು ತೆಗೆದನು. ಆದರೆ ಅದನ್ನು ತಗಲುಹಾಕಲು ಎಲ್ಲಿಯೂ ಸ್ಥಳವಿರಲಿಲ್ಲ. ನೆಲದಮೇಲಿಡುವುದಕ್ಕೆ ಅವನಿಗೆ ಹೆದರಿಕೆಯಾಯಿತು. ಮಣ್ಣಾಗುತ್ತಿದ್ದಿತು. ಲಿಂಕನ್ನನಿಗೆ ಒಂದೂ ತಿಳಿಯಲಿಲ್ಲ. ಡಗ್ಲಸ್‌ನು ಆ ವೇಳೆಗೆ ಮುಂದಕ್ಕೆ ಹಾರಿಬಂದು, "ನಾನು ಪ್ರೆಸಿಡೆಂಟನಾಗದಿದ್ದರೆ ಚಿಂತೆಯಿಲ್ಲ ; ಪ್ರೆಸಿಡೆಂಟನ ಟೋಪಿಯನ್ನಾದರೂ ಹಿಡಿದಿರುವೆನು" ಎನ್ನುತ್ತ ಅದನ್ನು ಅವನ ಕೈಯಿಂದ ತೆಗೆದುಕೊಂಡನು.

ಪ್ರೆಸಿಡೆಂಟನು ಉಪನ್ಯಾಸಮಾಡುತ್ತ ನಿಂತನು. ಅವನು ಖೂನಿಯಾಗುವನೆಂದು ಸುದ್ದಿಯು ತತ್ಪೂರ್ವವಾಗಿ ಎಲ್ಲೆಲ್ಲಿಯೂ ಹರಡಿದ್ದಿತು. ಎಲ್ಲರೂ ಅವನ ಪ್ರಾಣಕ್ಕಾಗಿ ಭೀತರಾಗಿದ್ದರು. ಏನು ಒದಗುವುದೋ ಎಂದು ಎಲ್ಲರಿಗೂ ನಡುಕವುಂಟಾಯಿತು.

ಲಿಂಕನ್ನನು ಮಾತ್ರ ನಿಶ್ಚಲನಾಗಿ ನಿಂತನು, ನಿಂತು ತನ್ನ ಉಪನ್ಯಾಸವನ್ನಾರಂಭಿಸಿದನು. ದಾಸ್ಯದಗೊಡವೆಯು ತನಗೆ ಬೇಡವೆಂದು ಹೇಳಿ ಅವನು ದಕ್ಷಿಣವನ್ನು ಸಮಾಧಾನಗೊಳಿಸಲು ಕೆಲವು ಅನುಕೂಲವಾದ ಮಾತುಗಳನ್ನು ಹೇಳಿದನು. ಕೈಲಾದ ಸಾಹಸವನ್ನು ಮಾಡಿ ಯುದ್ಧವನ್ನು ತಪ್ಪಿಸುವುದು ಅವನ ಮುಖ್ಯಯೋಚನೆಯಾಗಿದ್ದಿತು. ಆದರೂ "ಯಾವ ಸಂಸ್ಥಾನವೂ ಸಂಯೋಗವನ್ನು ಬಿಟ್ಟು ಹೋಗಕೂಡದು ; ಹಾಗೆ ಮಾಡುವುದು ಸರ್ವಥಾ ನ್ಯಾಯವಿರುದ್ಧವಾದುದು." ಲಿಂಕನ್ನನು ದಕ್ಷಿಣದವರ ವಿಚಾರದಲ್ಲಿ ಔದಾರ್ಯವನ್ನೇ ತೋರಿಸಿದನು. ಆದರೂ "ತನ್ನ ವಶದಲ್ಲಿದ್ದ ಅಧಿಕಾರವಷ್ಟನ್ನೂ ಉಪಯೋಗಿಸಿ ಸರ್ಕಾರಕ್ಕೆ ಸೇರಿದ್ದಾದ ಭೂಮಿಯನ್ನೂ ಪದಾರ್ಥಗಳನ್ನೂ ಆಕ್ರಮಿಸಿ ಸ್ವಾಧೀನಪಡಿಸಿಕೊಳ್ಳುವುದು ಸತ್ಯ" ವೆಂದನು. ಹೀಗೆ ಅವನ ಮಾತು ಮೊದಲಿಂದ ಕೊನೆಯವರೆಗೆ ಸಮಾಧಾನದ ಅಪೇಕ್ಷೆಯನ್ನು ತೋರಿಸುವುದಾದರೂ ಯುದ್ಧವನ್ನಾರಂಭಿಸಿ ದ್ವೇಷವನ್ನು ಹೆಚ್ಚಿಸುವ ತಪ್ಪು ದಕ್ಷಿಣದವರದೇ ಎಂಬುದನ್ನು ಸಾಧಿಸುತ್ತಿದ್ದಿತು.

ವಿರೋಧಭಾವವುಳ್ಳ ಸಂಸ್ಥಾನಗಳು ಟಪ್ಪಾಲನ್ನು ತಪ್ಪಿಸಿ ಅಡಚಣೆಯನ್ನುಂಟು ಮಾಡದಿದ್ದಲ್ಲಿ ಅದು ರಾಜ್ಯದ ಎಲ್ಲಾ ಕಡೆಯಲ್ಲಿಯೂ ಚಲಾವಣೆಯಲ್ಲಿರಲು ಅವನ ಆಕ್ಷೇಪಣೆಯಿರಲಿಲ್ಲ. ಅಮೆರಿಕವು ನಿಜವಾಗಿ ಭಾಗವಾಗುವುದೆಂಬುದು ಸುಳ್ಳು. ಸಂಸ್ಥಾನಗಳಲ್ಲಿರುವ ಪ್ರಜೆಗಳೊಳಗೆ ಸಂಸರ್ಗವು ಮೊದಲಿನಂತೆಯೇ ನಿರಾಟಂಕವಾಗಿ ನಡೆಯುವುದು—ಅದನ್ನು ತಪ್ಪಿಸುವುದು ಅಸಾಧ್ಯ. ಯುದ್ಧವೆಷ್ಟಾದರೂ ಕೊನೆಯಲ್ಲಿ ಜನಗಳು ಮೊದಲಿನಂತೆಯೇ ಹೊಂದಿಕೊಳ್ಳಲು ಪ್ರಯತ್ನಿಸುವರು. ಆದರೆ ಈ ಸಂಸರ್ಗವೂ ಹೊಂದಿಕೆಯೂ ಯುದ್ಧದ ಮೂಲಕ ಆಗುವುದಕ್ಕಿಂತ ಒಗ್ಗಟ್ಟಾಗಿ ನೆಮ್ಮದಿಯಿಂದಿರುವ ಸಾಮೋಪಾಯದ ಮೂಲಕವೇ ಆದರೆ ಎಷ್ಟು ಉತ್ತಮ! ಕೊನೆಯಲ್ಲಿ ಹೀಗೆಂದನು: "ಈಗಲೇ ಮುಗಿಸಲು ನನಗೆ ಇಷ್ಟವಿಲ್ಲ. ನಾವು ಪರಸ್ಪರ ಶತ್ರುಗಳಲ್ಲ, ಸ್ನೇಹಿತರು. ಶತ್ರುಗಳಾಗಬಾರದು—ಕಾರಣಾಂತರದಿಂದ ನಮುನಮಗೆ ಒಂದು ಕ್ಷಣಕಾಲ ವೈಷಮ್ಯವು ಬಂದಿರಬಹುದು; ಆದರೆ ಅದು ಎಲ್ಲಾಕಾಲಕ್ಕೂ ನಮ್ಮ ಮನಸ್ಸನ್ನು ಕೆಡಿಸಿ ಸ್ನೇಹವನ್ನು ಮುರಿಯಕೂಡದು. ಒಂದು ಮನೆಯವರು ಒಂದು ಕ್ಷಣ ಜಗಳವಾಡಿದರೂ ಉತ್ತರಕ್ಷಣದಲ್ಲಿ ಒಗ್ಗಟ್ಟಾಗುವರು. ನಮ್ಮ ಪೂರ್ವಿಕರ ಸ್ಮರಣೆಯುಂಟಾಗಲಿ; ಅವರು ಪಟ್ಟ ಪ್ರಯಾಸವು ಜ್ಞಾಪಕಕ್ಕೆ ಬರಲಿ; ಆಗ ಸಂಯೋಗವು ಎಂಥದೆಂಬುದು ಗೊತ್ತಾಗುವುದು. ಅದನ್ನು ಉಪೇಕ್ಷಿಸಲು ಯಾರಿಗೆತಾನೆ ಮನಸ್ಸು ಬಂದೀತು?" ಆಬಳಿಕ ಉಪಸಂಹಾರರೂಪವಾಗಿ ಈ ಕೆಳಗಿನ ಮಾತುಗಳನ್ನು ಹೇಳಿದನು:[1]

"In your hands, my dissatisfied countrymen, and not in mine, is the momentous issue of the Civil War. The Government will not assail you. You can have no conflict without being yourselves the aggressors...... The mystic chords of memory, stretching from every battle-field and patriot grave to every living heart and hearthstone all over this broad land, will yet swell the chorus of the Union when again touched, as surely they will be, by the better angels of our nature".

---

[1] ಈ ವಾಕ್ಯಗಳಿಗೆ ಕನ್ನಡದಲ್ಲಿ ಅನುವಾದವು ಅಸಾಧ್ಯವಲ್ಲ. ಆದರೆ ಅಂತಹ ಪ್ರಯತ್ನದಿಂದ ಮೂಲದ ಅರ್ಥದಲ್ಲಿರುವ ಸ್ವಾರಸ್ಯವನ್ನು ಕುಗ್ಗಿಸಿ ಕುರೂಪ ಮಾಡುವುದೇ ಫಲವಾಗುವುದು. ಅರ್ಥವನ್ನು ಕೆಡಿಸದಿದ್ದರೆ ಅತಿಶಯವಾದ ಉಪಕಾರಮಾಡಿದಂತಲ್ಲವೆ?

# ೫ನೆಯ ಅಧ್ಯಾಯ

---

## ಸಮ್‌ಟರ್ ದುರ್ಗದಲ್ಲಿ.

ಪ್ರಥಮಸಂಭಾಷಣೆಯಾದ ಮಾರನೆಯ ದಿವಸವೇ ಸಮ್‌ಟರ್ ದುರ್ಗದಲ್ಲಿದ್ದ ಮೇಜರ್ ಆಂಡರ್ಸನ್ನನು ಸುದ್ದಿಯನ್ನು ಹೇಳಿಕಳುಹಿಸಿದನು. ಹೆಚ್ಚಾಗಿ ಸೈನ್ಯವನ್ನೂ ಆಹಾರಪದಾರ್ಥವನ್ನೂ ಕಳುಹಿಸದಿದ್ದಲ್ಲಿ ಇನ್ನು ಕೆಲವು ವಾರಗಳ ಬಳಿಕ ದುರ್ಗವನ್ನು ಕಾಪಾಡಿಕೊಳ್ಳುವುದೂ ಅದರೊಳಗಿರುವುದೂ ದುಃಸಾಧ್ಯವಾಗುತ್ತಿದ್ದಿತು. ಅದರೊಡನೆ ಜನರಲ್ ಸ್ಕಾಟನು ತನ್ನ ಅಭಿಪ್ರಾಯವನ್ನು ಬರೆದು ಕಳುಹಿಸಿದನು. ದುರ್ಗದ ಸಹಾಯಕ್ಕೆ ಕನಿಷ್ಠಪಕ್ಷ 20,000 ಸೈನಿಕರನ್ನು ಕಳುಹಿಸುವುದು ಅವಶ್ಯಕವಾಗಿದ್ದಿತು. ಇಲ್ಲದಿದ್ದರೆ ದುರ್ಗವು ಉಳಿಯುತ್ತಿರಲಿಲ್ಲ. ಆದರೆ ಅಷ್ಟು ಜನರನ್ನು ಒಂದೆರಡು ದಿನಗಳಲ್ಲಿ ತರಲಾಗುತ್ತಿರಲಿಲ್ಲ. ಮಂತ್ರಿಗಳ ಸಭೆಯು ಸೇರಿತು. ನಾವೆಯ ಇಲಾಖೆಯಲ್ಲಿಯೂ ಸೈನ್ಯದ ಇಲಾಖೆಯಲ್ಲಿಯೂ ತೀಃದವರು ಕರೆಯಿಸಲ್ಪಟ್ಟರು. ನಾವೆಯವರು ತಾವು ಸೈನ್ಯವನ್ನು ಸಾಗಿಸಿಕೊಂಡು ಹೋಗಿ ದುರ್ಗದಲ್ಲಿ ಬಿಡುವುದಾಗಿ ಹೇಳಿದರು. ಹೋದರೆ ಹಡಗುಗಳು ದಕ್ಷಿಣದವರ ಫಿರಂಗಿಗಳ ಬಾಯಿಗೆ ತುತ್ತಾಗುವುವೆಂದು ಸೈನ್ಯದವರು ಹೇಳಿದರು. ಅದರ ಮೇಲೆ ಲಿಂಕನ್ನನು ಹಾಗೆ ಮಾಡುವುದರ ಯುಕ್ತತೆಯನ್ನು ಪರ್ಯಾಲೋಚಿಸಿದನು. ಇಬ್ಬರು ಮಾತ್ರ ಹೌದೆಂದರು. ಉಳಿದ ಐದುಮಂದಿ ಮಂತ್ರಿಗಳು ಅದನ್ನು ಒಪ್ಪಲಿಲ್ಲ. ಸೈನ್ಯದ ಇಲಾಖೆಯವನಾಗಿ ಸ್ಕಾಟನು, ಸಂಯೋಗದ ದಂಡು ದುರ್ಗವನ್ನು ಬಿಟ್ಟು ಹೊರಟುಹೋಗುವುದೇ ಸರಿಯಾಗುವುದೆಂದನು. ಲಿಂಕನ್ನನು ಮಾತ್ರ ಯಾವುದನ್ನೂ ಹೇಳಲಿಲ್ಲ.

ಸಮ್‌ಟರ್ ದುರ್ಗದ ಚರಿತ್ರೆಯನ್ನು ಹಿಂದೆ ಹೇಳಿದೆ. ದಕ್ಷಿಣದ ಜನಗಳಿಗೆ ಆ ದುರ್ಗದ ಮೇಲೆ ಬಹಳ ಕಣ್ಣಿದ್ದಿತು. ಆ ದುರ್ಗದಲ್ಲಿ ಪ್ರತಿಪಕ್ಷದ ಸೈನ್ಯವಿದ್ದುದರಿಂದ ಬಹಳ ಅಪಾಯವೆಂದು ಚಾರ್ಲ್‌ಸ್ಟನ್ನಿನವರು ಭಾವಿಸಿದರು. ಅಲ್ಲದೆ ರಾಜ್ಯವು ಭಾಗವಾದ ಮೇಲೆ ಭಾಗದ ರೇಖೆಯಿಂದ ದಕ್ಷಿಣಕ್ಕಿರುವ ರಾಷ್ಟ್ರಗಳೂ ಕೋಶಗಳೂ ಕೋಟೆಗಳೂ ತಮ್ಮ ಸ್ವಾಧೀನಕ್ಕೆ ಬರುವುವೆಂದು ಅಲ್ಲಿಯ ಪ್ರಜೆಗಳು ಎಣಿಸಿದರು. ದಕ್ಷಿಣದ ಭೂಮಿಯೆಲ್ಲವೂ ತಮ್ಮದು ; ಆ ಭೂಮಿಯ ಮೇಲಿರುವ ವಸ್ತುವೆಲ್ಲವೂ ತಮ್ಮದು. ಆದಕಾರಣ ಪ್ರತಿಪಕ್ಷವು ಸೈನ್ಯವನ್ನು ಅಲ್ಲಿಟ್ಟಿರುವುದು ಅತ್ಯಾಚಾರವಲ್ಲದೆ ಬೇರೆಯಲ್ಲ. ಜೊತೆಗೆ ಚದುರಿದ್ದ ಸೈನ್ಯವನ್ನು ಒಟ್ಟುಗೂಡಿಸಿ ಬಲವಾದೊಂದು ಕೋಟೆಯಲ್ಲಿ ಕಾವಲಾಗಿ ಇಟ್ಟುದೂ ಆಯಿತು. ಇದೊಂದು ದಕ್ಷಿಣಕ್ಕೆ ಸರಿಬೀಳಲಿಲ್ಲ. ಇದೆಲ್ಲವನ್ನೂ ಮೇಲೆ ಹೇಳಿದ್ದೇವೆ.

ಲಿಂಕನ್ನನು ಪ್ರೆಸಿಡೆಂಟನಾಗಿ ಒಂದು ತಿಂಗಳಾಯಿತು. ಇನ್ನೂ ಯಾವುದನ್ನೂ ಮಾಡಿರಲಿಲ್ಲ. ಯಾವುದನ್ನು ಮಾಡುವುದಕ್ಕೂ ಅವನಿಗೆ ಧೈರ್ಯವಾಗಲೀ

ನಿರ್ಣಯಶಕ್ತಿಯಾಗಲೀ ಇಲ್ಲವೆಂದು ಜನಗಳು ಆಡಿಕೊಳ್ಳಲಾರಂಭಿಸಿದರು. ಅವನ ತಾಳ್ಮೆಯು ಅವರ ತಾಟಸ್ಥ್ಯವನ್ನು ಬತ್ತಿಸುತ್ತ ಬಂದಿತು. "ಪ್ರೆಸಿಡೆಂಟನು ತನ್ನ ಪ್ರಥಮಸಂಭಾಷಣೆಯಲ್ಲಿ ಬೇಕಾದಷ್ಟನ್ನು ಮಾಡಿಬಿಡುವುದಾಗಿ ಹೇಳಿದನು. ಆದರೆ ಇದುವರೆಗೆ ಏನನ್ನೂ ಮಾಡಿಲ್ಲ. ಕಡೆಗೆ ದ್ರೋಹಿಗಳಾದವರನ್ನು ಈಕ್ಷಣವೇ ಸೆರೆ ಹಿಡಿದು ಸೇರಿಸುವುದು ಉತ್ತಮ" ಎಂದು ಪತ್ರಿಕೆಗಳು ಒದರಿದುವು.

ಚಾರ್ಲ್ಸ್‌ಟನ್ನಿನಲ್ಲಿದ್ದ ಜನಗಳು ಯುದ್ಧವನ್ನಾರಂಭಿಸಿ ಅನಾಹುತವನ್ನು ನಡೆಯಿಸಲು ಬಹಳವಾಗಿ ತವಕಿಸುತ್ತಿದ್ದರು. ಮೇಜರ್ ಆಂಡರ್ಸನ್ನನ ಆಚರಣೆ ಯನ್ನು ನೋಡಿದಕೂಡಲೇ ಅವರು ನೆಗೆದೆದ್ದರು. ಬಂದರಿನಲ್ಲಿ ಅಲ್ಲಲ್ಲಿ ಸ್ಥಳಗಳನ್ನೇರ್ಪಡಿಸಿ ಫಿರಂಗಿಗಳನ್ನು ನೆಟ್ಟರು. ಅಲ್ಲಿಂದ ಗುಂಡಗಳನ್ನೆಸೆಯಲಾಗಿ ಬಂದರಿಂದ ಆಚೆಗೆ ಸ್ವಲ್ಪ ದೂರದಲ್ಲಿ ಸಮುದ್ರ ಮಧ್ಯದಲ್ಲಿದ್ದ ದುರ್ಗವು ಪುಡಿಪುಡಿಯಾಗುತ್ತಿದ್ದಿತು. ರಕ್ಷಣೆಗಾಗಿ ಕೋಟೆಗಳೂ ಕೊತ್ತಳಗಳೂ ಎದ್ದುವು. ಆದರೂ ತಪ್ಪು ತಮ್ಮದಲ್ಲವೆಂಬುದನ್ನು ತೋರಿಸಿಕೊಳ್ಳುವುದಕ್ಕೋಸ್ಕರ ದಕ್ಷಿಣಕೆರೊಲಿನದವರು ಇಬ್ಬರು ನಿಯೋಗಿಗಳನ್ನು ವಾಷಿಂಗ್ಟನ್ನಿಗೆ ಕಳುಹಿಸಿದರು.

ಸಮ್‌ಟರ್ ದುರ್ಗವು ಮಾತ್ರ ಎಲ್ಲರ ಕಣ್ಣಿಗೂ ಬಿದ್ದು ಅದರ ಸಂಬಂಧ ವಾಗಿ ಅಷ್ಟೊಂದು ಜಗಳವುಂಟಾಗಲು ಕಾರಣವೇನೆಂದು ಕೇಳಬಹುದು. ಅದರ ಹಾಗೆ ದೃಢವಾದ ಕೋಟೆಗಳು ಇನ್ನೂ ಬೇಕಾದಹಾಗಿದ್ದುವು. ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಅಂತಹ ಕೋಟೆಗಳಿಗೆ ಕಡಿಮೆಯಿರಲಿಲ್ಲ. ಆದರೂ ಉತ್ತರವು ಅದನ್ನು ಬಿಟ್ಟುಕೊಡಲೊಪ್ಪಲಿಲ್ಲ. ಅದು ದಕ್ಷಿಣ ಕೆರೊಲಿನಕ್ಕೆ ಸೇರಿದ್ದಿತು. ಆದಕಾರಣ ಆ ದುರ್ಗವು ವಶದಲ್ಲಿದ್ದರೆ ಒಂದು ಆಧಾರವು ಸಿಕ್ಕಿದಹಾಗಾಗುವುದೆಂದೂ ಮುಂದೆ ಬಹಳ ಸಹಾಯಕ್ಕೆ ಬರುವುದೆಂದೂ ಉತ್ತರದ ಜನಗಳು ಭಾವಿಸಿದರು. ಪ್ರತ್ಯೇಕವಾಗುವುದಕ್ಕೂ ಇತರ ದುರಭಿಪ್ರಾಯಗಳನ್ನು ಹರಡುವುದಕ್ಕೂ ಆ ಸಂಸ್ಥಾನವೇ ಮೊದಲನೆಯದಾದುದರಿಂದ ಅದಷ್ಟು ಪ್ರತೀಕಾರವಾಗಲೆಂದು ಯೋಚಿಸಿ ಉತ್ತರವು ಅದನ್ನು ಬಿಟ್ಟುಕೊಡದೆ ಮೊಂಡತನ ಮಾಡಿದ್ದರೂ ಮಾಡಿರ ಬಹುದು. ದಕ್ಷಿಣ ಕೆರೋಲಿನದ ಸರ್ಕಾರವು ತನ್ನ ಅಧಿಕಾರವು ನಡೆದು ಗೌರವ ವನ್ನು ಪಡೆಯುವುದಕ್ಕೋಸ್ಕರ, ಉತ್ತರವು ಅದನ್ನು ತ್ಯಾಗಮಾಡಿ ಹೊರಟು ಹೋಗ ಬೇಕೆಂದು ಅಪೇಕ್ಷಿಸಿತು. ಅಲ್ಲದೆ ಯುದ್ಧಾಪೇಕ್ಷೆಯು ಅಲ್ಲಿ ಬಹಳವಾಗಿದ್ದಿತು. ಯುದ್ಧ ವನ್ನಾರಂಭಿಸಲು ಯಾವುದಾದರೊಂದು ನೆಪವು ಅವಶ್ಯಕವಾಗಿದ್ದಿತು. ಈಗ ನೆಪವು ಸಿಕ್ಕಿತು. ಅವರು ಆ ದುರ್ಗವನ್ನು ಆಕ್ರಮಿಸಲು ಹೊರಟರು. ಈ ಸಮಯ ದಲ್ಲಿ ಕೆಲಸದಲ್ಲಿ ಚಟುವಟಿಕೆಯನ್ನು ತೋರಿಸುವುದು ಉತ್ತರದ ಕರ್ತವ್ಯವಾಗಿದ್ದಿತು. ಈ ಸಮಯದಲ್ಲಿಯೇ ಸರ್ಕಾರವು—ಅದರೊಳಗೂ ಅಧಿಕರ್ತನಾದ ಲಿಂಕನ್ನನು—ತಾಮಸಮಾಡಿತು. ತಾಮಸವು ಮಿತಿಮೀರಿ ಸರ್ಕಾರಕ್ಕೆ ಅವಮಾನವಾಗು ವಂತಾಯಿತು.

ಮುಂದೆ ಹರಿದು ಕೆಲಸಮಾಡಿ ದಕ್ಷಿಣದವರನ್ನು ರೇಗಿಸಲು ಲಿಂಕನ್ನನಿಗೆ ಇಷ್ಟವಿರಲಿಲ್ಲ. "ದೇಶದಲ್ಲಿ ಕಲಹವನ್ನುಂಟುಮಾಡಬಲ್ಲವನು ನಾನಲ್ಲ, ಅಸಮಾ

ಧಾನಹೊಂದಿದ ನೀವು '' ಎಂದು ಅವನು ಪ್ರಜೆಗಳಿಗೆ ತಿಳಿಸಿದ್ದನು. ಅವನಿಗೆ ಕಲಹವೂ ರಕ್ತಶೋಷಣೆಯೂ ತೀರ ಅಸಮ್ಮತವಾಗಿದ್ದುವು. ಆದರೆ ಆಗಿನ ಸ್ಥಿತಿಯಲ್ಲಿ ಕಲಹವನ್ನು ಯಾವರೀತಿಯಿಂದಲೂ ತಪ್ಪಿಸುವುದಕ್ಕಾಗುತ್ತಿರಲಿಲ್ಲ. ಮಂತ್ರಿಗಳ ಸಲಹೆಯನ್ನು ಅಲಕ್ಷ್ಯಮಾಡಿ ಸಮ್‌ಟರ್ ದುರ್ಗದವರಿಗೆ ಒತ್ತಾಸೆ ಮಾಡಿದ್ದರೂ ಮಾಡಬಹುದಾಗಿದ್ದಿತು. ಅಥವಾ ಅವರ ಮಾತಿನ ಪ್ರಕಾರ ದುರ್ಗವನ್ನು ಬಿಟ್ಟು ಹೋಗುವಂತೆ ಆಂಡರ್‌ಸ‌ನಿಗೆ ಅಪ್ಪಣೆಯನ್ನಾದರೂ ಮಾಡಬಹುದಾಗಿದ್ದಿತು. ಹೇಗೆ ಮಾಡಿದರೂ ಯುದ್ಧವು ಮಾತ್ರ ತಪ್ಪುತ್ತಿರಲಿಲ್ಲ. ದಕ್ಷಿಣದವರು ಸ್ವಲ್ಪ ಅವಕಾಶವು ಸಿಕ್ಕಿದರೂ ಸಾಕು—ಹೊಡೆದಾಟವನ್ನು ಪ್ರಾರಂಭಿಸುತ್ತಿದ್ದರು. ಆದ ಕಾರಣ ಆದಷ್ಟು ಸಾವಕಾಶಮಾಡಿ, ಸಾಧ್ಯವಾದರೆ ಯುದ್ಧವನ್ನು ತಪ್ಪಿಸೋಣವೆಂದು ಅವನು ಯೋಚಿಸಿದನು. ಯೋಚಿಸಿ ತಾಮಸಮಾಡಿದನು. ಅವನ ಆ ಉದ್ದೇಶವನ್ನು ತಿಳಿಯದಿದ್ದವರು ಅದನ್ನು ನೋಡಿ ಪ್ರೆಸಿಡೆಂಟನಲ್ಲಿ ಚಟುವಟಿಕೆಯೂ ನಿರ್ವಾಹಶಕ್ತಿಯೂ ಸಾಲದೆಂದರು. ಅದು ತಪ್ಪು. ಸಮ್‌ಟರ್ ದುರ್ಗವು ಅತ್ಯಲ್ಪವಾದ ವಿಚಾರ. ಒಂದು ಹೆಜ್ಜೆಯನ್ನು ಮುಂದಕ್ಕಿಟ್ಟಿದ್ದರೂ ಇಡೀ ದಕ್ಷಿಣವು ಕಿಡಿಹುಟ್ಟಿ ಹತ್ತಿಕೊಳ್ಳುತ್ತಿದ್ದಿತು. ಒಂದು ಹೆಜ್ಜೆ ಮುಂದಕ್ಕಿಡುವುದಾದರೂ ಅದರ ಫಲಿತಾಂಶವೇನಾಗುವುದು, ಸಂಯೋಗದ ಸ್ಥಿತಿಯು ಎಲ್ಲಿಗೆ ಬರುವುದು, ಎಂಬ ವಿಚಾರಗಳನ್ನು ಮುಂದಟ್ಟುಮಾಡಿಕೊಂಡ ಕೂಡಲೇ ಲಿಂಕನ್ನನು ನಿಷ್ಕರ್ಷೆಯಿಂದ ವ್ಯವಹರಿಸಿದನು. ಅದಕ್ಕೆ ಮುಂಚೆ ಮಾತ್ರ ಆ ಪ್ರಯತ್ನವೇ ಇಲ್ಲ.

ಈ ನಡುವೆ ಮತ್ತೊಂದು ಪ್ರಸಂಗವು ಬಂದು ಸೇರಿಕೊಂಡಿತು. ಮಾಂಟ್‌ಗಾಮೆರಿಯಲ್ಲಿ ಸೇರಿದ ದಕ್ಷಿಣದ ಕಾಂಗ್ರೆಸ್ ಸಭೆಯು ಇಬ್ಬರು ನಿಯೋಗಿಗಳನ್ನು ವಾಷಿಂಗ್ಟನ್ನಿಗೆ ಕಳುಹಿಸಿತು. ಅವರು ಕೆಲವು ಅಂಶಗಳಲ್ಲಿ ಸಂಯೋಗದ ಸರ್ಕಾರದ ನಿಶ್ಚಯವನ್ನು ತಿಳಿದುಕೊಳ್ಳಲು ಬಂದರು. ಆದರೆ ಸರ್ಕಾರವು ಅವರನ್ನು ನಿಜವಾಗಿ ನಿಯೋಗಿಗಳೆಂದು ಅಂಗೀಕರಿಸದೆ ತಿರಸ್ಕರಿಸಿಬಿಟ್ಟಿತು. ಅವರು ಬಳಿಕ ಪ್ರೆಸಿಡೆಂಟನ ಬಳಿಗೆ ಹೋದರು. ಪ್ರೆಸಿಡೆಂಟನು ಅವರಿಗೆ ತನ್ನ ಪ್ರಥಮಸಂಭಾಷಣದ ಪ್ರತಿಯೊಂದನ್ನು ಕಳುಹಿಸಿ, ಯಾವ ಸಂಶಯವಿದ್ದರೂ ಅದಕ್ಕೆ ತೀರ್ಮಾನವು ಅದರಲ್ಲಿ ಸಿಕ್ಕುವುದೆಂದು ಹೇಳಿಬಿಟ್ಟನು. ತಮ್ಮನ್ನು ಕೂಡಲೇ ಸೆರೆಗೆ ತಳ್ಳುವರೆಂದು ನಿಯೋಗಿಗಳು ಭಾವಿಸಿದರು. ಆದರೆ ಅಂಥದೇನೂ ಸಂಭವಿಸಲಿಲ್ಲ. ಅವರು ಮುಂದೆ ಸ್ಟೇಟ್ ಸೆಕ್ರೆಟರಿಯಾದ ಸಿವರ್ಡನನ್ನು ಸಮೀಪಿಸಿದರು. ಸಿವರ್ಡನಿಗೆ ಬಹಳ ಸಂತೋಷವಾಯಿತು. ಶಾಂತಿಯನ್ನುಂಟುಮಾಡಿ ದೇಶವನ್ನುಳಿಸಿದನೆಂಬ ಕೀರ್ತಿಯು ತನಗೆ ಬಂದರೆ ಸಾಕೆಂದು ಅವನಿಗೆ ಬಲವಾದ ಆಶಯವಿದ್ದಿತು. ವ್ಯವಹಾರಗಳು ನಡೆದುವು. ಆದರೆ ಸಿವರ್ಡನು ಯಾವುದನ್ನೂ ಸ್ವತಂತ್ರಿಸಿ ಮಾಡಲಿಲ್ಲ. ಲಿಂಕನ್ನನಿಗೆ ತಿಳಿಸದೇ ಇರಲಿಲ್ಲ. ಪ್ರೆಸಿಡೆಂಟನು ಅವನಿಗೆ ಆ ವಿಚಾರದಲ್ಲಿ ಸಂಪೂರ್ಣವಾದ ಸ್ವಾತಂತ್ರ್ಯವನ್ನು ಕೊಟ್ಟನು. ಜೊತೆಗೆ, ವ್ಯವಹಾರದಲ್ಲಿ ಬಹಳ ಎಚ್ಚರಿಕೆಯಿಂದ ಇರುವಂತೆಯೂ ಹೇಳಿದನು. ಸಿವರ್ಡನ ನಿರ್ಣಯವು ಏಪ್ರಿಲ್ ಎಂಟನೆಯ ತಾರೀಖಿನವರೆಗೂ ದೊರೆಯಲಿಲ್ಲ. ನಿಯೋಗಿಗಳು ಅದುವರೆಗೂ ವಾಷಿಂಗ್ಟನ್ನಿ

ನಲ್ಲಿಯೇ ನಿಂತರು. ಈ ವಿಳಂಬವು ಉದ್ದೇಶಪೂರ್ವಕವೂ ಆಗಿದ್ದಿತು. ರಾಜಧಾನಿಯಲ್ಲಿ ನಿಂತು ಅವರು ಸರ್ಕಾರದ ನಡೆವಳಿಕೆಯ ಸಂಬಂಧದಲ್ಲಿ ತಿಳಿದ ಸುದ್ದಿಯನ್ನು ಶೇಖರಿಸಿ ದಕ್ಷಿಣಕ್ಕೆ ಕಳುಹಿಸುತ್ತಿದ್ದರು

ಅವರು ಅಲ್ಲಿದ್ದಾಗ ಲಿಂಕನ್ನನು ತನ್ನ ಕಡೆಯಿಂದ ದಳವಾಯಿಯೊಬ್ಬನನ್ನು ದಕ್ಷಿಣ ಕೆರೊಲಿನದ ರಾಜಧಾನಿಯಾದ ಚಾರ್ಲ್ಸ್‌ಟನ್ನಿಗೆ ಕಳುಹಿಸಿದನು. ಆತನು ಹೋಗಿ, ''ಸಮ್‌ಟರ್ ದುರ್ಗಕ್ಕೆ ಆಹಾರಪದಾರ್ಥವು ಕಳುಹಿಸಲ್ಪಡುವುದು. ನೀವು ಅಡ್ಡಿಮಾಡದಿದ್ದಲ್ಲಿ ಎಲ್ಲವೂ ಸುಗಮವಾಗಿರುವುದು. ಇಲ್ಲದಿದ್ದರೆ, ಮುಂದಿನ ಕಾರ್ಯವು ಪ್ರಾರಂಭವಾಗುವುದು'' ಎಂದು ತಿಳಿಸಿದನು. ಆರನೆಯ ತಾರೀಖಿನ ದಿನ ಹಡಗುಗಳು ಸಾಮಾನನ್ನು ತುಂಬಿಕೊಂಡು ಹೊರಟವು. ಈ ಸಮಾಚಾರವು ನಿಯೋಗಿಗಳಿಗೂ ತಿಳಿಸಲ್ಪಟ್ಟಿತು. ಎಂಟನೆಯ ತಾರೀಖಿನ ದಿನ ಸಿವರ್ಡನಿಂದ ಉತ್ತರವು ಬಂದಿತು. ದಕ್ಷಿಣದಿಂದ ಬಂದಿದ್ದವರನ್ನು ನಿಯೋಗಿಗಳೆಂದು ಅಂಗೀಕರಿಸಲಾಗದಿದ್ದುದರಿಂದ ಯಾವ ವಿಚಾರವನ್ನೂ ನಿಶ್ಚಯಮಾಡಲಾಗುತ್ತಿರಲಿಲ್ಲ.

ಪ್ರೆಸಿಡೆಂಟನೇ ಮೊದಲು ಯುದ್ಧವನ್ನಾರಂಭಿಸುತ್ತಿರುವನೆಂದೂ ಆತ್ಮರಕ್ಷಣೆಯ ಪ್ರಯತ್ನವನ್ನು ಮಾತ್ರ ತಾವು ಮಾಡುವೆವೆಂದೂ, ಆದಕಾರಣ ದಕ್ಷಿಣದ ಆಚರಣೆಯಲ್ಲಿ ತಪ್ಪಿರಲಾರದೆಂತಲೂ ಹೇಳಿಕೊಳ್ಳುತ್ತ ನಿಯೋಗಿಗಳು ಹಿಂದಿರುಗಿದರು.

ಸಮ್‌ಟರ್ ದುರ್ಗದ ವಿಚಾರವಾಗಿ ಇನ್ನೂ ಚರ್ಚೆಗಳು ನಡೆಯುತ್ತಲೇ ಇದ್ದುವು. ಆ ಸಮಯದಲ್ಲಿ ತೊಂದರೆಯೊಂದು ಬಂದಿತು. ಆದರೆ ಅದು ಒಂದು ರೀತಿಯಾಗಿ ಅನುಕೂಲವನ್ನೇ ಉಂಟುಮಾಡಿತು. ಲಿಂಕನ್ನನು ಅಲ್ಲಿಂದ ಮುಂದೆ ಸ್ವತಂತ್ರಿಸಿ ಆಚರಿಸಲು ಅವಕಾಶವು ಲಭಿಸಿತು. ಮಂತ್ರಿಗಳ ಸಲಹೆಯನ್ನು ಕೇಳುತ್ತಿದ್ದನೇ ಹೊರತು ಮುಖ್ಯವಾಗಿಟ್ಟುಕೊಳ್ಳುತ್ತಿರಲಿಲ್ಲ. ಸಿವರ್ಡನು ಪ್ರೆಸಿಡೆಂಟನು ಒಟ್ಟಿನಲ್ಲಿ ಕೈಲಾಗದವನೆಂದು ಭಾವಿಸಿದನು. ಆದರೆ ಅದರ ಫಲಿತಾಂಶವು ಅವನಿಗೆ ಆಶ್ಚರ್ಯವನ್ನುಂಟುಮಾಡಿತು. ಅವನು ಏಪ್ರಿಲ್ ಒಂದನೆಯ ತಾರೀಖಿನ ದಿನ, ''ಪ್ರೆಸಿಡೆಂಟನು ಆಲೋಚಿಸಬೇಕಾದ ಕೆಲವು ವಿಷಯಗಳು'' ಎಂಬ ಹೆಸರಿನಿಂದ ಒಂದು ಪತ್ರವನ್ನು ಬರೆದು ಲಿಂಕನ್ನನ ಬಳಿಗೆ ಕಳುಹಿಸಿದನು. ಅದುವರೆಗೆ ಸರ್ಕಾರವು ತಟಸ್ಥವಾಗಿದ್ದುದಕ್ಕಾಗಿ ಬಹಳ ವಿಷಾದವನ್ನು ತೋರಿಸಿ, ದಕ್ಷಿಣದ ದುರ್ಗಗಳ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಸೂಚಿಸಿದ್ದನು. ಆಮೇಲೆ, ''ಯೂರೋಪಿನ ರಾಜ್ಯಗಳು ಮರ್ಯಾದೆಯನ್ನು ಬಿಟ್ಟು ನಮ್ಮ ಕಾರ್ಯಗಳಲ್ಲಿ ಪ್ರವೇಶಮಾಡುತ್ತಿರುವುವು. ಹಾಗೆ ಮಾಡುತ್ತಿರುವುದು ಅವುಗಳಿಗೆ ಯುಕ್ತವಲ್ಲ. ಆದಕಾರಣ ಆರೀತಿಯಲ್ಲಿ ಪ್ರವೇಶಮಾಡಲು ಕಾರಣವೇನೆಂದು ನಾವು ಕೇಳಬೇಕು. ತೃಪ್ತಿಕರವಾದ ಉತ್ತರವು ಬರದಿದ್ದಪಕ್ಷದಲ್ಲಿ ಅವುಗಳ ಮೇಲೆ ಯುದ್ಧಕ್ಕೆ ಹೊರಟಿರುವುದಾಗಿ ಪ್ರಕಟಿಸಬೇಕು'' ಎಂದು ಒಕ್ಕಣೆಯಿದ್ದಿತು. ಅವನ ಸಲಹೆಗಳು ಸ್ವಲ್ಪದ ಕೆಲಸಕ್ಕಾಗಿ ಮನೆಯನ್ನೆಲ್ಲಾ ತಲೆಯ ಮೇಲೆ ಕೆಡವಿಕೊಳ್ಳುವುದಕ್ಕೆ ಸಮವಾಗಿದ್ದಿತು. ನಿಷ್ಕಾರಣವಾಗಿ ಅನ್ಯರಾಜ್ಯಗಳನ್ನು ಗೊಂದಲದಲ್ಲಿ ಕೆಡವಿ ತನ್ನ ರಾಜ್ಯದ ಗೌರವ

ವನ್ನು ಹೆಚ್ಚಿಸಬೇಕೆಂದು ಸಿವರ್ಡನು ಹವಣಿಸಿದನು. ಅಷ್ಟೇ ಅಲ್ಲ. ಅನ್ಯರಾಜ್ಯಗಳೊಡನೆ ವ್ಯವಹಾರವನ್ನಾರಂಭಿಸಿದರೆ ತನ್ನ ರಾಜ್ಯದೊಳಗಿನ ಕುತ್ತವು ಕೊನೆಗೊಂಡಿತೆಂದು ಅವನ ಮನಸ್ಸಿನಲ್ಲಿದ್ದಿತು. "ಈ ವ್ಯವಹಾರವನ್ನು ಪ್ರೆಸಿಡೆಂಟನಾದವನು ನಡೆಯಿಸಬೇಕು ಅಥವಾ ಆ ಭಾರವನ್ನು ಮಂತ್ರಿಗಳಲ್ಲೊಬ್ಬನು ವಹಿಸಬೇಕು" ಎಂಬ ಅಭಿಪ್ರಾಯವೂ ಸೂಚಿಸಲ್ಪಟ್ಟಿದ್ದಿತು. ಇದು ಪ್ರೆಸಿಡೆಂಟನ ಮೂಲಕ ತಾನು ರಾಜ್ಯವನ್ನಾಳಲು ಮಾಡಿದ ಪ್ರಯತ್ನವಲ್ಲದೆ ಬೇರೆಯಲ್ಲ. ಲಿಂಕನ್ನನು ಉತ್ತರವನ್ನು ಬರೆದು ಕಳುಹಿಸಿದನು. ಅದರಲ್ಲಿ "ಸರ್ಕಾರವು ತಾಟಸ್ಥ್ಯವನ್ನು ವಹಿಸಿರುವುದರಲ್ಲಿ ನಿಮ್ಮ ಸಮ್ಮತಿಯೂ ಇದ್ದಿತು. ಆದರೆ ಆ ಭಾವವು ಈಗ ಅಯುಕ್ತವಾಗಿ ತೋರುವ ಪಕ್ಷದಲ್ಲಿ ತಪ್ಪಿನಲ್ಲಿ ಒಂದು ಭಾಗವು ನಿಮ್ಮದೂ ಆಗಿರುವುದು. ಅದು ಸ್ಪಷ್ಟವೇ" ಎಂದು ಬರೆದಿದ್ದಿತು. ವ್ಯವಹಾರದ ವಿಷಯಗಳನ್ನೆಲ್ಲಾ ಒಬ್ಬಾತನ ಕೈಯಲ್ಲಿಟ್ಟು ಸರಿಪಡಿಸಬೇಕೆಂದಿದ್ದ ಎರಡನೆಯ ಸಲಹೆಗೆ ಉತ್ತರವು ಈರೀತಿಯಾಗಿದ್ದಿತು. "ಆ ಕೆಲಸವನ್ನು ಮಾಡಬೇಕಾದ ಪಕ್ಷದಲ್ಲಿ ನಾನು ಮಾಡುವೆನು. ವ್ಯವಹಾರ ಮಾರ್ಗವೊಂದನ್ನವಲಂಬಿಸಿದ ಮೇಲೆ ಅದು ಅಸಾಧುವೆಂಬುದಕ್ಕೆ ಪ್ರಬಲನಾದ ಕಾರಣವಿದ್ದ ಹೊರತು ಅದನ್ನು ಬದಲಾಯಿಸಬೇಕಾಗಿಲ್ಲ. ಅಥವಾ ಅದು ಯುಕ್ತನಾದುದೇ ಎಂಬ ಚರ್ಚೆಗೂ ಕೂಡ ಅವಶ್ಯಕತೆಯಿರಲಾರದು. ಒಂದುವೇಳೆ ಚರ್ಚೆಗೆ ಬರುವಂತಹ ಅಂಶಗಳೇನಾದರೂ ಅದರೊಳಗಿದ್ದರೆ, ಆ ಅಂಶಗಳನ್ನು ಕುರಿತು ಮಂತ್ರಿಗಳೆಲ್ಲರನ್ನೂ ಕೇಳಬೇಕೆಂಬುದು ನನ್ನ ಅಭಿಮತವು. ಹಾಗೆ ಮಾಡುವುದು ಸರ್ವಥಾ ನ್ಯಾಯುನಾದುದು." ಸಿವರ್ಡನು ದಡ್ಡನಲ್ಲ. ಅವನು ಅತ್ಯಂತ ಶಕ್ತರೆನ್ನಿಸಿಕೊಂಡವರಲ್ಲಿ ಒಬ್ಬನು. ಆದರೆ ಆ ವೇಳೆಯಲ್ಲಿ ಅವನಿಗೆ ಬುದ್ಧಿಮೀರುವಷ್ಟು ಉದ್ವೇಗವುಂಟಾಗಿದ್ದಿತು. ತನ್ನ ದೇಶದ ಸ್ಥಿತಿಯನ್ನು. ನೋಡುತ್ತ ನೋಡುತ್ತ ಅವನಿಗೆ ವಿವೇಚನೆಯು ನಷ್ಟವಾಗುತ್ತಿದ್ದಿತು. ಲಿಂಕನ್ನನ ಶಾಂತವಾದ ಉತ್ತರದಿಂದ ಉದ್ವೇಗವು ಇಳಿದು ಅವನು ಬುದ್ಧಿಗಲಿತನು. ಮುಂದೆ ಎಂದೂ ಹೀಗೆ ಮಾಡಲಿಲ್ಲ. ಬಹಳವಾಗಿ ಸಂತೋಷಗೊಂಡು ಅವನು ತನ್ನ ಹೆಂಡತಿಗೆ ಹೀಗೆಂದು ಕಾಗದ ಬರೆದನು: "ನಿರ್ವಾಹಶಕ್ತಿಯೂ ಮನೋದಾರ್ಢ್ಯವೂ ಸಾಮಾನ್ಯ ಗುಣಗಳಲ್ಲ. ಪ್ರೆಸಿಡೆಂಟನು ನಮ್ಮೆಲ್ಲರಿಗಿಂತ ಎಷ್ಟೋ ಮೇಲಾದವನು."

ಇಂಥಾ ಕಷ್ಟ ಸಮಯದಲ್ಲಿ ಲಿಂಕನ್ನನು ಎಷ್ಟರಮಟ್ಟಿಗೆ ಆಚರಿಸಿದನೆಂಬುದನ್ನು ಆಲೋಚಿಸಿದರೆ ಅವನಲ್ಲಿದ್ದ ಅಂತಃಶಕ್ತಿಯು ಅರಿವಾಗುವುದು. ಅದರ ಮುಂದೆ ನ್ಯೂನತೆಗಳು ಉಳಿಯಲಾರವು.

ಇಷ್ಟು ಹೊತ್ತಿಗೆ ಎಂಟನೆಯ ತಾರೀಖಾಯಿತು. ಲಿಂಕನ್ನನು ಮಂತ್ರಿಗಳ ಮಾತನ್ನು ಕೇಳಲಿಲ್ಲ. ಕೇಳದವನಾಗಿ, ತಾನು, ತಲೆಯ ಮೇಲೆ ತಲೆಯುರುಳಿದರೂ ಚಿಂತೆಯಿಲ್ಲ, ಯಾವ ಆಟಂಕವು ಬಂದರೂ ಚಿಂತೆಯಿಲ್ಲ, ಸಮ್‌ಟರ್ ದುರ್ಗಕ್ಕೆ ಸಹಾಯವನ್ನು ಕಳುಹಿಸುವುದಾಗಿ ನಿಶ್ಚಯಿಸಿದನು. ಈ ವಿಷಯವು ಮೇಲೆ ಹೇಳಿರುವಂತೆ ಆ ಸಂಸ್ಥಾನದ ಗೌರ್ನರಿಗೆ ತಿಳಿಸಲ್ಪಟ್ಟಿತು. ಆದರೂ ಹೆಚ್ಚು ದೂರ ಹೋಗಬಾರದೆಂದು ಯೋಚಿಸಿದ್ದನು. ಆ ನಿಶ್ಚಯವು ಇತರ ಸಲಹೆಯಿಂದಲ್ಲದೆ ಅವನಲ್ಲಿ

ತಾನೇ ಉಂಟಾಗಿದ್ದಿತು. ಅದಕ್ಕೆ ಸಭೆಯವರೂ ಮಂತ್ರಿಗಳೂ ಒಪ್ಪದಿರಲಿಲ್ಲ. ಆ ನಿಶ್ಚಯವು ಬಹಳಮಟ್ಟಿಗೆ ನ್ಯಾಯನಾಗಿದ್ದಿತು. ದಕ್ಷಿಣವನ್ನು ರೇಗಿಸುವಂಥದಾಗಿರಲಿಲ್ಲ. ಉತ್ತರದ ಅಧಿಕಾರವನ್ನು ಸಂರಕ್ಷಿಸುತ್ತಿದ್ದಿತು. ಆದರೆ ಇಷ್ಟೆಲ್ಲಾ ಆಗುವುದರೊಳಗೆ ಕಾಲವು ಮೀರಿತು.

ಅಲಬಾಮದ ಮನುಷ್ಯನೊಬ್ಬನು ಕಾಲವನ್ನು ತಳ್ಳುತ್ತ ಹೋಗುವುದರಲ್ಲಿ ಸ್ವಲ್ಪವೂ ಪ್ರಯೋಜನವಿಲ್ಲವೆಂದು ಪ್ರೆಸಿಡೆಂಟ್ ಜೆಫರ್ಸ್ ಡೇವಿಸ್ಸನೊಡನೆ ಹೇಳಿದನು. "ಅಲಬಾಮದ ಜನಗಳೆದುರಿಗೆ ರಕ್ತವನ್ನು ಚೆಲ್ಲಿದ ಹೊರತು ಅವರನ್ನು ನಮ್ಮ ಪಕ್ಷದಲ್ಲಿ ನಿಲ್ಲಿಸಿಕೊಳ್ಳುವಹಾಗಿಲ್ಲ. ನಾವು ಸುಮ್ಮನಿದ್ದರೆ, ಇನ್ನು ಹತ್ತು ದಿನಗಳು ಮುಗಿಯುವುದರೊಳಗಾಗಿ ಅದು ಸಂಯೋಗವನ್ನು ಸೇರಿಕೊಂಡು ಬಿಡುವುದು." ಆಕೂಡಲೇ ಡೇವಿಸ್ಸನು ಸಮ್ಟರ್ ದುರ್ಗವನ್ನಾಕ್ರಮಿಸುವಂತೆ ಬೋರ್‌ಗಾರ್ಡನಿಗೆ ಆಜ್ಞೆಮಾಡಿದನು. ಆತನು ಆಂಡರ್ಸನ್ನನಿಗೆ, ದುರ್ಗವನ್ನು ಬಿಟ್ಟುಕೊಡಬೇಕು, ಅಥವಾ ಶರಣಾಗತನಾಗಬೇಕು, ಎಂದು ಹೇಳಿ ಕಳುಹಿಸಿದನು. ಆಂಡರ್ಸನ್ನನು ಏಪ್ರಿಲ್ 15 ನೇ ತಾರೀಖಿನ ವರೆಗೆ ನೋಡುವುದಾಗಿಯೂ ಅಷ್ಟರೊಳಗೆ ಆಹಾರವಾಗಲೀ ಸೈನ್ಯವಾಗಲೀ ಸರ್ಕಾರದ ಕಡೆಯಿಂದ ಬರದಿದ್ದ ಪಕ್ಷದಲ್ಲಿ ಆದಿನ ಶರಣಾಗತನಾಗುವುದಾಗಿಯೂ ಉತ್ತರ ಹೇಳಿದನು. ಆತನ ಸೈನ್ಯವು ಆಹಾರವಿಲ್ಲದೆ ಅವಸಾನವನ್ನು ಸಮೀಪಿಸುವಂತಾಗಿದ್ದಿತು. ಆದರೆ ಬೋರ್‌ಗಾರ್ಡನ ಅಪ್ಪಣೆಯ ಪ್ರಕಾರವಾಗಿಯೋ ಅಥವಾ ಮತ್ತೇನು ಅಸಂಗತದಿಂದಲೋ ಶತ್ರುಪಕ್ಷದ ಫಿರಂಗಿಗಳು ಹನ್ನೆರಡನೆಯ ತಾರೀಖಿನ ದಿನವೇ ಗುಂಡನ್ನೆಸೆಯಲಾರಂಭಿಸಿದುವು. ದುರ್ಗದೊಳಗಿದ್ದವರೂ ಪ್ರತ್ಯುತ್ತರರೂಪವಾಗಿ ಫಿರಂಗಿಗಳನ್ನುಪಯೋಗಿಸಿದರು. ಆದರೆ ಅವರ ಯುದ್ಧವು ತೀರ ದುರ್ಬಲವಾದುದು. ಮೂರನೆಯ ದಿನದ ವೇಳೆಗೆ ದುರ್ಗವನ್ನು ರಕ್ಷಿಸುವುದು ಅಸಾಧ್ಯವಾಯಿತು. ಆಂಡರ್ಸನ್ನನು ಶರಣಾಗತನಾದನು. ಅಷ್ಟು ಹೊತ್ತಿಗೆ (14 ನೆಯ ತಾರೀಖು) ಆಹಾರಪದಾರ್ಥಗಳೊಡನೆ ಹಡಗುಗಳು ಬಂದುವು. ಆದರೆ ಪ್ರಯೋಜನವೇನೂ ಆಗಲಿಲ್ಲ. ಹದಿನಾಲ್ಕನೆಯ ತಾರೀಖಿನಲ್ಲಿ ಆಂಡರ್ಸನ್ನನು ಕೋಟೆಯನ್ನು ಬಿಟ್ಟು ಹೊರಟುಹೋದನು.

ಯುದ್ಧಕಾಲದಲ್ಲಿ ದಕ್ಷಿಣದವರು ಅಮೆರಿಕದ ಬಾವುಟಕ್ಕೂ ಗುರಿಯಿಟ್ಟು ಗುಂಡನ್ನು ಹಾರಿಸಿದರು. ಬಾವುಟವು ಕೆಳಗುರುಳಿತು. ಅದು ಉರುಳಿದ ಸುದ್ದಿಯು ಎಲ್ಲೆಲ್ಲಿಯೂ ಹರಡಿತು. ಇನ್ನು ಉತ್ತರವು ತಡಮಾಡಲಿಲ್ಲ.

ಜನಗಳ ಕೋಪವನ್ನು ಇಷ್ಟೆಂದು ಹೇಳಲಾಗದಂತಾಯಿತು. ಅಮೆರಿಕದ ಬಾವುಟಕ್ಕೆ ಅವಮಾನವಾದುದೂ ಸಣ್ಣದೊಂದು ಸೈನ್ಯವನ್ನು ನಿರ್ದಯೆಯಿಂದ ಹೊರಡಿಸಿದುದೂ ಉತ್ತರದವರಿಗೆ ಸಹಿಸಲಾರದಾದುವು. ಮೇಲೂ ಕೆಳಗೂ ನೋಡುತ್ತ ಅನುಮಾನಿಸುತ್ತಿದ್ದ ಅವರು ಇನ್ನು ಸುಮ್ಮನಿರಲಿಲ್ಲ. ಮಧ್ಯಸ್ಥಿಕೆಯ ಮಾತು ಹೆಸರೇ ಇಲ್ಲದಂತೆ ಅಡಗಿಹೋಯಿತು. ಸುಮ್ಮನಿದ್ದ ಆ ಜನಗಳು ತಮ್ಮ ಆಯುಧವನ್ನೆಲ್ಲಾ ಮಸೆದರು. ಲಿಂಕನ್ನನು ತಡೆದು ತಡೆದು ಕೆಲಸಮಾಡಿದನು. ದಕ್ಷಿಣದವರ ವಿಷಯದಲ್ಲಿ ಔದಾರ್ಯವನ್ನು ತೋರಿಸಿದನು. ಆದರೆ ಅದರಿಂದ ದಕ್ಷಿ

ಣಕ್ಕೆ ಬುದ್ಧಿ ಬರಲಿಲ್ಲ. ಉತ್ತರವು ಹುಂಕರಿಸುತ್ತ ಎದ್ದಿತು.

ಅದರ ಗರ್ಜನೆಯ ಮುಂದೆ ಭಿನ್ನಾಭಿಪ್ರಾಯಗಳೂ ಭೇದಭಾವಗಳೂ ಮಂಜಿನಂತೆ ಕರಗಿಹೋದುವು. ದೇಶವನ್ನು ಉಳಿಸಿಕೊಳ್ಳಬೇಕೆಂಬ ಒಂದೇಒಂದಭಿಪ್ರಾಯವು ಉಳಿಯಿತು. ತನ್ನ ಬಾವುಟವು ಅಪಮಾನಹೊಂದುವುದನ್ನು ನೋಡುತ್ತ ನೋಡುತ್ತ ಜೀವಿಸಿರುವುದು ಹೇಗೆ? ಉತ್ತರವು ವರ್ಜಿನಿಯವೇ ಮೊದಲಾದ ಸಂಸ್ಥಾನಗಳು ತನ್ನ ಪಕ್ಷವನ್ನು ವಹಿಸುವುದನ್ನು ಕಾಯಲಿಲ್ಲ. ಒಂದೇ ಮನಸ್ಸಿನಿಂದ ಒಂದೇ ತಡವೆಗೆ ಮೇಲಕ್ಕೆದ್ದಿತು. ಎದ್ದು ಆಯುಧವನ್ನು ಹಿಡಿದು ಹೊರಟಿತು.

---

## ೭ ನೆಯ ಅಧ್ಯಾಯ

---

### ಪ್ರಕೃತವಿಚಾರ.

ಲಿಂಕನ್ನನ ಚರಿತ್ರೆಯಲ್ಲಿ ಅವನು ಪ್ರೆಸಿಡೆಂಟನಾಗಿದ್ದ ಕಾಲದಲ್ಲಿ ಪ್ರಾರಂಭವಾಗಿ ನಾಲ್ಕು ವರ್ಷಗಳವರೆಗೆ ನಡೆದ ಅಂತಃಕಲಹವು ಮುಖ್ಯವಾದುದು. ಅದರಿಂದ ಅನೇಕ ಅಂಶಗಳು ಇತ್ಯರ್ಥನಾದುವು. ಅದರಿಂದ ಲಿಂಕನ್ನನ ಗುಣವೂ ಸಾಮರ್ಥ್ಯವೂ ಕೂಡ ಹೊರಪಟ್ಟುವು.

ಪ್ರಾರಂಭದಲ್ಲಿ ಯುದ್ಧದ ಸ್ವಭಾವವಿಂತಹದೆಂಬುದೂ ಅದರ ಮುಂದಿನ ಪರಿಣಾಮವೂ ಜನಗಳಿಗೆ ಪತ್ತೆಯಾಗುವುದಿಲ್ಲ. ಜಯವನ್ನು ಪಡೆಯುವುದು ಸುಲಭವೆಂದು ಉತ್ತರವು ಮೊದಲು ಭಾವಿಸಿತು. ದಡದಡನೆ ಓಡಿಬಂದು ಸೈನ್ಯಕ್ಕೆ ಸೇರಿಕೊಂಡ ಜನಗಳೂ ಹಾಗೆಯೇ ಭಾವಿಸಿದರು. ಆದರೆ ಬರುತ ಬರುತ ಈ ಭಾವನೆಯು ಬದಲಾಯಿಸಿ ಯುದ್ಧವೆಂತಹದೆಂಬುದು ಸ್ಪಷ್ಟವಾಯಿತು. ಮೊದಲು ಜಯವು ಸುಲಭವೆಂದಿದ್ದವರು ಈಗ ತಮಗೆ ಜಯವಾಗುವುದೇ ಅನುಮಾನವೆನ್ನಲಾರಂಭಿಸಿದರು.

ಉತ್ತರಭಾಗದಲ್ಲಿ ದಕ್ಷಿಣದ ಎರಡರಷ್ಟು ಪ್ರಜೆಗಳಿದ್ದರು. ಇತರ ಉಪಪತ್ತಿಗಳೂ ಕಡಿಮೆಯಾಗಿರಲಿಲ್ಲ. ಕಾಲವು ಸಾಗಿ ಯುದ್ಧವು ಜೋರಾಗುತ್ತ ಬಂದಹಾಗೆ ಅವುಗಳ ಬೆಂಬಲವು ಹೆಚ್ಚಿತು. ಆದರೆ ಪ್ರಾರಂಭದಲ್ಲಿ ಗೊತ್ತಿಗೆಗೆ ಬರಲಿಲ್ಲ. ಪ್ರಾಯಶಃ ಕೊನೆಯವರೆಗೂ ಆ ಬೆಂಬಲವು ಪೂರ್ತಿಯಾಗಿ ಲಭ್ಯವಾಗಲಿಲ್ಲ. ಉತ್ತರವು ಸೊಂಟಗಟ್ಟಿ ಹೊರಟಿದ್ದುದು ಭೂಮಿಗಾಗಿ—ದಕ್ಷಿಣವನ್ನು ಜಯಿಸುವುದಕ್ಕಲ್ಲ; ಅಥವಾ ದ್ರವ್ಯಲಾಭಕ್ಕಲ್ಲ. ಉತ್ತರವು ದಕ್ಷಿಣವನ್ನು ಸಂಪೂರ್ಣವಾಗಿ ಜಯಿಸಬೇಕು. ಜಯಿಸಿ ಸಂಯೋಗವನ್ನು ದೃಢತರವಾದ ಆಸರೆಯ ಮೇಲೆ ಸ್ಥಾಪಿಸಬೇಕು. ಅದಕ್ಕಿಂತ ಕಡಿಮೆಯಾದ ಉದ್ದೇಶವು ಯಾವುದಿದ್ದರೂ ಯುದ್ಧದಲ್ಲಿ ಸೋಲುಂಟಾಗಿ ವಿಫಲವಾಗುತ್ತಿದ್ದಿತು. ಆದಕಾರಣ ಅವರು ಕೈಗೊಂಡ ಕೆಲಸವು ಸಾಮಾನ್ಯವಾದುದಲ್ಲ. ಹೊರಗಿನ ರಾಜ್ಯದ ಪ್ರಜೆಗಳೂ ಕೂಡ ಅದರ ಮಹತ್ವವನ್ನು ಹೊಗಳಿದ್ದಾರೆ.

ದಕ್ಷಿಣದ ಸನ್ನಾಹವು ಹೆಚ್ಚಿನ ತೃಪ್ತಿಯನ್ನುಂಟುಮಾಡುವದಾಗಿದ್ದಿತು.

ಯುದ್ಧಕಾಲದಲ್ಲಿ ಸೈನ್ಯಗಳು ಹತ್ತಿರ ಹತ್ತಿರಲೇ ಇರುತ್ತಿದ್ದುವು. ಅವಶ್ಯಕವಾದಾಗ ತಡವಾಗದಹಾಗೆ ಬೇಗ ಒಟ್ಟಾಗಿ ಸೇರಿ ಎದುರಿಸಲು ಅದರಿಂದ ಬಹಳ ಅನುಕೂಲ ವಿದ್ದಿತು. ರಾಜ್ಯದ ಆ ಭಾಗದಲ್ಲಿ ದುರ್ಗಗಳೂ ಕೋಟೆಗಳೂ ಒತ್ತೊತ್ತಾಗಿ ಹರಡಿ ದ್ದುವು. ಯುದ್ಧಕಾಲದಲ್ಲಿ ದುರ್ಗವೇ ಮೊದಲಾದವುಗಳ ಸೌಕರ್ಯವನ್ನು ಹೇಳ ಬೇಕಾಗಿಲ್ಲ. ಪ್ರಜಾಸಂಖ್ಯೆಯು ಕಡಿಮೆಯಾದರೂ ಅವುಗಳ ದೆಸೆಯಿಂದ ದಕ್ಷಿಣಕ್ಕೆ ಎರಡರಷ್ಟು ಬಲವುಂಟಾಗಿದ್ದಿತು. ಸಣ್ಣ ಸಣ್ಣ ದಂಡುಗಳನ್ನು ಆ ದುರ್ಗಗಳಲ್ಲಿ ಚದುರಿಸಿದ್ದರೂ ಕೂಡ ಅವುಗಳನ್ನು ಜಯಿಸುವುದು ದುಷ್ಕರವಾಗುತ್ತಿದ್ದಿತು. ಅಲ್ಲದೆ ಉತ್ತರದ ಸೈನ್ಯವು ನುಗ್ಗಿ ಬಂದಲ್ಲಿ ಅದು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಲು ಬಹುದೂರದ ದಾರಿಯನ್ನು ನಡೆಯಬೇಕಾಗುತ್ತಿದ್ದಿತು; ಚದುರಿದ ದಂಡು ಒಟ್ಟುಗೂಡಿ ಏಕಾಗ್ರತೆಯಿಂದ ಯುದ್ಧಮಾಡಲು ಅವಕಾಶವು ದೊರೆಯುತ್ತಿರಲಿಲ್ಲ. ಆದುದರಿಂದ, ಜನಗಳಲ್ಲಿ ಧೈರ್ಯವಿದ್ದು ಸೈನ್ಯಾಧಿಪತಿಗಳಲ್ಲಿ ಯುಕ್ತಿಯೂ ಶಕ್ತಿಯೂ ಇದ್ದಭಾಗದಲ್ಲಿ ದಕ್ಷಿಣವು ಸೋತಕೂಟಕ್ಕೆ ಸೇರುತ್ತಿರಲಿಲ್ಲ. ಜಯವುಂಟಾಗದಿದ್ದರೂ ಕೂಡ ಸಂರಕ್ಷಣೆಮಾಡಿಕೊಳ್ಳುವುದರಲ್ಲಿ ದಕ್ಷಿಣವು ನಿರತವಾಗಿದ್ದರೆ ಉತ್ತರವು ಸ್ವಲ್ಪಕಾಲದೊಳಗೆ ಕೈಕಟ್ಟಿ ಕೂರಬೇಕಾಗುತ್ತಿದ್ದಿತು.

ಉತ್ತರಕ್ಕೆ ಒಂದು ಸಹಾಯವಿದ್ದಿತು. ಹಡಗುಗಳು ಹೆಚ್ಚಾಗಿದ್ದುವು. ಅವು ಗಳ ಬಲದಿಂದ ದಕ್ಷಿಣದ ಸೈನ್ಯಕ್ಕೆ ಆಹಾರಪದಾರ್ಥಗಳು ಒದಗದಂತೆ ಅಡ್ಡಿಮಾಡಿ ಹೊರಗಿನಿಂದ ಮುತ್ತಿಗೆ ಹಾಕಲು ಅದಕ್ಕೆ ಸಾಧ್ಯವಾಯಿತು. ಹಾಗೆ ಮಾಡದಿದ್ದರೆ ಜಯವು ಇನ್ನೂ ಕಷ್ಟವಾಗುತ್ತಿದ್ದಿತು.

ಸೈನ್ಯಗಳನ್ನು ಹೋಲಿಸಿ ನೋಡಿದಲ್ಲಿ ದಕ್ಷಿಣದ ಸೈನ್ಯವೇ ಸುಶಿಕ್ಷಿತವಾದುದು. ಜನಗಳು ಸಾಮಾನ್ಯವಾಗಿ ಬಯಲು ಪ್ರದೇಶಗಳಲ್ಲಿ ವಾಸಮಾಡುವವರು; ಕಾಡು ಮೇಡುಗಳಲ್ಲಿ ಅಲೆಯುವವರು. ಅವರಿಗೆ ಯುದ್ಧವೂ ಆಯುಧಗ್ರಹಣವೂ ಪರಿ ಚಿತವೂ ಸಾಧಾರಣವೂ ಆದುದು. ಅದು ಯುಕ್ತವಾದ ಹವ್ಯಾಸವೆಂದೇ ಅವರ ಭಾವನೆ. ಸುಖಜೀವನವೂ ಸುಖಾಪೇಕ್ಷೆಯೂ ಕಡಿಮೆ. ಆದರೆ ಉತ್ತರದವರು ಕೆಲಸ ಗಾರರು; ವ್ಯವಹಾರದಲ್ಲಿ ನಿಪುಣರು. ಶಸ್ತ್ರಗ್ರಹಣದಲ್ಲಿ ಮಾತ್ರ ಅನುಭವವಿರ ಲಿಲ್ಲ. ಯುದ್ಧವೆಂದರೆ ಅವರಿಗೆ ಔಷಧಿಯ ಹಾಗೆ ಅಸಹ್ಯವಾಗಿದ್ದಿತು. ಈ ಕಾರಣ ದಿಂದಲೇ ಮೊದಲು ಅನಾನುಕೂಲಗಳೂ ಅಪಜಯಗಳೂ ಉಂಟಾದುವು. ದಕ್ಷಿಣ ದವರಿಗೆ ಜಯವು ಸಿದ್ಧವಾಯಿತು. ಆದರೆ ಈ ನ್ಯೂನತೆಯು ಕೆಲವು ಕಾಲದವರೆಗೆ ಮಾತ್ರ. ಒಂದೆರಡು ಸೋಲಾದ ಮೇಲೆ ಉತ್ತರದ ಸರ್ಕಾರವು ಎಚ್ಚತ್ತುಕೊಂಡಿತು. ದೇಶಾಭಿಮಾನವೂ ತಮ್ಮ ಕೆಲಸವನ್ನು ತಾವು ಮಾಡುತ್ತಿಲ್ಲವೆಂಬ ಪರಿತಾಪವೂ ಅವರ ಮನಸ್ಸನ್ನು ತಿದ್ದಿದುವು. ಉತ್ತರದ ಜನಗಳೂ ತರಪೇತಾಗಿ ಸಿದ್ಧವಾದರು.

ಅಲ್ಲದೆ ಸೇನೆಯನ್ನು ನಡೆಯಿಸುವವರು ಉತ್ತರದಲ್ಲಿ ಮೊದಲು ಮೊದಲು ಬಹಳ ವಿರಳ. ಈ ವಿಚಾರದಲ್ಲಿ ದಕ್ಷಿಣಕ್ಕೆ ಅನುಕೂಲವು ಹೆಚ್ಚಾಗಿದ್ದಿತು. ಉತ್ತರ ದಲ್ಲಿ, ಪ್ರಮುಖರಾಗಿ ಯುಕ್ತಿವಂತರಾದ ಜನಗಳನ್ನು ಪತ್ತೆಮಾಡುವುದು ಕಷ್ಟವಾ ಗಿದ್ದಿತು. ಸೈನ್ಯಕ್ಕೆ ಸೇರಿಕೊಂಡಮೇಲೆ, ಅಲ್ಲಲ್ಲಿ ಗದ್ದುಗೆಯನ್ನೇರಿ ನಿಂತು ಉಪ

ನ್ಯಾಸಮಾಡಿ ಜನಗಳ ಕಣ್ಣಿಗೆ ಬಿದ್ದಿದ್ದವನೂ ಪಂಗಡಗಳಲ್ಲಿ ಕಷ್ಟಪಟ್ಟು ಹೆಸರನ್ನು ಪಡೆದವನೂ ಅಧಿಪತಿಗಳಾಗುತ್ತಿದ್ದರು. ಆಡಳಿತದ ವಿಚಾರದಲ್ಲಿ ತಿಳಿವಳಿಕೆಯಿದ್ದ ಮಾತ್ರಕ್ಕೆ ಸೇನೆಯ ವಿಚಾರದಲ್ಲಿ ತಿಳಿವಳಿಕೆ ಬಂದಹಾಗಲ್ಲ. ಒಂದುವೇಳೆ ಅಂಥವರು ಕೆಲವು ಕಾಲವಾದಮೇಲೆ ಅನುಭವವನ್ನು ಪಡೆದರೂ ದೊಡ್ಡ ದೊಡ್ಡ ದಂಡನ್ನು ನಡೆಯಿಸಿ ಯುದ್ಧದಲ್ಲಿ ಜಯುವನ್ನು ಪಡೆಯುವಷ್ಟು ಧಾರ್ಷ್ಟ್ಯವೆಲ್ಲಿ ಬಂದೀತು? ಇಂತಹ ಜನಗಳು ಸೇನಾಪತಿಗಳಾದುದರಿಂದಲೇ ಮೊದಲು ಮೊದಲು ಉತ್ತರವು ಸೋಲಬೇಕಾಯಿತು. ಆದರೆ ಸ್ಥಿತಿಯು ಹಾಗೆಯೇ ಇರಲಿಲ್ಲ. ಸಾಮರ್ಥ್ಯವನ್ನೂ ಜಾಣತನವನ್ನೂ ತೋರಿಸಿದವರು ಮುಂದಕ್ಕೆ ಬಂದರು. ಷೆರಿಡನ್ನನೂ ಗ್ರಾಂಟನೂ ಷೆರ್ಮನ್ನನೂ ಅಂಥವರು. ದಕ್ಷಿಣದಲ್ಲಿ ಮೊದಲಿಂದಲೂ ಮುಖಂಡರು ಯುದ್ಧ ದಲ್ಲಿ "ಹಳೆಯ ಹುಲಿ" ಗಳಾಗಿದ್ದರು. ಅವರೊಳಗೆ ಇಬ್ಬರಂತೂ ಎಂದಿಗೂ ಮರೆಯಲಾಗದಂಥವರು. ಜನರಲ್ ಲೀಯು (Lee) ಸಾಮಾನ್ಯನಲ್ಲ. ಅವನಿಲ್ಲ ದಿದ್ದರೆ ದಕ್ಷಿಣದ ಸೈನ್ಯವು ಕಾಲೂರಿ ನಿಂತು ಯುದ್ಧಮಾಡುತ್ತಿರಲಿಲ್ಲ. ದಕ್ಷಿಣಕ್ಕಿದ್ದ ಅನುಕೂಲ್ಯಗಳು ನಿಷ್ಪ್ರಯೋಜಕವಾಗುತ್ತಿದ್ದುವು. ಅವನ ಸ್ಥೈರ್ಯವಿಲ್ಲದಿದ್ದರೆ ದಕ್ಷಿಣವು ಅಷ್ಟುಕಾಲ ಪ್ರತಿಭಟಿಸಿ ನಿಲ್ಲುತ್ತಿರಲಿಲ್ಲ

ಸೈನ್ಯದ ವಿಚಾರವೊಂದಾದರೆ ಸಾಲದು. ಆಡಳಿತದ ಇಲಾಖೆಯಲ್ಲಿಯೂ ಆ ಎರಡು ಭಾಗಗಳಿಗೆ ತಾರತಮ್ಯವಿದ್ದಿತು. ಕಷ್ಟದ ವೇಳೆಯಲ್ಲಿ ಹೇಗೆ ಆಚರಿಸ ಬೇಕೆಂಬುದನ್ನೂ ಹೇಗೆ ಉದ್ದೇಶವನ್ನು ಸಾಧಿಸಬೇಕೆಂಬುದನ್ನೂ ಹೊಸದಾಗಿ ಕಲಿ ಯುತ್ತಿರುವ ಲಿಂಕನ್ನನೆಲ್ಲಿ; ಅನುಭವಶಾಲಿಯಾಗಿ, ನೂರು ಜನರಿಗೆ ಕಲಿಸಬಲ್ಲ ನೆಂಬಷ್ಟು ಸಾಮರ್ಥ್ಯವುಳ್ಳ ಜೆಫರ್‌ಸರ್ನ ಡೇವಿಸ್ಸನೆಲ್ಲಿ? ಯುದ್ಧಕ್ಕೆ ಸಂಬಂಧಪಟ್ಟ ಲಿಂಕನ್ನನ ಸಾಹಸವೆಲ್ಲಾ ಅವನು ತನ್ನದೊಂದು ಭಾಷಣದಲ್ಲಿ ಹೇಳಿಕೊಂಡ ಹಾಗೆ, ಪ್ರಜೆಗಳಿಂದ ಬಾತುಕೋಳಿಗಳನ್ನೂ ಈರುಳ್ಳಿ ಮೊದಲಾದ ಸಾಮಾನುಗಳನ್ನೂ ಕದಿಯುವದರಲ್ಲಿ ಪರ್ಯವಸಿತನಾಗಿದ್ದಿತು. ಅವನ ಪ್ರಧಾನಿಗಳು ಅವನಂತೆಯೇ ಅನುಭವವು ಸಾಲದವರಾಗಿದ್ದರು. ದಕ್ಷಿಣದ ಪ್ರೆಸಿಡೆಂಟನು ರಾಜ್ಯಭಾರದಲ್ಲಿಯೂ ಯುದ್ಧಶಾಸ್ತ್ರದಲ್ಲಿಯೂ ಅನುಭವವುಳ್ಳವನಾಗಿದ್ದನು. ಅವನಿಗೆ ಪ್ರೆಸಿಡೆಂಟನಾಗಿರು ವುದಕ್ಕಿಂತಲೂ ಆಯುಧವನ್ನು ಹಿಡಿದು ದಳಪತಿಯಾಗಿರುವುದು ಸುಲಭವಾಗಿ ತೋರುತ್ತಿದ್ದಿತು. ಅವನೊಬ್ಬನೇ ಅಲ್ಲ, ಜಾಕ್‌ಸನ್ನನೂ ದಕ್ಷಿಣದವರ ಪಕ್ಷದಲ್ಲಿದ್ದನು. ಅವನೆಂತಹ ಮನುಷ್ಯನೆಂಬುದು ಲೀಯು ಅವನಲ್ಲಿಟ್ಟಿದ್ದ ಗಾಢವಾದ ವಿಶ್ವಾಸದಿಂದ ಅರ್ಥವಾಗುತ್ತದೆ.

ದಕ್ಷಿಣದಲ್ಲಿ ಐಕಮತ್ಯವೂ ಹೆಚ್ಚಾಗಿದ್ದಿತು. ಜನರು ವಿಧೇಯರಾಗಿದ್ದರು. ಕಷ್ಟಸಮಯದಲ್ಲಿ ಸಂರಕ್ಷಣೆಯು ಆ ಗುಣದ ಬಲದಿಂದ ಸುಲಭವಾಗುತ್ತಿದ್ದಿತು. ದಾಸ್ಯದ ರಕ್ಷಣೆಯೊಂದಕ್ಕಾಗಿ ಅಲ್ಲಿನ ರಾಜ್ಯಗಳೆಲ್ಲವೂ ಒಟ್ಟಾಗಿ ಸೇರಿ ನಿಂತವು. ಆ ಪದ್ಧತಿಯನ್ನುಳಿಸಿಕೊಳ್ಳುವುದಕ್ಕೋಸ್ಕರ ಅವರು ಸ್ವತಂತ್ರರಾಗಲಪೇಕ್ಷಿಸಿದರೂ ಕೂಡ, ಅಪೇಕ್ಷಿಸಿ ಯುದ್ಧಕ್ಕೆ ನಿಂತಮೇಲೆ ಅದನ್ನು ಸಂಪಾದಿಸದಿರಕೂಡದೆಂದೂ ಅದು ನ್ಯಾಯವಾಗಿ ತಮ್ಮಲ್ಲಿ ಸೇರಬೇಕಾದ ವಸ್ತುವೆಂದೂ ಭಾವಿಸುತ್ತ ದಕ್ಷಿಣದ

ವರು ಬದ್ಧಕಂಕಣರಾದರು. ಸಂಯೋಗದ ನಿರ್ಬಂಧದಿಂದ ತಪ್ಪಿಸಿಕೊಳ್ಳುವುದೇ ಅವರ ಚರಮೋದ್ದೇಶ. ಉತ್ತರದವರಿಗೆ ಅಂತಹ ಉದ್ದೇಶವೇನೂ ಇರಲಿಲ್ಲ. ಜನಾಂಗವನ್ನು ಒಗ್ಗಟ್ಟಿನಲ್ಲಿ ಉಳಿಸಿಕೊಳ್ಳುವುದಕ್ಕಾಗಿ ಅವರು ಹೊಡೆದಾಡುತ್ತಿದ್ದರು. ಆದರೆ, ನಮ್ಮ ಶತ್ರುವೂ ನಾವೂ ಕೊನೆಯಲ್ಲಿ ಒಂದಾಗುವುದಕ್ಕೋಸ್ಕರ ಮೊದಲು ಹೊಡೆದಾಡಬೇಕೆಂದರೆ ಉತ್ತರದವನ ಮನಸ್ಸಿನಲ್ಲಿ ಹೇಗಿದ್ದೀತು? ಆದರೂ, ಅವರ ಕೈಕಾಲುಗಳಿಗೆ ಬಲವನ್ನೂ ಮನಸ್ಸಿಗೆ ಉತ್ಸಾಹಧೈರ್ಯಗಳನ್ನೂ ಕೊಟ್ಟುದು ದೇಶಪ್ರೀತಿ. ಆದಕಾರಣವೇ ಅದು ಕೊನೆಯಲ್ಲಿ ಗೆದ್ದರೂ ನೋಡಿದವರು ಉತ್ತರವೇ ಸೋತಿದೆಯೆಂದು ಹೇಳುವಂತಹ ಸ್ಥಿತಿಗೆ ಬಂದಿತು. ಲಿಂಕನ್ನನು ಉತ್ತರದ ಸಂಸ್ಥಾನಗಳನ್ನೂ ಜನಗಳನ್ನೂ ಐಕಮತ್ಯದಿಂದ ನಿಲ್ಲಿಸಿದನು. ಅದೇ ಅವನು ಮಾಡಿದ ದೇಶಸೇವೆ. ಆ ಸೇವೆಯು ಅತ್ಯಂತ ಶ್ರೇಷ್ಠವಾದುದು; ಆದರೆ ಅತ್ಯಂತ ಕಷ್ಟವೂ ಆದುದು.

ದಕ್ಷಿಣದವನು ಯುದ್ಧದಲ್ಲಿ ಜಯವನ್ನು ಅಪೇಕ್ಷಿಸಿದನು. ಅದೊಂದು ಮಾತ್ರ ದೊರೆತರೆ ಉಳಿದವುಗಳೆಲ್ಲಾ ದೊರೆತಹಾಗೆಂದು ಅವನು ಭಾವಿಸಿದನು. ಆದರೆ ಉತ್ತರದ ಜನಕ್ಕೆ ಯುದ್ಧದಲ್ಲಿ ಜಯವು ಅಗತ್ಯವಾಗಿರಲಿಲ್ಲ. ಇದ್ದ ಬೇರೊಂದು ಉದ್ದೇಶವನ್ನು ಸಾಧಿಸುವುದರಲ್ಲಿ ಕೊನೆಗೆ ದಂಡೋಪಾಯವೇ ಅನುಕೂಲವಾದ ಸಾಮಗ್ರ್ಯವಾಗಿ ತೋರಿದುದರಿಂದ ಅವರು ಆಯುಧವನ್ನು ಹಿಡಿದರು. ಆ ಜಯದಲ್ಲಿ ಇತರ ವಿಚಾರಗಳು ಅವಲಂಬನವನ್ನು ಪಡೆದಿದ್ದುವು. ಯುದ್ಧದಲ್ಲಿ ಗೆಲುವಾಗುವುದರಿಂದ ಅವರ ಮನೋರಥವು ಕೈಗೂಡುವುದು ಸುಲಭವಾಗುತ್ತಿದ್ದಿತು. ಲಿಂಕನ್ನನು ಕಡೆಯುವರೆಗೂ ಏಕೆ ತಡೆದು ತಡೆದು ನಿರೀಕ್ಷಿಸಿದನೆಂಬುದು ಪ್ರಾಯಶಃ ಈಗ ಅರ್ಥವಾದೀತು. ಯುದ್ಧವನ್ನು ತಪ್ಪಿಸಬೇಕೆಂಬುದೇ ಅವನ ಮುಖ್ಯ ಆಶಯ; ಸಾಮೋಪಾಯದ ಸಾಧುತೆಯಲ್ಲಿ ಅವನಿಗೆ ಅಗಾಧವಾದ ನಂಬಿಕೆ; ಉತ್ತರದ ಪ್ರಜೆಗಳಿಗೂ ಕೂಡ ಯುದ್ಧದಲ್ಲಿ ಉತ್ಸಾಹವಿರಲಿಲ್ಲ. ಬೇರೊಂದು ಉಪಾಯವಿದ್ದು ಅದರ ಮೂಲಕ ಕಾರ್ಯವು ಕೈಗೂಡುವುದಾಗಿದ್ದರೆ ಉತ್ತರಭಾಗವು ಯುದ್ಧವನ್ನು ನಿರಾಕರಿಸುತ್ತಿದ್ದಿತು. ಮುಂದಿನ ಪರಿಣಾಮವೇನಾಗುವುದೋ ಎಂದು ದಕ್ಷಿಣವು ಭಯಪಡುತ್ತಿರಲಾಗಿ ಉತ್ತರವು ಮುಂದಿನ ಪರಿಣಾಮದಲ್ಲಿ ಜಯವುಂಟಾಗದಿದ್ದರೆ ಹೇಗೆಂದು ಯೋಚಿಸುತ್ತಿದ್ದಿತು.

ದಕ್ಷಿಣವನ್ನಡಗಿಸುವ ವಿಧಿಯು ಬಹುತಾಮಸದಿಂದ ಜರುಗಿತು. ಮಧ್ಯದಲ್ಲಿ ವಿಘ್ನಗಳೊದಗಿ ತೊಂದರೆಪಡಿಸಿದುವು. ಉತ್ತರವು ಸಮುದ್ರದ ಕಡೆಯಿಂದಲೂ ಭೂಮಿಯ ಕಡೆಯಿಂದಲೂ ದಕ್ಷಿಣವನ್ನು ಮುತ್ತಿ, ಆಹಾರವು ಸಾಗುವುದನ್ನೂ ಪಶ್ಚಿಮತೀರದ ಸಂಸ್ಥಾನಗಳೊಡನೆ ಸಂಸರ್ಗವನ್ನೂ ತಪ್ಪಿಸಿಬಿಟ್ಟಿತು. ಯುದ್ಧವು ಪೂರ್ವಭಾಗದಲ್ಲಿ ವಾಷಿಂಗ್ಟನ್ನಿಗೂ ಅದರ ದಕ್ಷಿಣಕ್ಕೆ ನೂರು ಮೈಲಿಗಳ ದೂರದಲ್ಲಿದ್ದ ರಿಚ್‌ಮಂಡಿಗೂ ನಡುವೆ ಅಲ್ಲಲ್ಲಿ ನಡೆಯಿತು. ಮೊದಲು ಮೊದಲು ಪರಿಣಾಮವು ಉತ್ತರದವರಿಗೆ ಸಂತೋಷವನ್ನುಂಟುಮಾಡುವಂಥದಾಗಿರಲಿಲ್ಲ.

---

# ೧ ನೆಯ ಅಧ್ಯಾಯ

---

## ಸನ್ನಾಹಕಾಲ.

ಸಮ್‌ಟರ್ ದುರ್ಗದ ಮೇಲೆ ದಕ್ಷಿಣದವರು ಕೈಮಾಡಿದರೆಂದು ಸುದ್ದಿ ಬಂದ ಮಾರನೆಯ ದಿನವೇ ಪ್ರೆಸಿಡೆಂಟನು ಒಂದು ಇಸ್ತಿಹಾರನ್ನು ಪ್ರಕಟಪಡಿಸಿದನು. ಅದರಪ್ರಕಾರ ಉತ್ತರದ ಸಂಸ್ಥಾನಗಳು ತಮ್ಮ ಬಳಿಯಲ್ಲಿರುವ ಎಲ್ಲಾ ಸೈನ್ಯಗಳನ್ನೂ ಸೇರಿಸಿ 75,000 ಮಂದಿಯನ್ನು ಸಿದ್ಧಪಡಿಸಿ "ನ್ಯಾಯವನ್ನತಿಕ್ರಮಿಸಿ ದಂಗೆಯೇಳುತ್ತಿರುವ ಜನರನ್ನು ಅಡಗಿಸುವುದಕ್ಕಾಗಿ" ಕಳುಹಿಸಬೇಕಾಗಿದ್ದಿತು. ಆ ಸೈನಿಕರು ಮೂರು ತಿಂಗಳವರೆಗೆ ಯುದ್ಧದ ಕೆಲಸದಲ್ಲಿದ್ದರೆ ಸಾಕು, ತರುವಾಯ ಹಿಂದಕ್ಕೆ ಹೋಗಬಹುದು. ಅವರನ್ನು ಆ ವಾಯಿದೆಗಿಂತ ಹೆಚ್ಚಾಗಿ ಅಧೀನದಲ್ಲಿಟ್ಟುಕೊಳ್ಳಲು ಸರ್ಕಾರಕ್ಕೆ ಅಧಿಕಾರವಿರಲಿಲ್ಲ. ಕಾರ್ಯವು ಬಹಳ ಗುರುತ್ವವುಳ್ಳದ್ದು. ಜುಲೈ ನಾಲ್ಕನೆಯ ತಾರೀಖು ಸಭೆ ಸೇರಬೇಕೆಂದು ಲಿಂಕನ್ನನು ಪ್ರಕಟಣೆಯನ್ನು ಕಳುಹಿಸಿದನು. ಸದ್ಯದಲ್ಲಿದ್ದ ಸೈನ್ಯದಲ್ಲಿ ಹುದ್ದೇದಾರರೂ ಸೈನಿಕರೂ ಸೇರಿ 16,000 ಮಂದಿ ಇದ್ದರು. ಅವರೊಳಗೆ 3,000 ಮಂದಿ ಸೈನಿಕರು ಪಶ್ಚಿಮದ ದುರ್ಗಗಳಲ್ಲಿದ್ದರು. ಆದುದರಿಂದ ಯುದ್ಧಕಾರ್ಯದಲ್ಲಿ ಅವರಿಂದ ಪ್ರಯೋಜನವಿರುತ್ತಿರಲಿಲ್ಲ. ಕೆಲವು ದಿವಸಗಳ ಮೇಲೆ ನೋಡಲಾಗಿ ಯುದ್ಧವು ಮೂರು ತಿಂಗಳೊಳಗಾಗಿ ಮುಗಿಯುವಹಾಗೆ ಕಾಣಲಿಲ್ಲ. ಪ್ರೆಸಿಡೆಂಟನು ಹೆಚ್ಚು ಸೈನ್ಯವು ಒದಗಬೇಕೆಂದು ಮತ್ತೆ ಪ್ರಚಾರಪಡಿಸಿದನು. ಬಹಳ ಸಾಹಸಮಾಡಲಾಗಿ ಜೂನ್ ತಿಂಗಳ ಹೊತ್ತಿಗೆ 30,000 ಮಂದಿಯ ದಂಡು ಸಿದ್ಧವಾಯಿತು.

ಸಮ್‌ಟರ್ ದುರ್ಗದ ಪ್ರಸಂಗವೂ ಪ್ರೆಸಿಡೆಂಟನ ಇಸ್ತಿಹಾರೂ ಉತ್ತರದವರ ಉತ್ಸಾಹವನ್ನು ಹೆಚ್ಚಿಸಿ, ಅವರು ನೆಗೆದೆದ್ದರು. ತಮ್ಮೊಳಗಿದ್ದ ಭೇದಗಳನ್ನು ಮರೆತು ಒಂದಾದರು. ಅವುಗಳ ದೆಸೆಯಿಂದ ದಕ್ಷಿಣದ ಪ್ರಜೆಗಳೂ ಇನ್ನೊಂದು ಉದ್ದೇಶದಿಂದ ಒಟ್ಟಾದರು. ಗಡಿಯ ಸೀಮೆಗಳು ತಡಮಾಡದೆ ಯಾವ ಕಡೆಗಾದರೂ ಸೇರಬೇಕಾಯಿತು. ವರ್ಜಿನಿಯದಲ್ಲಿ ಹೆಚ್ಚಿನಪಾಲು ದಕ್ಷಿಣವನ್ನು ಆಶ್ರಯಿಸಿತು. ಪರ್ವತಮಯನಾದ ಅಲ್ಲಿಯ ಪಶ್ಚಿಮಭಾಗವು ಮಾತ್ರ ಉತ್ತರದ ಪಕ್ಷವನ್ನು ವಹಿಸಿತು. ಈ ಭಾಗದಲ್ಲಿದ್ದ ಕೌಂಟಿಗಳೇ ಮುಂದೆ ಉತ್ತರದ ಸೈನ್ಯದ ಸಹಾಯದಿಂದ ಬೇರೆಯಾಗಿ ಪಶ್ಚಿಮ ವರ್ಜಿನಿಯವೆಂದು ಪ್ರತ್ಯೇಕನಾಗಿ ಏರ್ಪಟ್ಟವು. ಜನಗಳು ಸಂಯೋಗವನ್ನೇ ಪ್ರೀತಿಸುವವರಾದರೂ ಟೆನ್ನೆಸ್ಸಿಯ ಸರ್ಕಾರವು ದಕ್ಷಿಣದ ಗುಂಪನ್ನು ಸೇರಿತು. ಅರ್ಕಾನ್ಸಾಸ್, ಮಿಸ್ಸೌರಿ ಮೊದಲಾದ ಸಂಸ್ಥಾನಗಳಲ್ಲಿ ಕೆಲವು ಪ್ರಜೆಗಳು ಉತ್ತರದಲ್ಲಿಯೂ ಕೆಲವರು ದಕ್ಷಿಣದಲ್ಲಿಯೂ

ಅಭಿಮಾನವನ್ನು ತೋರಿಸಿದರು. ಸರ್ಕಾರವು ಒಂದು ಕಡೆಗೆ ಎಳೆಯುತ್ತಿದ್ದಿತು; ಪ್ರಜೆಗಳು ಮತ್ತೊಂದು ಕಡೆಗೆಳೆಯುತ್ತಿದ್ದರು. ಆದರೆ ಸಂಯೋಗವನ್ನು ರಕ್ಷಿಸಬೇಕೆಂಬ ಸಂಕಲ್ಪವು ಮುಂದೆ ಅವರೆಲ್ಲರ ಮನಸ್ಸಿನಲ್ಲಿಯೂ ಅಂಕುರಿಸಿತು.

ವರ್ಜಿನಿಯವು ತ್ಯಜಿಸಲಾಗಿ ಸಂಯೋಗಕ್ಕೆ ಒಂದು ವಿಧದಲ್ಲಿ ಬಹಳ ನಷ್ಟವಾಯಿತು. ಜನರಲ್ ಲೀಯು ವರ್ಜಿನಿಯದವನು. ಅವನು ಪ್ರಕೃತದಲ್ಲಿ ವಾಷಿಂಗ್ಟನ್ನಿನಲ್ಲಿದ್ದನು. ಆತನು ಬಹಳ ಶಕ್ತನು. ಜನರಲ್ ಸ್ಕಾಟನ ಅಭಿಪ್ರಾಯವೂ ಆರೀತಿಯಾಗಿದ್ದಿತು. ಲಿಂಕನ್ನನೂ ಯುದ್ಧಕಾರ್ಯದರ್ಶಿಯೂ ಸೇರಿ ಆಲೋಚಿಸಿ ಅವನಿಗೆ ಅಖಿಲಸೈನ್ಯದ ಆಧಿಪತ್ಯವನ್ನು ವಹಿಸುವುದಾಗಿ ನಿಶ್ಚಯಿಸಿದರು. ಲೀಗೆ ಅದು ಇಷ್ಟವಿರಲಿಲ್ಲ. ಬಹಳ ಅನುಮಾನಮಾಡುತ್ತ ಒಪ್ಪಿಕೊಂಡನು. ಆತನು ಸಂಯೋಗದಿಂದ ಸಂಸ್ಥಾನಗಳು ಬಿಟ್ಟುಹೋಗಿ ಬೇರೆಯಾಗುವುದನ್ನು ವಿರುದ್ಧಾಚರಣೆಯೆಂದು ಭಾವಿಸಿದ್ದನು. ಹಾಗೆ ಮಾಡಲು, ಅವನ ಮನಸ್ಸಿಗೆ ತೋರಿದ್ದರಲ್ಲಿ, ಯಾವ ಸಂಸ್ಥಾನಕ್ಕಾಗಲೀ ಸ್ವಾತಂತ್ರ್ಯವೂ ಅಧಿಕಾರವೂ ಸಾಲದು. ಆದರೂ, '' ನಾನು ವರ್ಜಿನಿಯಕ್ಕೆ ಸೇರಿದವನು, ನನ್ನ ಆಚರಣೆಯು ಅದರ ಆಜ್ಞೆಯನ್ನು ಅನುಸರಿಸುವುದು, ನನ್ನ ಭಕ್ತಿಯಲ್ಲಿ ಮೊದಲನೆಯ ಸ್ಥಾನವನ್ನು ಅದಕ್ಕೆ ಅರ್ಪಿಸಿದ್ದೇನೆ '' ಎಂದನು. ವರ್ಜಿನಿಯವು ದಕ್ಷಿಣಭಾಗವನ್ನು ಸೇರಿತು. ಲೀಯು ತನ್ನ ಅಧಿಕಾರಕ್ಕೆ ರಾಜೀನಾಮೆಯನ್ನು ಕೊಟ್ಟು ರಿಚ್ಮಂಡಿಗೆ ಹೋದನು. ಹೋಗಿ ತನ್ನ ಸಂಸ್ಥಾನದ ಆಜ್ಞೆಯನ್ನು ಶಿರಸಾವಹಿಸಲು ಸಿದ್ಧನಾಗಿರುವುದಾಗಿ ತಿಳಿಸಿದನು. ಅವನಂತೆಯೇ ಥಾಮಸ್ ಜಾಕ್ಸನ್ (Thomas Jackson) ಎಂಬ ಪ್ರಖ್ಯಾತ ಯೋಧನೂ ಸಿದ್ಧನಾಗಿ ನಿಂತನು. ಜಾಕ್ಸನು ಬಹಳ ನಿಷ್ಠೆಯುಳ್ಳವನು. ಪೂರ್ವವಯಸ್ಸಿನಲ್ಲಿ ಆತನ ಹಾಗೆ ದುರ್ವ್ಯಾಪಾರದಲ್ಲಿ ಮುಳುಗಿದವನು ಮತ್ತೊಬ್ಬನಿರಲಿಲ್ಲ. ಆದರೂ ಕೂಡಲೇ ಬದಲಾಯಿಸಿದನು. ಆಬಳಿಕ ಅವನಂಥ ಸಚ್ಚರಿತ್ರನನ್ನು ಕಾಣುವುದು ಕಷ್ಟವಾಯಿತು. ನೋಡಿದಮಾತ್ರಕ್ಕೇ ಅವನು ಸತ್ಯವಂತನೆಂದೂ ದೃಢವ್ರತನೆಂದೂ ಗುಣವನ್ನು ನಿಶ್ಚಯಿಸಬಹುದಾಗಿದ್ದಿತು. ಲೀಯು ಅವನಲ್ಲಿ ಬಹಳ ಗೌರವವನ್ನಿಟ್ಟಿದ್ದನು. ಇಂಥ ಮನುಷ್ಯರು ದಕ್ಷಿಣದ ಸೈನ್ಯದಲ್ಲಿದ್ದುಕೊಂಡು ತಮ್ಮ ನಿರ್ವಾಹಶಕ್ತಿಯಿಂದ ಸೈನ್ಯದ ಬಲವನ್ನು ಹೆಚ್ಚಿಸಿದರು. ಅಷ್ಟೇ ಅಲ್ಲ; ದಕ್ಷಿಣದ ಶ್ರೇಷ್ಠತೆಯನ್ನೂ ಹೆಚ್ಚಿಸಿದರು. ದಕ್ಷಿಣವು ಕೈಗೊಂಡಕಾರ್ಯಕ್ಕೆ ಒಂದು ವಿಧವಾದ ಕೀರ್ತಿಯೂ ಗೌರವವೂ ಅವರ ದೆಸೆಯಿಂದ ಉಂಟಾಯಿತು. ದೇಶಸೇವೆಯನ್ನು ಮಾಡಲು ಅಂಥ ಅವಕಾಶವು ರಾಜನೀತಿಯನ್ನರಿತು ವ್ಯವಹರಿಸುತ್ತಿದ್ದವರಿಗಾಗಲೀ ವೈದಿಕ ವಿಷಯಗಳನ್ನು ಉಪದೇಶಿಸುತ್ತಿದ್ದವರಿಗಾಗಲೀ ಆ ಕಾಲದಲ್ಲಿ ದೊರೆಯಲಿಲ್ಲ.

ಜನರು ತಮ್ಮ ಹಿಂದಿನ ಅನುಮಾನವನ್ನೆಲ್ಲಾ ಮೂಲೆಗೊಗೆದರು. ಸೈನ್ಯವನ್ನು ಕೂಡಿಸುವುದು ಬಲು ಬಿರುಸಿನಿಂದ ಸಾಗಿತು. ಬುಕೆನನ್ನನು ತಾನು ಸಂಯೋಗದವನೇ ಎಂಬುದನ್ನು ಉದ್ಘೋಷಿಸಿ ಹೇಳಿದನು. ಡಗ್ಲಸ್‌ನು ಲಿಂಕನ್ನನ ಬಳಿಗೆ ಹೋಗಿ, ತನ್ನ ಕೈಯಲ್ಲಾದುದನ್ನು ಮಾಡಲು ಸಿದ್ಧನಾಗಿರುವುದಾಗಿ

ಹೇಳಿ ದೇಶಸೇವೆಗೆ ಮಾರ್ಗವೊಂದನ್ನು ಸೂಚಿಸಲು ಪ್ರಾರ್ಥಿಸಿದನು. ಲಿಂಕನ್ನನು ಅದಕ್ಕಾಗಿ ಅವನನ್ನು ಶ್ಲಾಘಿಸಿ, ಇಲ್ಲಿನ್ಯಾಕ್ಕೆ ಹೋಗಿ ಜನಗಳ ಭಕ್ತಿಯು ಸಂಯೋಗದಲ್ಲಿ ದೃಢವಾಗಿರಬೇಕೆಂದು ಉಪದೇಶಿಸುತ್ತ ಆದಷ್ಟು ಸೈನ್ಯವನ್ನು ಸೇರಿಸುವಂತೆ ಹೇಳಿ ಕಳುಹಿಸಿದನು. ಆ ಕೆಲಸದಲ್ಲಿ ಶ್ರಮಪಡುತ್ತ ಡಗ್ಲಸ್‌ನು ಖಾಯಿಲೆ ಹೊಂದಿ ಮೃತನಾದನು. ಜನಗಳಿಗೆ ಉತ್ಸಾಹವಿದ್ದಿತಲ್ಲದೆ ದಂಗೆಯೆದ್ದಿರುವ ದಕ್ಷಿಣವನ್ನು ಮುಂದೆ ದಂಗೆಯೇಳದ ಹಾಗೆ ದಂಡಿಸಬಲ್ಲೆವೆಂಬ ನಂಬಿಕೆಯೂ ಇದ್ದಿತು. ರಾಜಧಾನಿಗೂ ಸರ್ಕಾರಕ್ಕೂ ಇರುವ ಅಪಾಯವನ್ನು ನೋಡುತ್ತ ನೋಡುತ್ತ ಅವರ ನಿಶ್ಚಯವು ಹೆಚ್ಚಿತು. ಆರ್ಟಿಮಸ್‌ವಾರ್ಡ್ ಎಂಬಾತನು ತನಗಾದ ಅನ್ಯಾಯದ ಸಂಬಂಧದಲ್ಲಿ ಪ್ರೆಸಿಡೆಂಟ್ ಡೇವಿಸ್ಸನ ದರುಶನವನ್ನು ತೆಗೆದುಕೊಂಡು ಬಂದಮೇಲೆ ಹೀಗೆ ಕಥೆಯನ್ನು ಬರೆದನು: '' ಈಗಲೂ ಕೂಡ ಉತ್ತರದಲ್ಲಿ ಬಹಳಜನ ಹಿತೈಷಿಗಳಿದ್ದಾರೆ '' ಎಂದು ಆ ಪ್ರೆಸಿಡೆಂಟನು ಹೇಳಲಾಗಿ ಆತನು, '' ಅದೇ ನೀನು ಮಾಡುವ ತಪ್ಪು, ನಮ್ಮಲ್ಲಿ ಅನೇಕರು ನಿನ್ನ ಸ್ನೇಹಿತರೆಂತಲೂ ನಿನ್ನ ಕೆಲಸಗಳಲ್ಲಿ ಬಹಳ ಸಹಾಯಮಾಡುತ್ತಾರೆಂತಲೂ ನಂಬಿದ್ದೆವು. ಆದರೆ, ನಕ್ಷತ್ರಗಳಿಂದ ಚಿತ್ರಚಿತ್ರವಾದ ಪತಾಕೆಯೆಂಬ ಆ ನಿಷ್ಪ್ರಯೋಜಕವಸ್ತುವಿನ ಮೇಲೆ ಗುಂಡು ಹಾರಿತೆಂದರೆ ಆಕ್ಷಣವೇ ಉತ್ತರವು ಒಟ್ಟುಒಟ್ಟಾಗಿ ಎದ್ದು ಆ ಪತಾಕೆಯನ್ನು ರಕ್ಷಿಸಲು ನಿಲ್ಲುವುದು. ಅದು ಹಾಗೆ ಎದ್ದು ನಿಲ್ಲುವುದು, ಮನುಷ್ಯನೊಬ್ಬನು ಗುಂಡುಹೊಡೆದು ಅದನ್ನು ಸುಟ್ಟನೆಂಬುದಕ್ಕಾಗಲೀ ಅಥವಾ ದಕ್ಷಿಣವು ಹಾಗೆ ಮಾಡಿತೆಂಬುದಕ್ಕಾಗಲೀ ಅಲ್ಲ--ಬಾವುಟವನ್ನು ಸಂರಕ್ಷಿಸುವುದಕ್ಕಾಗಿ. ಅನ್ಯದೇಶದವನಾಗಲೀ ನಮ್ಮದೇಶದವನೇ ಆಗಲೀ ನಮ್ಮ ರಾಜ್ಯಕ್ಕೆ ಶತ್ರುವಾಗಿ ಪರಿಣಮಿಸಿ ಅವನಿಂದ ನಮ್ಮ ಸರ್ಕಾರವು ಧ್ವಂಸವಾಗುವುದನ್ನು ನೋಡುತ್ತ ಸುಮ್ಮನೆ ನಿಂತರೆ ನಾವು ಪುರುಷರಲ್ಲ; ನಮ್ಮ ಕಾಲಿನಲ್ಲಿ ಬಲವಿಲ್ಲ. ಮನಸ್ಸು ಭದ್ರವಿಲ್ಲ, ನಿಶ್ಚಯವಿಲ್ಲ ಎಂದು ಭಾವಿಸಬೇಕಾದೀತು. ಸರಳಹೃದಯವುಳ್ಳ ತಾಯಿಗೆ ಮೊಂಡತನಮಾಡುತ್ತಿರುವ ತನ್ನ ಕಂದನನ್ನು ಎತ್ತಿಕೊಳ್ಳಲು ಇಷ್ಟವಿಲ್ಲ; ಆದರೂ ಅದನ್ನು ಎತ್ತಿಕೊಂಡು ಸಮಾಧಾನಮಾಡುವುದು ತನ್ನ ಕರ್ತವ್ಯವೆಂದು ಆಕೆಯು ತಿಳಿದಿದ್ದಾಳೆ. ದಕ್ಷಿಣಕ್ಕೆ ಏಟು ಹೊಡೆದು ಬುದ್ಧಿ ಕಲಿಸುವುದರಲ್ಲಿ ನಮಗೆ ಅಪೇಕ್ಷೆಯಿಲ್ಲದಿದ್ದರೂ, ನೀವು ಈಕೂಡಲೇ ಹಿಂದಿರುಗಿ ಪೂರ್ವದ ಸ್ಥಳಕ್ಕೆ ಬರದಿದ್ದರೆ ಬಲವಾದ ಏಟುಗಳು ಬಿದ್ದುಹೋದಾವು ! '' ಎಂದು ಪ್ರತ್ಯುತ್ತರ ಹೇಳಿದನು. ಆಗಿದ್ದ ಉತ್ಸಾಹವು ಬರುತ ಬರುತ ಕಡಿಮೆಯಾಯಿತು. ದಕ್ಷಿಣಕ್ಕೆ ಮೊದಲು ಮೊದಲು ಜಯವಾಗಲಾಗಿ ಕೆಲವರು ದಕ್ಷಿಣದ ಕಡೆಗೆ ತಿರುಗಲಾರಂಭಿಸಿದರು. ಮೊದಲು ಉಂಟಾಗಿದ್ದ ಐಕಮತ್ಯವು ಕ್ರಮವಾಗಿ ಸಡಿಲನಾಗುವಂತೆ ತೋರಿತು. ಅನೇಕರು, ದಕ್ಷಿಣದವರು ಒಡಂಬಡಿಕೆಗೆ ಒಪ್ಪುವದಾದರೆ ಯುದ್ಧವನ್ನು ಅಷ್ಟಕ್ಕೇ ನಿಲ್ಲಿಸಬೇಕೆಂತಲೂ ಯುದ್ಧದಿಂದ ಪ್ರಯೋಜನವಿಲ್ಲವೆಂತಲೂ ಅಭಿಪ್ರಾಯಪಟ್ಟರು. ಆದರೂ ದಾಸ್ಯದ ಸಲುವಾಗಿ ದಕ್ಷಿಣವನ್ನು ದ್ವೇಷಿಸುವವರು ಬಹಳಮಂದಿ ಇದ್ದರು. ಅದರ ದೆಸೆಯಿಂದಲೇ ಯುದ್ಧವೂ ಅರ್ಥಹಾನಿ

ಪ್ರಾಣಹಾನಿಗಳೂ ಒದಗಿದ್ದುವು. ಅಂಥವರಿಗೆ ಕೊನೆಯಲ್ಲಿ ಯುದ್ಧವು ಬೇಡವಾಯಿತು. ಜಯವು ಲಭ್ಯವಾಗುವುದರಲ್ಲಿದ್ದಿತಾದರೂ ಅವರಿಗೆ ರಕ್ತಶೋಷಣೆಯಲ್ಲಿ ಅಪಾರವಾದ ಜುಗುಪ್ಸೆಯುಂಟಾಗಿ, ಸೋಲಾದರೂ ಚಿಂತೆಯಿಲ್ಲವೆನ್ನಿಸಿತು.

ಯುದ್ಧವನ್ನು ನಡೆಯಿಸಿಕೊಂಡು ಬರುವುದಲ್ಲದೆ, ಆಶಾಭಂಗಹೊಂದಿದ ಜನಗಳ ಮನಸ್ಸಿನ ಸ್ಥೈರ್ಯವೂ ಭರವಸೆಯೂ ಭಿನ್ನಭಾವಗಳನ್ನು ಹೊಂದಿದ ಜನಗಳ ಒಗ್ಗಟ್ಟೂ ಸಡಿಲವಾಗದಂತೆ ನೋಡಿಕೊಳ್ಳುತ್ತ ಆಡಳಿತವನ್ನು ನಡೆಯಿಸುವುದು ಸರ್ಕಾರಕ್ಕೆ ಮೊದಲನೆಯ ಕೆಲಸವಾಗಿದ್ದಿತು. ಈ ಕೆಲಸವನ್ನು ತಪ್ಪಿಲ್ಲದಂತೆ ಮಾಡಲು ಲಿಂಕನ್ನನು ಅನೇಕ ವಿಧದಲ್ಲಿ ತಕ್ಕವನಾಗಿದ್ದನು. ದಕ್ಷಿಣದ ಆಶಯವೇನೆಂಬುದು ಅವನಿಗೆ ಚೆನ್ನಾಗಿ ಅರ್ಥವಾಗಿದ್ದಿತು. ಈಗ ಒದಗಿದ ಕೆಲವು ಸಂದಿಗ್ಧವಾದ ಅಂಶಗಳಿಗೆ ಅವನು ಮೊದಲೇ ಆಲೋಚಿಸಿ ಉತ್ತರವನ್ನು ಹೊಂದಿಸಿಕೊಂಡಿದ್ದನು. ಈ ಅಂಶಕ್ಕೆ ಈ ಮಾರ್ಗದಲ್ಲಿ ಹೋಗುವುದೇ ಪರಿಹಾರವೆಂಬುದು ಗೊತ್ತಾಗಿದ್ದಿತು. ಅದಲ್ಲದೆ ಯುದ್ಧದ ಹೊರೆಯು ಹೆಚ್ಚಿದಹಾಗೆ ಅವನ ಬುದ್ಧಿಯ ಶಕ್ತಿಯೂ ಹೆಚ್ಚಿತು. ತಾನು ಹೊರಟಿದ್ದ ಮಾರ್ಗವು ಯುಕ್ತವಾದುದೆಂದು ಅಂತರಾತ್ಮವು ಒಪ್ಪಿದುದಾದರೆ ಎಷ್ಟು ಮೊಂಡತನವನ್ನಾದರೂ ಮಾಡಿ ಆ ಮಾರ್ಗವನ್ನೇ ಹಿಡಿಯುತ್ತಿದ್ದನು. ಆದರೂ ಶತ್ರುಗಳ ವಿಷಯದಲ್ಲಿ ಬಹಳ ಕಾರುಣ್ಯವನ್ನು ತೋರಿಸುತ್ತಿದ್ದನು. ಅವನ ಕಾರ್ಯವೆಲ್ಲದರಲ್ಲಿಯೂ ಈ ಗುಣಗಳು ಹೊರಪಡುವುವು. ಸಾಮಾನ್ಯವಾಗಿ ಮನುಷ್ಯನಲ್ಲಿ ಎರಡು ವಿಧವಾದ ರೂಪಗಳಿರುವುವು. ಒಂದು ಕ್ಷುದ್ರವಾದುದು. ಮತ್ತೊಂದು ಗಂಭೀರವಾದುದು. ಅವನ ಗುಣಗಳಲ್ಲಿ ಒಂದು ಭಾಗವು ಕಾಲದೇಶಾನುಸಾರವಾಗಿ ಬದಲಾಯಿಸುವುದು. ಆದರೆ ಮತ್ತೊಂದು ಸ್ಥಿರವಾದುದು. ಅಮೆರಿಕದ ಪ್ರಜೆಯಲ್ಲಿದ್ದ ಈ ಎರಡನೆಯ ರೂಪವೂ ಗುಣವೂ ಲಿಂಕನ್ನನಲ್ಲಿ ಮೂರ್ತೀಭವಿಸಿದ್ದುವೆನ್ನಬಹುದು. ಪ್ರಜೆಗಳಲ್ಲಿ ಯಾವ ವಿಮರ್ಶೆಯೂ ನಿಶ್ಚಯವೂ ಇರುವುವೋ ಅವು ಲಿಂಕನ್ನನಲ್ಲಿದ್ದುವು. ಪ್ರಜೆಗಳು ಮೇಲುಗಡೆಯಲ್ಲಿ ಚಾಂಚಲ್ಯವನ್ನು ತೋರಿಸಿದರೂ ಅಂತಸ್ಥವಾದ ಉದ್ದೇಶವು ಕ್ಷಯಿಸದೆ ಅಥವಾ ಚಂಚಲವಾಗದೆ ಅವರಲ್ಲಿ ಒಂದೇಸಮನಾಗಿ ನಿಂತಿರುವುದು. ಆ ಸ್ಥೈರ್ಯವೂ ಮನೋದಾರ್ಢ್ಯವೂ ಲಿಂಕನ್ನನ ಮುಖ್ಯಗುಣಗಳು. ಇಂಗ್ಲೆಂಡ್ ದೇಶಸ್ಥರಾದ ಗ್ರಂಥಕರ್ತರು, "ದಕ್ಷಿಣದ ಸೇನಾಪತಿಗಳು ಮಹಾಮೇಧಾವಿಗಳು. ಅಂಥವರಿಗೆ ಪ್ರತಿಯಾಗಿ ಉತ್ತರದಲ್ಲಿ ದೈವವಶದಿಂದ ಲಿಂಕನ್ನನು ನಿಂತನು. ಆದ್ದರಿಂದಲೇ ತ್ರಾಸಿನಲ್ಲಿ ಒಂದು ಭಾಗವು ಮತ್ತೊಂದಕ್ಕೆ ಸಮವಾಗಿ ತೂಕವುಳ್ಳದ್ದಾಯಿತು. ಅವನ ಮನಸ್ಸಂಕಲ್ಪವು ದೃಢವಾದುದು—ಕೃಶವಾಗುವಂಥದಲ್ಲ. ಸಂಯೋಗದಲ್ಲಿ ಅವನಿಗೆ ವಿಪರೀತವಾಗುವಷ್ಟು ಪ್ರೀತಿಯಿರುವುದು. ಈ ಎರಡೂ ಅವನಿಗೆ ಆಯುಧಗಳಂತೆ ಬೆಂಬಲವಾಗಿರುವುವು. ಅವನು ಬದುಕಿರುವವರೆಗೂ ಬದುಕಿ ಉತ್ತರದ ಪ್ರಜೆಗಳಿಗೆ ಅಧಿಕರ್ತನಾಗಿರುವವರೆಗೂ ಉತ್ತರದವರು ಸೋತು ಹಿಂದಿರುಗುವಹಾಗಿಲ್ಲ" ಎಂದು ಅಭಿಪ್ರಾಯವನ್ನು ಸೂಚಿಸಿದ್ದಾರೆ.

ಲಿಂಕನ್ನನ ನಿಶ್ಚಯವು ಎಲ್ಲರಿಗೂ ಗೊತ್ತಾಗುತ್ತಾ ಬಂದಿತು. ಪ್ರಜೆಗಳೆಲ್ಲರೂ ಅದನ್ನು ಶ್ಲಾಘಿಸಿದರು. ಉತ್ತರದ ಎಲ್ಲಾಭಾಗಗಳಿಂದಲೂ ಜನಗಳು ಅವನಲ್ಲಿಗೆ ಬಂದು ದರ್ಶನವನ್ನು ಪಡೆದು ಒಂದೆರಡು ಮಾತುಗಳನ್ನಾಡಿಕೊಂಡು ಹೋದರು. ಸದಭಿಪ್ರಾಯವು ಅವರೆಲ್ಲರಲ್ಲಿಯೂ ಹುಟ್ಟಿತು. ಅವನ ಹತ್ತಿರದಲ್ಲಿದ್ದವರು ಅವನು ಯಾವಾಗಲೂ ಬಹಳ ಸ್ಥಿರಭಾವದಿಂದಿರುತ್ತಿದ್ದನೆಂದು ಹೇಳುತ್ತಿದ್ದರು. ಒಂದೊಂದು ಸಮಯದಲ್ಲಿ ಮಾತ್ರ ಬಹಳವಾಗಿ ಚಿಂತೆಹೊಂದಿ, ಕಳವಳದ ಮಾತುಗಳು ಅವನ ಬಾಯಿಂದ ಹೊರಡುತ್ತಿದ್ದುವು. ಆಡಳಿತವಿಚಾರದಲ್ಲಿ ಒಟ್ಟಿನಲ್ಲಿ ಅವನ ಕಾರ್ಯಕ್ರಮವು ದೌರ್ಬಲ್ಯವನ್ನು ತೋರಿಸುತ್ತದೆಯೆಂದು ಅನೇಕರು ಆಕ್ಷೇಪಿಸಿದರೂ, ಸೋತು ಶತ್ರುವಿಗೆ ಹೆದರುವನೆಂದು ಯಾರೂ ಸಂದೇಹಪಡಲಿಲ್ಲ. ಅವನ ಕಾರ್ಯಗಳನ್ನು ಖಂಡಿಸಿ ದೂಷಿಸಿದವರೂ ಕೂಡ, ಸ್ವಾರ್ಥವಿಲ್ಲದೆ ದೇಶಭಕ್ತಿಯಿಂದಲೂ ಪ್ರಜಾಹಿತೈಷಿತೆಯಿಂದಲೂ ಕೆಲಸಮಾಡಿದವನು ಅವನೊಬ್ಬನೇ ಎಂದು ಒಪ್ಪಿಕೊಳ್ಳುತ್ತಾರೆ. ಅವನನ್ನು ಧಾರಾಳವಾಗಿ ನಂಬಬಹುದೆಂದೂ ಅವನ ಮೊದಲಿನ ಸತ್ಯಪ್ರವರ್ತನೆಯೇ ಈಗಲೂ ಇರುವುದೆಂದೂ ಭಾವನೆಯು ಜನಗಳ ಮನಸ್ಸಿನಲ್ಲಿ ಹುಟ್ಟಿ ಸ್ಥಿರವಾಗಿ ನಿಂತಿತು. ಪ್ರಜೆಗಳು ಅವನನ್ನು ವಿಶೇಷವಾಗಿ ಪ್ರೀತಿಸಿದರು. ಈಗ ನೋಡಲಾಗಿ ಅವನು ಪ್ರಜಾವರ್ಗಕ್ಕೆ ಮುಖ್ಯಸ್ಥನಾಗಿ ನಿಂತಹಾಗೆ ಕಾಣಿಸುತ್ತದೆ. ವಾಷಿಂಗ್ಟನ್ನಿಗೆ ಬರುವಾಗ ಲಿಂಕನ್ನನ ಮನಸ್ಸಿನಲ್ಲಿ ಅನೇಕ ಯೋಚನೆಗಳಿದ್ದುವು. ಪ್ರಾಯಶಃ ಇತರರ ಮನಸ್ಸಿನಲ್ಲಿ ಅಂತಹ ಯೋಚನೆಗಳು ಹುಟ್ಟಿರಲಿಲ್ಲ. ಕೆಲವು ಅಂಶಗಳಿಗೆ ಅವನು ನಿರ್ಣಯವನ್ನು ಹುಡುಕಿದ್ದನು. ಇತರರ ಆಲೋಚನೆಗೆ ಅವು ಗೋಚರವಾಗಿರಲಿಲ್ಲ. ಆದರೆ ಇತರರು ಅವನಲ್ಲಿ ಅನುಭವವಿಲ್ಲವೆಂಬುದನ್ನು ಕಂಡರೇ ಹೊರತು ಶಕ್ತಿಯಿರುವುದನ್ನು ಕಾಣಲಿಲ್ಲ. ತಡೆದು ತಡೆದು ಕೆಲಸಮಾಡುವುದೂ ವಿದ್ಯಮಾನವನ್ನು ಅರ್ಥಮಾಡಿಕೊಳ್ಳುತ್ತ ನಿಲ್ಲುವುದೂ ಹೆಚ್ಚು ಮಾತನ್ನಾಡದಿರುವುದೂ ಸಲಹೆಗಳನ್ನು ತಿರಸ್ಕರಿಸಿ ಮೊಂಡತನಮಾಡುವಂತೆ ತೋರ್ಪಡಿಸಿಕೊಳ್ಳುವುದೂ ಆ ಮನುಷ್ಯನ ದೌರ್ಬಲ್ಯಕ್ಕೆ ಚಿಹ್ನೆಗಳೆನ್ನಿಸಿಕೊಂಡುವು. ಸಮಯವು ಕಷ್ಟವಾದುದು. ಆದರೆ ಸಮಯವನ್ನು ಕಾಯುವಂತಹ ಬುದ್ಧಿಶಕ್ತಿಯು ಲಿಂಕನ್ನನಲ್ಲಿ ಪ್ರಕಾಶಕ್ಕೆ ಬರಲಿಲ್ಲ. ಆದ್ದರಿಂದ ಅವನ ಪ್ರಧಾನಿಗಳು ಮೊದಲಾಗಿ ಎಲ್ಲರೂ ಚಿಂತೆಗೊಂಡರು. ಇವುಗಳ ಜೊತೆಗೆ ಅವನು ಅಲ್ಪವಿಷಯಗಳಿಗೆ ಹೆಚ್ಚಾಗಿ ಗಮನವನ್ನು ಕೊಡುತ್ತಿದ್ದುದೂ ಆಡಳಿತಕಾಲದಲ್ಲಿ ಶ್ರದ್ಧೆಯಿಂದಿರುವುದಕ್ಕೆ ಬದಲಾಗಿ ವಿನೋದವಾಗಿ ಕಥೆಗಳನ್ನು ಹೇಳುತ್ತ, ಬಂದವರೊಡನೆ ಮಾತಿನಲ್ಲಿ ಕಾಲವನ್ನು ಕಳೆಯುತ್ತಿದ್ದುದೂ ಸೇರಿದುವು. ಜನರ ಈ ಅಭಿಪ್ರಾಯಕ್ಕೆ ಎದುರಾಗಿ ತೂಕವೇರಲು ಅವನ ಕೆಲಸಗಳಲ್ಲಿ ಜಾಣತನವು ಮೊದಲು ಮೊದಲಲ್ಲಿ ಯಾವುದೂ ಕಾಣಲಿಲ್ಲ. ಅವನನ್ನು ಒಂದುಸಲ ಮಾತ್ರ ನೋಡಿ ಮಾತನಾಡಿದವರಿಗೆ ಪ್ರೆಸಿಡೆಂಟನ ಕಡೆಗೆ ಒಳ್ಳೆಯ ಅಭಿಪ್ರಾಯವುಂಟಾಗುತ್ತಿರಲಿಲ್ಲ. ಲಿಂಕನ್ನನಲ್ಲಿ ಗಾಂಭೀರ್ಯವೂ ಯುಕ್ತಿಯೂ ಇಲ್ಲದಿರಲಿಲ್ಲ. ಆದರೆ ಅವುಗಳನ್ನು ಉಪಯೋಗಿಸಲು ಅವನಿಗೆ ಸಮಯವು ಕಾಣಲಿಲ್ಲ.

ಒಂದೊಂದುವೇಳೆ ನಡತೆಯು ವಿಚಿತ್ರವಾಗಿರುತ್ತಿದ್ದಿತು. ಷೆರ್ಮನ್ನನು ಒಂದು ದಿನ ಹೊಸದಾಗಿ ಅವನಲ್ಲಿಗೆ ಹೋದನು. ಅವನ ಹತ್ತಿರಿದ್ದವರು ಪ್ರೆಸಿಡೆಂಟನಿಗೆ ಅವನ ಪರಿಚಯವನ್ನು ಹೇಳಿದರು. ಪ್ರೆಸಿಡೆಂಟನು ಅವನನ್ನು ತನ್ನೊಡನೆ ನಿಲ್ಲಿಸಿ ಎತ್ತರವನ್ನು ಪರೀಕ್ಷೆಮಾಡಿದನು. ಹೊಸಬರನ್ನು ಈರೀತಿಯಲ್ಲಿ ಪರೀಕ್ಷೆಮಾಡುವುದು ವಿಚಿತ್ರವಾಗಿಯೂ ಪ್ರೆಸಿಡೆಂಟನ ಗೌರವಕ್ಕೆ ಕಡಿಮೆಯಾದುದಾಗಿಯೂ ತೋರಬಹುದು. ಆದರೆ ಈ ನಡೆವಳಿಯಲ್ಲಿ ದುರುದ್ದೇಶವು ಯಾವುದೂ ಇರಲಿಲ್ಲ. ಹೊರಗಿನವರಿಗೆ ಮಾತ್ರ ಹಾಗೆ ತೋರುತ್ತಿರಲಿಲ್ಲ. ಇದರ ಹಾಗೆ, ಬಂದವರಿಗೆ ಕಥೆಗಳನ್ನು ಹೇಳಿಕಳುಹಿಸುವುದೂ ಒಂದು ಸ್ವಭಾವವಾಗಿದ್ದಿತು. ಆದರೆ ಅದರಿಂದ ಕೆಲವು ಸಮಯಗಳಲ್ಲಿ ಬಹಳ ಉಪಯೋಗವುಂಟಾಗುತ್ತಿದ್ದಿತು. ಕೆದಕಿಕೊಂಡು ಆಡಳಿತದ ವಿಷಯದಲ್ಲಿ ಅದೂ ಇದೂ ಪ್ರಶ್ನೆಯನ್ನು ಹಾಕುತ್ತಿದ್ದವರಿಗೆ ಸಣ್ಣ ಕಥೆಗಳನ್ನು ಹೇಳಿ ಗುಟ್ಟನ್ನು ಬಿಟ್ಟುಕೊಡದಂತೆ ಜಾರಿಸುತ್ತಿದ್ದನು. ಕೆಲವರಿಗೆ ಅವರ ಅವಿವೇಕಕ್ಕಾಗಿ ಬೈಗಳವು ಕಥೆಗಳ ಮೂಲಕವೇ ಸಲ್ಲುತ್ತಿದ್ದಿತು. ಆ ಬೈಗಳವನ್ನೂ ಉಪಾಯವನ್ನೂ ಮರೆತು ಜನಗಳು ಲಿಂಕನ್ನನು ಬಹಳ ವಿನೋದಗಾರನೆಂದು ಹೇಳಿಕೊಳ್ಳುತ್ತ ಅವನಲ್ಲಿ ಅಭಿಮಾನವನ್ನು ಹೊಂದಿದರು.

ಯುದ್ಧದಲ್ಲಿಯೂ ಇತರ ವಿಚಾರಗಳಲ್ಲಿಯೂ ಬಹಳ ಸಹಾಯಮಾಡಿದ ಜರ್ಮನ್ ದೇಶದವನೊಬ್ಬನು ತನ್ನ ತಾಯಿಗೆ ಬರೆದ ಕಾಗದದಲ್ಲಿ, '' ಪ್ರೆಸಿಡೆಂಟನು ತನ್ನನ್ನು ನೋಡಲು ಬಂದವರನ್ನು ನೋಡದೆ ಕಳುಹಿಸುತ್ತಿರಲಿಲ್ಲ—ಬಂದವರೊಡನೆ ನೆರೆಹೊರೆಯ ಜನರಂತೆ ಬೇಕಾದಹಾಗೆ ಮಾತನಾಡಿ ಅವರಿಗೆ ಉಲ್ಲಾಸವನ್ನುಂಟುಮಾಡುತ್ತಿದ್ದನು. ಮಾತಿನಲ್ಲಿ ಮುಚ್ಚುಮರೆ ಇರುತ್ತಿರಲಿಲ್ಲ. ಆಡಳಿತದ ವಿಚಾರಗಳಲ್ಲಿಯೂ ಕೂಡ ಸ್ವಲ್ಪವೂ ಗುಟ್ಟುಗುಮಾನಿಗಳಿರಲಿಲ್ಲ ಎಂದು ಬರೆದನು.

ಹೀಗೆ ಮನುಷ್ಯನು ಒಳ್ಳೆಯನೆಂಬ ಭಾವವು ಎಲ್ಲರಿಗೂ ಹುಟ್ಟಿತು. ಅವನಲ್ಲಿ, ಕೆಲವರು ಹೇಳುವಹಾಗೆ, '' ಸ್ವಲ್ಪ ತಿರುಳಿದ್ದಿತು.'' ಆದರೆ ಜನರ ಮನಸ್ಸನ್ನು ಆಕರ್ಷಿಸಿ ತನ್ನಲ್ಲಿ ನಿಲ್ಲಿಸಿಕೊಳ್ಳುವಂತಹ ಮನುಷ್ಯನಲ್ಲ. ಕೆಲವರು ಅವನಲ್ಲಿ ಪ್ರತಿಭೆಯಿಲ್ಲವೆಂದೂ, ಕೆಲವರು ಅವನ ಪರವಾಗಿ ಯಾವ ಅಭಿಪ್ರಾಯವನ್ನೂ ಹೊಂದುವುದಕ್ಕಾಗುವುದಿಲ್ಲವೆಂದೂ ಹೇಳಿದರು. ಕೆಲವರು ಅವನ ಆಚರಣೆಯನ್ನು ಹೆಜ್ಜೆಹೆಜ್ಜೆಗೂ ಖಂಡಿಸಿದರು. ಅಂತು ಜನಗಳಿಗೆ ಅವನ ಜೀವಿತಕಾಲದಲ್ಲಿ ಅವನ ಮಹಿಮೆ ಎಷ್ಟೆಂಬುದು ಗೊತ್ತಾಗಲಿಲ್ಲ. ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳಿದರು. ಆದರೆ ಆಗ ದೂಷಿಸಿದ ವಿವೇಕಶಾಲಿಗಳೇ ಮುಂದೆ ಅವನನ್ನು ಹೊಗಳಿದರು. ಅವನ ಗುಣಗಳೆಲ್ಲಾ ಅವನ ಮಾತು ಕಥೆಗಳಲ್ಲಿ ಹೊರಪಡುತ್ತಿದ್ದುವು. ಎರಡನೆಯಾವೃತ್ತಿ ಅವನ ದರ್ಶನವನ್ನು ಪಡೆದಮೇಲೆ ರಾಯಭಾರಿಯೊಬ್ಬನ ಮನಸ್ಸಿಗೆ ಹೀಗೆ ತೋರಿತು : '' ಪ್ರಜೆಗಳನ್ನು ಉದ್ಧರಿಸುವವನು ಲಿಂಕನ್ನನು. ಅದಕ್ಕಾಗಿ ಅವನನ್ನು ಅತ್ಯಂತವಾಗಿ ಗೌರವಿಸುವೆನು......ಅವನಲ್ಲಿ ಬೂಟಾಟಿಕೆಯೆಂಬುದು ಸ್ವಲ್ಪವೂ ಇಲ್ಲ. ಬಾಯಲ್ಲಿ ಬೇಕಾದಷ್ಟನ್ನು ಹೇಳಿ ಕೈಯ್ಯಲ್ಲಿ ಕೆಲಸ ಮಾಡದಿರುವಂತಹ ಮನುಷ್ಯನಲ್ಲ. ಸತ್ಯಸಂಧತೆಯೂ ವಿವೇಚನೆಯೂ ಪ್ರಸನ್ನ

ತೆಯೂ ಧೈರ್ಯವೂ ಅವನ ಗುಣಗಳು. ಬುದ್ಧಿವಂತನಾದರೂ ಕೆಲವು ವೇಳೆ ತಪ್ಪುಮಾಡುತ್ತಾನೆ. ಆದರೆ, ತಪ್ಪುಮಾಡಿದರೂ ಕೂಡ ಅದರ ಮೂಲಕವೇ ಸಾಗಿ ಕಾರ್ಯಸಿದ್ಧಿಯನ್ನು ಪಡೆಯುತ್ತಾನೆ......ಅವನ ಬುದ್ಧಿಶಕ್ತಿಯು ಗಾಢನಾದುದು. ಹೆಗಲಮೇಲಿನ ಹೊರೆಯು ಹೆಚ್ಚಿದಹಾಗೆಲ್ಲಾ ಅದು ಹೆಚ್ಚು ಹೆಚ್ಚಾಗಿ ಸ್ಪಷ್ಟವಾಗುವುದು.''

ಲಿಂಕನ್ನನ ಅಧಿಕಾರವು ಹೇಗಿದ್ದಿತೆಂಬ ಪ್ರಶ್ನೆಗೆ ಮೇಲಿನ ವಾಕ್ಯಗಳಲ್ಲಿ ಉತ್ತರವು ದೊರೆಯುವುದು. ಅಧಿಕಾರದ ಕೊನೆಗಾಲದಲ್ಲಿ ಮನುಷ್ಯನೊಬ್ಬನು ಹೀಗೆಂದನು : ''ಅದೇನು, ಪ್ರೆಸಿಡೆಂಟರೆ, ನಿಮ್ಮ ಮನಸ್ಸು ಬದಲಾಯಿಸಿರುವುದು.'' ಲಿಂಕನ್ನನು ಉತ್ತರವಾಗಿ ''ಹೌದು ನಾನು ಬದಲಾಯಿಸಿದ್ದೇನೆ. ಮನುಷ್ಯನ ತಿಳಿವಳಿಕೆಯು ನಿನ್ನೆಗಿಂತ ಈ ಹೊತ್ತು (ದಿನದಿನಕ್ಕೆ) ಹೆಚ್ಚದಿದ್ದರೆ ಅಂಥವನು ಕೆಲಸಕ್ಕೆ ಬಾರದವನು'' ಎಂದನು.

ರಾಯಭಾರಿಯು ಬರೆದಿರುವಂತೆ ಹೊರೆಯು ಹೆಚ್ಚಿದಹಾಗೆ ಲಿಂಕನ್ನನ ಅಂತಃಶಕ್ತಿಯೂ ಹೆಚ್ಚಿತು. ಸಾಮಾನ್ಯವಾಗಿ ಉತ್ಕೃಷ್ಟವಾದ ಅಧಿಕಾರವನ್ನು ಪಡೆದ ಜನಗಳು ಅದರೊಡನೆ ಬೆರೆದಿರುವ ಕಷ್ಟಗಳಿಂದಲೂ ಕೋಟಲೆಗಳಿಂದಲೂ ವ್ಯತ್ಯಾಸಹೊಂದಿ ಅಸಹನೆಯೇ ಮೊದಲಾದ ಅಸದ್ಗುಣಗಳನ್ನು ಕಲಿತು ಅಯೋಗ್ಯರೆನ್ನಿಸಿಕೊಳ್ಳುತ್ತಾರೆ. ಈ ವಿಷಯವು ಎಲ್ಲರಿಗೂ ಗೊತ್ತೇ ಇದೆ. ಆದರೆ ಲಿಂಕನ್ನನಲ್ಲಿ ಅಧಿಕಾರವಿದ್ದರೂ ಅದರ ದೆಸೆಯಿಂದ ಅಸಭ್ಯತೆಯು ಉತ್ಪನ್ನವಾಗಲಿಲ್ಲ. ಅವನಲ್ಲಿ ಮೊದಲು ಮೊದಲು ಕಂಡುಬಂದ ಒರಟುತನವೂ ಜಾಣತನವೂ ಅವಧಾರಣಾಶಕ್ತಿಯೂ ಕಾಲವು ತಳ್ಳಿ ತಿಳಿವಳಿಕೆಯು ಹೆಚ್ಚಿದಹಾಗೆ ಬದಲಾಯಿಸಿದುವು. ಅವನು ಸ್ಥಿರಸಂಕಲ್ಪನೂ ಅಸಾಧಾರಣವಿವೇಕಶಾಲಿಯೂ ಆದನು. ಪೂರ್ವದ ಸತ್ಯಸಂಧತೆಯೂ ಧೈರ್ಯವೂ ದಯಾಶಾಲಿತೆಯೂ ನಷ್ಟವಾಗಲಿಲ್ಲ. ಅವು ಪರಿಪಕ್ವವಾದುವು. ಲಿಂಕನ್ನನು ಸುಳ್ಳುಗಾರನೆಂದೂ ಹೇಡಿಯೆಂದೂ ನಿರ್ದಯನೆಂದೂ ಯಾವನೂ ಹೇಳಿಲ್ಲ. ಹಾಗೆ ಹೇಳಿದರೆ ಕೇಡನ್ನೆಣಿಸಿದಂತಾದೀತು.

* * * *

ಉತ್ತರದ ಪ್ರಜೆಗಳ ಉತ್ಸಾಹವು ಮಿತಿಮೀರುವಷ್ಟಿದ್ದಿತು. ಆದರೆ ಯುದ್ಧವೆಂಥದೆಂಬುದನ್ನೂ ಅದರ ಕಷ್ಟನಷ್ಟಗಳನ್ನೂ ಅರ್ಥಮಾಡಿಕೊಂಡವರು ಬಹಳ ಕಡಿಮೆ. ಮೊದಲು ಮೊದಲು ವಾಷಿಂಗ್ಟನ್ನಿಗೆ ಬಹಳ ಅಪಾಯವುಂಟೆಂದು ಎಲ್ಲರೂ ಹೆದರಿದರು. ನದಿಯಿಂದಾಚೆಗೆ ಅಲೆಗ್ಸಾಂಡ್ರಿಯದಲ್ಲಿ ಮನೆಗಳ ಮೇಲೆ ಹಾರಾಡುತ್ತಿದ್ದ ಶತ್ರುಪತಾಕೆಗಳು ಅಲ್ಲಿಗೆ ಕಾಣಿಸುತ್ತಿದ್ದುವು. ರಾಜಧಾನಿಯೊಳಗೆ ಪಿತೂರಿಗಳೂ ಖೂನಿಯ ಪ್ರಯತ್ನಗಳೂ ಇತರ ಮಸಲತ್ತುಗಳೂ ತುಂಬಿ ತುಳುಕುತ್ತಿರುವುವೆಂದು ವರ್ತಮಾನವಿದ್ದಿತು. ದಕ್ಷಿಣದಿಂದ ಬಂದ ಗೂಢಚಾರರು ಅಲ್ಲಿ ಎಲ್ಲೆಲ್ಲಿಯೂ ಇದ್ದರು. ಅವ್ಯವಸ್ಥೆಯು ಬಹಳ.

ಏಪ್ರಿಲ್ 20ನೆಯ ತಾರೀಖಿನ ವೇಳೆಗೆ ಗಾಸ್ಪೋರ್ಟಿನಲ್ಲಿದ್ದ ಹಡಗುಕಟ್ಟುವ ಸ್ಥಳವೂ ಹಾರ್ಪರ್ಸ್‌ಫೆರ್ರಿಯದಲ್ಲಿದ್ದ ಆಯುಧಶಾಲೆಯೂ ಉತ್ತರದವರಿಗೆ

ಕೈಬಿಟ್ಟು ಹೋದುವು. ಆದಿನವೇ ಲೀಯು ತನ್ನ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು ವರ್ಜಿನಿಯಕ್ಕೆ ಹೋದನು. ಮಸಾಚ್ಯುಸೆಟ್ಸ್‌ನಲ್ಲಿ ಸಿದ್ಧವಾದ ದಂಡೊಂದು ಬೆಂಬಲಕ್ಕಾಗಿ ವಾಷಿಂಗ್ಟನ್ನನ್ನು ಕುರಿತು ಹೊರಟಿತು. ಆದರೆ ಮಧ್ಯದಲ್ಲಿ ಆಟಂಕವುಂಟಾಯಿತು. ದಕ್ಷಿಣದಲ್ಲಿ ಪಕ್ಷಪಾತವುಳ್ಳ ಬಾಲ್ಟಿಮೋರಿನಲ್ಲಿ ಜನಗಳು ರೋಷಹೊಂದಿ ಅದರಮೇಲೆ ಬಿದ್ದರು. ಎರಡುಕಡೆಯಲ್ಲಿಯೂ ನಷ್ಟ ವುಂಟಾಯಿತು. ಅಲ್ಲಿನ ಕೆಲವು ಜನರು ರಕ್ತಶೋಷಣೆಯ ಈ ಸನ್ನಾಹಗಳನ್ನು ನಿಲ್ಲಿಸಬೇಕೆಂದು ನಿಯೋಗಿಗಳನ್ನು ಕಳುಹಿಸಿ ಲಿಂಕನ್ನನನ್ನು ಪ್ರಾರ್ಥಿಸಿದರು. ಆದರೆ ಅವನು ಎಂದಿನಂತೆ ಉಲ್ಲಾಸದಿಂದಿರುತ್ತ ಸ್ವಲ್ಪವೂ ದಾಕ್ಷಿಣ್ಯವನ್ನಿಡದೆ ಆ ಪ್ರಾರ್ಥನೆಗಳನ್ನು ತಿರಸ್ಕರಿಸಿದನು. ಪ್ರತಿಯಾಗಿ ಆ ಜನಗಳು ರೈಲುರಸ್ತೆಗಳ ನ್ನೆಲ್ಲಾ ಕಿತ್ತು ತೊಂದರೆಪಡಿಸಿದರು. ಮೇ ಒಂದನೆಯ ತಾರೀಖಿನ ದಿನ ದಕ್ಷಿಣದ ಪತಾಕೆಯು ರಾಜಧಾನಿಯಲ್ಲಿ ನೆಡಲ್ಪಡುವುದೆಂದು ದಕ್ಷಿಣದವನೊಬ್ಬನು ಹೇಳಿ ಕೊಂಡನು. ಬೋರ್ಗಾರ್ಡನು ಮಾತ್ರ ಈ ಸಮಯದಲ್ಲಿ ದಂಡೆತ್ತಿಬಂದಿದ್ದರೆ ರಾಜಧಾನಿಯು ನಿರಾಯಾಸವಾಗಿ ದಕ್ಷಿಣದವರ ಕೈಸೇರುತ್ತಿದ್ದಿತು. ಅಲ್ಲಿ ರಕ್ಷಣೆ ಗಾಗಿ ದಂಡೇ ಇರಲಿಲ್ಲವೆನ್ನುವಂತಾಗಿದ್ದಿತು. ಆದರೆ ದಕ್ಷಿಣವು ಅಂತಹದೇನನ್ನೂ ಯೋಚಿಸಲಿಲ್ಲ. ತಮ್ಮ ರಾಜಧಾನಿಯಾದ ರಿಚ್‌ಮಂಡ್ ನಗರವು ಶತ್ರುಗಳ ವಶವಾಗುವಂತಹ ಅಪಾಯದಲ್ಲಿದೆಯೆಂದು ದಕ್ಷಿಣದವರು ಹೆದರಿದ್ದರು. ಆದರೂ ಅವರಿಗೆ ಇದು ಉತ್ತರದವರ ಮೇಲೆ ಕೈಮಾಡಲು ಬಹಳ ಒಳ್ಳೆಯ ಸಮಯ ವಾಗಿದ್ದಿತು.

ವಾಷಿಂಗ್ಟನ್ ನಗರವು ಕೈಬಿಟ್ಟುಹೋದರೆ ಬಹಳ ನಷ್ಟವಾಗುತ್ತಿದ್ದಿತು. ಸಂಯೋಗಪಕ್ಷಪಾತಿಗಳಾದ ಸೀಮೆಗಳಿಗೆ ನಿರಾಶೆಯುಂಟಾಗುತ್ತಿದ್ದಿತು. ಈ ಅಂಶವನ್ನು ಮೊದಲೇ ಯೋಚಿಸಿ ಲಿಂಕನ್ನನು ಬಹಳ ಕಳವಳಹೊಂದಿದನು. ರಕ್ಷಣೆಯನ್ನು ಹೆಚ್ಚಿಸಲು ಸಾಹಸಮಾಡಿದನು. ನಾವೆಯ, ಸೈನ್ಯದ ಮತ್ತು ಇತರ ಇಲಾಖೆಗಳಲ್ಲಿ ಬದಲಾವಣೆಗಳನ್ನೂ ಮುಖ್ಯವಾದ ಏರ್ಪಾಡುಗಳನ್ನೂ ಮಾಡಿ ಸ್ವಂತ ಆಚರಣೆಗೆ ಹೆಚ್ಚಾಗಿ ಅವಕಾಶವಿರುವಂತೆ ಮಾಡಿಕೊಂಡನು. ಒಂದೊಂದು ವೇಳೆ ಅವನು ಕಾಂಗ್ರೆಸ್ ಸಭೆಯ ಅನುಮತಿಯನ್ನು ನಿರೀಕ್ಷಿಸಿ ಕೂರುತ್ತಿರಲಿಲ್ಲ. ಪ್ರತಿಯೊಂದು ಇಲಾಖೆಗೂ ಇಷ್ಟು ಅಧಿಕಾರವೆಂದಿದ್ದ ಹೆಗ್ಗುರುತನ್ನು ವಿಚಾರದಿರಲಿಲ್ಲ. ಪ್ರಜೆಗಳು ದಂಗೆಯೆದ್ದು ಸರ್ಕಾರವು ಮೂಲೆಗೆ ಬೀಳುವಂತಹ ಸ್ಥಿತಿಯಲ್ಲಿರುವುದ ರಿಂದ ಕಾಂಗ್ರೆಸ್ ಸಭೆಯು ಮಂಜೂರುಮಾಡುವುದೆಂಬ ಭರವಸೆಯಮೇಲೆ ಹೆಚ್ಚು ಅಧಿಕಾರವನ್ನು ಉಪಯೋಗಿಸಿಕೊಳ್ಳುತ್ತೇನೆಂದು ಅವನು ಹೇಳುತ್ತಿದ್ದನು. ಇದೇ ಸಮಯದಲ್ಲಿ, ಅಧಿಕಾರಿಗಳಲ್ಲಿ ಯಾರನ್ನು ನಂಬಬಹುದು, ಯಾರನ್ನು ನಂಬಬಾರದು ಎಂಬ ಸಂದೇಹವುಂಟಾಗಿ ತೊಂದರೆಪಡಿಸಿತು. ಅವರಲ್ಲಿ ಅನೇ ಕರು ಇದ್ದಕ್ಕಿದ್ದಹಾಗೆ ಕೆಲಸವನ್ನು ಬಿಟ್ಟು ದಕ್ಷಿಣಕ್ಕೆ ಹೊರಟುಹೋದರು. ಅವರ ಸ್ಥಳಗಳಿಗೆಲ್ಲಾ ನಂಬಿಕೆಗರ್ಹರಾದವರನ್ನು ನೇಮಿಸಬೇಕಾಯಿತು. ಈ ನಡುವೆ ನ್ಯೂ ಇಂಗ್ಲೆಂಡಿನಿಂದಲೂ ನ್ಯೂಯಾರ್ಕಿನಿಂದಲೂ ದಂಡುಗಳು ಬಂದುವು.

ಏಪ್ರಿಲ್ ಇಪ್ಪತ್ತೈದನೆಯ ತಾರೀಖಿನ ಹೊತ್ತಿಗೆ ಸಾಕಾದಷ್ಟು ದಂಡು ಬಂದು ವಾಷಿಂಗ್ಟನ್ನಿಗೆ ಕಾವಲಾಯಿತು. ಹೆದರಿಕೆಯು ತಪ್ಪಿತು. ಅವಶ್ಯಕವೆಂದು ತೋರಿ ಮೇರಿಲೆಂಡಿನಲ್ಲಿ ಮಾರ್ಷಿಯಲ್ ಲಾ ವನ್ನು ಅಲ್ಲಿನ ಸರ್ಕಾರವು ಚಲಾವಣೆಗೆ ತಂದಿತು. ಅದರ ಪ್ರಕಾರ ತಪ್ಪು ಅಥವಾ ದ್ರೋಹಮಾಡಿದವನೆಂದು ತಿಳಿದುಬಂದ ಮನುಷ್ಯನನ್ನು ಸೆರೆಹಿಡಿದು ತನಿಖೆಮಾಡದೆಯೇ ಶಿಕ್ಷೆಯನ್ನು ವಿಧಿಸಬಹುದಾಗಿದ್ದಿತು. ತನಿಖೆಯೂ ಶಿಕ್ಷೆಯೂ ಒಂದೆರಡು ಗಂಟೆಗಳೊಳಗಾಗಿ ಮುಗಿದು ಹೋಗುತ್ತಿದ್ದುವು. ಸೈನ್ಯಾಧಿಪತಿಯೊಬ್ಬನು, ದಕ್ಷಿಣದ ಕಡೆಯುವನಾಗಿ ಬಾಲ್ಟಿಮೋರಿನಲ್ಲಿದ್ದುಕೊಂಡು ಸೈನ್ಯಕ್ಕೆ ಜನಗಳನ್ನು ಕೂಡಿಸುತ್ತಿದ್ದವನೊಬ್ಬ ಮನುಷ್ಯನನ್ನು ಕೈಸೆರೆ ಹಿಡಿದನು. ಅಷ್ಟು ಜಾಗ್ರತೆಯಾಗಿ ಅವನನ್ನು ಹಿಡಿದು ಶಿಕ್ಷೆಮಾಡುವುದು ಅವಶ್ಯಕವಲ್ಲದಿದ್ದರೂ ಕೆಲಸವು ನಡೆದುಹೋದುದರಿಂದ ಪ್ರೆಸಿಡೆಂಟನು ಅದನ್ನು ಮಂಜೂರುಮಾಡಿದನು. ಜಡ್ಜಿಯೊಬ್ಬನು ಅದನ್ನು ನೋಡಿ ಆಕ್ಷೇಪಿಸಿದನು. ಲಿಂಕನ್ನನು ಸೋಲಲಿಲ್ಲ. ಅವರಿಬ್ಬರಿಗೂ ವಾಗ್ವಾದವು ಹತ್ತಿತು. ಮುಂದೆ ಈ ವಿಚಾರವನ್ನು ಹೇಳಬೇಕಾಗುವುದು. ಅಲ್ಲಿಂದ ಮುಂದೆ ಮೂರು ವಾರಗಳೊಳಗೆ ಬಾಲ್ಟಿಮೋರಿನ ಜನಗಳು ಬದಲಾಯಿಸಿದರು. ದಕ್ಷಿಣದ ಕಡೆಗಿದ್ದ ಅಭಿಮಾನವು ಅಡಗಿತು. ಅಲ್ಲಿನ ಸರ್ಕಾರವು ತಾಟಸ್ಥ್ಯವನ್ನು ವಹಿಸಿತು. ಗೌರ್ನರನು ಮಾತ್ರ ಸಂಯೋಗದ ಶ್ರೇಯಸ್ಸಿಗಾಗಿ ಕೆಲಸವನ್ನು ಮಾಡಿದನು. ಆಮೂಲಕ ಪ್ರಯಾಣಮಾಡುವ ಸೈನ್ಯಗಳಿಗೆ ಮಾರ್ಗವು ನಿರಾಯಾಸವಾಗಿ, ಅನುಕೂಲ್ಯಗಳು ಒದಗಿದುವು.

ವಾಷಿಂಗ್ಟನ್ನಿನಲ್ಲಿ ಭಯವು ಬೇಗಲೇ ತಪ್ಪಿತು. ಉತ್ತರದ ಜನಗಳು ದಂಗೆಯನ್ನು ಸುಲಭವಾಗಿ ಸ್ವಲ್ಪಕಾಲದೊಳಗೆ ಅಡಗಿಸಬಹುದೆಂದು ಭಾವಿಸಿದರು. ಕೆಲವರು ಇಷ್ಟೇ ದಿವಸದಲ್ಲಿ ಅಡಗಿಸಬಹುದೆಂದು ದಿನಗಳ ಸಂಖ್ಯೆಯನ್ನು ಹೇಳಿದರು. ಸೈನಿಕರಿಗೆ ಮೂರು ತಿಂಗಳು ಪೂರ್ತಿಯಾಗುವವರೆಗೆ ಕೆಲಸವಿರದೆಂದು ಅವರು ಎಣಿಸಿದರು. ಜನರಲ್ ಸ್ಕಾಟನೂ ಕೂಡ, ಯುದ್ಧವು ಬೇಗ ಮುಗಿದು ಹೋಗುವುದರಿಂದ ಹೆಚ್ಚುಮಂದಿ ಸೈನಿಕರಿಗೆ ತರಪೇತನ್ನು ಕೊಡಬೇಕಾದ ಅವಶ್ಯಕತೆಯಿಲ್ಲವೆಂದನು. ಆದರೆ ಲಿಂಕನ್ನನೂ ಯುದ್ಧದ ಸೆಕ್ರಿಟರಿಯಾದ ಕೇಮರನ್ನನೂ ಈರೀತಿಯಾಗಿ ಮರುಳಾಗಲಿಲ್ಲ. ಪೂರ್ವದ ರಾಜ್ಯಗಳಲ್ಲಿ ಜನರು ಸಹನೆಯಿಲ್ಲದವರಾಗಿ, ಸರ್ಕಾರವು ಚಟುವಟಿಕೆಯಿಂದ ಕೆಲಸಮಾಡಿ ಸನ್ನಾಹಗಳನ್ನು ನಡೆಯಿಸಬೇಕೆಂದು ಅಪೇಕ್ಷಿಸಿದರು. ಉತ್ತರದಲ್ಲಿ ತೋರಿಬಂದ ಶಕ್ತಿಯನ್ನು ಸರ್ಕಾರವು ಉಪಯೋಗಿಸಿ ದಕ್ಷಿಣಕ್ಕೆ ರಾಜಧಾನಿಯಾಗಿದ್ದ ರಿಚ್‌ಮಂಡ್ ನಗರವನ್ನು ಆಕ್ರಮಿಸಿಕೊಂಡು ಯುದ್ಧವನ್ನು ಕೊನೆಗಾಣಿಸಬೇಕಾಗಿದ್ದಿತು. ಆದರೆ ಯಾವುದನ್ನು ಮಾಡುವುದಕ್ಕೂ ಮೊದಲು ಉತ್ತರವು ತನ್ನ ಸೈನ್ಯವನ್ನೇರ್ಪಡಿಸಿಕೊಳ್ಳಬೇಕಾಗಿದ್ದಿತು. ಅಲ್ಲದೆ ಕೆಲವು ಗಡಿಯಸೀಮೆಗಳು ಇನ್ನೂ ಅನುಮಾನಮಾಡುತ್ತಿದ್ದುವು. ಅಂಥವುಗಳನ್ನು ತನ್ನಕಡೆಗೆಳೆದುಕೊಳ್ಳುವುದು ಉತ್ತರಕ್ಕೆ ಮುಖ್ಯವಾದುದು. ಈ ಕೆಲಸಕ್ಕಾಗಿ ಸಹಾಯಕ್ಕೆ ಕೆಲವು ಸೈನ್ಯವೂ ಬೇಕಾಗುತ್ತಿದ್ದಿತು.

ಉತ್ತರದ ಸರ್ಕಾರವು ಇದನ್ನೆಲ್ಲಾ ಯೋಚಿಸಿಕೊಂಡು ಬಹು ಜಾಗರೂಕತೆಯಿಂದ ಕೆಲಸಮಾಡಬೇಕೆಂದು ನಿಶ್ಚಯಿಸಿತು. ಆದರೆ ಜನಗಳ ಆತುರವು ಹೆಚ್ಚಾಗಿ ಜುಲೈ ತಿಂಗಳಲ್ಲಿ ಸೇರಿದ ಸಭೆಯಲ್ಲಿ ಅವರು ಒತ್ತಾಯಮಾಡಿದರು. ಸರ್ಕಾರದ ಎಚ್ಚರಿಕೆಯು ಗಣನೆಗೆ ಬರಲಿಲ್ಲ. ಈ ಆತುರಕ್ಕೆ ಫಲವಾಗಿ ಆ ತಿಂಗಳ 21ನೇ ತಾರೀಖಿನಲ್ಲಿ ಬುಲ್‌ರ್ನ (Bull Run) ಎಂಬ ಬಳಿಯಲ್ಲಿ ಯುದ್ಧವಾಗಿ, ಆ ಯುದ್ಧದಿಂದ ಉತ್ತರವು ಬುದ್ಧಿಯನ್ನು ಕಲಿಯಿತು.

ಗಡಿಯಸೀಮೆಗಳ ಸ್ಥಿತಿಯೇನಾಯಿತೆಂಬುದನ್ನು ವಿಚಾರಿಸುವುದು ಅವಶ್ಯಕವಾದುದು. ಈ ಕಾಲಕ್ಕೆ ಮೊದಲು ಉತ್ತರದ ಸೈನ್ಯವನ್ನು ಸರ್ಕಾರವು ಮೂರು ಭಾಗಗಳಾಗಿ ವಿಂಗಡಿಸಿತು. ವಾಷಿಂಗ್ಟನ್ನಿಗೂ ರಿಚ್‌ಮಂಡಿಗೂ ನಡುವೆಯಿದ್ದ ಪೋಟೊಮಕ್ (Potomac) ನಲ್ಲಿ ಒಂದು ಭಾಗವು ನಿಂತಿತು. ಎರಡನೆಯದು ಒಹಿಯೋವಿನ ಭಾಗವೆಂದೂ ಮೂರನೆಯದು ಪಶ್ಚಿಮದ ಭಾಗವೆಂದೂ ಕರೆಯಲ್ಪಟ್ಟು ಒಹಿಯೋವಿನ ಭಾಗಕ್ಕೆ ಮೆಕ್ಲೆನ್ನನು ಅಧಿಪತಿಯಾದನು. ವರ್ಜಿನಿಯವು ಎರಡುಭಾಗವಾಗಿ ಅದರ ಪಶ್ಚಿಮದ ಕೌಂಟಿಗಳು ಒಂದುಗೂಡಿ ತಮ್ಮದೊಂದು ಸಂಸ್ಥಾನವನ್ನೇರ್ಪಡಿಸಿಕೊಂಡುವು. ಪೂರ್ವದ ಭಾಗವು ಅದನ್ನು ನೋಡಿ ತನ್ನ ಸೈನ್ಯವನ್ನು ಕಳುಹಿಸಿತು. ಪಶ್ಚಿಮದ ಜನಗಳು ರಕ್ಷಿಸಬೇಕೆಂದು ಒಹಿಯೋವಿನಲ್ಲಿದ್ದ ಮೆಕ್ಲೆಲ್ಲನ್ನನನ್ನು ಪ್ರಾರ್ಥಿಸಿದರು. ಆತನು ಸೈನ್ಯವನ್ನು ಕಳುಹಿಸಿ ತೊಂದರೆಯನ್ನು ತಪ್ಪಿಸಿದನು. ಅದಕ್ಕೂ ಪಶ್ಚಿಮದಲ್ಲಿದ್ದ ಕೆಂಟಕ್ಕಿಯಲ್ಲಿ ಸಂಯೋಗದಲ್ಲಿ ಅಭಿಮಾನವುಳ್ಳ ಪ್ರಜೆಗಳಿಗೂ ದಕ್ಷಿಣದಲ್ಲಿ ಅಭಿಮಾನವುಳ್ಳ ಗೌರ್ನರಿಗೂ ಮನಸ್ತಾಪವುಂಟಾಗಿ ಜಗಳವಾಯಿತು. ಆಗ ಯಾವುದೂ ಇತ್ಯರ್ಥವಾಗಲಿಲ್ಲ. ಆದರೆ ಮುಂದೆ ನ್ಯಾಯವಿಧಾಯಕಸಭೆಯು ಸೇರಿದಾಗ ಜನಗಳು ಏಕಕಂಠರಾಗಿ ಸಂಯೋಗದ ಬೆಂಬಲಕ್ಕಾಗಿ ನಿಂತರು. ಆ ಸಂಸ್ಥಾನದಿಂದ 40,000 ಮಂದಿ ಉಮೇದುವಾರರು (Volunteers) ಸಿದ್ಧವಾದರು. ಮುಂದೆ ಜನಗಳು ಸಂಯೋಗದ ಬಾವುಟವನ್ನು ಬಿಟ್ಟು ಕದಲಲಿಲ್ಲ. ಮಿಸ್ಸೌರಿಯಲ್ಲಿ ಉತ್ತರ ದಕ್ಷಿಣ ಜನಗಳಲ್ಲಿ ವೈಷಮ್ಯವು ಹೆಚ್ಚಾಗಿದ್ದಿತು. ಅಲ್ಲಿಯ ಗೌರ್ನರೂ ಸರ್ಕಾರವೂ ದಕ್ಷಿಣದಲ್ಲಿ ಪಕ್ಷಪಾತವನ್ನು ತೋರಿಸಲಾಗಿ ಲಿಂಕನ್ನನು ಕೆಪ್ಟನ್ ಲಿಯೋನ್ ಎಂಬಾತನ ಕೈಕೆಳಗೆ ಕೆಲವು ಸೈನ್ಯವನ್ನು ಕಳುಹಿಸಿ ಸಂಯೋಗದ ಹಿತಕ್ಕಾಗಿ ಅಲ್ಲಿ ದಂಡನ್ನೆಬ್ಬಿಸುವಂತೆ ಅಪ್ಪಣೆಮಾಡಿದನು. ಅಲ್ಲಿ ವಾಸವಾಗಿದ್ದ ಜರ್ಮನ್ ದೇಶಸ್ಥರು ತತ್‌ಕ್ಷಣವೇ ಓಡಿಬಂದು ಸಂಯೋಗದ ಕಡೆಗೆ ಸೇರಿದರು. ಅದನ್ನು ಕಂಡು ಗೌರ್ನರು ಸಭೆಸೇರಿಸಿ ಪ್ರತ್ಯೇಕನಾಗುವ ಉದ್ದೇಶದಿಂದ ಕಟ್ಟಳೆಯನ್ನೇರ್ಪಡಿಸಲು ಯತ್ನಿಸಿದನು. ಸಭೆಸೇರಿದ ಪ್ರತಿನಿಧಿಗಳು ವಿಯೋಗವಾಗಬೇಕೆಂದು ಬಂದ ಮುಸೂದೆಯನ್ನು ತಿರಸ್ಕರಿಸಿದರು. ಲಿಯೋನನು ಗೌರ್ನರನ ಸೈನ್ಯದ ಮೇಲೆ ಅನೇಕವೇಳೆ ಕದನಮಾಡಿ ಕೊನೆಗೆ ಅವನನ್ನೂ ದಕ್ಷಿಣವನ್ನು ಸೇರುವ ಯೋಚನೆಯುಳ್ಳ ಸರ್ಕಾರವನ್ನೂ ಓಡಿಸಿಬಿಟ್ಟನು. ಹೊಸದಾಗಿ ಏರ್ಪಟ್ಟ ಸರ್ಕಾರವನ್ನು ಎಲ್ಲರೂ ಅಂಗೀಕರಿಸಲಿಲ್ಲ. ವಿರೋಧಿಗಳಾದವರ ಬೆಂಬಲದಿಂದ ಪಿತೂರಿ

ಗಳು ದಕ್ಷಿಣದ ಶ್ರೇಯಸ್ಸಿಗಾಗಿ ಅಲ್ಲಿ ನಡೆಯುತ್ತಲೇ ಇದ್ದುವು. ಆದರೂ ಆಬಳಿಕ ಸರ್ಕಾರವು ದಕ್ಷಿಣವನ್ನು ಪುರಸ್ಕರಿಸಲಿಲ್ಲ.

---

## ೨ನೆಯ ಅಧ್ಯಾಯ

---

### ಬುಲ್ ರನ್ ಬಳಿಯ ಯುದ್ಧ.

ಸರ್ಕಾರವು ಚಟುವಟಿಕೆಯನ್ನು ತೋರಿಸಬೇಕೆಂದು ಎಲ್ಲರೂ ಹೇಳುತ್ತಿದ್ದರು. ದಕ್ಷಿಣವು ಗೊತ್ತಾಗಿದ್ದಪ್ರಕಾರ ಜುಲೈ 20ನೇ ತಾರೀಖಿನ ಸಭೆ ಸೇರಲು ಅವಕಾಶವನ್ನು ಕೊಡಕೂಡದೆಂದು ಪತ್ರಿಕೆಯೊಂದು ಅಭಿಪ್ರಾಯವನ್ನು ಸೂಚಿಸಿತು. ಸೆನೇಟಿನ ಮಂತ್ರಿಗಳೂ ಕಾಂಗ್ರೆಸ್‌ನ ಸಭಿಕರೂ ಅಷ್ಟುದೂರ ಹೋಗಲಿಲ್ಲ. ಆದರೂ ಯುದ್ಧದ ವೆಚ್ಚಕ್ಕಾಗಿ ತೆರಿಗೆಗಳನ್ನು ಹಾಕುವುದಕ್ಕೂ ಜನಗಳನ್ನು ಕೂಡಿಸಿ ಸೈನ್ಯವನ್ನೇರ್ಪಡಿಸುವುದಕ್ಕೂ ಸಿದ್ಧವಾಗಿದ್ದರು. ಸರ್ಕಾರವೂ ಸೈನ್ಯವೂ ಏನನ್ನಾದರೂ ಮಾಡಿದರೆ ಸಭಿಕರಿಗೆ ತೃಪ್ತಿಯುಂಟಾಗುತ್ತಿದ್ದಿತು. ಜನರಲ್ ಸ್ಕಾಟನು ಮಾತ್ರ ಅಷ್ಟು ಆತುರವನ್ನು ತೋರಿಸಲಿಲ್ಲ. ಮುಂದಕ್ಕೆ ಅನುಕೂಲವಾಗುವಂತೆ ಸಿದ್ಧಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದುದರಿಂದ ಅವನು ಆತುರಮಾಡುವುದರಿಂದ ಪ್ರಯೋಜನವಿಲ್ಲವೆಂದು ಎಣಿಸಿದನು. ತಡೆದು ತಡೆದು ಕೆಲಸಮಾಡುತ್ತ, ಈ ನಡುವೆ ದಂಡಿನಲ್ಲಿ ಬಂದು ಸೇರುವ ಉಮೇದುವಾರರನ್ನು ಸಾವಕಾಶವಾಗಿ ತರಪೇತುಮಾಡಿ ಬಲವಾದ ಸೈನ್ಯವನ್ನು ಸಿದ್ಧಪಡಿಸಬೇಕೆಂದು ಅವನ ಮನಸ್ಸಿನಲ್ಲಿದ್ದಿತು. ದಕ್ಷಿಣದಲ್ಲಿಯೂ ಸೈನ್ಯದಲ್ಲಿ ಇದೇ ಪಾಡಿದ್ದಿತು. ಸನ್ನಾಹಮಾಡಿಕೊಳ್ಳಲು ಇನ್ನೂ ಕಾಲವು ಬೇಕೆಂದು ಡೇವಿಸ್ಸನೂ ಲೀಯೂ ಹೇಳುತ್ತಿದ್ದರು. ಹೀಗಿರುವಾಗ ಆತುರಪಡುವುದೇಕೆ ಎಂದು ಕೆಲವರು ಕೇಳಿದರೂ ಒಟ್ಟಿನಲ್ಲಿ ಜನಗಳು ಹಣವೂ ಜನವೂ ತಡೆಯಿಲ್ಲದೆ ಬಂದು ಬೀಳುತ್ತಿರುವಾಗ ಸುಮ್ಮನೆ ಕೂರುವುದೇಕೆ ಎಂದು ವಿಚಾರಮಾಡುತ್ತಿದ್ದರು. ಕೆಲಸವಿಲ್ಲದಿದ್ದಭಾಗದಲ್ಲಿ ಸೈನ್ಯದಲ್ಲಿ ಸೋಮಾರಿತನವುಂಟಾಗಿ ಜನಗಳ ಉತ್ಸಾಹವು ಕಡಿಮೆಯಾಗುವುದು. ಸೋಲನ್ನಾದರೂ ಸಹಿಸಬಹುದು, ಈ ಸೋಮಾರಿತನವನ್ನು ಸಹಿಸಲಾಗುವುದಿಲ್ಲ. ಸೋಲುಂಟಾದರೆ ಹೇಗೆ ಎಂಬ ಭಯವು ಹೆಚ್ಚಿದಷ್ಟೂ ಯುದ್ಧಮಾಡದೆ ಸುಮ್ಮನಿರುವುದು ಹೇಗೆ ಎಂಬ ಅಪೇಕ್ಷೆಯು ಹೆಚ್ಚಿತು. ಯುದ್ಧಮಾಡಿ ದಕ್ಷಿಣವನ್ನು ಜಯಿಸದಿದ್ದರೆ ಐರೋಪ್ಯರಾಜ್ಯಗಳು ಉತ್ತರವು ಕೈಲಾಗದುದೆಂದು ಚಿಂತಿಸಿ ದಕ್ಷಿಣವನ್ನು ಸ್ವತಂತ್ರವಾದೊಂದು ರಾಜ್ಯವೆಂದು ಗೌರವಿಸುವರು. . ಲಿಂಕನ್ನನೂ ಅವನ ಮಂತ್ರಿಗಳೂ ಆಲೋಚಿಸಿ ನೋಡಿದರು ; ಜನಗಳ ಯುದ್ಧಾಪೇಕ್ಷೆಯನ್ನೂ ಜನರಲ್ ಸ್ಕಾಟನ ಸಲಹೆಯನ್ನೂ ತೂಗಿದರು. ಆದಷ್ಟುಮಟ್ಟಿಗೆ ಜನಗಳ

ಅಪೇಕ್ಷೆಯನ್ನು ಪೂರ್ತಿಮಾಡುವುದೇ ನ್ಯಾಯವಾಗಿ ತೋರಿತು. ಮೊದಲನೆಯದು ಹೆಚ್ಚಾಗಿ ತೂಗಿತು. ಸೋಲುಂಟಾದರೂ ಆಗಲೆಂದು ಲಿಂಕನ್ನನು ಧೈರ್ಯಮಾಡಿದನು. ಆದರೆ ಈ ಕಾರ್ಯಕ್ರಮವನ್ನು ನೋಡಿ ನಾವು ಅವನು ಯೋಚಿಸದೆಯೇ ಹೀಗೆ ಮಾಡಿದನೆಂದರೆ ಸತ್ಯವಾಗಲಾರದು. ಸೋಲುಂಟಾದರೂ ಹೆಚ್ಚಿನ ಭಯವಿರಲಿಲ್ಲ. ನಿಜವಾಗಿ, ಬುಲ್‌ರ್ಣನಲ್ಲಿ ಆದ ಅಪಜಯದಿಂದ ಹೆಚ್ಚಿನ ನಷ್ಟವೇನೂ ಆಗಲಿಲ್ಲ. ಸುಮ್ಮನೆ ಕಾಲವನ್ನು ತಳ್ಳುವುದಕ್ಕಿಂತ ಅದು ಎಷ್ಟೋ ಲೇಸೆನ್ನಿಸಿತು. ಯುದ್ಧದ ವಿಚಾರದಲ್ಲಿ ಅತಿಯಾಗಿ ಎಚ್ಚರಿಕೆಯನ್ನು ತೋರಿಸಹೋದರೆ ಜನರ ಉತ್ಸಾಹವು ಕುಗ್ಗಿ ಪ್ರಮಾದಗಳಾಗಬಹುದೆಂಬ ಭಯವೂ ಲಿಂಕನ್ನನ ಮನಸ್ಸಿನಲ್ಲಿದ್ದಿರಬಹುದು. ಅವನು ಮಾಡಿದುದು ಸರಿಯಾಯಿತು. ಬುಲ್‌ರ್ಣನಲ್ಲಿ ಸೋಲು ಲಭಿಸಲಾಗಿ ಪ್ರಜೆಗಳು, ತಮಗೆ ಅನುಭವವು ಸಾಲದೆಂತಲೂ ಇನ್ನುಮುಂದೆ ಎಚ್ಚರಿಕೆಯಿಂದ ನಡೆಯಬೇಕೆಂತಲೂ ತಿಳಿದರು. ಬುದ್ಧಿ ಬಂದಿತು. ಸೈನ್ಯಕ್ಕೆ ಇದುವರೆಗೆ ಕೊಟ್ಟಿದ್ದ ಶಿಕ್ಷಣವು ಸಾಕಾಗಲಿಲ್ಲ. ಈ ಅಂಶದಲ್ಲಿ ಹೀಗೇ ಸರಿಯೆಂದು ನಿರ್ಣಯವನ್ನು ಹೇಳುವುದು ಕಷ್ಟ. ಆದರೂ ಲಿಂಕನ್ನನೂ ಅವನ ಪ್ರಧಾನಿಗಳೂ ಪ್ರಾಯಶಃ ಯುಕ್ತವಾದುದನ್ನೇ ಮಾಡಿದರು.

ಆ ಯುದ್ಧದಲ್ಲಿ ಜಯವಾಗಲಿಲ್ಲ. ದಕ್ಷಿಣದ ದಂಡು ಬೋರ್ಗಾರ್ಡನ ಕೈಕೆಳಗೆ ಬುಲ್‌ರ್ಣ ನದಿಯ ಬಳಿಯಲ್ಲಿ ನಿಂತಿತು. ಅಲ್ಲಿಗೂ ವಾಷಿಂಗ್ಟನ್ನಿಗೂ 20 ಮೈಲಿಗಳ ದೂರವಿದ್ದಿತು. ಉತ್ತರದ ಸೈನ್ಯದಲ್ಲಿ ಮುಖ್ಯಭಾಗವು ಪೋಟೊಮಕ್‌ನ ದಕ್ಷಿಣದಲ್ಲಿ ಪಾಳೆಯವನ್ನು ಬಿಟ್ಟಿದ್ದಿತು. ಅಲ್ಲಿ, ರಕ್ಷಣೆಗಾಗಿ ಕೋಟೆಗಳೂ ಕಂದಕಗಳೂ ಮೊದಲೇ ಏರ್ಪಾಡಾಗಿದ್ದುವು. ಷೆನಾಂಡೋವಾ ಬಯಲಿನಲ್ಲಿ ಜಾನ್ಸ್ಟ ಎಂಬಾತನ ಕೈಕೆಳಗೆ ದಕ್ಷಿಣದ ಮತ್ತೊಂದು ಸೈನ್ಯವು ಕಾದಿದ್ದಿತು. ಅದರಮೇಲೆ ಕಾವಲಿರುವುದಕ್ಕಾಗಿ ಹಾರ್ಪರ್ಸ್ ಫೆರ್ರಿಯ ಬಳಿಯಲ್ಲಿ ಉತ್ತರದ ಮತ್ತೊಂದು ದಂಡು ತಂಗಿದ್ದಿತು. ಉತ್ತರದ ಎರಡು ಸೈನ್ಯಗಳಲ್ಲಿಯೂ ಸೈನಿಕರು ಬಹಳಮಂದಿ ಇದ್ದರು. ಪೋಟೊಮಕ್‌ನ ಸೈನ್ಯವು ಬೋರ್ಗಾರ್ಡನ ಮೇಲೆ ಕೈಮಾಡಬೇಕೆಂದೂ ಆಸಮಯದಲ್ಲಿ ದಕ್ಷಿಣದ ಇನ್ನೊಂದು ದಂಡು ನೆರವಾಗಿ ಬರದಂತೆ ಹಾರ್ಪರ್ಸ್ ಫೆರ್ರಿಯ ಬಳಿಯಲ್ಲಿದ್ದ ಸೈನ್ಯವು ತಡೆಯಬೇಕೆಂದೂ ಗೊತ್ತಾಗಿದ್ದಿತು. ಈ ಎರಡನೆಯ ದಂಡಿನ ಅಧಿಪತಿಯು ಯಾವ ಉದ್ದೇಶದಿಂದಲೋ ತನಗೆ ನೇಮಿಸಿದ್ದ ಕೆಲಸವನ್ನು ಮಾಡಲಿಲ್ಲ. ಜಾನ್ಸ್ಟನ್ನನು ಯುದ್ಧಕ್ಕೆ ಒಂದು ದಿನ ಮುಂಚೆಯೇ ಬಂದು ಬೋರ್ಗಾರ್ಡನನ್ನು ಸೇರಿಕೊಂಡನು. ಅವನು ಬಂದುದು ಉತ್ತರದ ಸೇನೆಗೆ ಗೊತ್ತಾಗಲಿಲ್ಲ. ಯುದ್ಧದಲ್ಲಿ ಸೈನಿಕರಿಗೆ ತಿಳಿವಳಿಕೆಯೂ ಇರಲಿಲ್ಲ. ಆದರೆ ಇದ್ದ ಉತ್ಸಾಹವೂ ದೇಶಪ್ರೀತಿಯೂ ಬೆಂಬಲವಾದುದರಿಂದಲೇ ಅವರು ಅಷ್ಟು ಹೊತ್ತಾದರೂ ರಣರಂಗದಲ್ಲಿ ನಿಂತು ಹೋರಾಡಿದರು. ಯುದ್ಧಕಾಲದಲ್ಲಿ ಅವರನ್ನು "ಹತೋಟಿ" ಯಲ್ಲಿಟ್ಟುಕೊಳ್ಳುವುದು ಬಹಳ ಕಷ್ಟವಾಯಿತು. ಶತ್ರುಗಳು ನದಿಯ ತೀರದಲ್ಲಿ ಮರಗಿಡಗಳಿಂದ ದಟ್ಟವಾಗಿದ್ದ ದಿಣ್ಣೆಯೊಂದನ್ನು ಆಕ್ರಮಿಸಿ ನಿಂತರು. ಮುಂದೆ ಹೋಗಿ ಅವರಮೇಲೆ ನುಗ್ಗ

ವುದು ಪ್ರಯಾಸವಾಯಿತು. ಉತ್ತರದ ದಂಡು ಜಾಗ್ರತೆಯಾಗಿಯೇ ಬಳಲಿ ಹೋಯಿತು. ಮತ್ತೊಂದು ಸಾರಿ ನುಗ್ಗುವುದು ಸಾಧ್ಯವೇ ಎಂದು ಯೋಚಿಸುತ್ತಿರುವಷ್ಟರೊಳಗೆ ಶತ್ರುಸೈನ್ಯವು ಬಲಗಡೆಯಿಂದ ಬಂದು ಅವರಮೇಲೆ ಎರಗಿತು. ಇನ್ನು ಗೆಲವು ಸಾಧ್ಯವಲ್ಲವೆಂದು ಎಲ್ಲರೂ ನಂಬಿದರು. ನಿಂತರೂ ಪ್ರಯೋಜನವಿರಲಿಲ್ಲ. ಉತ್ತರದ ಸೈನಿಕರು ಕಾಲಿಗೆ ಬುದ್ಧಿಹೇಳಿದರು. ಸೈನ್ಯವು ದಿಕ್ಕುದಿಕ್ಕಿಗೆ ಓಡಿ ಅವ್ಯವಸ್ಥಿತವಾಯಿತು. ಶತ್ರುವು ಬೆನ್ನಟ್ಟಿ ಹೋಗಲಿಲ್ಲ. ಯುದ್ಧವನ್ನು ನೋಡುವುದಕ್ಕಾಗಿ ಕೆಲವರು ನಿವಾಸಿಗಳು ಅಲ್ಲಿಗೆ ಬಂದಿದ್ದರು. ಸೈನಿಕರು ಓಡಲಾರಂಭಿಸಲಾಗಿ ಅವರೂ ಓಡತೊಡಗಿದರು. ಅವ್ಯವಸ್ಥೆಯು ಇನ್ನೂ ಹೆಚ್ಚಿತು. ಎಲ್ಲರೂ ವಾಷಿಂಗ್ಟನ್ನಿಗೆ ನುಗ್ಗಿ ಮನೆಮಠಗಳನ್ನು ಹೊಕ್ಕಿಕೊಂಡರು. ಅನೇಕರು ಸೆರೆಸಿಕ್ಕಿದರು. ಯುದ್ಧದ ಪರಿಣಾಮವನ್ನು ನೋಡಿ ದಕ್ಷಿಣದ ಸೈನ್ಯಕ್ಕೂ ವಿಸ್ಮಯವಾಯಿತು. ಉತ್ತರದ ದಂಡಿನಲ್ಲಿ ಹೇಗೆ ಅಲ್ಲೋಲಕಲ್ಲೋಲವಾಗಿದ್ದಿತೋ ಅದರಲ್ಲಿಯೂ ಹಾಗೆಯೇ ಆಗಿದ್ದಿತು. ಜಾರ್ಜ್ಸ್ಟನ್ನನು ಅವರನ್ನು ಕೈಕೆಳಗೆ ತೆಗೆದುಕೊಂಡು ವ್ಯವಸ್ಥೆಯನ್ನುಂಟುಮಾಡಿದನು. ಆಮೇಲೆ ರಕ್ಷಣೆಗಾಗಿ ಕೆಲವು ಹಂಚಿಕೆಗಳನ್ನು ಮಾಡಿಕೊಂಡನು. ವಾಷಿಂಗ್ಟನ್ನಿಗೆ ಜನಗಳು ದಿಗಲುಬಿದ್ದು ನುಗ್ಗಲಾಗಿ ಅಲ್ಲಿನ ನಿವಾಸಿಗಳು ನಗರಕ್ಕೆ ಬಹಳ ಅಪಾಯವಿರುವುದೆಂದು ಹೆದರಿದರು. ಮೆಕ್ಲೆಲ್ಲನ್ನನೂ ಹೀಗೆ ಭಾವಿಸಿದನು. ಎಲ್ಲರೂ ಅವನೊಬ್ಬನಿಂದಲೇ ನಗರವು ಉಳಿಯಬೇಕಾಗಿದೆಯೆಂದು ಹೇಳಿದರು. ಅವನನ್ನು ಸರ್ಕಾರವು ಅಲ್ಲಿಗೆ ಕರೆಯಿಸಿಕೊಂಡು ಪೋಟೊಮುಕ್‌ನ ಸೈನ್ಯಕ್ಕೆ ಅಧಿಪತಿಯನ್ನಾಗಿ ನೇಮಿಸಿತು.

ಅಧಿಕಾರಿಗಳ ಅಸಮಾಧಾನವು ಬಹಳವಾಯಿತು. ಪ್ರೆಸಿಡೆಂಟನ ಯುದ್ಧಾಪೇಕ್ಷೆಗೆ ಮನಸೋತು ಕೆಲಸವನ್ನು ಕೆಡಿಸಿದೆನೆಂದೂ ತನ್ನಂತಹ ಹೇಡಿಯಿಲ್ಲವೆಂತಲೂ ಸ್ಕಾಟನು ತನ್ನನ್ನು ತಾನು ನಿಂದಿಸಿಕೊಂಡನು. ಲಿಂಕನ್ನನಿಗೆ ನಿರಾಶೆಯು ಬಹಳವಾದರೂ ಅದನ್ನು ಹೊರಗೆ ತೋರ್ಪಡಿಸಲಿಲ್ಲ. ಕೆಲಸದಲ್ಲಿ ಅನುಮಾನವನ್ನೂ ಮಾಡಲಿಲ್ಲ. ಪೋಟೊಮುಕ್‌ನ ದಂಡನ್ನು ಮತ್ತೆ ಏರ್ಪಾಡು ಮಾಡಲಾರಂಭವಾಯಿತು. ಲಿಂಕನ್ನನು ಆ ಕಾಲದಲ್ಲಿ ಸೈನಿಕರ ಬಳಿಗೆ ಹೋಗಿ ಎಲ್ಲರೊಡನೆಯೂ ಒಂದೆರಡು ಮಾತುಗಳನ್ನಾಡಿ ಅವರಿಗೆ ಉತ್ತೇಜನವನ್ನು ಕೊಡುತ್ತಿದ್ದನು. ನಿಮ್ಮಿಂದಲೇ ಸಂಯೋಗವೂ ಶಾಸನಕ್ರಮವೂ ಉಳಿಯಬೇಕಾಗಿದೆಯೆಂದು ಹೊಗಳಿದನು. ವಿಲಿಯಂ ಷೆರ್ಮನ್ನನ ಕೈಕೆಳಗಿದ್ದ ಭಾಗವನ್ನು ಭೇಟಿಮಾಡುತ್ತಿದ್ದ ಕಾಲದಲ್ಲಿ ಕರ್ನಲನೊಬ್ಬನು ತನ್ನ ಕುತ್ತವನ್ನು ಹೇಳಿಕೊಳ್ಳಲು ಅವನಬಳಿಗೆ ಬಂದನು. ತನ್ನ ಹುದ್ದೆಯ ಅವಧಿಯು ಪೂರೈಸಿಹೋಗಿದ್ದುದರಿಂದ ತನ್ನೂರಿಗೆ ಹೋಗಬೇಕೆಂದು ಕರ್ನಲನು ಅಪೇಕ್ಷಿಸಿದನು. ಆದರೆ ಷೆರ್ಮನ್ನನು ಅದಕ್ಕೆ ಅವಕಾಶವನ್ನು ಕೊಟ್ಟಿರಲಿಲ್ಲ. ಕೊಡದೆ ನೀನು ಮಾಡುವುದು ನ್ಯಾಯವಲ್ಲವೆಂದೂ, ಕೇಳದೆ ಹೊರಟುಹೋಗುವುದಾದರೆ ಗುಂಡಿನಿಂದ ಹೊಡೆದು ಕೊಲ್ಲುವುದಾಗಿಯೂ ಹೇಳಿದ್ದನು. ಲಿಂಕನ್ನನು ಸ್ಥಿರದೃಷ್ಟಿಯಿಂದ ಷೆರ್ಮನ್ನನ ಕಡೆ ಸ್ವಲ್ಪಕಾಲ ನೋಡಿ, " ಷೆರ್ಮನ್ನನು ತಾನು ಆಡಿದ ಮಾತನ್ನು ತಪ್ಪುವಹಾಗೆ ಕಾಣುವುದಿಲ್ಲ. ಆದ

ಕಾರಣ ಆತನ ಕೈಗೆ ಸಿಕ್ಕದಂತೆ ದೂರವಾಗಿಯೇ ಇರು'' ಎಂದು ಕರ್ನಲನಿಗೆ ಹೇಳಿದನು. ಆ ಸಮಯದಲ್ಲಿ ಸೈನಿಕರನೇಕರು ಹತ್ತಿರದಲ್ಲಿದ್ದರು. ಎಲ್ಲರೂ ಪ್ರೆಸಿಡೆಂಟನ ಮಾತನ್ನು ಕೇಳಿದರು. ಕೇಳಿ ಒಂದುವಿಧವಾಗಿ ಅರ್ಥಮಾಡಿಕೊಂಡರು. ಅಂದಿನಿಂದ ಯಾರೂ ಹೊರಟುಹೋಗಬೇಕೆಂಬ ಮಾತನ್ನೆತ್ತಲಿಲ್ಲ. ಲಿಂಕನ್ನನ ಮಾತಿನಲ್ಲಿದ್ದ ವಿನೋದರಸವು ಯಾರಿಗೂ ಗೊತ್ತಾಗಲಿಲ್ಲ. ಷೆರ್ಮನ್ನನು ಪ್ರೆಸಿಡೆಂಟನ ಉಪಕಾರದಿಂದ ತನ್ನ ಸೈನ್ಯವು ಚದರದಂತೆ ಉಳಿಯಿತೆಂದು ಹೇಳುತ್ತ ಆತನಿಗೆ ಬಹಳ ಕೃತಜ್ಞನಾದನು.

ಯುದ್ಧದಲ್ಲಿ ಉತ್ತರಕ್ಕೆ ಮುಂದೆಯೂ ಸೋಲುಗಳಾದವು. ಆದರೆ ಮೊದಲನೆಯ ಹೊಡೆದಾಟದಲ್ಲಿಯೇ ಹೀಗಾದುದಕ್ಕಾಗಿ ಜನಗಳಿಗೆ ವಿಶೇಷವಾಗಿ ಕೊರಗು ಉಂಟಾಯಿತು. ಎಲ್ಲರ ಮುಖವೂ ಬಾಡಿತು. ಅದು ಅಲ್ಪವಾದುದು. ಮುಂದೆ ಅದಕ್ಕಿಂತ ಹೆಚ್ಚಿನ ಅಪಜಯವಾದರೂ ಕೊರಗು ಈಗಿನದಕ್ಕಿಂತ ಹೆಚ್ಚಾಗಲಿಲ್ಲ. ಕೆಲವು ಕಾಲದವರೆಗೆ ಎರಡುಕಡೆಯಲ್ಲಿಯೂ ನಿಶ್ಶಬ್ದವಿದ್ದಿತು. ಯಾರೂ ಕೈಯೆತ್ತಲಿಲ್ಲ. ಆ ಸಮಯದಲ್ಲಿ ಎರಡುಕಡೆಯಲ್ಲಿಯೂ ಸನ್ನಾಹಗಳು ನಡೆಯುತ್ತಿದ್ದುವು. ಸ್ವಲ್ಪಕಾಲದೊಳಗಾಗಿ ಯುದ್ಧಾಪೇಕ್ಷೆಯು ಉತ್ತರದಲ್ಲಿ ಮತ್ತೆ ಬಲಹೊಂದಿತು. ಆದರೆ ಮುಂದೆ ಐದುತಿಂಗಳು ಕಳೆದು ಹೊಸವರ್ಷವು ಬರುವವರೆಗೆ ಮುಖ್ಯಸಂಗತಿಗಳೇನೂ ನಡೆಯಲಿಲ್ಲ.

---

## ೩ನೆಯ ಅಧ್ಯಾಯ

---

### ನಿರ್ವಾಹವಿಚಾರ.

ಅಧಿಕಾರಕ್ಕೆ ಬಂದ ಸ್ವಲ್ಪಕಾಲದೊಳಗಾಗಿ ಪ್ರೆಸಿಡೆಂಟನೆಂಥವನೆಂಬುದು ಮಂತ್ರಿಗಳ ತಿಳಿವಳಿಕೆಗೆ ಬಂದಿತು. ಆಡಳಿತವು ಅವನ ಆಡಳಿತವಾಗಿದ್ದಿತು. ಅವನ ಹೆಸರಿನಲ್ಲಿ ತಾವು ರಾಜ್ಯಭಾರಮಾಡಬಹುದೆಂದು ಅವರು ಮೊದಲು ಭಾವಿಸಿದ್ದಿರಬಹುದು. ಸಿವರ್ಡನು ಖಂಡಿತವಾಗಿಯೂ ಹಾಗೆ ಭಾವಿಸಿದ್ದನು. ಚೇಸನೂ ಕೂಡ ತಾನು ಮುಂದಾಳಾಗಿಲ್ಲವೆಂಬುದನ್ನು ನೋಡಿಕೊಂಡು ವಿಸ್ಮಿತನೂ ನಿರಾಶನೂ ಆದನು. ಮಂತ್ರಿಯೊಬ್ಬನು ಮತ್ತೊಬ್ಬನೊಡನೆ, ''ಮಂತ್ರಿಸಭೆಯಲ್ಲಿ ಒಂದೇ ಒಂದು ನಿರ್ಣಯವಿರುವುದು—ಪ್ರೆಸಿಡೆಂಟನದು'' ಎಂದನು. ಆದರೆ ಪ್ರೆಸಿಡೆಂಟನು ಎಲ್ಲಾ ವಿಚಾರಗಳಿಗೂ ಪ್ರವೇಶಮಾಡುತ್ತಿದ್ದನೆಂದು ಅರ್ಥವಲ್ಲ. ಅವನಿಗೂ ಪ್ರತ್ಯೇಕವಾದ ಕೆಲಸವಿರುತ್ತಿದ್ದಿತು. ಉತ್ತರದಲ್ಲಿ ಐಕಮತ್ಯವಿರುವಂತೆ ನೋಡಿಕೊಳ್ಳುವುದೂ ರಾಜ್ಯದೊಳಗೆ ನಡೆಯುವ ವಿಷಯಗಳಿಗೆ ಗಮನವನ್ನು ಕೊಡುವುದೂ

ಅವನ ಕೆಲಸವಾಗಿದ್ದಿತು. ಅಲ್ಲದೆ ಯುದ್ಧದ ಇಲಾಖೆಯಲ್ಲಿ ಅವನು ನಿರಂತರವಾಗಿ ದೃಷ್ಟಿಯನ್ನಿಟ್ಟು ಕಾರ್ಯವನ್ನು ನಡೆಯಿಸುತ್ತಿದ್ದನು. ಇತರ ಇಲಾಖೆಗಳಲ್ಲಿ ಅಷ್ಟು ದೃಷ್ಟಿಯು ಅವಶ್ಯಕವಾಗಿರಲಿಲ್ಲ. ಇಡುತ್ತಿದ್ದ ಗಮನವೂ ಬೇರೆಯ ವಿಧವಾಗಿರುತ್ತಿದ್ದಿತು. ಆದರೆ ಮಂತ್ರಿಸಭೆಯೂ ಕೂಡ ಅವನ ಕಾರ್ಯಗಳ ಮಾರ್ಗವನ್ನು ಕೆಲವುವೇಳೆ ನಿರ್ಣಯಿಸುತ್ತಿದ್ದಿತು. ಲಿಂಕನ್ನನು ಅದರ ಸಲಹೆಗಳನ್ನು ಪ್ರಧಾನವಾಗಿಟ್ಟುಕೊಳ್ಳುತ್ತಿದ್ದನಲ್ಲದೆ ಕಾರ್ಯತಃ ನಡೆಯಿಸುತ್ತಲೂ ಇದ್ದನು. ಅವರ ಸಲಹೆಯನ್ನು ಕೇಳುವುದು ಯಾವಾಗ ಅವಶ್ಯಕವಾದುದು, ಯಾವಾಗ ಬೇಕಿಲ್ಲ, ಎಂಬುದು ಅವನಿಗೆ ಗೊತ್ತಿದ್ದಹಾಗೆ ಇನ್ನು ಯಾರಿಗೂ ಗೊತ್ತಿರಲಿಲ್ಲ. ಯುಕ್ತವೆಂದು ತೋರಿದಾಗಲೂ, ಅವರ ಮೂಲಕ ತನ್ನ ವ್ಯವಹಾರಗಳಿಗೆ ಪ್ರಜೆಗಳ ಒತ್ತಾಸೆ ಎಷ್ಟಿದೆಯೆಂಬುದನ್ನು ನಿರ್ಣಯಿಸುವಾಗಲೂ ಅವನು ಮಂತ್ರಿಗಳ ಸಲಹೆಯನ್ನು ಕೋರುತ್ತಿದ್ದನು. ಪ್ರಸಂಗವು ಬಹಳ ಮುಖ್ಯವೆಂದು ತೋರಿದಾಗ ಅವರ ಅಥವಾ ಇತರರ ಸಲಹೆಯನ್ನು ಕಾಯುತ್ತಿರಲಿಲ್ಲ—ಸ್ವತಂತ್ರಿಸಿ ಕೆಲಸವನ್ನು ಮಾಡುತ್ತಿದ್ದನು. ಇತರ ಅಂಶಗಳನ್ನು ಅವರೊಡನೆ ಚರ್ಚಿಸಿ ಅವುಗಳ ಮತ್ತು ಮುಂದಿನ ಪ್ರವರ್ತನೆಯ ಗುಣಾವಗುಣಗಳನ್ನು ಚೆನ್ನಾಗಿ ಕಡೆದು ನೋಡಿ ನಿರ್ಣಯವನ್ನು ಪಡೆದು ವ್ಯವಹರಿಸುತ್ತಿದ್ದನು. ಆದರೆ ಅವನು ಸ್ವತಂತ್ರಿಸಿ ಮಾಡಿದುದು ಯಾವುದು, ಮಂತ್ರಿಗಳ ಸಲಹೆಯ ಪ್ರಕಾರ ಮಾಡಿದುದು ಯಾವುದು, ಎಂಬುದನ್ನು ನಿಶ್ಚಯಿಸಲಾಗುವುದಿಲ್ಲ. ಪ್ರತ್ಯಕ್ಷವಾಗಲ್ಲದಿದ್ದರೆ ಪರೋಕ್ಷವಾಗಿಯಾದರೂ ಅವನ ದೃಷ್ಟಿಯು ಎಲ್ಲದರಲ್ಲಿಯೂ ಇರುತ್ತಿದ್ದಿತು. ಕೆಲವು ವೇಳೆ ಅವನು ಮಂತ್ರಿಗಳ ಮೂಲಕವಾಗಿಯೂ ಆಳುತ್ತಿದ್ದನು. ಮಂತ್ರಿಗಳ ಸಹಾಯವು ಬಹಳವಿರುತ್ತಿದ್ದಿತು. ಆದರೆ ಅವನಿಲ್ಲದಿದ್ದರೆ ಅವರು ಐಕಮತ್ಯದಿಂದ ಕ್ಷಣವೂ ನಿರ್ವಹಿಸುತ್ತಿರಲಿಲ್ಲ.

ಉತ್ತರದ ಹಡಗುಗಳು ಅನೇಕ ಸಾಹಸದ ಕೆಲಸಗಳನ್ನು ಮಾಡಿದುವು. ದಕ್ಷಿಣವೂ ಸುಮ್ಮನಿರಲಿಲ್ಲ. ಅಲಬಾಮವೆಂಬ ಹಡಗು ಉತ್ತರದ ವ್ಯಾಪಾರವನ್ನು ಸ್ವಲ್ಪಮಟ್ಟಿಗೆ ಹಾಳುಮಾಡಿತು. ಉತ್ತರವು ಹಡಗುಗಳನ್ನೂ ಸೈನ್ಯಗಳನ್ನೂ ಒಟ್ಟಿಗೆ ಕಳಹಿಸಿ ದಕ್ಷಿಣದ ರೇವುಗಳನ್ನೂ ದುರ್ಗಗಳನ್ನೂ ಮುತ್ತಿ ಹೊರಗಿನ ಸಂಬಂಧವು ತಪ್ಪಿಹೋಗುವಂತೆ ಮಾಡಲು ಪ್ರಯತ್ನಿಸಿತು. ಈ ಆಕ್ರಮಣದಿಂದ ದಕ್ಷಿಣದೊಳಕ್ಕೆ ಬೇಕಾದಾಗ ನುಗ್ಗಲು ದಾರಿಯಾಯಿತು. ಇಂತಹ ಪ್ರಯತ್ನಗಳಲ್ಲಿ ಪ್ರಾಯಶಃ ಎಲ್ಲವೂ ಸಫಲವಾದುವು. ಈ ರೀತಿಯಾಗಿ 1863 ರೊಳಗೆ ಫ್ಲಾರಿಡವು ಉತ್ತರದ ಕೈಸೇರಿತು. 1865 ರೊಳಗೆ ದಕ್ಷಿಣದ ವಶದಲ್ಲಿ ಚಾರ್ಲ್ಸ್‌ಟ್ಸ್ ಮತ್ತು ವಿಲ್ಮಿಂಗ್ಟ್ಸ್ ಎಂಬ ಎರಡು ರೇವುಗಳು ಮಾತ್ರ ಉಳಿದುವು. ಉತ್ತರದವರ ಉತ್ಸಾಹವು ಎಂದಿನಂತೆಯೇ ಪ್ರಬಲವಾಗಿದ್ದಿತು. ಸರ್ಕಾರವು ಆ ಉತ್ಸಾಹದ ದೆಸೆಯಿಂದ, ಉಗುರಿನಿಂದಾಗುವುದಕ್ಕೆ ಚೂರಿಯನ್ನು ತೆಗೆದುಕೊಳ್ಳುವುದು ಯುಕ್ತವಲ್ಲವೆಂಬುದನ್ನು ಯೋಚಿಸಲಿಲ್ಲ. ಹಡಗುಗಳು ಅಥವಾ ಸೈನ್ಯಗಳು ಹೋಗಿ ಒಂದು ಪ್ರದೇಶವನ್ನು ವಶಮಾಡಿಕೊಳ್ಳುವುದು ಸಾಧ್ಯವಾದರೂ ಅದು ಎರಡನ್ನೂ ಕಳುಹಿಸುತ್ತಿದ್ದಿತು. ಈ ಕಾರಣದಿಂದ ವ್ಯರ್ಥವಾದ ಶ್ರಮವೂ ಮದ್ದು

ಗುಂಡುಗಳ ವೆಚ್ಚವೂ ಉಂಟಾಗುತ್ತಿದ್ದುವು. ಮುಂದೆ ಜನರಲ್ ಗ್ರಾಂಟನು ಯುದ್ಧಕಾರ್ಯಗಳಲ್ಲಿ ಮುಖ್ಯಸ್ಥನಾಗಿ ನಿಂತು ಸರಿಪಡಿಸುವವರೆಗೆ ಈ ವಿಧವಾದ ವ್ಯರ್ಥಶ್ರಮವೂ ವ್ಯರ್ಥವ್ಯಯವೂ ತಪ್ಪಲಿಲ್ಲ. ಚಾರ್ಲಸ್ಟನ್ ರೇವನ್ನು ಆಕ್ರಮಿಸಲು ಉತ್ತರವು ಭೂಮಿಯ ಮೂಲಕ ದಂಡನ್ನೂ ಸಮುದ್ರದ ಮೂಲಕ ಹಡಗನ್ನೂ ಕಳುಹಿಸಿತು. ಪ್ರಯೋಜನವೇನೂ ಆಗಲಿಲ್ಲ. ಆದರೂ ಒಟ್ಟಿನಲ್ಲಿ ಸಮುದ್ರದಮೇಲೆ ಉತ್ತರದ ಪ್ರಯತ್ನವು ಒಂದೇ ಸಮನಾಗಿ ಸಫಲವಾಗಿದ್ದಿತು. ಹಡಗುಗಳನ್ನು ದಕ್ಷಿಣತೀರದ ಉದ್ದಕ್ಕೂ ಹರಡಿ ಉತ್ತರವು ಮೊದಲು ಹೊರಗಿನ ಸಹಾಯವನ್ನು ತಪ್ಪಿಸಿತು. ಆಮೇಲೆ ಒತ್ತಿಕೊಳ್ಳುತ್ತ ಬಂದು ಹಡಗುಗಳು 1862 ನೇ ವರ್ಷದ ಪ್ರಾರಂಭದಲ್ಲಿ ದಕ್ಷಿಣದ ಕೊಲ್ಲಿಗಳನ್ನೂ ಖಾರಿಗಳನ್ನೂ ನದೀಮುಖಗಳನ್ನೂ ಆಕ್ರಮಿಸಿಕೊಂಡುಬಿಟ್ಟವು. ಮೊದಲಿಂದಲೂ ಹೀಗೆಯೇ ಮಾಡಬೇಕೆಂದು ಕಾರ್ಯಕ್ರಮವನ್ನು ತಿಳಿದು ಮಾಡಿದ್ದುದರಿಂದಲೇ ಸಮುದ್ರದಮೇಲೆ ಉತ್ತರಕ್ಕೆ ಜಯವುಂಟಾಯಿತು. ಹಡಗುಗಳು ಇಲ್ಲವೆನ್ನುವಷ್ಟಿದ್ದರೂ ಕೂಡ ಈರೀತಿಯಲ್ಲಿ ತೀರವನ್ನಾಕ್ರಮಿಸಿದುದು ಸರ್ಕಾರದ ನಿರ್ವಾಹಶಕ್ತಿಯನ್ನೂ ಯುಕ್ತಿಯುಕ್ತತೆಯನ್ನೂ ತೋರ್ಪಡಿಸುವುದು. ಪೂರ್ವದಲ್ಲಿ ಹಡಗುಗಳು ಒಂದೆರಡುಮಾತ್ರ ಇದ್ದವು. ಯುದ್ಧವು ಪ್ರಾರಂಭಿಸಿದ ಮೇಲೆ ಅವುಗಳನ್ನು ಒಂದೊಂದಾಗಿ ಕಟ್ಟಿ ಸಿದ್ಧಪಡಿಸಿ ಉತ್ತರವು ಕಳುಹಿಸುತ್ತಿದ್ದಿತು. ಸಾಲದ್ದಕ್ಕೆ ಕೆಲವು ವ್ಯಾಪಾರದ ಹಡಗುಗಳನ್ನು ಬೆಲೆಗೆ ತೆಗೆದುಕೊಂಡು ಉಪಯೋಗಕ್ಕೆ ಇಟ್ಟುಕೊಂಡಿತು. ದಕ್ಷಿಣವೂ ಕೂಡ ಈ ಮಾರ್ಗದಲ್ಲಿ ಪ್ರಯತ್ನಮಾಡಿದ್ದಿತು. ಆದರೆ ಅದಕ್ಕೆ ಸಾಧನಗಳು ಸಾಲದು. ಇಲ್ಲದಿದ್ದರೆ ಪ್ರತಿಯಾಗಿ ಅದೂ ಹಡಗುಗಳನ್ನು ಕಟ್ಟಿ ಉತ್ತರವನ್ನು ಎದುರಿಸಬಹುದಾಗಿದ್ದಿತು. ಆದರೂ ಒಂದೊಂದು ವೇಳೆ ಪಹರೆಯಿದ್ದ ಉತ್ತರದ ಹಡಗುಗಳಿಗೆ ಅಪಾಯವುಂಟಾಗುತ್ತಿದ್ದಿತು. ದಕ್ಷಿಣದವರು ಕುಶಲರು. ಹೊಸಹೊಸದಾಗಿ ಶೋಧನೆಗಳನ್ನು ಮಾಡುತ್ತ ಉಪಾಯಗಳನ್ನು ಹೂಡುತ್ತಿದ್ದರು. ಸಬ್‌ಮೆರೀನ್ ಎಂಬ ನೀರಿನೊಳಗೇ ಹರಿಯುವ ನಾವೆಯನ್ನು ಅವರು ಮೊದಲು ತಯಾರುಮಾಡಿದರು. ಉತ್ತರದಲ್ಲಿ ಈ ಜಾಣತನವಿಲ್ಲದಿದ್ದರೂ ಆ ಇಲಾಖೆಯ ಅಧಿಕಾರಿಗಳು ಬಹಳ ಶಕ್ತರಾದ್ದರಿಂದ ಕೈಬಿಟ್ಟುಕೊಡಲಿಲ್ಲ. ಅಧ್ಯಕ್ಷನಾದ ವೆಲ್ಸ್ (Welles) ಎಂಬ ಮಂತ್ರಿಯ ತಿಳಿವಳಿಕೆಯೂ ಗಸ್ಟೇವಸ್‌ಫಾಕ್ಸ್ ಎಂಬ ಹುದ್ದೇದಾರನ ಉತ್ತೇಜನವೂ ವಿಶೇಷವಾಗಿ ಸಹಾಯಮಾಡಿದುವು. ಈ ಮನುಷ್ಯನನ್ನು ಲಿಂಕನ್ನನು ಹುಡುಕಿ ಪ್ರಾರಂಭದಲ್ಲಿಯೇ ನಾವೆಯ ಇಲಾಖೆಯಲ್ಲಿ ನೇಮಿಸಿದನು. ಹೀಗೆ "ಬ್ಲಾಕೇಡ್" ಅಥವಾ ಅಡ್ಡಗಟ್ಟುವುದು ಪ್ರಾರಂಭವಾಗಬೇಕೆಂದು 1861 ರಲ್ಲಿ ಪ್ರಕಟಣೆಯು ಹುಟ್ಟಿತು. ಆದರೆ ಆ ಸಮಯದಲ್ಲಿ ಉತ್ತರದಕಡೆ ಮೂರು ಯುದ್ಧದ ಜಹಜುಗಳಿದ್ದುವು. ಅವುಗಳಿಂದಲೇ ಅಡ್ಡಗಟ್ಟಿ ದಕ್ಷಿಣವನ್ನು ನಿಸ್ಸಹಾಯವನ್ನಾಗಿ ಮಾಡಬೇಕಾಗಿದ್ದಿತು. ಆದರೆ ಮೂರು ಹಡಗುಗಳಿಂದ ಯಾವುದೂ ಸಾಗುತ್ತಿರಲಿಲ್ಲ. ಆಗಿನ ಸ್ಥಿತಿಯಲ್ಲಿ, ದಕ್ಷಿಣದ ಬಲವನ್ನು ಕುಗ್ಗಿಸುವುದು ಮಾತ್ರವಲ್ಲದೆ ದಕ್ಷಿಣದೊಡನೆ ತನ್ನ ವ್ಯಾಪಾರವು ಉತ್ತರದ ದೆಸೆಯಿಂದ ತಪ್ಪಿ

ತೆಂದು ಇತರ ರಾಜ್ಯಗಳು ಆಕ್ಷೇಪಿಸದಹಾಗೆ ನೋಡಿಕೊಳ್ಳಬೇಕಾಗಿದ್ದಿತು. ಮಾತು ಗಳು ಸಂಬೀಳದಿದ್ದ ಪಕ್ಷದಲ್ಲಿ ಅವು ಯುದ್ಧವನ್ನು ಮಾಡಿದರೂ ಮಾಡಬಹುದು. ಹಾಗಾದಲ್ಲಿ ಎರಡು ವಿಧವಾದ ನಷ್ಟವುಂಟಾಗುವುದು. ಈ ಅಂಶವನ್ನು ಆಲೋಚಿಸಿ ಉತ್ತರವು ವ್ಯಾಪಾರದ ಹಡಗುಗಳನ್ನು ಕೊಂಡುಕೊಂಡಿತು. ಹೊಸದಾಗಿ ಹಡಗುಗಳನ್ನು ಕಟ್ಟಿತು. ನಾವೆಯಿಂದಲೇ ಮುಖ್ಯವಾಗಿ ಒತ್ತಾಸೆಯಾಗಬೇಕೆಂದು ತಿಳಿದು ಲಿಂಕನ್ನನು ಅದರಲ್ಲಿ ಹೆಚ್ಚಾಗಿ ಆಸಕ್ತಿಯನ್ನು ತೋರಿಸಿದನು. ಆದರೆ ಅಧಿಕಾರಿಗಳು ದಕ್ಷರಾದುದರಿಂದ ಹೆಚ್ಚಾಗಿ ಪ್ರವೇಶಮಾಡುತ್ತಿರಲಿಲ್ಲ. ಹೊಸದಾಗಿ ಆ ಇಲಾಖೆಯು ಯಾವ ಪ್ರಯತ್ನವನ್ನು ಮಾಡುವುದಾದರೂ ಅವನು ತಪ್ಪದೆ ಸಹಾಯವನ್ನೊದಗಿಸಿಕೊಡುತ್ತಿದ್ದನು. ವೆಲ್ಸನೇ ಕೊನೆಯವರೆಗೂ ಅಧ್ಯಕ್ಷನಾಗಿ ಉಳಿದನು. ಕೊನೆಯವರೆಗೂ ಅವನಿಗೂ ಪ್ರೆಸಿಡೆಂಟನಿಗೂ ಐಕಮತ್ಯವಿದ್ದಿತು. ಫಾಕ್ಸನು ಬಹಳ ಅನುಭವವುಳ್ಳವನೆಂದು ಲಿಂಕನ್ನನು ಅವನಲ್ಲಿ ವಿಶೇಷ ಗೌರವ ವನ್ನಿಟ್ಟಿದ್ದನು. ಈವೇಳೆಗೆ ಪ್ರೆಸಿಡೆಂಟನ ಬುದ್ಧಿಯು ಪರಿಪಕ್ವವಾಯಿತೆನ್ನ ಬಹುದು. ಮನುಷ್ಯನ ಗುಣವನ್ನು ಹೊರಗೆಡವಲು ಕಷ್ಟಸಮಯದಂಥ ಮದ್ದಿಲ್ಲ. ಚಾರ್ಲಸ್ಟನ್ನಿನ ಮೇಲೆ ದಂಡೂ ಹಡಗುಗಳೂ ಹೊರಟಾಗ ಕಾರ್ಯದಲ್ಲಿ ಜಯವಾಗ ದೆಂದು ಅವನು ಹೇಳಿ ಬೇಡವೆಂದನು. ಇತರರು ಅವನ ಮಾತನ್ನು ಕೇಳಲಿಲ್ಲ. ಪ್ರಯತ್ನವು ವಿಫಲವೇ ಆಯಿತು. ಯಾವದೊಂದು ಕೆಲಸದಲ್ಲಿಯೂ ಮುಂದಿನ ಪರಿಣಾಮವನ್ನು ಗೆರೆಯೆಳೆದ ಹಾಗೆ ನಿರ್ಧರಿಸಬಹುದು. ಯೋಚಿಸದೆ ಆತುರ ಮಾಡಿದರೆ ಕೆಲಸವು ಹಾಳಾಗುವುದು. ಲಿಂಕನ್ನನು ಈ ಆಲೋಚನಾಶಕ್ತಿಯ ಬಲದಿಂದ ಎಲ್ಲಾ ಕಾರ್ಯಗಳನ್ನೂ ತಾನೇ ನಡೆಯಿಸಬಲ್ಲನಾದರೂ ಇತರರಿಗೆ ನೇಮಿ ಸಿದ ಕೆಲಸಗಳಲ್ಲಿ ತಾನು ಕೈಹಾಕಿಕೊಂಡು ಹೋಗುತ್ತಿರಲಿಲ್ಲ. ಬಹಳ ಹಿಡಿತದಲ್ಲಿರು ತ್ತಿದ್ದನು.

ಈ ಸಮಯದಲ್ಲಿ ದಕ್ಷಿಣದ ಸರ್ಕಾರವು ಐರೋಪ್ಯರಾಜ್ಯಗಳನ್ನು ತನ್ನ ಕಡೆಗೆ ಳೆದುಕೊಳ್ಳುವುದಕ್ಕೋಸ್ಕರ ಇಬ್ಬರು ರಾಯಭಾರಿಗಳನ್ನು ಫ್ರಾನ್ಸಿಗೂ ಇಂಗ್ಲೆಂಡಿಗೂ ಕಳುಹಿಸಿತು. ಇವರಿಬ್ಬರೂ ಪೂರ್ವದಲ್ಲಿ ಸಂಯುಕ್ತಸರ್ಕಾರದಲ್ಲಿ ಮಂತ್ರಿಸಭೆ ಯವರಾಗಿದ್ದರು. ಆದರೆ ಎರಡು ಭಾಗಗಳಿಗೂ ಮನಸ್ತಾಪವುಂಟಾಗಲಾಗಿ ಇಬ್ಬರೂ ಕೆಲಸವನ್ನು ಬಿಟ್ಟು ದಕ್ಷಿಣಕ್ಕೆ ಹೋದರು. ಪ್ರಕೃತದಲ್ಲಿ ಅವರು ಕ್ಯೂಬಕ್ಕೆ ಹೋಗಿ ಅಲ್ಲಿಂದ ಟ್ರೆಂಟ್ ಎಂಬ ಇಂಗ್ಲಿಷ್ ಹಡಗಿನಲ್ಲಿ ಹೊರಟರು. ಇದು ನಡೆದುದು 1861 ನೆಯ ವರ್ಷದ ನೊವೆಂಬರ್‌ನಲ್ಲಿ. ಮಾರನೆಯ ದಿನ ಸಂಯೋಗಸರ್ಕಾರದ ಯುದ್ಧದ ಹಡಗೊಂದು ಅದನ್ನು ತಲಪಿ ಅಲ್ಲಿದ್ದ ರಾಯ ಭಾರಿಗಳನ್ನೂ ಅವರ ಕಡೆಯವರನ್ನೂ ತನ್ನ ಹಡಗಿಗೆ ಇಳಿಸಿಕೊಂಡು ಬಾಸ್ಟನ್ನಿಗೆ ಕರೆದುಕೊಂಡು ಹೋಯಿತು.

ಉತ್ತರದ ಜನಗಳ ಉತ್ಸಾಹವೂ ಸಂತೋಷವೂ ಉಕ್ಕಿದುವು. ಆದರೆ ಈ ವಾರ್ತೆಯನ್ನು ಕೇಳಿ ಇಂಗ್ಲೆಂಡಿಗೂ ಫ್ರಾನ್ಸಿಗೂ ಕೋಪವುಂಟಾಯಿತು. ತಮ್ಮ ಹಡಗಿನಲ್ಲಿ ರಾಯಭಾರಿಗಳನ್ನು ಹಿಡಿದುದಕ್ಕಾಗಿ ತಮಗೆ ಅವಮಾನವಾಯಿತೆಂದು

ಅವು ಭಾವಿಸಿದುವು. ಜನಗಳಿಗೆ ಅದು ಲಕ್ಷ್ಯಕ್ಕೆ ಬರಲೇ ಇಲ್ಲ. ದಂಗೆಕೋರರ ಕಡೆಯುವರಿಬ್ಬರನ್ನು ಕೈಸೆರೆ ಹಿಡಿದು ಅವರ ಪ್ರಯತ್ನವನ್ನು ಮುರಿದುದು ಮುಖ್ಯವಾಯಿತು. ತಮ್ಮ ಬಾವುಟಕ್ಕೆ ಗೌರವವನ್ನೂ ಟ್ರೆಂಟ್ ಹಡಗಿನ ಕೆಪ್ಟನನ ಮಾತನ್ನೂ ಉಳಿಸಬೇಕಾದಲ್ಲಿ ರಾಯಭಾರಿಗಳನ್ನು ಬಿಟ್ಟುಕೊಡಬೇಕೆಂದು ಇಂಗ್ಲೆಂಡು ಕೇಳಿತು. "ಅವರನ್ನು ಬಿಟ್ಟುಕೊಡಕೂಡದು" ಎಂಬ ಮಾತೇ ಎಲ್ಲೆಲ್ಲಿಯೂ ಧ್ವನಿಮಾಡಿತು. ಈ ಸ್ಥಿತಿಯನ್ನು ನೋಡಿ ದಕ್ಷಿಣಕ್ಕೆ ಬಹಳ ಸಂತೋಷವುಂಟಾಯಿತು. ಇನ್ನು ಇಂಗ್ಲೆಂಡ್ ರಾಜ್ಯವು ಉತ್ತರದ ಮೇಲೆ ಯುದ್ಧಕ್ಕೆ ಹೊರಡದಿರುವುದಿಲ್ಲ; ಯುದ್ಧವಾದಲ್ಲಿ ತಾವು ಸಂಪೂರ್ಣನಾಗಿ ಪ್ರತ್ಯೇಕವಾಗಿ ಸ್ವತಂತ್ರರಾಗಲು ಅತ್ಯುತ್ತಮವಾದ ಅವಕಾಶವು ದೊರೆಯುವುದೆಂದು ಅದು ಲೆಕ್ಕಹಾಕಿತು. ಇಂಗ್ಲೆಂಡಿನಲ್ಲಿ ಬಹು ಸ್ವಲ್ಪಮಂದಿ ಮಾತ್ರ ಉತ್ತರದ ಸರ್ಕಾರದಲ್ಲಿ ಪಕ್ಷಪಾತವುಳ್ಳವರಾಗಿದ್ದರು. ಆದ್ದರಿಂದ ಹೊರಗಿನ ದೇಶದೊಡನೆ ಯುದ್ಧವೂ ಉತ್ತರದ ಸೋಲೂ ದಕ್ಷಿಣದ ಸ್ವಾತಂತ್ರ್ಯವೂ ನಿರ್ಧರವೇ ಎನ್ನುವಂತಾಯಿತು.

ಇದೊಂದು ವಿಚಾರದಿಂದಲೂ ಉತ್ತರದವರ ಮನಸ್ಸು ತಿರುಗಲಿಲ್ಲ. ಅವರು ರಾಯಭಾರಿಗಳನ್ನು ಬಿಟ್ಟುಕೊಡಲಿಲ್ಲ. ಕಾಂಗ್ರೆಸ್ ಸಭೆಯು ಅವರನ್ನು ಸೆರೆಹಿಡಿದ ಕೆಪ್ಟನನಿಗೆ ಧನ್ಯವಾದಗಳನ್ನು ಹೇಳಿಕಳುಹಿಸಿತು. ಸಿವರ್ಡನ ಉತ್ಸಾಹಕ್ಕಂತೂ ಪಾರವೇ ಇರಲಿಲ್ಲ. ಸೆಕ್ರಿಟರಿ ವೆಲ್ಸನೂ ಕೆಪ್ಟನನು ಮಾಡಿದುದನ್ನು ಹೊಗಳಿದನು.

ಈ ಔತ್ಸುಕ್ಯದ ನಡುವೆ ಲಿಂಕನ್ನನು ಏನನ್ನೂ ಹೇಳದೆ ಯೋಚಿಸುತ್ತ ಸುಮ್ಮನಿದ್ದನು. ಅಥವಾ ಕೂಡಲೇ ಯೋಚಿಸಿ, ಗದ್ದಲವೆಲ್ಲಾ ಕಳೆಯಲೆಂದು ಕಾಯುತ್ತಿದ್ದಿರಬಹುದು. ಅವನಿಗೆ ಮೊದಲಿಂದಲೂ, ರಾಯಭಾರಿಗಳನ್ನು ಹಿಡಿದುದು ಯುಕ್ತವಲ್ಲವೆಂದು ಸಂಶಯವು ತೋರಿತು. ವಿಷಯವನ್ನು ಚಿಂತಿಸುತ್ತ ಹೊರಟಹಾಗೆ ಅವರನ್ನು ಬಿಟ್ಟುಕೊಡಬೇಕೆಂಬುದು ದೃಢನಾಯಿತು. ಜನಗಳ ಅಪೇಕ್ಷೆಯೇ ಪ್ರಧಾನವೆಂದೆಣಿಸಿ ಅದನ್ನು ಪೂರ್ತಿಮಾಡಲು ಪ್ರಯತ್ನಿಸುತ್ತಿದ್ದರೂ ಲಿಂಕನ್ನನು ಈ ಸಮಯದಲ್ಲಿ ಆ ಅಪೇಕ್ಷೆಗೆ ವ್ಯತಿರಿಕ್ತವಾದ ಮಾರ್ಗವನ್ನೇ ಹಿಡಿದನು. ಆ ಅಭಿಪ್ರಾಯವನ್ನು ಕೇಳಿ ಜನಗಳು ಅವನನ್ನು ಹೇಡಿಯೆಂದೂ ದಡ್ಡನೆಂದೂ ಕರೆದರು. ಅವರಿಗೆ ಅವನ ಮೇಲೆ ಕೋಪವುಂಟಾಯಿತು. ಉದ್ವೇಗಹೊಂದಿದಾಗ ಆಲೋಚನೆಯು ತೋರದು. ಉತ್ತರದ ಜನಗಳು ಆ ಸಮಯದಲ್ಲಿ ಇಂಗ್ಲೆಂಡಿನೊಡನೆ ಯುದ್ಧಕ್ಕೆ ಹೊರಟಿದ್ದರೆ ಉಳಿಗಾಲವಿರುತ್ತಿರಲಿಲ್ಲ. ಲಿಂಕನ್ನನು, "ಹಿಂದೆ ಕೆಪ್ಟನನೊಬ್ಬನು ಮಾಡಿದಂಥಾ ಕೆಲಸಕ್ಕೋಸ್ಕರವಾಗಿಯೇ ನಾವು ಇಂಗ್ಲೆಂಡಿನೊಡನೆ ಯುದ್ಧಮಾಡಿದೆವು. ಈಗ ಆ ರಾಜ್ಯವು ನಮ್ಮ ಕಾರ್ಯವನ್ನು ದೂಷಿಸಿ ಅನ್ಯಾಯವೆನ್ನುತ್ತ ರಾಯಭಾರಿಗಳನ್ನು ಬಿಟ್ಟುಕೊಡಬೇಕೆಂದು ಕೇಳುತ್ತಿರುವುದು ಧರ್ಮವಾದುದು. ನಾವು ಆಡುವುದೊಂದು, ಮಾಡುವುದೊಂದು ಆದರೆ ಯೋಗ್ಯವಲ್ಲ. 1812 ನೆಯ ಇಸವಿಯಲ್ಲಿ ಕೆಲವು ಕರಾರುಗಳನ್ನು ಮಾಡಿದೆವು. ಈಗ ಅವನ್ನು ಅನುಸರಿಸಿ ರಾಯಭಾರಿಗಳನ್ನು ಒಪ್ಪಿಸಬೇಕಾಗಿರುವುದು. ಅದಲ್ಲದೆ

ಒಂದು ಸಾರಿಗೆ ಒಂದು ಯುದ್ಧವು ಸಾಕು, ಎರಡು ಕೂಡದು'' ಎಂದು ನಿಶ್ಚಯದಿಂದ ಹೇಳಿದನು.

ಪ್ರಜೆಗಳಿಗೆ ಆಶ್ಚರ್ಯವಾಯಿತು. ಶತ್ರುಪಕ್ಷದವರನ್ನು ಹಿಂದಕ್ಕೆ ಕಳುಹಿಸಿಬಿಡುವುದು ಹುಚ್ಚುತನವೆನ್ನಿಸಿತು. ಲಿಂಕನ್ನನಲ್ಲದೆ ಇನ್ನು ಯಾರಾದರೂ ಆ ಅಭಿಪ್ರಾಯವನ್ನು ಸೂಚಿಸಿದ್ದರೆ ಜನಗಳು ನಕ್ಕು ಹಾಸ್ಯಮಾಡದಿರುತ್ತಿರಲಿಲ್ಲ. ಕೂಲಂಕಷರಾದವರು ಅಸಮಾಧಾನಹೊಂದಿದರು. ಯಾರು ಏನನ್ನು ಹೇಳಿದರೂ ಲಿಂಕನ್ನನು ಕಿವಿಗೆ ಹಾಕಿಕೊಳ್ಳಲಿಲ್ಲ. ಜನಗಳಿಗೆ ಎಷ್ಟು ಕೋಪಬಂದರೂ ಲಕ್ಷಿಸದೆ ಸೆರೆಹಿಡಿದವರನ್ನು ಒಪ್ಪಿಸುವುದು ಅಗತ್ಯವಾಗಿದ್ದಿತು. ಸಿವರ್ಡನಿಗೆ ಲಿಂಕನ್ನನು ಇದ್ದ ಅಂಶವನ್ನು ವಿವರಿಸಿದನು. ಸಿವರ್ಡನು ಯುಕ್ತವೆಂದು ಒಪ್ಪಿಕೊಂಡು, ಸೆರೆಹಿಡಿದವರನ್ನು ಬಿಟ್ಟುಕೊಡುವುದಾಗಿ ಬ್ರಿಟಿಷ್ ಸರ್ಕಾರಕ್ಕೆ ಬರೆದು ಕಳುಹಿಸಿದನು. ಅಷ್ಟು ಉಪಾಯವಾಗಿ ಮೃದುವಚನಗಳಿಂದ ಬರೆದು ಸಮಾಧಾನವನ್ನುಂಟುಮಾಡಲು ಇನ್ನು ಯಾರಿಗೂ ಬರುತ್ತಿರಲಿಲ್ಲ. ರಾಯಭಾರಿಗಳು ವಿಮುಕ್ತರಾದರು.

ದಕ್ಷಿಣದವರ ಮುಖವು ಬಾಡಿತು. ಸರ್ಕಾರವು ಹೀಗೆ ಮಾಡುವದೆಂದು ಅವರು ಊಹಿಸಿರಲಿಲ್ಲ. ಉತ್ತರದವರ ಮುಖವೂ ಬಾಡಿತು. ದಕ್ಷಿಣದ ರಾಯಭಾರಿಗಳನ್ನು ಬಿಟ್ಟುಕೊಟ್ಟುದು ಹೇಡಿಯ ಕೆಲಸವೆನ್ನಿಸಿತು. ಲಿಂಕನ್ನನ ಶತ್ರುಗಳು ಅವನ ಆಚರಣೆಯನ್ನು ಖಂಡಿಸಿ ಮತ್ತಷ್ಟು ಶತ್ರುಭಾವವನ್ನು ವಹಿಸಿದರು. ಲಿಂಕನ್ನನು ಮಾತ್ರ, ತಾನು ಮಾಡಿದುದು ಸರಿಯೆಂಬುದು ಕಾಲಕ್ರಮದಲ್ಲಿ ಅರ್ಥವಾಗುವುದೆಂದು ಭರವಸೆ ಹೇಳಿಕೊಂಡು ಸುಮ್ಮನಿದ್ದನು.

ಲಿಂಕನ್ನನು ಹಣದ ಬಾಬನ್ನು ತಿಳಿದವನಲ್ಲ. ಅದನ್ನು ಚೇಸನಿಗೆ ವಹಿಸಿಬಿಟ್ಟಿದ್ದನು. ಚೇಸನು ತಿಳಿದವನು. ಉತ್ತರದಲ್ಲಿ ಜನವಸತಿಯೂ ಕೈಗಾರಿಕೆಯೂ ಹೆಚ್ಚುತ್ತಿದ್ದುವು. ಯುದ್ಧಕಾಲವಾದರೂ ಪದಾರ್ಥಗಳನ್ನು ತಯಾರುಮಾಡುವುದೂ ಹೊರಗಿನ ದೇಶಗಳಿಗೆ ರಫ್ತುಮಾಡುವುದೂ ಕುಗ್ಗಲಿಲ್ಲ. ಜೀವನವು ಕಷ್ಟವಾದರೂ ದಕ್ಷಿಣದ ಪಾಡಿಗಿಂತ ಸುಲಭವಾಗಿದ್ದಿತು. ನೋಟುಗಳು ಚಲಾವಣೆಗೆ ಬಂದರೂ ದಕ್ಷಿಣದಲ್ಲಿ ಆದಷ್ಟು ನಷ್ಟವುಂಟಾಗಲಿಲ್ಲ.

---

## ೪ ನೆಯ ಅಧ್ಯಾಯ

---

### ಅನ್ಯರಾಜ್ಯಗಳೊಡನೆ ವ್ಯವಹಾರ.

ಹೊರಗಿನ ರಾಜ್ಯಗಳೊಡನೆ ವ್ಯವಹಾರವನ್ನು ನಡೆಯಿಸುವುದು ಸಿವರ್ಡನ ಪಾಲಿಗೆ ಬಂದಿದ್ದಿತು. ಆದರೆ ಲಿಂಕನ್ನನು ಅದರಲ್ಲಿ ದೂರದಲ್ಲಿರಲಿಲ್ಲ. ಯಾವಾಗಲೂ ಯಾವುದೊಂದು ವ್ಯವಹಾರದಲ್ಲಿಯೂ ಸಿವರ್ಡನ ಮೇಲೆ ದೃಷ್ಟಿಯಿಟ್ಟು

ನೋಡಿಕೊಳ್ಳುತ್ತಿದ್ದನು. ಆದರೆ ಈ ಪರೋಕ್ಷನಾದ ದೃಷ್ಟಿಯು ಹೊರಗಿನವರ ಬುದ್ಧಿಗೆ ಗೋಚರಿಸುತ್ತಿರಲಿಲ್ಲ.

ಯುದ್ಧವು ಮೊದಲಾದ ಹದಿನೆಂಟು ತಿಂಗಳವರೆಗೂ ಉತ್ತರವು, ಹೊರಗಿನ ರಾಜ್ಯಗಳು ಪ್ರವೇಶಮಾಡಿ, ಅವುಗಳೊಡನೆ ಯುದ್ಧವು ಒದಗುವುದೆಂದು ಹೆದರಿದ್ದಿತು. ಮೆಕ್ಸಿಕೊ ದೇಶವನ್ನು ದಕ್ಕಿಸಿಕೊಳ್ಳಬೇಕೆಂದು ಹವಣಿಸುತ್ತಿದ್ದ ಫ್ರೆಂಚ್ ಚಕ್ರವರ್ತಿಯ ದೆಸೆಯಿಂದ ಈ ಹೆದರಿಕೆಯು ಹೆಚ್ಚಾಯಿತು. ದಕ್ಷಿಣವನ್ನು ಅಡ್ಡಗಟ್ಟಲಾಗಿ ಇಂಗ್ಲೆಂಡಿಗೆ ಹತ್ತಿಯು ಸಾಗುವುದು ನಿಂತುಹೋಯಿತು. ಅಲ್ಲಿ ನಷ್ಟಗಳುಂಟಾದುವು. ಕೆಲಸಗಾರರು ಅನೇಕರು ಹೊಟ್ಟೆಗಿಲ್ಲದವರಾಗಿ ಯಜಮಾನರು ತಿರುಕರಾದರು. ತನ್ನ ವ್ಯಾಪಾರವನ್ನು ಉದ್ಧರಿಸುವ ಅಭಿಲಾಷೆಯಿಂದ ಆ ರಾಜ್ಯವು ಯುದ್ಧಮಾಡಬೇಕೆಂದು ಹವಣಿಸುತ್ತಿದ್ದಿತು. ಇಂಗ್ಲಿಷ್ ಸರ್ಕಾರವು ಮಾತ್ರ ಆತುರಪಡಕೂಡದೆಂದು ನಿಶ್ಚಯಮಾಡಿದ್ದಿತು. ಆದರೆ ಹಿಂದಿನ ಅಧ್ಯಾಯದಲ್ಲಿ ಹೇಳಿರುವ ಕಾರಣವೊದಗಿ ಇಂಗ್ಲೆಂಡೂ ಉತ್ತರ ಅಮೆರಿಕವೂ ಕೂಡಲೇ ಯುದ್ಧವನ್ನು ಪ್ರಾರಂಭಿಸುವಂತೆ ತೋರಿತು. ಯುದ್ಧಮಾಡಲು ಎರಡಕ್ಕೂ ಮನಸ್ಸಿಲ್ಲದಿರಲಿಲ್ಲ.

ಇಂಗ್ಲಿಷ್ ಜನಗಳು ದಕ್ಷಿಣದಲ್ಲಿಯೇ ಸ್ನೇಹವುಳ್ಳವರಾಗಿದ್ದರು. ಉತ್ತರದವರ ನಡೆನುಡಿಗಳು ಅವರಿಗೆ ಸರಿಬೀಳಲಿಲ್ಲ. ಹೀಗಿರಲಾಗಿ ಅವರು, ಉತ್ತರದವರು ದಕ್ಷಿಣದವರನ್ನು ಅನ್ಯಾಯವಾಗಿ ಕಾಡುತ್ತಿರುವವರಲ್ಲದೆ ನಷ್ಟವನ್ನುಂಟುಮಾಡುತ್ತಿರುವರೆಂದರು. ದಕ್ಷಿಣದವರು ಪ್ರತಿಭಟಿಸುವುದಕ್ಕೆ ನ್ಯಾಯವಾದ ಕಾರಣವಿದ್ದಿತೆಂದು ಅವರಿಗೆ ಭಾವನೆಯಿದ್ದಿತು. ಉತ್ತರದವರ ಉದ್ದೇಶವು ಅವರಿಗೆ ಅರ್ಥವಾಗಿರಲಿಲ್ಲ. ದಾಸ್ಯವು ಅಡಗಿದಕಾರಣದಿಂದಲೂ ಅಮೆರಿಕವು ಏಕೀಭವಿಸಿ ಒಂದು ಜನಾಂಗವಾಗಿ ನಿಂತಿರುವುದರಿಂದಲೂ ಈಗ ನಮ್ಮ ಕಾಲದಲ್ಲಿ ಆ ಉದ್ದೇಶವು ಬಹು ಸಾಮಾನ್ಯನಾದುದಾಗಿ ಕಾಣಬಹುದು. ಆದರೆ ದಾಸ್ಯವನ್ನು ಹರಡಲು ಜನರು ಬದ್ಧಕಂಕಣರಾಗಿ ನಿಂತು ಪ್ರಯತ್ನಮಾಡುತ್ತಿದ್ದಾಗಲೂ ಸ್ವಾರ್ಥದಲ್ಲಿ ಮಾತ್ರ ದೃಷ್ಟಿಯಿಟ್ಟು ಪ್ರತ್ಯೇಕವಾಗಬೇಕೆಂದು ಹೊರಟು ಒಂದು ಭಾಗದ ಜನಗಳು ಯುದ್ಧಕ್ಕೂ ಹೆದರದೆ ನಿಂತಿದ್ದಾಗಲೂ ಪ್ರತಿಯಾಗಿ ಎದ್ದುನಿಂತು ಆ ಎರಡು ಬಗೆಯ ಮೊಂಡತನವೂ ಸಾಗದಂತೆ ಮಾಡಲು ಮತ್ತೊಂದರವರು ಸಿದ್ಧರಾದುದು ಸಾಮಾನ್ಯವಾದ ಉದ್ದೇಶವಲ್ಲ. ದಾಸ್ಯವು ದಿನದಿನಕ್ಕೆ ಹರಡದಂತೆ ತಪ್ಪಿಸುವುದೂ ದೇಶವು ಒಡೆದುಹೋಗದಂತೆ ಒಟ್ಟನಿಂದ ನಿಲ್ಲಿಸಿಕೊಳ್ಳುವುದೂ ಸಾಮಾನ್ಯವಾದ ಉದ್ದೇಶವಲ್ಲ. ದಿನದಿನಕ್ಕೆ ಹರಡುವ ಅಂಟುಜಾಡ್ಯವನ್ನೂ ಕಟ್ಟೆಯೊಡೆಯುವುದನ್ನೂ ಅಲ್ಪವಿಷಯಗಳೆಂದು ಭಾವಿಸುವುದು ಮೌಢ್ಯವೇ ಸರಿ. ಇಷ್ಟೇ ಅಲ್ಲ. ಆ ಸಮಯದಲ್ಲಿ ಅವೆರಡು ಪ್ರಯತ್ನಗಳಲ್ಲಿ ಯಾವುದೊಂದನ್ನು ಮಾಡುವುದಕ್ಕೆ ಹೋದರೂ ಮತ್ತೊಂದು ತಪ್ಪಿಹೋಗುತ್ತಿದ್ದಿತು. ಎರಡನ್ನೂ ಸಾಧಿಸಬೇಕೆಂಬ ಅಪೇಕ್ಷೆಯನ್ನು ಮೂಲೆಗೊಗೆದು ಉತ್ತರವು ಎರಡನೆಯದನ್ನು ಸಾಧಿಸಲು ಹೊರಟಿತು. ಹೀಗೆ ಮುಖ್ಯವಾದುದನ್ನು ಆರಿಸಲು ಲಿಂಕನ್ನನು ಮೊದಲನೆಯವನು. ಅವ

ನಿಂದ ರಿಪಬ್ಲಿರ್ಕ ಸಂಗಡಕ್ಕೂ ಅಲ್ಲಿಂದ ಜನಸಮುದಾಯಕ್ಕೂ ಆ ಸಂಕಲ್ಪವು ಹಬ್ಬಿತು. 1859 ರಲ್ಲಿ ಸ್ಪಷ್ಟವಾಗದಿದ್ದ ಈ ಅಂಶವು 1860 ರಲ್ಲಿಯೂ 1861 ರಲ್ಲಿಯೂ ಜನಗಳಿಗೆ ಸ್ಪಷ್ಟವಾಯಿತು. ಇಂಗ್ಲಿಷ್ ಜನಗಳಿಗೆ ಅದು ದೊಡ್ಡದೊಂದು ಸಮಸ್ಯೆಯಾಗಿದ್ದಿತು. ಅವರಿಗೆ ಗೊತ್ತಾದುದು ಇಷ್ಟು— ದಕ್ಷಿಣವು ತಮ್ಮ ವ್ಯಾಪಾರಕ್ಕೆ ಒಳ್ಳೆಯ "ಗಿರಾಕಿ"; ಉತ್ತರವು ಆ ವ್ಯಾಪಾರವನ್ನು ತಪ್ಪಿಸುವುದು. ಈ ಭಾವನೆಗನುಸಾರವಾಗಿ ಅವರ ರಾಗದ್ವೇಷಗಳು ರೂಪಹೊಂದಿದುವು. ಯುದ್ಧವೊದಗಲು ಮೇಲೆ ಹೇಳಿರುವ ಅಂಶಗಳಿಗಿಂತ ಹೆಚ್ಚಿನ ಕಾರಣವು ಅವರಿಗೆ ಕಾಣಲಿಲ್ಲ. ಧರ್ಮಾಧರ್ಮಗಳು ಯುದ್ಧಕ್ಕೆರಗಿರುವುವೆಂಬ ಮೂಲ ತತ್ವವು ಅವರಿಗೆ ಗೊತ್ತುಹತ್ತಲೇ ಇಲ್ಲ. ಇಂಗ್ಲಿಷರಲ್ಲಿ ಅನೇಕರು ದುರ್ಬಲವಾದ ಪಕ್ಷವೆಂದು ದಕ್ಷಿಣದವರಲ್ಲಿ ಮರುಕವನ್ನು ತೋರಿಸಿದರು. ಮೊದಲು ಮೊದಲು ಯುದ್ಧದಲ್ಲಿ ಆ ಪಕ್ಷಕ್ಕೇ ಜಯವಾಗಲಾಗಿ ಇನ್ನು ಕೆಲವರು ಗೆಲ್ಲುತ್ತಿರುವ ಪಕ್ಷವೆಂದು ಅದರಲ್ಲಿ ಅಭಿಮಾನವನ್ನು ತೋರಿಸಿದರು. ಆದರೆ ಉತ್ತರದವರ ಶ್ರೇಯಸ್ಸನ್ನು ಕೋರುವ ಜನರೂ ಅಲ್ಲಿರದಿರಲಿಲ್ಲ.

ಇವರಲ್ಲದೆ ಇಂಗ್ಲೆಂಡಿನಲ್ಲಿ ಇತರ ಜನರು ಕೆಲವರಿದ್ದರು. ಅವರು ಕೆಲಸಗಾರರು. ಅಮೆರಿಕವು ದಕ್ಷಿಣವನ್ನು ಸಮುದ್ರದ ಕಡೆಯಿಂದ ಸುತ್ತಲೂ ಆವರಿಸಿ ಕಾವಲಿಡಲಾಗಿ ವ್ಯಾಪಾರವು ತಪ್ಪಿಹೋಗಿ ಇಂಗ್ಲೆಂಡಿನ ಕೆಲಸಗಾರರು ಬಹಳ ಕಷ್ಟಕ್ಕೆ ಸಿಕ್ಕಿದರು. ಹೊಟ್ಟೆಗೆ ಅನ್ನವೂ ಮೈಗೆ ಬಟ್ಟೆಯೂ ದುರ್ಲಭವಾಯಿತು. ಆದರೂ ಅವರ ಮನಸ್ಸು ಕೆಡಲಿಲ್ಲ. ಅವರು ಉತ್ತರದವರಿಗೆ ಬೆಂಬಲವಾಗಿ ನಿಂತರು. ಮಾಂಚೆಸ್ಟರಿನ ಕೆಲಸಗಾರರು ತಮ್ಮ ಉತ್ಸಾಹವನ್ನು ತೋರಿಸುವ ಉದ್ದೇಶದಿಂದ ಅಮೆರಿಕದ ಪ್ರೆಸಿಡೆಂಟನಿಗೆ ಒಂದು ಬಿನ್ನಹವನ್ನು ಬರೆದು ಕಳುಹಿಸಿದರು. ಲಿಂಕನ್ನನು ಅವರ ಸ್ನೇಹಭಾವವನ್ನು ನೋಡಿ ಬಹು ಸಂತುಷ್ಟನಾಗಿ ಹೀಗೆ ಉತ್ತರವನ್ನು ಬರೆದು ಕಳುಹಿಸಿದನು : "ನಮ್ಮ ಪ್ರಜೆಗಳ ಅವಿಧೇಯತೆಯ ದೆಸೆಯಿಂದ ಯೂರೋಪಿನ ರಾಜ್ಯಗಳಲ್ಲಿ ಕೆಲಸಗಾರರು ತೊಂದರೆಗೊಳಗಾಗಬೇಕಾಯಿತು. ಇದಕ್ಕಾಗಿ ಬಹಳ ದುಃಖವಾಗುತ್ತದೆ. ಇಂತಹ ಸ್ಥಿತಿಯಲ್ಲಿಯೂ ಕೂಡ ನೀವು ಧೈರ್ಯದಿಂದಿರುತ್ತ ನಿಮ್ಮ ಮನಸ್ಸಿನಲ್ಲಿದ್ದುದನ್ನು ನಿರ್ಭಯದಿಂದ ಹೇಳಿರುವಿರಿ. ಇದು ಅಸಾಧಾರಣವಾದುದು. ಈ ಧೈರ್ಯವು ಏಸುಕ್ರಿಸ್ತನನ್ನು ದೈವವೆಂದು ನಂಬಿರುವವರಿಗೆ ಅರ್ಹವಾದುದೇ ವಿನಾ ಬೇರೆಯಲ್ಲ. ಯಾವಕಾಲದಲ್ಲಿಯೂ ಯಾವ ರಾಜ್ಯದಲ್ಲಿಯೂ ನಿಮ್ಮಂತಹ ಧೀರರನ್ನು ಕಾಣಲಿಲ್ಲ." ಸ್ವಲ್ಪ ಮಟ್ಟಿಗೆ ಬ್ರಿಟಿಷ್ ಸರ್ಕಾರವೂ ಈ ಕೆಲಸಗಾರ ಜನರಂತೆ ಅಭಿಪ್ರಾಯವುಳ್ಳದ್ದಾಗಿದ್ದಿತು. ವಿಚಾರವು ವಿಶದವಾಗಿ ಗೊತ್ತಿಲ್ಲದಿದ್ದರೂ, "A great Republic which has enjoyed institutions under which the people have been free and happy is placed in jeopardy" ಎಂಬುದಷ್ಟಾದರೂ ಗೊತ್ತಿದ್ದಿತು. ಅವರ ವ್ಯಾಪಾರಕ್ಕೆ ಸ್ವಲ್ಪಮಟ್ಟಿಗೆ ಕುಂದಕವುಂಟಾದರೂ ಕೂಡ, ಒಟ್ಟಿನಲ್ಲಿ, ಇಂಗ್ಲಿಷ್ ಪ್ರಜಾಸಮುದಾಯಕ್ಕೆ ದ್ವೇಷಭಾವವುಂಟಾಗಿದ್ದಿತೆಂದು ಹೇಳಿದರೆ

ತಪ್ಪಾಗುವುದು. ಸರ್ಕಾರವು ನ್ಯಾಯಮಾರ್ಗದಲ್ಲಿಯೇ ಪ್ರವರ್ತಿಸಿತು.

ಇಂಗ್ಲೆಂಡಿನಲ್ಲಿ ಹುಟ್ಟಿದ ಈ ಮನೋಭಾವನೆಗಳ ದೆಸೆಯಿಂದ ಅಮೆರಿಕದಲ್ಲಿ ಜನರ ಮನಸ್ಸು ಹೇಗೆ ಮಾರ್ಪಟ್ಟಿತೆಂಬುದನ್ನು ವಿಚಾರಮಾಡಬಹುದು. ಆ ರಾಜ್ಯದಲ್ಲಿ ಯಾವನೊಬ್ಬನು ತನ್ನಲ್ಲಿ ಪಕ್ಷಪಾತವನ್ನು ತೋರಿದರೂ ದಕ್ಷಿಣವು ಅತಿಯಾಗಿ ಸಂತೋಷವನ್ನು ಹೊಂದುತ್ತಿದ್ದಿತು. ಹೊಂದಿ, ಅಂಥವರೆಲ್ಲರೂ ತನಗೆ ಒತ್ತಾಸೆಮಾಡುವರೆಂದು ಅದು ನಿರೀಕ್ಷಿಸಿತು. ಎಳ್ಳಷ್ಟು ಸಹಾಯವೂ ಒದಗಲಿಲ್ಲ. ಅದಕ್ಕೆ ಜುಗುಪ್ಸೆಯಾಗಿ ಇಂಗ್ಲೆಂಡನ್ನು ದ್ವೇಷಿಸಿತು. ಉತ್ತರದವರಿಗೆ ಸಾಮಾನ್ಯವಾಗಿ ಆ ರಾಜ್ಯದವರನ್ನು ಕಂಡರೆ ಆಗುತ್ತಿರಲಿಲ್ಲ. ಅವರು ತಮ್ಮನ್ನು ದ್ವೇಷಿಸಲಾಗಿ ಅವರ ದ್ವೇಷವು ಇಮ್ಮಡಿಯಾಯಿತು. ಉತ್ತರದಲ್ಲಿ ಕೆಲವರು ಇಂಗ್ಲೆಂಡಿನಿಂದ ಒಳ್ಳೆಯ ಮಾತುಗಳನ್ನು ಕೇಳಿ ಸರಿಯೆನ್ನಿಸಿಕೊಳ್ಳಬೇಕೆಂದು ಆತುರರಾಗಿದ್ದರು. ಅಂಥವರು ಪ್ರಾಯಶಃ ಆ ರಾಜ್ಯದ ಸದಭಿಪ್ರಾಯವನ್ನು ಉಳಿಸಿಕೊಳ್ಳುವುದಕ್ಕಾಗಿ ಯಾವಾಗಲೂ ಹೆದರಿ ನಡೆಯುತ್ತಿದ್ದರು. ಆದರೆ ಇಂಗ್ಲಿಷರ ಪತ್ರಿಕೆಗಳಲ್ಲಿಯೂ ಇತರ ಕಾಗದಪತ್ರಗಳಲ್ಲಿಯೂ ಉತ್ತರದವರ ಮೇಲಿದ್ದ ದ್ವೇಷವೇ ಪ್ರಚಾರಕ್ಕೆ ಬಂದಿದ್ದಿತು. ವಿರೋಧಭಾವವು ಮುಂದೆ ಇನ್ನೂ ಸ್ಪಷ್ಟವಾಯಿತು. ತಾವು ತಾಟಸ್ಥ್ಯವನ್ನು ವಹಿಸುವುದಾಗಿ ಬ್ರಿಟಿಷ್ ಸರ್ಕಾರದವರು ಪ್ರಕಟಿಸಿದರು ಉತ್ತರವು ತಪ್ಪುತಪ್ಪಾಗಿ ಅರ್ಥಮಾಡಿಕೊಂಡಿತು. ಜನರು ಗುರುಗುಟ್ಟಿದರು.

ಪರದೇಶಗಳೊಡನೆ ಸಿವರ್ಡನು ವ್ಯವಹರಿಸುತ್ತಿರಲಾಗಿ ಲಿಂಕನ್ನನು ಒಂದು ತಡವೆ ಆ ವ್ಯವಹಾರದಲ್ಲಿ ಪ್ರವೇಶಮಾಡಬೇಕಾಯಿತು. ಹಾಗೆ ಮಾಡಿದುದೇ ಅನುಕೂಲವಾಯಿತು. ಮೇ ತಿಂಗಳಲ್ಲಿ ಸಿವರ್ಡನು ಇಂಗ್ಲೆಂಡಿಗೆ ಕಳುಹಿಸಲು ಒಂದು ಪತ್ರವನ್ನು ಬರೆದನು. ಅದರಲ್ಲಿ ಭಾಷೆಯು ಬಹಳ ಅಹಂಕಾರವನ್ನೂ ಇತರರ ಕಡೆಗೆ ಧಿಕ್ಕಾರವನ್ನೂ ತೋರಿಸುವಂಥದಾಗಿದ್ದಿತು. ಅದು ಮಾತ್ರ ಬ್ರಿಟಿಷ್ ಸರ್ಕಾರವನ್ನು ತಲಪಿದ್ದರೆ ಮುಂದೆ ಇಂಗ್ಲೆಂಡಿಗೂ ಅಮೆರಿಕದ ಉತ್ತರಭಾಗಕ್ಕೂ ಸ್ನೇಹವು ನಿರ್ನಾಮವಾಗಿ ತಪ್ಪಿಹೋಗುತ್ತಿದ್ದಿತು. ಲಿಂಕನ್ನನು ಅದನ್ನು ಓದಿ ಬಹಳಮಟ್ಟಿಗೆ ತಿದ್ದಿದನು. ಅವನಿಗೆ ಶಾಂತಿಯು ಪ್ರಿಯತಮವಾದುದು. ಆ ಪತ್ರದಲ್ಲಿದ್ದ ರೇಗಿಸುವಂತಹ ಮಾತುಗಳನ್ನೆಲ್ಲಾ ತೆಗೆದುಹಾಕಿ ಬದಲಾಯಿಸಿದನು. ವಿವರಿಸಿದ ಅಭಿಪ್ರಾಯವು ನಿಷ್ಕೃಷ್ಟವಾದರೂ ಭಾಷೆಯು ಬಹಳ ಗಂಭೀರವಾಗಿದ್ದಿತು. ಸಿವರ್ಡನ ಬರವಣಿಗೆಯಿಂದ ತಪ್ಪಿಹೋಗುತ್ತಿದ್ದ ಶಾಂತಿಯು ಲಿಂಕನ್ನನ ತಿದ್ದುಪಾಟಿನ ದೆಸೆಯಿಂದ ಸ್ಥಿರವಾಯಿತು.

ಈ ಸಮಯದಲ್ಲಿ ಒದಗಿದ ಒಂದು ಪ್ರಸಂಗದಲ್ಲಿ ಅವನಿಲ್ಲದಿದ್ದರೆ ಇತರ ದೇಶಗಳೊಡನೆ ಯುದ್ಧವು ಹತ್ತಿಕೊಳ್ಳುತ್ತಿದ್ದಿತು. ದಕ್ಷಿಣದಿಂದ ರಾಯಭಾರಿಗಳು ಇಂಗ್ಲೆಂಡಿಗೆ ಹೊರಟುದನ್ನೂ ಅದರ ಮುಂದಿನ ಕಥೆಯನ್ನೂ ಹಿಂದೆಯೇ ಹೇಳಿದೆ. ಇಂಗ್ಲಿಷರು ಆ "ಅತ್ಯಾಚಾರ" ಕ್ಕಾಗಿ ಕೋಪಮಾಡಿದರು. ಲಿಂಕನ್ನನು, "ಅವರಿಗೆ ಕೆಡಕನ್ನುಂಟುಮಾಡಲು ನನ್ನ ಅಭಿಮತವಲ್ಲವೆಂದು ಇಂಗ್ಲಿಷ್

ಪ್ರಜೆಗಳಿಗೆ ಹೇಳು'' ಎಂದು, ಇಂಗ್ಲೆಂಡಿಗೆ ಹಿಂದಿರುಗುತ್ತಿದ್ದ ರಾಯಭಾರಿಯೊಡನೆ ಹೇಳಿ ಕಳುಹಿಸಿದನು. ಈ ಪ್ರಸಂಗದಲ್ಲಿಯೂ ಕೂಡ ಅವನು ಸಿವರ್ಡನನ್ನು ತಿದ್ದಿದನು. ಸಿವರ್ಡನ ಉದ್ವೇಗವನ್ನು ತಗ್ಗಿಸದಿದ್ದರೆ ವತ್ತೆ ಬೆಂಕಿಯು ಹೊಗೆಯಾಡಿ ಹತ್ತಿಕೊಂಡು ಅಮೆರಿಕದ ಉತ್ತರಭಾಗವನ್ನೂ ಇಂಗ್ಲೆಂಡನ್ನೂ ದಹಿಸುತ್ತಿದ್ದಿತು.

---

# ೫ನೆಯ ಅಧ್ಯಾಯ

---

## "ಮನೆಯೊಳಗೆ."

ಯುದ್ಧದ ದೆಸೆಯಿಂದ ರಾಜ್ಯದೊಳಗೆ ಅನೇಕ ವಿಚಾರಗಳು ಉತ್ಪನ್ನವಾಗಿ, ಯುದ್ಧಾರಂಭಕಾಲದಲ್ಲಿ ಲಿಂಕನ್ನನ ಹೆಗಲಮೇಲಿನ ಭಾರವು ಹೆಚ್ಚಿತು. ಅವು ಎಂಥದೆಂಬುದು ಗೊತ್ತಾಗಬೇಕಾಗಿದ್ದರೆ ಮೊದಲು ಒಂದು ಅಂಶವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

ಕಾಂಗ್ರೆಸ್ ಸಭೆಯು ಜುಲೈ ನಾಲ್ಕನೆಯ ತಾರೀಖಿನಲ್ಲಿ ಸೇರಿತು. ಸಭಿಕರನ್ನೂ ಪ್ರಜೆಗಳನ್ನೂ ಪ್ರಾರ್ಥಿಸಿ ಅವನು ಒಂದು ಸಂದೇಶವನ್ನು ಕಳುಹಿಸಿದನು. ಅದರೊಳಗೆ ಯುದ್ಧದ ಸ್ವಭಾವವೆಂಥದೆಂಬುದನ್ನು ವರ್ಣಿಸಿ, ಸಂಯೋಗವು ಎಂದೆಂದಿಗೂ ಖಂಡಿಸಿ ಹೋಗಕೂಡದೆಂದು ನಿಷೇಧಿಸಿದ್ದನು. '' ಚೀಟಿಯ ಸಹಾಯದಿಂದ ನ್ಯಾಯವಾದ ಮಾರ್ಗದಲ್ಲಿ ರಾಜ್ಯಸ್ಥಿತಿಯನ್ನು ನಿರ್ಣಯಮಾಡಿದ ಪಕ್ಷದಲ್ಲಿ ಫಿರಂಗಿಯ ಸಹಾಯವು ತೀರ ಅನಾವಶ್ಯಕವಾದುದು, ಎಂಬ ಮಾತು ಸತ್ಯವಾಗದಿದ್ದರೆ ನಮ್ಮ ಪ್ರಜಾಪ್ರಭುತ್ವವು ನಿಷ್ಫಲವಾಗುತ್ತಿದ್ದಿತು.'' ಆಬಳಿಕ, ಸಮ್‍ಟರ್ ದುರ್ಗದಮೇಲೆ ದಕ್ಷಿಣದವರು ಫಿರಂಗಿಗಳನ್ನೆತ್ತಿ ಹೊಡೆದ ಕಾಲ ಮೊದಲುಗೊಂಡು ಅದುವರೆಗೂ ತಾನು ಮಾಡಿದುದೆಲ್ಲವನ್ನೂ ಅವನು ವರ್ಣಿಸಿದನು. ಆ ಕೆಲಸಗಳಲ್ಲಿ ಕೆಲವುವೇಳೆ ತನ್ನ ಅಧಿಕಾರದ ಮೇರೆಯನ್ನು ಮೀರಿ ಹೋಗಬೇಕಾಗುತ್ತಿದ್ದಿತು. ಹಾಗೆ ಹೋಗುವುದು ನ್ಯಾಯವಲ್ಲವೆಂದು ಹೆದರಿ ಸುಮ್ಮನಿದ್ದರೆ ತನ್ನಲ್ಲಿ ಜನಗಳಿಟ್ಟಿದ್ದ ನಂಬಿಕೆಯನ್ನು ಕೆಡಿಸಿದಂತಾಗುವುದಲ್ಲದೆ ಶಾಸನಕ್ರಮಕ್ಕೆ ಮುಳಿಬರುತ್ತಿದ್ದಿತು. ಅವಶ್ಯಕವಾದರೆ ಸರ್ಕಾರವು ಅವುಗಳನ್ನು ಮಂಜೂರುಮಾಡಲಿ; ಇನ್ನು ತನ್ನ ಕೆಲಸವು ತೀರಿತು. ಕಾಂಗ್ರೆಸ್ ಸಭೆಯು ಒತ್ತಾಸೆ ಮಾಡಬೇಕು. ಆಕೂಡಲೇ ಜನವೂ ಧನವೂ ಒದಗಬೇಕು. ಹಾಗೆ ಧಾರಾಳವಾದ ಸಹಾಯವು ದೊರೆತರೆ ಯುದ್ಧದಲ್ಲಿ ಜಯವಾಗುವುದಲ್ಲದೆ ಜಾಗ್ರತೆಯಾಗಿ ಯುದ್ಧವು ಮುಗಿದು ಹೋಗುವುದು. ಕಾಂಗ್ರೆಸ್ ಸಭೆಯು ಅವನು ಮಾಡಿದುದೆಲ್ಲವನ್ನೂ ಅನುಮೋದಿಸಿದುದಲ್ಲದೆ ಕೇಳಿದಷ್ಟು ಒತ್ತಾಸೆಯನ್ನು ಮಾಡಲೂ ಒಪ್ಪಿತು. ಆಮೇಲೆ ಎರಡು ಸಭೆಗಳೂ ಸೇರಿ, ಯುದ್ಧಕ್ಕೆ ಹೊರಡಲು ಉತ್ತರಕ್ಕಿದ್ದ ಆಶಯವನ್ನು ಪ್ರಕಟಪಡಿ

ಸಿದುವು. ಜಯದಾಸೆಯಿಂದಾಗಲೀ ಮತ್ತೊಬ್ಬರನ್ನು ಅಧೀನದಲ್ಲಿಟ್ಟುಕೊಳ್ಳಬೇಕೆಂದಾಗಲೀ ಹೊರಟಿಲ್ಲ. ಅಥವಾ, '' ಸದ್ಯದಲ್ಲಿ ದಕ್ಷಿಣದಲ್ಲಿ ಪ್ರಚಾರದಲ್ಲಿರುವ ಪದ್ಧತಿಗಳನ್ನು ತಪ್ಪಿಸಬೇಕೆಂದಾಗಲೀ ಅವುಗಳನ್ನು ತಿದ್ದಿ ಬದಲಾಯಿಸಬೇಕೆಂದಾಗಲೀ '' ಅಲ್ಲ ; '' ಸಂಯೋಗವನ್ನು ಉದ್ಧಾರಮಾಡಿ ಅದರ ಗೌರವವನ್ನೂ ಜನಗಳ ಸಮಾನತೆಯನ್ನೂ ಸಂಸ್ಥಾನಗಳ ಬಾಧ್ಯತೆಗಳನ್ನೂ ಯಾವ ನ್ಯೂನತೆಯೂ ಬರದಂತೆ ಕಾಪಾಡುವುದಕ್ಕೋಸ್ಕರ.''

ಆಡಳಿತದ ಮತ್ತು ಯುದ್ಧದ ಮುಖ್ಯ ಆಶಯವು ಹಿಂದೆ ಹೇಳಲ್ಪಟ್ಟಿದೆ. ಅದರೊಳಗೆ ಮತ್ತೊಂದು ವಿಚಾರವು ಹೆಣೆದುಕೊಂಡಿದ್ದಿತು. ಅದು ಪ್ರಾರಂಭದಲ್ಲಿ ಗೊತ್ತಿಗೆ ಬರಲಿಲ್ಲ. ಸಂಯೋಗದಲ್ಲಿ ಭಕ್ತಿಯೂ ಯುದ್ಧದಲ್ಲಿ ಉತ್ಸಾಹವೂ ಸೇರಿ ಅದರ ಮೇಲೆ ಆವರಣವನ್ನು ಹೊದಿಸಿ ಮರೆಮಾಡಿದ್ದುವು. ಆದರೆ ಬರುಬರುತ ಅದು ಮುಂದಕ್ಕೆ ಬಂದಿತು. ಸ್ಪಷ್ಟನಾಯಿತು. ಅದು ದಾಸ್ಯಪದ್ಧತಿ. ಯುದ್ಧವು ಅದನ್ನು ನಾಶಮಾಡುವುದಕ್ಕಾಗಿ ಪ್ರಾರಂಭವಾಗಿದ್ದರೆ ತಪ್ಪಾಗುತ್ತಿದ್ದಿತು. ಈಗಿನ ಪ್ರಯತ್ನವು ಸರ್ಕಾರದ ಶಾಸನವು ಅಪ್ರತಿಹತವಾಗುವಂತೆ ಮಾಡಿ ದಂಗೆಯನ್ನು ಅಡಗಿಸುವುದಲ್ಲದೆ ಮತ್ತೊಂದಲ್ಲವೆಂದು ಉತ್ತರದ ಪ್ರಜೆಯು ಭಾವಿಸಿದ್ದನು. ಒಂದೆರಡು ಸೋಲುಗಳಾಗಿ ದಕ್ಷಿಣದ ಬಲವು ಕುಗ್ಗಲಾಗಿ ಆ ದಂಗೆಯು ನಿಶ್ಶೇಷವಾಗಿ ಅಡಗಬಹುದೆಂದು ತೋರಿತು. ಆಗ ಸರ್ಕಾರದ ಕಾನೂನೂ ಸಂಯೋಗವೂ ಮೊದಲಿನಂತೆ ಶಿಥಿಲನಾಗದೆ ಬಿಗಿಯಿಂದಿರುವುದು. ದಾಸ್ಯದ ಮೇಲೂ ದೊಡ್ಡ ಜಯವುಂಟಾದಂತಾಗುತ್ತಿದ್ದಿತು. ಅದನ್ನು ಹೆಚ್ಚಾಗಿ ಹರಡದಂತೆ ತಪ್ಪಿಸುವುದು ಸಾಧ್ಯವಾಗಿ, ಶಾಸನನಿಯಮದ ಪ್ರಕಾರ ದಾಸ್ಯವನ್ನುಳ್ಳ ಸಂಸ್ಥಾನಗಳೊಳಗೆ ದಾಸ್ಯಪದ್ಧತಿಯನ್ನು ಸಂರಕ್ಷಿಸಿದಂತೆಯೂ ಆಗುತ್ತಿದ್ದಿತು. ಶಾಸನಕ್ರಮವನ್ನು ಉದ್ಧರಿಸುವುದಕ್ಕಾಗಿ ಹೊಡೆದಾಡುತ್ತಿರುವವರು ಇದೊಂದು ಅಂಶದಲ್ಲಿ ಅದರ ವಾಕ್ಯವನ್ನು ಮೀರುತ್ತಿರಲಿಲ್ಲ.

ಮೊದಲು ಮೊದಲು ಕಾಂಗ್ರೆಸ್ ಸಭೆಯ ಸಂಕಲ್ಪವು ಈರೀತಿಯಾಗಿದ್ದಿತು. ಲಿಂಕನ್ನನು ಉಪಯೋಗಿಸುತ್ತಿದ್ದ ತತ್ವಗಳು ಇವಲ್ಲದೆ ಬೇರೆಯಲ್ಲ. ಒಂದುವೇಳೆ ತನಗೆ ಮನಸ್ಸಿಲ್ಲದಿದ್ದರೂ ಪ್ರೆಸಿಡೆಂಟನ ಪದವಿಗೆ ಏರಿದ ಮೇಲೆ ಅವು ಕರ್ತವ್ಯವೆಂದು ಅವನು ಭಾವಿಸಿದನು. ತನ್ನ ಚುನಾವಣೆಯ ಸಮಯದಲ್ಲಿ ಅವನು ಶಾಸನನಿಯಮವನ್ನು ಸಂರಕ್ಷಿಸುವುದಾಗಿ ಪ್ರಮಾಣಮಾಡಿದ್ದನು. ಆ ಪ್ರಮಾಣಮಾಡಿದುದು ಸದಾ ಜ್ಞಾಪಕದಲ್ಲಿರುತ್ತಿದ್ದಿತು. ಆ ಕಾರ್ಯವನ್ನು ಪೂರ್ತಿಮಾಡುವುದಕ್ಕಾಗಿಯೇ ತನ್ನ ಕೈಯಲ್ಲಿ ಪ್ರಜೆಗಳು ಅಧಿಕಾರವನ್ನು ಕೊಟ್ಟಿದ್ದರೆಂದು ಅವನ ಭಾವನೆ. ಆ ಅಧಿಕಾರವನ್ನು ಪ್ರಯೋಗಿಸಿ ಅವನು ತನ್ನ ಕರ್ತವ್ಯವನ್ನು ಪೂರ್ತಿಮಾಡಬೇಕಾಗಿದ್ದಿತು.

ಸಂಯೋಗವೂ ಸರ್ಕಾರದ ಆಜ್ಞೆಯೂ ಅಸ್ಖಲಿತವಾಗಿ ನಡೆಯುವಂತೆ ನೋಡಿಕೊಳ್ಳುವುದಕ್ಕಾಗಿ ಅವನು ಅಧಿಕರ್ತನಾದನು. ಅದಕ್ಕಾಗಿ ಎಷ್ಟು ಬೇಕೋ ಅಷ್ಟು ಅಧಿಕಾರವನ್ನೂ ಉಪಯೋಗಿಸಲು ಅವನಿಗೆ ಅನುಮತಿಯಿದ್ದಿತು.

ಯುದ್ಧವು ಬಹುಕಾಲ ಹಿಡಿಯಲಾಗಿ ಉತ್ತರದ ಮತ್ತು ಪ್ರೆಸಿಡೆಂಟನ ವ್ಯವಹಾರದ ರೀತಿಯು ಬದಲಾಯಿಸಿತು. ''ನ್ಯಾಯವನ್ನು ಉಲ್ಲಂಘಿಸಿ ಎದ್ದಿರುವ ದಂಗೆಯನ್ನು ಅಡಗಿಸುವುದು'' ಅವನ ಕರ್ತವ್ಯವಾಗಿದ್ದಿತು. ಆದರೆ ಪ್ರತ್ಯೇಕವಾಗಿ ಹೋಗಿ ಬೇರೊಂದು ರಾಜ್ಯವನ್ನು ಸ್ಥಾಪಿಸಬೇಕೆಂದಿರುವ ದಕ್ಷಿಣವನ್ನು ಹಿಂದಕ್ಕೆ ಕರೆದುಕೊಂಡು ಒಗ್ಗಟ್ಟನ್ನು ತರಬೇಕಾದರೆ ದಾಸ್ಯವನ್ನು ಮೊದಲು ನಿರ್ಮೂಲ ಮಾಡಬೇಕು. ಉತ್ತರ ದಕ್ಷಿಣಗಳಿಗೆ ವೈಷಮ್ಯವುಂಟಾಗಲು ದಾಸ್ಯವೇ ಕಾರಣ.

ಉತ್ತರದ ಪ್ರಜೆಗಳಿಗೆ ಈಗ ಹೀಗೆ ತೋರಿತು.

ಜಾಗ್ರತೆಯಾಗಿ ಯುದ್ಧವು ಮುಗಿದು ಜಯವೂ ಜಾಗ್ರತೆಯಾದ ನಿರ್ಣಯವೂ ಉಂಟಾಗುವುವೆಂದು ಉತ್ತರದವರಿಗಿದ್ದ ಭಾವನೆಯು ದೂರವಾಯಿತು. ಭೇದಬುದ್ಧಿಯು ಮೊಳೆಯಿತು. ಒಗ್ಗಟ್ಟು ಸಡಿಲವಾಯಿತು. ಕಾರಣವು ಕೂಡಲೇ ಸ್ಪಷ್ಟವಾಯಿತು. ದಾಸ್ಯದ ಮೇಲೆ ಯುದ್ಧಕ್ಕೆ ಹೊರಟು ಅದನ್ನು ಅಡಗಿಸಬೇಕೆನ್ನುವವರು ಕೆಲವರಾದರು. ಅಂಥವರಲ್ಲಿ ರಿಪಬ್ಲಿಕನರಲ್ಲಿ ಕೂಲಂಕಷರಾದವರೊಬ್ಬರು. ನ್ಯಾಯದ ಪ್ರಕಾರವೇ ಪ್ರವರ್ತಿಸಿ ಕಾಲಕ್ರಮದಲ್ಲಿ ಗುಲಾಮರನ್ನು ಬಿಡುಗಡೆ ಮಾಡುವುದು ಅವರಿಗೆ ಇಷ್ಟವಿರಲಿಲ್ಲ. ದಾಸ್ಯವು ದುಷ್ಟವಾಗಿರುವ ಕಾಲದಲ್ಲಿ ಅದನ್ನುಳ್ಳ ಸಂಸ್ಥಾನಗಳು ಉತ್ತರದ ಪಕ್ಷವನ್ನು ಸೇರಿದ್ದರೂ ಕೂಡ ಸಹಿಸುವುದು ಹೇಗೆ? ಎರಡನೆಯವರಾಗಿ ಡೆಮೊಕ್ರೆಟರು ಎದ್ದರು. ಅವರು ವಿರೋಧವನ್ನೆಣಿಸಿದರು. ಅವರಲ್ಲಿ ವಿಧವಿಧವಾದ ಅಭಿಪ್ರಾಯಗಳಿದ್ದುವು. ದಕ್ಷಿಣದ ಕಡೆಯವರಾಗಿ ಅಥವಾ ದಕ್ಷಿಣದಲ್ಲಿ ಪಕ್ಷಪಾತವನ್ನು ತೋರಿಸುವವರಾಗಿದ್ದವರು ಅವರೊಳಗೆ ಸೇರಿದ್ದರು. ಅವರು ಮೊದಲು ಸ್ವಲ್ಪ ಮಂದಿ ಇದ್ದರು. ಆಗ ಗದ್ದಲವೇ ಇರಲಿಲ್ಲ. ಆದರೆ ಕಾಲಕ್ರಮದಲ್ಲಿ, ಬಲವು ಕೂಡಿಬಂದು ಅವರು ರಾಜ್ಯದ ಸರ್ಕಾರವನ್ನು ಮುಳುಗಿಸಲು ಪ್ರಯತ್ನಮಾಡುವವರಾದರು. ತಾವು ನ್ಯಾಯಮಾರ್ಗವನ್ನು ಬಿಟ್ಟು ಕದಲುವವರಲ್ಲವೆಂದು ಹೇಳಿಕೊಳ್ಳುತ್ತ ಕೆಲವರು, ನ್ಯಾಯವನ್ನು ನೋಡದೆ ಸಮಯೋಚಿತವಾಗಿ ಸರ್ಕಾರವು ಮಾಡುತ್ತಿದ್ದ ಆಚರಣೆಗಳನ್ನು ಖಂಡಿಸಿ, ಖಂಡಿಸುತ್ತ, ಅಂತಹ ಸಮಯವು ಸಿಕ್ಕುವುದೇ ಎಂದು ಹೊಂಚುತ್ತಿದ್ದರು. ಒಟ್ಟಿನಲ್ಲಿ, ಡೆಮೊಕ್ರೆಟರ ಮನಸ್ಸಿನೊಳಗೆ ಸಂಯೋಗದಲ್ಲಿ ಭಕ್ತಿಯಿದ್ದರೂ ದಕ್ಷಿಣದಲ್ಲಿ ಗೌರವವು ವಿಶೇಷವಾಗಿದ್ದು, ಸರ್ಕಾರದ ಕೈ ನಡೆಯದಂತೆ ಆಟಂಕಪಡಿಸುವ ದಕ್ಷಿಣದವರ ಬಾಧ್ಯತೆಗಳನ್ನು ನ್ಯಾಯವೆನ್ನುತ್ತಿದ್ದರು. ಕೊನೆಯವರಾಗಿ ರಿಪಬ್ಲಿಕನರಿದ್ದರು. ಅವರು ಡೆಮೊಕ್ರೆಟರ ನಡೆವಳಿಗಳನ್ನು ನಿಂದ್ಯವೆನ್ನುತ್ತಿದ್ದರು. ಆದರೆ ಅವರ ಪಂಗಡದಲ್ಲಿಯೇ ಕೂಲಂಕಷರಿರಲಾಗಿ ಇತರರು ತೀರ ಪೂರ್ವಾಚಾರದವರೆನ್ನಿಸಿಕೊಂಡರು. ಕೂಲಂಕಷರು ಅವರನ್ನು ಕಡೆಗಂಡರು. ಈ ಪೂರ್ವಾಚಾರದವರು ಯಾವುದರಲ್ಲಿಯೂ ಧೈರ್ಯದಿಂದ ನುಗ್ಗುತ್ತಿರಲಿಲ್ಲ. ಬಹಳ ಎಚ್ಚರಿಕೆಯಿಂದಿರುತ್ತಿದ್ದರು. ಹೀಗೆ ಜನರ ಮನಸ್ಸು ಬಗೆಬಗೆಯಾಗಿದ್ದಿತು.

ಲಿಂಕನ್ನನ ಸ್ವಂತ ಅಭಿಪ್ರಾಯಗಳನ್ನು ನೋಡಿದರೆ ಅವನನ್ನು ಮೇಲೆ ಹೇಳಿರುವ ಗುಂಪಿನಲ್ಲಿ ಯಾವುದಕ್ಕೂ ಸೇರಿಸುವುದಕ್ಕಾಗುತ್ತಿರಲಿಲ್ಲ. ಡೆಮೊಕ್ರೆಟ

ರಂತೆ ಅವನಿಗೆ ದಕ್ಷಿಣದಲ್ಲಿ ಸ್ನೇಹವು ಹೆಚ್ಚಾಗಿದ್ದಿತು. ಆದರೆ ಸಂಯೋಗದ ಮೇಲಿನ ಗೌರವವೂ ಪ್ರೀತಿಯೂ ಅತುಲವಾಗಿರಬೇಕು. ಅದರೊಳಗೆ ಎರಡ ನೆಯ ಮಾತೇ ಕೂಡದು. ಕೆಲಸಗಳಲ್ಲಿ ಅವನಷ್ಟು ಜಾಗರೂಕನಾದವನು ಮತ್ತೊಬ್ಬನಿರಲಿಲ್ಲ. ಆದರೆ ಆ ಜಾಗರೂಕತೆಯು ಸದಾ ಮನಸ್ಸಿನಲ್ಲಿ ಕೊರೆಯು ತ್ತಿದ್ದ ದಾಸ್ಯದ್ವೇಷವನ್ನು ಮರೆಮಾಡಿದ್ದಿತು. ಜಾಗರೂಕತೆಯಿಂದ ಹೋಗುತ್ತಿದ್ದಾ ಮಾರ್ಗದಲ್ಲಿ ಎರಡು ತತ್ವಗಳು ಅವನಿಗೆ ದಾರಿಯನ್ನು ತೋರಿಸುತ್ತಿದ್ದುವು. ಅವು ಗಳನ್ನು ಅನುಸರಿಸಲು ಲಿಂಕನ್ನನು ಸಂಕಲ್ಪಿಸಿದ್ದನು. ಸಾಧ್ಯವಾದಷ್ಟುಮಟ್ಟಿಗೆ ಶಾಸನ ನಿಯಮವನ್ನು ಉಲ್ಲಂಘಿಸಿ ಹೋಗಬಾರದು; ಹಾಗೆ ಉಲ್ಲಂಘನವು ಸಂಯೋಗದ ರಕ್ಷಣೆಗಾಗಿ ಅಗತ್ಯವೆಂದು ತೋರಿದರೆ ಅದನ್ನು ಕರ್ತವ್ಯವೆಂದು ಭಾವಿಸಿ ಮಾಡಬೇಕು. ಅವಶ್ಯಕವಿಲ್ಲದಿದ್ದ ಪಕ್ಷದಲ್ಲಿ ಅಂದರೆ ಕಾರಣವಿಲ್ಲದಿರಲಾಗಿ ಉಲ್ಲಂಘಿಸಕೂಡದು.

ಯುದ್ಧವಾರಂಭಿಸಿ ನಾಲ್ಕು ತಿಂಗಳಾಗುವುದರೊಳಗೆ ಉತ್ತರದ ಜನಗಳಿಲ್ಲುಂ ಟಾಗಿದ್ದ ಪಂಗಡಗಳಿಂದ ಲಿಂಕನ್ನನಿಗೆ ತೊಂದರೆಯು ಮೊದಲಾಯಿತು. ಉತ್ತರದ ಸೈನ್ಯವು ದಕ್ಷಿಣದ ಭೂಮಿಯಮೇಲೆ ಕಾಲಿಟ್ಟಕೂಡಲೇ ಗುಲಾಮರು ತಲೆತಪ್ಪಿಸಿ ಕೊಂಡು ಓಡಿ ಆ ದಂಡು ಇಳಿದ ಸ್ಥಳಗಳಿಗೆ ಬಂದುಬಿಡುತ್ತಿದ್ದರು. ಸೈನ್ಯಾಧಿಪತಿಗ ಳಿಗೆ ಏನುಮಾಡುವುದಕ್ಕೂ ತೋರಲಿಲ್ಲ. ಏಕೆಂದರೆ ದಕ್ಷಿಣದಲ್ಲಿನ ನಿವಾಸಿಗಳ ಸೊತ್ತನ್ನು ವಶಪಡಿಸಿಕೊಳ್ಳುವುದಕ್ಕೋಸ್ಕರ ಉತ್ತರದ ದಂಡು ಹೊರಟಿರಲಿಲ್ಲ. ಜನರಲ್ ಬಟ್ಲರ್ ಎಂಬಾತನು ಮನ್ರೋ ದುರ್ಗದಲ್ಲಿ ಅಧಿಪತಿಯಾಗಿದ್ದನು. ಆ ದುರ್ಗವು ವರ್ಜೀನಿಯದಲ್ಲಿ ತೀರಪ್ರದೇಶದಲ್ಲಿದ್ದಿತು. ಆದರೆ ಅದು ಉತ್ತರದ ಅಧೀನ ವಾಗಿದ್ದಿತು. ಆತನು ವಿಚಾರಿಸಲಾಗಿ ತನ್ನಲ್ಲಿಗೆ ಓಡಿಬಂದ ಗುಲಾಮರು ದಕ್ಷಿಣದ ದಂಡಿನಲ್ಲಿ ಕಂದಕಗಳನ್ನು ತೋಡುವುದಕ್ಕೂ ಕೋಟೆಗಳನ್ನು ಎಬ್ಬಿಸುವುದಕ್ಕೂ ನೇಮಿಸಲ್ಪಡುತ್ತಿದ್ದರೆಂದು ತಿಳಿಯಿತು. ಅವನು ಅವರಿಗೆ ಯುದ್ಧಕಾಲದಲ್ಲಿ ತಪ್ಪಿಸಿ ಕೊಂಡು ಬಂದವರೆಂದು ಹೆಸರಿಟ್ಟು ಅವರನ್ನು ಮತ್ತೆ ಯಜಮಾನರ ಬಳಿಗೆ ಕಳು ಹಿಸಬೇಕಾಗಿಲ್ಲವೆಂದು ಹೇಳಿದನು. ಗುಲಾಮರು ಯಾವುದಾದರೊಂದು ಕಾರಣ ದಿಂದ ತಪ್ಪಿಸಿಕೊಂಡು ಅಲ್ಲಿಗೆ ಬರುತ್ತಿದ್ದರು. ಆ ಕಾರಣಗಳು ನ್ಯಾಯವಾದವೇ ಎಂಬುದನ್ನು ವಿಚಾರಿಸುವುದು ಸೈನ್ಯಾಧಿಪತಿಗಳ ಕೆಲಸವಾಗಿದ್ದಿತು. ಸೇನಾಪತಿಗಳು ತಮಗೆ ತೋರಿದ ರೀತಿಯಲ್ಲಿ ಆಚರಿಸುತ್ತಿದ್ದರು. ಲಿಂಕನ್ನನು ಆ ವಿಷಯವನ್ನು ಅವರಿಗೇ ಬಿಟ್ಟುಬಿಟ್ಟನು. ಕಾಂಗ್ರೆಸ್ ಸಭೆಯು ಒಂದು ಕಾನೂನನ್ನು ರಚಿಸಿತು. ದಂಗೆಕೋರರು ತಮ್ಮ ದಂಗೆಯ ಕೆಲಸಕ್ಕಾಗಿ ಈ ಸೊತ್ತನ್ನು ಉಪಯೋಗಿಸುವು ದಾದರೆ ಅಂಥದನ್ನು ಆಕ್ರಮಿಸಿಕೊಳ್ಳಲು ಉತ್ತರದ ಸರ್ಕಾರಕ್ಕೆ ಸಂಪೂರ್ಣವಾದ ಸ್ವಾತಂತ್ರ್ಯವು ಲಭಿಸಿತು. ಆದರೆ ಈ ಅಂಶದಲ್ಲಿ ಬಹಳ ನ್ಯಾಯಪೂರ್ವಕವಾಗಿ ವ್ಯವಹರಿಸಬೇಕು. ನಿಬಂಧನೆಗೆ ಪ್ರಬಲವಾದ ವಿರೋಧವೆದ್ದಿತು. ಇನ್ನೂ ಸಂಯೋಗ ವನ್ನು ಬಿಡಲಾರದೆ ಚಿಂತಿಸುತ್ತಿದ್ದ ಮಿಸ್ಸೌರಿಯಲ್ಲಿ ಭಯವುಂಟಾಯಿತು. ದಾಸ್ಯದ ಸಂಬಂಧದಲ್ಲಿ ಯಾವ ನಿಬಂಧನೆಯನ್ನು ಮಾಡಹೋದರೂ ಲಿಂಕನ್ನನಿಗೆ ಸಹಿಸುತ್ತಿ

ರಲಿಲ್ಲ. ಅವನ ದೃಷ್ಟಿಯೆಲ್ಲವೂ ಸಂಯೋಗದ ರಕ್ಷಣೆಯಲ್ಲಿ ಬದ್ಧವಾಗಿದ್ದಿತು. ಇತರ ವಿಷಯಗಳು ಮುಖ್ಯವಾಗಿರಲಿಲ್ಲ.

ಸ್ವಲ್ಪಕಾಲದಮೇಲೆ ಮನುಷ್ಯನೊಬ್ಬನು ಜನಗಳ ದೃಷ್ಟಿಯನ್ನು ಆಕರ್ಷಿಸಿದನು. ಆತನು ಲಿಂಕನ್ನನಿಗಿಂತ ಮುಂಚೆ ರಿಪಬ್ಲಿಕನ್ ಪಕ್ಷದವರ ಪರವಾಗಿ ಪ್ರೆಸಿಡೆಂಟನಾಗಲು ಪ್ರಯತ್ನಿಸಿದ ಫ್ರೇಮಾಂಟನು. ಅವನು ಮೊದಲು ಮೊದಲು ಎಲ್ಲರನ್ನೂ ಮೋಹಗೊಳಿಸಿದನು. ಆದರೆ ಅಂಥವರ ಸುವಾಸನೆಯು ಬಹಳಕಾಲವಿರುವುದಿಲ್ಲ. ಫ್ರೇಮಾಂಟನು ಜಾಗ್ರತೆಯಾಗಿಯೇ ತನ್ನ ನಡತೆಯನ್ನು ಕೆಡಿಸಿಕೊಂಡನು. ಅಲ್ಲಿ ಇಲ್ಲಿ ಯುದ್ಧಮಾಡಿ ಸ್ವಲ್ಪ ಹೆಸರುಂಟಾಗಿದ್ದಿತು. ಅವನು ದಕ್ಷಿಣದವನು. ಕೆಲಿಫ್ರೋರ್ನಿಯವು ಸ್ವತಂತ್ರವಾಗುವುದರಲ್ಲಿ ಅವನು ಬಹಳ ಸಹಾಯಮಾಡಿದುದನ್ನು ನೋಡಿ ಜನರು ಅವನನ್ನು ಅಸಾಧಾರಣನೆಂದು ಭಾವಿಸಿದರು. ಫ್ರೇಮಾಂಟನು ಪಶ್ಚಿಮಭಾಗದ ಸೈನ್ಯಕ್ಕೆ ಅಧಿಪತಿಯಾದನು. ಅಲ್ಲಿ ತನ್ನ ದುರ್ಬಲತೆಯಿಂದಲೂ ಸೋಮಾರಿತನದಿಂದಲೂ ದಕ್ಷಿಣದವರಿಗೆ ಅನೇಕತಡವೆ ಸೋತುಹೋದನು. ಆದರೂ ಲಿಂಕನ್ನನು ಅವನನ್ನು ಅಲ್ಲಿಂದ ತೆಗೆದುಹಾಕಲಿಲ್ಲ. ಅವನಿಗೆ ಸಹಾಯಮಾಡುವುದಕ್ಕೋಸ್ಕರ ಹೆಚ್ಚು ಅನುಭವವುಳ್ಳ ಮತ್ತೊಬ್ಬ ದಳಪತಿಯನ್ನು ಕಳುಹಿಸಿದನು. ಆಗಸ್ಟ್ ತಿಂಗಳ ಕೊನೆಯಲ್ಲಿ ಫ್ರೇಮಾಂಟನು ಇದ್ದಕ್ಕಿದ್ದಹಾಗೆ ಒಂದು ಪ್ರಕಟನೆಯನ್ನು ಹೊರಡಿಸಿದನು. ಅದರ ಪ್ರಕಾರ ಮಿಸ್ಸೌರಿಯಲ್ಲಿ '' ಮಾರ್ಷಿಯಲ್ ಲಾ '' ಚಲಾವಣೆಗೆ ಬಂದಿತು. ಪ್ರಮಾದವನ್ನುಂಟುಮಾಡತಕ್ಕ ನಿಯಮಗಳು ಅದರೊಳಗೆ ಅಡಗಿದ್ದುವು. ಅಲ್ಲದೆ, ಗುಲಾಮರೆಲ್ಲರೂ ಸ್ವತಂತ್ರರಾಗಬೇಕು; ಶತ್ರುವಿನೊಡನೆ ಸೇರಿದವರ ಸೊತ್ತು ಸರ್ಕಾರಕ್ಕೆ ಸೇರಿಹೋಗುತ್ತಿದ್ದಿತು. ಆದರೆ ಈ ಪ್ರಕಟನೆಯಿಂದ ಸಂಯೋಗದಲ್ಲಿ ಪ್ರೀತಿಯುಳ್ಳವರಿಗೆಲ್ಲಾ ವಿಶೇಷವಾದ ಕೋಪವುಂಟಾಗುವುದರಲ್ಲಿ ಸಂಶಯವಿರಲಿಲ್ಲ. ಈ ವಿಷಯದಲ್ಲಿ ಕಾಂಗ್ರೆಸ್ ಸಭೆಯು ಆಗತಾನೇ ರಚಿಸಿದ್ದ ಕಾನೂನಿಗೂ ಅದು ವಿರುದ್ಧವಾಗಿದ್ದಿತು. ಇನ್ನೂ ಯಾವುದೊಂದು ಭಾಗವನ್ನೂ ಸೇರದಿರುವ ಸಂಸ್ಥಾನಗಳಿಗೆ ಹಾರೆಯಪೆಟ್ಟು ಬಿದ್ದಂತಾಗಿ, ಅವು ದಕ್ಷಿಣವನ್ನು ಸೇರಿಕೊಳ್ಳಬಹುದೆಂಬ ಹೆದರಿಕೆಯು ಎಲ್ಲರ ಮನಸ್ಸಿನಲ್ಲಿಯೂ ಹುಟ್ಟಿತು. ಆ ಸಂಸ್ಥಾನಗಳ ಪ್ರಜೆಗಳಿಗೆ ಸಮಾಧಾನವನ್ನುಂಟುಮಾಡಿ ಅವರನ್ನು ತನ್ನ ಕಡೆಗೆ ಕರೆದುಕೊಳ್ಳಬೇಕೆಂದು ಲಿಂಕನ್ನನು ಪ್ರಯತ್ನಿಸುತ್ತಿದ್ದನು. ಈಗ ಆ ಪ್ರಯತ್ನವೆಲ್ಲಾ ನಿರರ್ಥಕವಾಗುವ ಹೊತ್ತು ಬಂದಿತು. ಅವನ ಇತರ ಪ್ರಯತ್ನಗಳಿಗೂ ಭಂಗವುಂಟಾಗುವಂತೆ ತೋರಿತು. ಸಹಾಯಮಾಡುವನೆಂದು ನಂಬಿರಲಾಗಿ ಹೀಗೆ ಮಾಡಿದನೆಂದು ಲಿಂಕನ್ನನಿಗೆ ವ್ಯಸನವಾಯಿತು. ಆದರೂ ಪ್ರಕಟನೆಯನ್ನು ಆ ಕೂಡಲೇ ಉಪಸಂಹಾರಮಾಡಬೇಕೆಂದು ಫ್ರೇಮಾಂಟನಿಗೆ ಒಂದು ಕಾಗದವನ್ನು ಬರೆದನು. ಅಥವಾ ಅದರ ರೀತಿಯನ್ನು ಸಂಪೂರ್ಣವಾಗಿ ಬದಲಾಯಿಸಿ ಕಾಂಗ್ರೆಸ್‌ನ ಕಾನೂನಿಗೂ ಅದಕ್ಕೂ ವ್ಯತ್ಯಾಸಬರದಂತೆ ಮಾಡಲು ಅನುಮತಿಯನ್ನು ಕೊಟ್ಟನು. ''ನಿನ್ನ ಪ್ರಕಟನೆಯ ಪ್ರಕಾರ ಯಾವನನ್ನಾದರೂ ಗುಂಡಿನಿಂದ ಹೊಡೆದ ಪಕ್ಷದಲ್ಲಿ'' ಎಂದು ಲಿಂಕನ್ನನು ಹೇಳಿದನು—'' ದಕ್ಷಿಣದವರು ನಿಮ್ಮೊಳಗೆ ಉತ್ತಮನಾದವ

ನನ್ನೇ ಹೊಡೆದುಹಾಕಿ ಪ್ರತೀಕಾರಹೊಂದುವರು. ಅವರೂ ಕೊಲ್ಲುವುದು, ನೀವೂ ಕೊಲ್ಲುವುದು, ನಡೆದು ಅದಕ್ಕೆ ಕೊನೆಯೇ ಕಾಣದಂತಾಗುತ್ತದೆ. ನನ್ನ ಅನುಮತಿಯನ್ನು ಮೊದಲು ಪಡೆದಹೊರತು ನೀನು ಯಾರನ್ನೂ ಗುಂಡಿನಿಂದ ಹೊಡೆಯಕೂಡದು—ಅದು ನನ್ನ ಕಟ್ಟಪ್ಪಣೆ.'' ಅದಕ್ಕೆ ಮೊದಲು, ''ಸರ್ಕಾರವನ್ನು ಉಳಿಸಲು ಅದೊಂದೇ ಉಪಾಯವೆಂದು ನೀನು ಭಾವಿಸುತ್ತೀ. ಆದರೆ ಸರ್ಕಾರವನ್ನು ಪರರ ಕೈಗೆ ಒಪ್ಪಿಸಿ ಹಾಳುಮಾಡಿಕೊಳ್ಳಲು ಅದಕ್ಕಿಂತ ಮತ್ತೊಂದು ಉಪಾಯವಿಲ್ಲ'' ಎಂದು ಬರೆದಿದ್ದನು. ಆಮೇಲೆ ಪ್ರಕಟನೆಯನ್ನು ತಿದ್ದಿ ತಿದ್ದಿ ಕಾಂಗ್ರೆಸ್ ನಿಬಂಧನೆಯ ಸಮಕ್ಕೆ ತಂದನು. ಜನಗಳಿಗೆ ಉಂಟಾಗಿದ್ದ ಭಯವು ಶಮನವಾಯಿತು. ಕೆಲವು ಕಾಲದೊಳಗೆ ಗಲಭೆಯೆಲ್ಲಾ ಕಳೆದು ಎಂದಿನಂತೆ ಶಾಂತಿಯುಂಟಾಯಿತು. ಫ್ರೇಮಾಂಟನು ಅಲ್ಲಿಯೇ ಉಳಿದನು. ಆದರೆ ಅವ್ಯವಸ್ಥೆಯು ಹೆಚ್ಚಿತು. ದಳಪತಿಯು ಆಡಳಿತದ ವಿಚಾರಗಳಲ್ಲಿ ಮನಸ್ಸಿಡಲಾಗಿ ಸೈನ್ಯವು ದಿಕ್ಕಾಪಾಲಾಯಿತು. ವೆಚ್ಚವು ಮಿತಿಮೀರಿತು. ಅವನ ಪರಿವಾರದೇವತೆಗಳು ಅವನ ಮೂಲಕ ಸರ್ಕಾರದ ಹಣವನ್ನು ತಿಂದು ಕೊಬ್ಬಿದರು. ನಿರ್ವಾಹವಿಲ್ಲದವನಾಗಿ ಪ್ರೆಸಿಡೆಂಟನು ಫ್ರೇಮಾಂಟನನ್ನು ಕೆಲಸದಿಂದ ತೆಗೆದುಹಾಕಿದನು. ಇದರಿಂದ ಅವನನ್ನು ಕಂಡರೆ ಆಗದಿದ್ದವರಿಗೆ ನಿಂದಿಸಲು ಹೊಸದಾಗಿ ಅವಕಾಶವುಂಟಾಯಿತು.

ಲಿಂಕನ್ನನ ವ್ಯವಹಾರದಿಂದ ಡೆಮೊಕ್ರೆಟರೂ ರಿಪಬ್ಲಿಕರ್ರಲ್ಲಿ ಕೂಲಂಕಷರಾದವರೂ ದೂರನಾದರು. ಅವರ ಅಭಿಪ್ರಾಯಗಳು ಅವನ ಅಭಿಪ್ರಾಯಗಳೊಡನೆ ಹೊಂದಲಿಲ್ಲ. ಅವನು ಬಹಳ ಎಚ್ಚರಿಕೆಯಿಂದಿರುತ್ತಿದ್ದನು.

1861 ನೆಯ ವರ್ಷವು ಮುಗಿಯುವುದರೊಳಗೆ ಮತ್ತೊಂದು ಪ್ರಸಂಗ ಪೊದಗಿತು. ಸೆಕ್ರೆಟರಿ ಕೇಮರನ್ನನು ಯುದ್ಧದ ಇಲಾಖೆಯಲ್ಲಿ ತಿಳಿವಳಿಕೆಯಿಲ್ಲದವನೆನ್ನಿಸಿಕೊಂಡನು. ವ್ಯರ್ಥವಾದ ವ್ಯಯವೂ ಲಂಚವೇ ಮೊದಲಾದ ದುರ್ವ್ಯಾಪಾರಗಳೂ ಅವನನ್ನು ದೂರ ತೊಡಗಿದವು. ದೂರು ಹೆಚ್ಚಾಯಿತು. ಸರ್ಕಾರವು ಕಮಿಟಿಯೊಂದನ್ನೇರ್ಪಡಿಸಿ ವಿಚಾರಣೆಯನ್ನು ನಡೆಯಿಸಿತು. ಅವನು ತನ್ನ ಹೊಟ್ಟೆಯನ್ನು ತುಂಬಿಕೊಂಡಿರಲಿಲ್ಲ. ಅಷ್ಟು ವಿವೇಕವುಳ್ಳವನಲ್ಲ. ಸುತ್ತಲೂ ಇದ್ದವರು ತುಂಬಿಕೊಂಡರು. ಆಡಳಿತದಲ್ಲಿ ಎಲ್ಲರಿಗೂ ಬಹಳ ಅಸಮಾಧಾನವುಂಟಾಗಿದ್ದಿತು. ಯುದ್ಧವು ನಡೆಯುತ್ತಿರಲಿಲ್ಲ. ನಡೆದ ಯುದ್ಧದಲ್ಲಿ ಜಯವುಂಟಾಗಲಿಲ್ಲ. ಆ ಇಲಾಖೆಯಲ್ಲಿ ತೃಪ್ತಿಕರವಾದ ಕೆಲಸವು ನಡೆದಿರಲಿಲ್ಲ—ಯಾವ ಕೆಲಸವೂ ನಡೆದೇ ಇರಲಿಲ್ಲ. ನಾವೆಯು ಇಲಾಖೆಯಲ್ಲಿಯೂ ಇದೇ ರೀತಿಯಾದ ದೂರು ಹುಟ್ಟಿದ್ದಿತು. ಆದರೆ ಅಧ್ಯಕ್ಷನಾದ ವೆಲ್ಸನು ಕೇಮರನ್ನನ ಹಾಗಲ್ಲ. ಅವನಲ್ಲಿ ತಿಳಿವಳಿಕೆಯಿಲ್ಲದಿರಲಿಲ್ಲ; ಲಂಚವನ್ನು ಮುಟ್ಟುತ್ತಿರಲಿಲ್ಲ. ಲಿಂಕನ್ನನೂ ಚೇಸನೂ ಇತರ ಸೆನೇಟರೂ ಕೇಮರನ್ನನಲ್ಲಿ ಒಳ್ಳೆಯ ಅಭಿಪ್ರಾಯವನ್ನಿಟ್ಟಿದ್ದರು. ಆದರೂ ಆತನು ಕೆಲಸವನ್ನು ಬಿಟ್ಟು ಹೊರಟುಹೋಗಬೇಕಾಯಿತು. ಸ್ವತಂತ್ರಿಸಿ ಅವನು ಫ್ರೇಮಾಂಟನು ಮಾಡಿದಂತೆ ದಾಸ್ಯದ ವಿಷಯದಲ್ಲಿ ಪ್ರಕಟನೆಗಳನ್ನು ಬರೆದು ಸೈನ್ಯಾಧಿಪತಿಗಳಿಗೆಲ್ಲಾ ಕಳುಹಿಸಿದನು. ಅವು ಫ್ರೇಮಾಂಟನದಕ್ಕೆ

ಕಡಿಮೆಯಾಗಿರಲಿಲ್ಲ. ಅವುಗಳು ಪ್ರಚಾರಕ್ಕೆ ಬರಕೂಡದೆಂದು ಲಿಂಕನ್ನನು ನಿರೋಧಿಸಿದನು. ಕೇಮರನ್ನನಿಗೆ ಬದಲಾಗಿ ಎಡ್ವರ್ಡ್ ಸ್ಟಾಂಟ್ನ ಎಂಬಾತನು ನೇಮಕವಾದನು. ಯುದ್ಧಕ್ಕಾಗಿ ಉತ್ತರವು ಪಡುತ್ತಿರುವ ಶ್ರಮವು ಸಾಲದೆಂದು ಆತನು ಆಕ್ಷೇಪಿಸಿದನು. ಈ ಕಾರಣದಿಂದ ಅವನಿಗೆ ಲಿಂಕನ್ನನಲ್ಲಿಯೂ ತಿರಸ್ಕಾರಭಾವವು ಹುಟ್ಟಿತು.

ಕಾಂಗ್ರೆಸ್ ಸಭೆಯು ಹೊಸಹೊಸದಾಗಿ ಸೇರಿ ಕೆಲಸವನ್ನು ನಿರ್ವಹಿಸುತ್ತಿದ್ದಿತು. ಪ್ರೆಸಿಡೆಂಟನು ತನ್ನ ಸರ್ವಸಾಹಸವನ್ನೂ ಮಾಡುತ್ತಿದ್ದನು. ಸೈನ್ಯವು ರಣಭೇರಿಯನ್ನು ಹೊಡೆಯುತ್ತ ಹೊರಟದ್ದಿತು. ಆದರೆ ಯಾವ ವಿಧದಲ್ಲಿಯೂ ಪ್ರಯೋಜನವನ್ನುಂಟುಮಾಡಿರಲಿಲ್ಲ. ಇದಿಷ್ಟು ಗದ್ದಲದ ನಡುವೆ 1861 ನೆಯ ವರ್ಷವು ಕೊನೆಗೊಂಡಿತು. ಸ್ಥಿತಿಯು ಅನುಕೂಲವಾಗಿರಲಿಲ್ಲ. ಎಲ್ಲೆಲ್ಲಿಯೂ ಮೋಘವಾವರಿಸಿ ಕತ್ತಲೆ ಕವಿದಿದ್ದಿತು.

---

## ೬ ನೆಯ ಅಧ್ಯಾಯ

---

### ವ್ಯೂಹರಚನೆ

ಪ್ರೆಸಿಡೆಂಟನು ಯುದ್ಧದಲ್ಲಿ ಅನುಭವವಿಲ್ಲದ ಮನುಷ್ಯನು ; ಅಥವಾ ಅನುಭವವಿಲ್ಲದ ಜನಾಂಗದಲ್ಲಿ ಒಬ್ಬನು. ಅಮೆರಿಕವು ಹೆಚ್ಚಿನ ಯುದ್ಧಗಳನ್ನು ಮಾಡಿರಲಿಲ್ಲ. ಯುದ್ಧವಿಲ್ಲದೆಯೇ ಅದರ ಚರಿತ್ರೆಯು ಸಾಗುತ್ತಿದ್ದಿತು. ಒಂದು ನೂರು ವರ್ಷಗಳಲ್ಲಿ ಅದು ಎರಡಾವೃತ್ತಿ ಮಾತ್ರ ಆಯುಧವನ್ನು ಹಿಡಿದು ಶತ್ರುವಿಗೆ ದುರಾಗಿ ಹೊರಟದ್ದಿತು. ಮೊದಲನೆಯಾವೃತ್ತಿ ಯುದ್ಧವೊದಗಿದಾಗ ಇಂಗ್ಲೆಂಡಿನಲ್ಲಿ ಅಧಿಕಾರವನ್ನು ನಡೆಯಿಸುತ್ತಿದ್ದ ಪಕ್ಷವು ಅತ್ಯಂತ ದುರ್ಬಲನಾಗಿದ್ದಿತು ; ಐಕಮತ್ಯವಿರಲಿಲ್ಲ. ಎರಡನೆಯ ತಡವೆ, ಇಂಗ್ಲೆಂಡು ನೆಪೋಲಿಯನ್ನನ ಮೇಲೆ ಯುದ್ಧಮಾಡುತ್ತಿದ್ದಿತು. ಆದಕಾರಣ ಎರಡು ತಡವೆಯೂ ಜಯವನ್ನು ಪಡೆಯಲು ಅಮೆರಿಕವು ಹೆಚ್ಚಾಗಿ ಪ್ರಯಾಸಪಡಲಿಲ್ಲ. ಅನುಭವವು ತೀರ ಸಾಲದು.

ಪ್ರೆಸಿಡೆಂಟನಿಗೆ ಅಧಿಕಾರವೂ ಮಂತ್ರಿಗಳ ಸಹಾಯವೂ ಎಷ್ಟಿದ್ದಿತೆಂಬುದನ್ನು ಹಿಂದೆ ಹೇಳಿದೆ. ಯುದ್ಧವನ್ನು ನಿರ್ವಹಿಸುವುದರಲ್ಲಿ ಒಂದು ತೊಂದರೆಯು ಬಂದು ಸುತ್ತಿಕೊಂಡಿದ್ದಿತು.

ನೊವೆಂಬರ್ ತಿಂಗಳಲ್ಲಿ ಜನರಲ್ ಸ್ಕಾಟನು ತೀರ ಮುದುಕನಾದ ಕಾರಣ ಕೆಲಸವನ್ನು ಬಿಟ್ಟು ಹೋಗಲಾಗಿ, ಬುಲ್‌ರ್ಣ ಯುದ್ಧವಾದ ಕ್ಷಣವೇ ರಕ್ಷಣೆಗಾಗಿ ರಾಜಧಾನಿಗೆ ಕರೆಯಿಸಲ್ಪಟ್ಟಿದ್ದ ಮೆಕ್‌ಕ್ಲೆಲ್ಲನ್ನನು ಉತ್ತರದ ದಂಡುಗಳಿಗೆಲ್ಲಾ ಅಧಿಪತಿಯಾದನು. ವಾಷಿಂಗ್ಟನ್ನಿನಲ್ಲಲ್ಲದೆ ಸೈನ್ಯಗಳು ಇನ್ನೆರಡು ಬಳಿಯಲ್ಲಿದ್ದುವು. ಈ ಸೈನ್ಯಗಳೆಲ್ಲವೂ ಸಿದ್ಧವಾಗುತ್ತಿದ್ದುವು. ಪ್ರಕೃತದಲ್ಲಿ ಅವುಗಳನ್ನು ತೆಗೆದುಕೊಂಡು ಹೋಗಿ ಯುದ್ಧಮಾಡುವಹಾಗಿರಲಿಲ್ಲ.

ಯುದ್ಧನಿರ್ವಾಹದಲ್ಲಿ ಮೂರು ಮಾರ್ಗಗಳು ಲಿಂಕನ್ನನಿಗೆ ಕಾಣಿಸಿಕೊಂಡುವು. ದಕ್ಷಿಣವು ಆಸ್ಥೆಯಿಂದಿದ್ದು ಬಹಳ ಕಾಲದವರೆಗೆ ಯುದ್ಧಮಾಡಲು ಸನ್ನದ್ಧವಾಗಿರುವುದನ್ನು ನೋಡಿ ಸ್ಕಾಟನು ಬಲವಾದ ರಕ್ಷಣೋಪಾಯವನ್ನು ಮಾಡಬೇಕೆಂದುಕೊಂಡು, ನಾಲ್ಕು ತಿಂಗಳವರೆಗೆ ಉಮೇದುವಾರರಾದವರನ್ನು ತರಪೇತುಮಾಡಬೇಕೆಂದೂ ಆಕಾಲದಲ್ಲಿ ಅವರನ್ನು ಆರೋಗ್ಯಕರವಾದ ಸ್ಥಳದಲ್ಲಿ ಇರಿಸಬೇಕೆಂದು ಸೂಚಿಸಿದನು. ಆಮೇಲೆ ಆ ಸೈನ್ಯವನ್ನು ಮಿಸಿಸಿಪ್ಪಿ ನದಿಯ ಬಯಲಿನ ಮೂಲಕವಾಗಿ ನ್ಯೂ ಆರ್ಲಿಯನ್ಸಿಗೆ ಕಳುಹಿಸಿ ನದಿಯ ಸುತ್ತಲ ಪ್ರದೇಶವನ್ನೆಲ್ಲಾ ವಶಮಾಡಿಕೊಳ್ಳತಕ್ಕದ್ದು; ವಶಮಾಡಿಕೊಂಡು ದಂಡನ್ನು ಇನ್ನೂ ಮುಂದಕ್ಕೆ ನುಗ್ಗಿಸಿ, ಸಮುದ್ರದ ಕಡೆಯಿಂದ ಅಡ್ಡಗಟ್ಟಿ ಹಡಗುಗಳು '' ಕತ್ತು ಕಿವಿಚು ''ತ್ತಿರುವ ಸಮಯದಲ್ಲಿ, ಭೂಮಿಯ ಕಡೆಯಿಂದ ''ಮೇಲೆ ಹೇರಿ'' ಕೊಂಡು ದಕ್ಷಿಣವನ್ನು ಧ್ವಂಸಮಾಡತಕ್ಕದ್ದು. ಇಷ್ಟನ್ನೂ ಮಾಡುವತನಕ ಉತ್ತರದ ಪ್ರಜೆಗಳು ತಾಳ್ಮೆಯಿಂದಿರರೆಂಬುದು ಅವನಿಗೂ ಗೊತ್ತಿದ್ದಿತು. ಪ್ರಜೆಗಳು ಅದನ್ನು ಅತ್ಯಂತ ನಿಕೃಷ್ಟವಾಗಿ ಕಂಡರು. ಬೇಗ ಬೇಗ ವ್ಯವಹರಿಸಿ ರಿಚ್‌ಮಂಡ್ ನಗರವನ್ನು ವಶಮಾಡಿಕೊಂಡು ದಕ್ಷಿಣದ '' ಉಸಿರು ಕಟ್ಟಿ '' ಹೋಗುವಂತೆ ಮಾಡಬೇಕೆಂದು ಪ್ರಜೆಗಳೂ ಕಾಂಗ್ರೆಸ್‌ನ ಸಭಿಕರೂ ಅಪೇಕ್ಷಿಸಿದರು. ಮೆಕ್‌ಕ್ಲೆಲ್ಲನ್ನನೂ ಕೂಡ ಸೈನ್ಯವನ್ನು ಚೆನ್ನಾಗಿ ತರಪೇತುಮಾಡಿ ಹೆಚ್ಚಾಗಿ ಹಡಗುಗಳನ್ನು ಹೊಂದಿಸಿಕೊಂಡು ಮುಂದಕ್ಕೆ ಹೆಜ್ಜೆಯಿಡುವುದು ಯುಕ್ತವೆಂದು ಹೇಳಿದನು.

ಆದರೆ ಪ್ರಜೆಗಳೂ ಸ್ಕಾಟನೂ ಮೆಕ್‌ಕ್ಲೆಲ್ಲನ್ನನೂ ಒಂದೊಂದು ಇಷ್ಟವನ್ನು ತೋರಿಸುತ್ತಿರಲಾಗಿ ಲಿಂಕನ್ನನು ಏನು ಯೋಚನೆಮಾಡಿದನು ?

ಬುಲ್‌ರ್ಣ ಯುದ್ಧವಾಗಿ ಎರಡು ದಿವಸಗಳಾದವು. ಲಿಂಕನ್ನನು ಒಂದು ಪ್ರಬಂಧವನ್ನು ಬರೆದು, ಅದರಲ್ಲಿ, ಮುಂದೆ ಮೂರುಭಾಗದ ಸೈನ್ಯಗಳಿಗೂ ಏನೇನು ಕೆಲಸವಿರಬೇಕೆಂಬುದನ್ನು ವಿವರಿಸಿದನು. ಸೈನ್ಯದ ಒಂದು ಭಾಗವು ರಿಚ್‌ಮಂಡಿನ ಮೇಲೆ ನುಗ್ಗಲು ಹೊರಡಬೇಕು. ಮತ್ತೊಂದು ಒಹಿಯೋವಿನಲ್ಲಿರುವ ಸಿಸಿನ್ನಾತಿಯಿಂದ ಹೊರಟು ಕೆಂಟಕ್ಕಿಯ ಮೂಲಕವಾಗಿ ಸಾಗಿ ಪೂರ್ವದ ಟೆನ್ನೆಸ್ಸೀಯಲ್ಲಿರುವ ನಾಕ್ಸ್‌ವಿಲ್ (Knoxville)ನ ಮೇಲೆ ನುಗ್ಗಬೇಕು. ಮೂರನೆಯದು ಮಿಸಿಸಿಪ್ಪಿಯ ದಡದಲ್ಲಿರುವ ಕೈರೋವನ್ನು ನೆಲೆಯಾಗಿಟ್ಟುಕೊಂಡು, ಅಲ್ಲಿಂದ ಹೊರಟು 120 ಮೈಲಿಗಳಷ್ಟು ದಕ್ಷಿಣದಲ್ಲಿರುವ ಮೆಂಫಿಸ್‌ನ ಮೇಲೆ ನುಗ್ಗಬೇಕು. ಆದರೆ ಮೊದಲಭಾಗವು ಬಹುದೂರ ರಿಚ್‌ಮಂಡಿನ ಕಡೆಗೆ

ನುಗ್ಗಿ ರಾಜಧಾನಿಗೆ ಅಪಾಯವುಂಟಾಗಲು ಆಸ್ಪದವನ್ನು ಕೊಡಕೂಡದು. ಮೆಂಫಿಸನ್ನು ಕೈಗೆ ಹಾಕಿಕೊಳ್ಳುವುದರಿಂದ ದಕ್ಷಿಣದ ರೈಲುರಸ್ತೆಯಲ್ಲಿ ಮುಖ್ಯಭಾಗವು ಸ್ವಾಧೀನವಾಗುತ್ತಿದ್ದಿತು. ನಾಕ್ಸ್‌ವಿಲ್ಲನ್ನು ವಶಮಾಡಿಕೊಳ್ಳುವುದರಿಂದ ವರ್ಜಿನಿಯಕ್ಕೂ ಪಶ್ಚಿಮದ ಸಂಸ್ಥಾನಗಳಿಗೂ ರೈಲುಮೂಲಕ ಇದ್ದ ಸಂಸರ್ಗವು ತಪ್ಪಿಹೋಗುತ್ತಿದ್ದಿತು. ಸೈನ್ಯದ ಒಂದು ಭಾಗವು ಪೂರ್ವದ ಟೆನ್ನೆಸ್ಸೀಯೊಳಕ್ಕೆ ನುಗ್ಗಬೇಕೆಂದು ಲಿಂಕನ್ನನು ಹೇಳಲು ಕಾರಣವಿದ್ದಿತು. ಸಂಯೋಗದಲ್ಲಿ ಪಕ್ಷಪಾತವುಳ್ಳ ಅಲ್ಲಿನ ಜನಗಳು ದಕ್ಷಿಣದ ದಂಡಿನಿಂದ ಪೀಡಿತರಾಗಿ ನಿರ್ಬಂಧಕ್ಕೊಳಗಾಗಿದ್ದರು. ಅವರನ್ನು ಬಿಡುಗಡೆಮಾಡಿ ಅಲ್ಲಿನ ಸ್ಥಳಗಳನ್ನು ಜಯಿಸುವುದರಿಂದ ಉತ್ತರಕ್ಕೆ ಒಂದು ನೆಲೆಯು ದೊರೆತಂತಾಗುತ್ತಿದ್ದಿತು. ಲಿಂಕನ್ನನ ಈ ಸೂಚನೆಯನ್ನು ಜನರಲ್ ಬ್ಯುಯೆಲ್‌ನು ಒಪ್ಪಲಿಲ್ಲ. ದೂರವು ಬಹಳವಾದುದರಿಂದಲೂ ಆಹಾರಪದಾರ್ಥಗಳೂ ಸೈನ್ಯಗಳೂ ಒದಗುವುದು ಕಷ್ಟವಾದುದರಿಂದಲೂ ಆ ಯೋಚನೆಯು ಸಾಧ್ಯವಲ್ಲವೆಂದು ತಿರಸ್ಕರಿಸಿಬಿಟ್ಟನು. ಆ ನ್ಯೂನತೆಯನ್ನು ಸರಿಪಡಿಸಲು ರೈಲುರಸ್ತೆಯನ್ನು ಹಾಕಿಸಿಕೊಡುವುದಾಗಿ ಪ್ರೆಸಿಡೆಂಟನು ಹೇಳಿದನು. ಆದರೆ ಮಂತ್ರಿಗಳೂ ಸಭಿಕರೂ ಅದನ್ನು ಅನುಮೋದಿಸಲಿಲ್ಲ. ಆ ಏರ್ಪಾಡಿನಿಂದ ಖರ್ಚು ಬಹಳವಾಗುವುದೆಂದೂ ಒಹಿಯೋವಿನ ಮತ್ತು ಪಶ್ಚಿಮದ ಸೈನ್ಯಗಳು ಒಂದಕ್ಕೊಂದು ದೂರನಾಗಿ, ಕೆಂಟಕ್ಕಿಯ ನೈಋತ್ಯದಲ್ಲಿ ಕಾದಿದ್ದ ಜಾನ್ಸ್ಟನ್ನನಿಗೆ ಅವೆರಡನ್ನೂ ಒಂದೊಂದಾಗಿ '' ಬಡಿದುಹಾಕುವುದು '' ಸುಲಭನಾಗುವುದರಿಂದ ಅಪಾಯಕರವೆಂದೂ ಅವರು ಆಕ್ಷೇಪಿಸಿದರು. ಆದರೆ ಇನ್ನು ಸ್ವಲ್ಪ ಸಾವಕಾಶಮಾಡಿ ಹೊರಡುವದಾಗಿದ್ದರೆ ಪ್ರೆಸಿಡೆಂಟನ ಉದ್ದೇಶವು ಕೈಗೂಡುತ್ತಿದ್ದಿತು. ಮೆಕ್‌ಕ್ಲೆಲ್ಲನ್ನನು ಲಿಂಕನ್ನನ ವ್ಯೂಹರಚನೆಯನ್ನು ಶ್ಲಾಘಿಸಿ, ಅದು ಎಲ್ಲಾ ಪ್ರಕಾರದಲ್ಲಿಯೂ ಅನುಷ್ಠೇಯವೆಂದು ಅಭಿಪ್ರಾಯಪಟ್ಟನು. ಬ್ಯುಯೆಲ್‌ನು ಸೈನ್ಯವನ್ನು ತೆಗೆದುಕೊಂಡು ಹೊರಡಬೇಕೆಂತಲೇ ಅವನು ಒತ್ತಾಯಮಾಡಿದನು. ಆದರೆ ಕೇವಲ ಸ್ವಾರ್ಥದೃಷ್ಟಿಯಿಂದ. ಬ್ಯುಯೆಲ್‌ನು ಹೊರಟಲ್ಲಿ ಅವನಿಗೆ ಸಹಾಯವು ದೊರೆಯುತ್ತಿದ್ದಿತು. ಬ್ಯುಯೆಲ್‌ನು ಮಾತ್ರ, ತಾನು ಹೊರಟಪಕ್ಷದಲ್ಲಿ ಪಶ್ಚಿಮದ ಟೆನ್ನೆಸ್ಸೀಗೆ ಹೋಗಬೇಕೆಂದು ಅಭಿಪ್ರಾಯಪಟ್ಟನು. ಹಾಗೆ ಮಾಡಿದಲ್ಲಿ ರೈಲುಹಾದಿಯು ಮಗ್ಗುಲಲ್ಲಿಯೇ ಇರುತ್ತಿದ್ದಿತು. ಜಾನ್ಸ್ಟನ್ನನ ದಂಡು ಪಕ್ಕಗಳಲ್ಲಾಗಲೀ ಹಿಂದಾಗಲೀ ಉಳಿಯದೆ ಎದುರಿಗೆ ಸಿಕ್ಕುತ್ತಿದ್ದಿತು. ಈ ಸಮಯದಲ್ಲಿ ಪಶ್ಚಿಮದ ದಂಡು ಟೆನ್ನೆಸ್ಸೀ ಮತ್ತು ಕಂಬರ್ಲೆಂಡ್ ನದಿಗಳ ಮಾರ್ಗವಾಗಿ ಮುಂದಕ್ಕೆ ಬರಬೇಕಾಗಿದ್ದಿತು. ಹೀಗೆ ಮಾಡಿದರೆ ಪೂರ್ವದ ಟೆನ್ನೆಸ್ಸೀಯು ಹಸ್ತಗತವಾಗುತ್ತಿದ್ದಿತು. ಪಶ್ಚಿಮದ ದಂಡೂ ತನ್ನದೂ ಸೇರಿ ಆಲ್ಬರ್ಟ್ ಜಾನ್ಸ್ಟನ್ನನನ್ನು ಸೋಲಿಸಬಹುದಾಗಿದ್ದಿತು. ಆ ದಂಡಿನ ಅಧಿಪತಿಯಾದ ಹಾಲೆಕ್‌ನೂ ಅದನ್ನು ಅನುಮೋದಿಸಿದನು. ಆದರೆ ಬ್ಯುಯೆಲ್‌ನೊಡನೆ ಸೇರಿ ಕೈಮಾಡಲು ಒಪ್ಪಲಿಲ್ಲ. ಫ್ರೇಮಾಂಟನ ಆಧಿಪತ್ಯದಲ್ಲಿ ಮಿಸ್ಸೌರಿಯ ದಂಡು ಅವ್ಯವಸ್ಥಿತವಾಗಿದ್ದಿತು. ಅದನ್ನು ತಿದ್ದಿ ಸರಿಪಡಿಸಿದಹೊರತು ತಾನು ಎಲ್ಲಿಗೂ ಹೊರಡುವುದಿಲ್ಲವೆಂದು ಹಾಲೆಕ್‌ನು ಹೇಳಿದನು.

ಈ ಮೂರು ಮಂದಿ ಸೈನ್ಯಾಧಿಪತಿಗಳೂ ತಾವು ತಾವು ಸೂಚಿಸಿದ ಹಾಗೆ ಮಾಡಬೇಕೆಂದು ಹಟಹಿಡಿದರು. ಒಬ್ಬ ದಳವಾಯಿಯು ಮತ್ತೊಬ್ಬನು ಹೇಳು ವುದು ಸೂಕ್ತವೇ ಎಂಬುದನ್ನು ಯೋಚಿಸಲಿಲ್ಲ. ಮೂವರೂ ತಮ್ಮ ಸ್ಥಳದಿಂದ ಹೆಜ್ಜೆಯಿಡಲಿಲ್ಲ. ಸೈನ್ಯವಿನ್ನೂ ಸಿದ್ಧವಾಗಿಲ್ಲವೆಂದು ಪ್ರತಿಯೊಬ್ಬನೂ ಹೇಳಿದನು. ಆದರೆ ಬಹುಕಾಲದವರೆಗೆ ಹಾಗೆ ಹೇಳುವುದಕ್ಕಾಗಲಿಲ್ಲ. ಮುಂದೆ ದಂಡಿ ನೊಡನೆ ಹೊರಟರು. ಅವರ ಸಾಮರ್ಥ್ಯವು ಪತ್ತೆಯಾಯಿತು. ಮೂವರೂ ಜಡಪ್ರಕೃತಿಯವರು ; ಮೂವರೂ ಸಾಹಸಿಗಳಲ್ಲ—ಧೈರ್ಯವೇ ಸಾಲದು. 1861 ನೆಯ ಸಂವತ್ಸರವು ಕೊನೆಯನ್ನು ತಲಪುತ್ತ ಬಂದಹಾಗೆ ಸೈನ್ಯವು ಏನಾದ ರೊಂದು ಪ್ರಯತ್ನವನ್ನು ಮಾಡಬೇಕೆಂದು ಪ್ರಜೆಗಳ ಮನಸ್ಸಿನಲ್ಲಿ ಆಸೆಯು ಬಲ ವತ್ತರವಾಯಿತು. ಪ್ರಯತ್ನವು ಅತ್ಯುತ್ತಮವಾದ ಮಾರ್ಗದಲ್ಲಿಯೇ ನಡೆಯದಿ ದ್ದರೂ ಚಿಂತೆಯಿಲ್ಲ. ಅವರ ಆತುರವು ಬುಲ್‌ರನ್‌ಗೆ ಮೊದಲಿದ್ದ ಪ್ರಕಾರಕ್ಕೇ ಬಂದಿತು. ಲಿಂಕನ್ನನಿಗೆ ಬಲು ಬೇಸರವಾಯಿತು. ಅವನು, "ಏನಾದರೊಂದನ್ನು ಬೇಗಲೇ ಮಾಡದಿದ್ದರೆ ನಮ್ಮ ಪ್ರಯತ್ನದ ಬುಡವೇ ಸಂಪೂರ್ಣವಾಗಿ ಕಳಚಿ ಕೊಳ್ಳುವುದು" ಎಂದನು. ಇನ್ನೂ ತಡಮಾಡುತ್ತಿರಲು ಸರ್ಕಾರಕ್ಕೆ ಕಾರಣವು ಯಾವುದೂ ಇರಲಿಲ್ಲ. ಮೆಕ್‌ಕ್ಲೆಲ್ಲನ್ನನು ಪದಚಲನಮಾಡುವುದಾಗಿ ಬಹಳಕಾಲ ದಿಂದಲೂ ಹೇಳುತ್ತಿದ್ದನು. ಬ್ಯುಯೆಲ್‌ನೂ ಹಾಲೆಕ್‌ನೂ ಪರಸ್ಪರವಾಗಿ ಒಡಂ ಬಡುತ್ತಿರಲಿಲ್ಲ.

ಮುಂದೆಮುಂದೆ ಹೀಗಾಗಲಿಲ್ಲ. ಲಿಂಕನ್ನನು ಯುದ್ಧದ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದಿದ್ದರೂ ಕೂಡ ಅದರ ಸಮಸ್ತನಿರ್ವಾಹವನ್ನೂ ಮುಖ್ಯ ಸೇನಾಪತಿಗೆ ವಹಿಸಿಬಿಟ್ಟನು. ಸೇನಾಪತಿಯು ಬುದ್ಧಿವಂತನಾಗಿ ಸಮರ್ಥನಾದುದರಿಂದಲೇ ಅವನು ಯುದ್ಧದ ಗೋಜಿಗೆ ಹೋಗಲಿಲ್ಲ. ಆತನು ಮಾಡಿದುದು ಅವನಿಗೆ ಯುಕ್ತ ವಾಗುತ್ತಿದ್ದಿತು. ಆದರೆ ಪ್ರಕೃತದಲ್ಲಿ ಅದನ್ನು ತನ್ನ ಅಧ್ಯಕ್ಷತೆಯಲ್ಲಿಟ್ಟುಕೊಂಡು ಸೈನ್ಯಾಧಿಪತಿಗಳೂ ಸೈನ್ಯಗಳೂ ಮಾಡಬೇಕಾದುದನ್ನು ತಾನೇ ಗೊತ್ತುಮಾಡು ತ್ತಿದ್ದನು. ಅನುಭವವಿಲ್ಲದಿದ್ದರೂ ಅವನಿಗೆ ತನ್ನ ವಿವೇಚನೆಯು ಒತ್ತಾಸೆಗೆ ಬರು ತ್ತಿದ್ದಿತು. ಅಭಿಪ್ರಾಯಗಳೂ ಕಾರ್ಯನಿರ್ವಾಹವೂ ಪ್ರಾಯಶಃ ತಪ್ಪಾಗುತ್ತಿರಲಿಲ್ಲ. ಅದನ್ನು ನೋಡಿಯೇ ಕೆಲವರು ಅವನನ್ನು "The ablest strategist of the war" ಎಂದು ಭಾವಿಸಿದರು. ಆದರೆ ಗ್ರಾಂಟನೂ ಷೆರ್ಮನ್ನನೂ ಹೀಗೆ ಹೇಳಲಿಲ್ಲ. ಯುದ್ಧನಿರ್ವಾಹದಲ್ಲಿ ಅವನ ಬುದ್ಧಿಯ ಬಲವೇ ಅತ್ಯಂತ ಮುಖ್ಯವಾ ಗಿದ್ದಿತೆಂದರು. ಅವನು ವ್ಯೂಹರಚನೆಯನ್ನೂ ಸಮರನೀತಿಯನ್ನೂ ಬಹಳಮಟ್ಟಿಗೆ ತಿಳಿದವನಲ್ಲ. ಉತ್ತರದ ಸೈನ್ಯವು ಒಟ್ಟಾಗಿರದೆ ಅಲ್ಲಲ್ಲಿ ಚದುರಿದ್ದುದೇ ಅದಕ್ಕೆ ನಿದರ್ಶನವಾಗಿರುವುದು. ಆದರೆ ಲಿಂಕನ್ನನಲ್ಲಿ ಒಂದು ಗುಣವಿದ್ದಿತು. ತನಗೆ ತಿಳಿ ವಳಿಕೆಯಿಲ್ಲದಿದ್ದರೂ ತಿಳಿಯುವುವೆಂದುಕೊಂಡು ಬಂದು ಕೆಲಸವನ್ನು ಹಾಳು ಮಾಡುತ್ತಿರಲಿಲ್ಲ. ತಿಳಿಯದಿದ್ದಪಕ್ಷದಲ್ಲಿ ಕೆಲಸವನ್ನು ತನ್ನ ದಳವಾಯಿಗಳಿಗೇ ವಹಿಸಿ ಅವರ ನಿಶ್ಚಯವನ್ನು ಒಪ್ಪಿಕೊಳ್ಳುತ್ತಿದ್ದನು. ಚರಮೋದ್ದೇಶಕ್ಕೆ ಭಂಗಬರದಿದ್ದರೆ

ಸಾಕು. ಪ್ರೆಸಿಡೆಂಟನಾದ ತಾನು ಮುಖ್ಯಸೇನಾಪತಿಯೆನ್ನಿಸಿಕೊಂಡರೂ ಇತರ ದಳಪತಿಗಳಮೇಲೆ ದರ್ಪವನ್ನು ಮಾಡುತ್ತಿರಲಿಲ್ಲ. ಆದರೆ ತಾನು ಅನುಸರಿಸುವ ಮಾರ್ಗವು ಸಾಧಕವಾಗಿ ಕಂಡುಬಂದ ಕೆಲವು ಸಮಯಗಳಲ್ಲಿ ಅವನು ತನ್ನ ದಳ ಪತಿಗಳ ಮನೋಗತವೇನೆಂಬುದನ್ನು ವಿಚಾರಿಸುತ್ತಿರಲಿಲ್ಲವಾದರೂ, ಅಂತಹ ತಾಳ್ಮೆಯೂ ಸದ್ಭಾವವೂ ಆಶ್ಚರ್ಯವನ್ನುಂಟುಮಾಡುವುವು. ಬ್ಯುಯೆಲ್‌ನನ್ನಾಗಲೀ ಹಾಲೆಕ್‌ನನ್ನಾಗಲೀ ಹೀಗೆಯೇ ಮಾಡಬೇಕೆಂದು ಅವನು ಬಲಾತ್ಕರಿಸಲಿಲ್ಲ. ತನ್ನ ಅಭಿಪ್ರಾಯವನ್ನು ಸೂಚಿಸಿ ಅದರ ಗುಣಾವಗುಣಗಳನ್ನು ಆಲೋಚಿಸಿ ಅವರು ಕೆಲಸಮಾಡುವಂತೆ ಎಸಗುತ್ತಿದ್ದನು. ಅವನ ಅಭಿಪ್ರಾಯವನ್ನು ಸರಿಯಲ್ಲವೆಂದು ತಿರಸ್ಕರಿಸಲಾಗುತ್ತಿರಲಿಲ್ಲ. ಹೀಗೆ ಒಬ್ಬರಿಗೊಬ್ಬರಿಗೆ ಒಂದೊಂದುವೇಳೆ ಮಾತು ಸರಿಬೀಳದಿದ್ದರೂ ಕೂಡ ಕೊನೆಯಲ್ಲಿ ಲಿಂಕನ್ನನ ಮಾತೇ ಉಳಿದು ಕೆಲಸವು ಸಾಗುತ್ತಿದ್ದಿತು. ಅಂಥದರಲ್ಲಿಯೂ ಸೈನ್ಯಾಧಿಪತಿಯೊಬ್ಬನು ಲಿಂಕನ್ನನ ಅಭಿಪ್ರಾಯಗಳನ್ನು ಒಪ್ಪದಿದ್ದ ಪಕ್ಷದಲ್ಲಿ ಇನ್ನೂ ಉತ್ತಮವಾದ ಮಾರ್ಗವನ್ನನು ಸರಿಸಬಹುದೆಂಬುದನ್ನು ತೋರಿಸಿ ವ್ಯೂಹವನ್ನೇರ್ಪಡಿಸಿಕೊಡಬೇಕೆಂದು ಲಿಂಕನ್ನನು ಪ್ರಾರ್ಥಿಸುತ್ತಿದ್ದನು.

---

## ೭ನೆಯ ಅಧ್ಯಾಯ

---

### ಯುದ್ಧ—1862ನೆಯ ಮೇ ತಿಂಗಳವರೆಗೆ—(ಪಶ್ಚಿಮದಲ್ಲಿ)

ಹೊರಡುವೆನು ಹೊರಡುವೆನೆನ್ನುತ್ತಲೇ ಮೆಕ್‌ಕ್ಲೆಲ್ಲನ್ನನು ಕಾಲವನ್ನು ತಳ್ಳಿದನು. ಆ ತಾಮಸವನ್ನು ನೋಡಿ ಉತ್ತರದವರಿಗೆ ಕೋಪವೇಳುವಂತಾಯಿತು. ಯುದ್ಧಮಾಡಬೇಕೆಂದು ಆತುರರಾಗಿರುವವರಿಗೆ ತಾಮಸದಷ್ಟು ಅಸಹ್ಯವಾದುದು ಮತ್ತೆ ಯಾವುದೂ ಇಲ್ಲ. ಕೊನೆಗೆ 1862ನೆಯ ವರ್ಷದ ಮಾರ್ಚಿಯಲ್ಲಿ ಅವನು ಮುಂದಡಿಯಿಟ್ಟನು. ಉತ್ತರಕ್ಕೆ ಸಾಲುಸಾಲಾಗಿ ನಷ್ಟವೂ ಲಿಂಕನ್ನನಿಗೆ ಮಹತ್ತಾದ ವ್ಯಾಕುಲವೂ ಪ್ರಾರಂಭವಾದುವು. ಯುದ್ಧದೊಳಗೆ ಪಶ್ಚಿಮಭಾಗದಲ್ಲಿ ಸಂಗತಿಗಳು ಬೇಗ ಆರಂಭಿಸಿ ಬೇಗ ಬೇಗ ಒಂದನ್ನೊಂದು ಅನುಸರಿಸಿದುವು. ಬ್ಯುಯೆಲ್‌ನು ತಾನು ಸೂಚಿಸಿದುದನ್ನು ಮಾಡಲು ಅಪೇಕ್ಷಿಸಿದನು. ಆದರೆ ಹಾಲೆಕ್‌ನು ಅವನೊಡನೆ ಸೇರಿ ಪ್ರಯತ್ನಿಸಲೊಪ್ಪಲಿಲ್ಲ. ಇನ್ನೇನೂ ಉಪಾಯ

ವನ್ನು ಕಾಣದೆ ಬ್ಯುಯೆಲ್‌ನು ಆ ವರ್ಷದ ಜನವರಿ[1]ಯಲ್ಲಿ ಹೊರಟನು. ಕಂಬರ್ಲೆಂಡ್ ಬಯಲಿನ ಮೂಲಕ ಕೆಂಟಕ್ಕಿಯ ಪೂರ್ವಭಾಗವನ್ನು ಹೊಕ್ಕಿದ್ದ ಸಣ್ಣದೊಂದು ಶತ್ರುಸೈನ್ಯವು ಮುಂದುವರಿಯುತ್ತಿದ್ದಿತು. ಅದನ್ನು ಎದುರಿಸಿ ಯುದ್ಧ ಮಾಡುವುದಕ್ಕೋಸ್ಕರ ಅವನು ಕೆಲವು ಸೈನ್ಯವನ್ನು ಕಳುಹಿಸಿದನು. ಶತ್ರುಸೈನ್ಯವು ಪೂರಾ ಸೋತುಹೋಯಿತು. ಆ ಜಯವು ಉತ್ತರದ ಸಂತೋಷವನ್ನು ಉಕ್ಕಿಸಿತು. ಬ್ಯುಯೆಲ್‌ನು ಮುಂದೆ ನುಗ್ಗಿದನು. ಅವನು ಹಾಲೆಕ್‌ನಿಂದ ಸಹಾಯವು ಬರುವುದೆಂದು ಲೆಕ್ಕಹಾಕಿಕೊಳ್ಳದೆ ದಂಡನ್ನು ನಡೆಯಿಸಿಕೊಂಡು ಬರುತ್ತಿದ್ದನು. ಆದರೆ ಅಷ್ಟರೊಳಗೆ ನಿಲ್ಲಬೇಕಾಯಿತು. ಹಾಲೆಕ್‌ನು ತನ್ನ ಆಲೋಚನೆಗನುಸಾರವಾಗಿ ಯಾರಿಗೂ ತಿಳಿಸದೆಯೇ ದಂಡನ್ನು ತೆಗೆದುಕೊಂಡು ಹೊರಟಿದ್ದನು. ಅವನಿಗೆ ಬ್ಯುಯೆಲ್‌ನ ಸಹಾಯವು ಅಗತ್ಯವಾಯಿತು. ಬ್ಯುಯೆಲ್‌ನು ಮುಂದಕ್ಕೆ ಹೋಗಲಾಗಲಿಲ್ಲ.

ಟೆನ್ನೆಸ್ಸೀ ಮತ್ತು ಕಂಬರ್ಲೆಂಡ್ ನದಿಗಳಲ್ಲಿ ಹಡಗುಗಳು ಸಂಚಾರಮಾಡಬಹುದಾಗಿದ್ದಿತು. ಆ ಎರಡು ನದಿಗಳೂ ಸ್ವಲ್ಪ ಪಶ್ಚಿಮದಲ್ಲಿ ಓಹಿಯೋವನ್ನು ಸೇರುವುವು. ಸಂಗಮಸ್ಥಾನಕ್ಕೂ ಓಹಿಯೋನದಿಯು ಮಿಸಿಸಿಪ್ಪಿಯನ್ನು ಸೇರುವ ಸ್ಥಳಕ್ಕೂ ಹೆಚ್ಚಿನ ದೂರವಿರಲಿಲ್ಲ. ಟೆನ್ನೆಸ್ಸೀ ನದಿಯ ದಡದಲ್ಲಿ ಫೋರ್ಟ್ ಹೆನ್ರಿ (Fort Henry) ಎಂಬ ದುರ್ಗವಿರುವುದು. ಅದು ನದಿಯ ನಾವೆಯನ್ನು ಸಂರಕ್ಷಿಸುತ್ತ ಪಹರೆಯಿರುವುದು. ಅದರಂತೆಯೇ ಕಂಬರ್ಲೆಂಡ್‌ನದಿಯ ದಡದಲ್ಲಿ ಮತ್ತೊಂದು ದುರ್ಗವಿರುವುದು. ಇವೆರಡೂ ಒಂದಕ್ಕೊಂದು ಹತ್ತಿರದಲ್ಲಿಯೇ ಇದ್ದುವು. ಹಾಲೆಕ್‌ನ ಕೈಕೆಳಗೆ ಸಣ್ಣದೊಂದು ಹುದ್ದೆಯಲ್ಲಿದ್ದ ಯೂಲಿಸಿಸ್ ಗ್ರಾಂಟ್ ಎಂಬಾತನು (ಈತನ ವಿಚಾರವು ಮುಂದೆ ಹೆಚ್ಚಾಗಿ ತಿಳಿದುಬರುವುದು) ಆವೆರಡು ದುರ್ಗಗಳನ್ನೂ ವಶಪಡಿಸಿಕೊಳ್ಳಲು ತನ್ನ ಅಧಿನಾಯಕನ ಅನುಮತಿಯನ್ನು ಪಡೆದು ಹೊರಟನು. ಅವನ ನಿರ್ವಾಹದ ಯುಕ್ತಿಯಿಂದಲೂ ನದಿಯಲ್ಲಿ ತೇಲಿಬರುತ್ತಿದ್ದ ನಾವೆಯ ಸಹಾಯದಿಂದಲೂ ದುರ್ಗಗಳು ಕೈಸೇರಿದುವು. ಫೋರ್ಟ್ ಹೆನ್ರಿಯು ವಶವಾದ ಹತ್ತು ದಿನಗಳ ಮೇಲೆ ಮತ್ತೊಂದೂ ವಶವಾಗಿ ಅಲ್ಲಿ 10,000 ಮಂದಿ ಕೈಸೆರೆ ಸಿಕ್ಕಿದರು. ಸಣ್ಣದೊಂದು ಹೊಡೆದಾಟವು ನಡೆಯಿತು. ಆ ಸಮಯದಲ್ಲಿ ಗ್ರಾಂಟನು ಸ್ಥೈರ್ಯವನ್ನೂ ಧೈರ್ಯವನ್ನೂ ತೋರಿಸಿದನು. ಹಾಲೆಕ್‌ನ ಸಹಾಯವು ಅವನಿಗೆ ಯುದ್ಧದಲ್ಲಿ ಅತ್ಯಲ್ಪವಾಗಿದ್ದಿತು. ಬ್ಯುಯೆಲ್‌ನು ಒತ್ತಾಸೆ ಮಾಡಲೇ ಇಲ್ಲ. ಗುರುತುಕಾಣದ ಪಡೆಯೊಡನೆ ತನ್ನ ದಂಡು ಹೇಗೆ ಸೇರಲಾದೀತೆಂದನು. ಈ ಸ್ಥಿತಿಯನ್ನು ನೋಡಿ ಹಾಲೆಕ್‌ನು, ಇನ್ನು ಹೀಗೆ ಅನನ್ವಯವಾಗಿ ವ್ಯವಹರಿಸುವುದು ಸರಿಯಲ್ಲವೆಂದು ಭಾವಿಸಿ, ಪಶ್ಚಿಮದ ಸೈನ್ಯಗಳೆರಡರಮೇಲೂ ತನಗೆ ಆಧಿಪತ್ಯವನ್ನು ಕೊಡಬೇಕೆಂದು ಲಿಂಕನ್ನ

---

[1] ಈ ಶಬ್ದಕ್ಕೆ ಇಂಗ್ಲಿಷ್‌ನಲ್ಲಿ ಮತ್ತೊಂದು ಉಚ್ಚಾರವಿದ್ದರೂ ಅದನ್ನು ನಾವು ನಿತ್ಯವೂ ಉಪಯೋಗಿಸುವ ರೂಪದಲ್ಲಿ ಬರೆದಿದ್ದೇನೆ.

ನನ್ನು ಪ್ರಾರ್ಥಿಸಿದನು. ಲಿಂಕನ್ನನು ಅದನ್ನು ಸಲ್ಲಿಸಿದನು. ಯುದ್ಧದ ಸ್ಥಿತಿ ಯನ್ನು ನೋಡಲಾಗಿ ಮೂರುಮಂದಿ ಸೈನ್ಯಾಧಿಪತಿಗಳು ಬೇರೆ ಬೇರೆ ಪ್ರದೇಶ ಗಳಲ್ಲಿ ಕೆಲಸಮಾಡುವುದಕ್ಕಿಂತಲೂ ಆದಷ್ಟುಮಟ್ಟಿಗೆ ಸೈನ್ಯವನ್ನು ಒಟ್ಟುಗೂಡಿಸಿ ವ್ಯವಹರಿಸುವುದು ವಿಹಿತವೆನ್ನಿಸಿತು. ಶತ್ರುವಿನ ದುರ್ಗಗಳನ್ನು ಗೆದ್ದವನು ಹಾಲೆಕ್ ನೆಂತಲೇ ರಾಜಧಾನಿಯಲ್ಲಿ ಸುದ್ದಿಯು ಹರಡಿದ್ದಿತು. ಆದಕಾರಣ ನಿರ್ವಾಹ ಶಾಲಿಯೆಂದು ಹಾಲೆಕ್‌ನಿಗೆ ಖ್ಯಾತಿ ಬಂದಿತು. ಗ್ರಾಂಟನು ಎರಡನೆಯ ದುರ್ಗದ ಬಳಿಯಲ್ಲಿಯೇ ಉಳಿದನು. ಅದರಲ್ಲಿ ಸ್ವಲ್ಪ ಅಪಾಯವಿದ್ದಿತು. ಅನತಿದೂರದಲ್ಲಿ ಆಲ್ಬರ್ಟ್ ಜಾನ್ಸ್ಟನ್ನನು ದಂಡಿನೊಡನೆ ಕಾದಿದ್ದನು. ಇತ್ತಲಾಗಿ ಹಾಲೆಕ್‌ನು ಬೋರ್ಗಾರ್ಡನು ಬಂದು ಮೇಲೆ ಬೀಳುವನೆಂದು ಹೆದರಿ, ಜಾನ್ಸ್ಟನ್ನನನ್ನು ಎದುರಿಸಲು ಗ್ರಾಂಟನನ್ನು ಕಳುಹಿಸದೆ ಉಪೇಕ್ಷಿಸಿಬಿಟ್ಟನು. ಜಾನ್ಸ್ಟನ್ನನು ಕಂಬರ್ಲೆಂಡ್ ಬಯಲಿನಲ್ಲಿ ಕೊಂಚಕೊಂಚವಾಗಿ ಜರುಗುತ್ತಿದ್ದನು. ಅಂತಹ ಸಮಯವು ಮತ್ತೊಂದು ಸಿಕ್ಕುತ್ತಿರಲಿಲ್ಲ. ಅವನು ನಾಷ್‌ವಿಲ್ ಎಂಬ ಮುಖ್ಯ ವಾದ ಸ್ಥಳವನ್ನು ಆಕ್ರಮಿಸದೆ ಮುಂದೆ ಹೋದುದನ್ನು ಅರಿತು ಬ್ಯುಯೆಲ್‌ನು ಆ ಕೂಡಲೆ ಹೋಗಿ ಅದನ್ನು ಆಕ್ರಮಿಸಿ ವಶಪಡಿಸಿಕೊಂಡನು. ಬೋರ್ಗಾರ್ಡನು ತಾನಿದ್ದ ಸ್ಥಳವನ್ನು ಬಿಟ್ಟು ಹೆಚ್ಚು ಭದ್ರವಾದುದೆಂದು ತೋರಿದ ಮತ್ತೊಂದು ಬಳಿಗೆ ಹೋದನು. ಅವನು ಮೊದಲಿದ್ದ ಕೊಲಂಬಸ್ ದುರ್ಗವು ಬಹು ದೃಢ ವಾದುದು. ಅದು ಉತ್ತರದ ಕೈಸೇರಲಾಗಿ, ಜೊತೆಗೆ ಮಿಸಿಸಿಪ್ಪಿ ನದಿಯ ದಡದ ಲ್ಲಿದ್ದ ಇತರ ಪ್ರದೇಶಗಳೂ ಹಸ್ತಗತವಾಗಿ, ನದಿಯಲ್ಲಿ ಹಡಗುಗಳ ಸಂಚಾರಕ್ಕೆ ಅವಕಾಶವು ಸಿಕ್ಕಿತು. ಪಶ್ಚಿಮದಲ್ಲಿ ಪ್ರಯತ್ನವು ಇನ್ನೂ ತೃಪ್ತಿಕರವಾಗಿ ಹೆಚ್ಚಿನ ಫಲವನ್ನು ತಂದಿದ್ದಿತು. ಮಿಸ್ಸೌರಿಯಲ್ಲಿದ್ದ ಜನರಲ್ ಕರ್ಟಿಸ್‌ನು ಶತ್ರುಸೈನ್ಯ ವೊಂದನ್ನು ಸೋಲಿಸಿ ಓಡಿಸಿದ್ದನು. ಆದರೆ ಇದೇ ಸಮಯದಲ್ಲಿ ಬಲವಾದೊಂದು ಪ್ರಯತ್ನವನ್ನು ಮಾಡಬೇಕಾಗಿದ್ದಿತು. ತನ್ನದನ್ನೂ ಹಾಲೆಕ್‌ನ ದಂಡನ್ನೂ ಒಂದುಗೂಡಿಸಿ ಟೆನ್ನೆಸ್ಸೀಯ ಮಾರ್ಗವಾಗಿ ನಡೆಯಿಸಿದ ಪಕ್ಷದಲ್ಲಿ ದಕ್ಷಿಣದ ರೈಲು ಹಾದಿಗಳು ದಕ್ಕಿ ಬಹಳ ಪ್ರಯೋಜನವುಂಟಾಗುವುದೆಂದು ಬ್ಯುಯೆಲ್‌ನು ತನ್ನ ಮೇಲಿನ ಅಧಿಕಾರಿಯಾದ ಹಾಲೆಕ್‌ನಲ್ಲಿ ಸೂಚಿಸಿದನು. ಅವನು ಅದನ್ನು ಅನು ಮೋದಿಸಲಿಲ್ಲ. ಸೈನ್ಯಗಳನ್ನು ಒಂದುಗೂಡಿಸುವ ಕೆಲಸವಿಲ್ಲವೆಂದು ಹೇಳುತ್ತ ಸಣ್ಣ ಸಣ್ಣ ಸಾಹಸಗಳಲ್ಲಿ ನಿರತನಾಗಿದ್ದುಬಿಟ್ಟನು. ದೊಡ್ಡ ಯುದ್ಧವೊದಗದಿ ದ್ದರೆ ಸಾಕಾಗಿದ್ದಿತು. ಆದರೆ ಅದು ಮೂಢತನವಾಯಿತು. ಒಟ್ಟಾಗಿ ನುಗ್ಗಿ ಹತ್ತಿರದಲ್ಲಿಯೇ ಇದ್ದ ಜಾನ್ಸ್ಟನ್ನನ ದಾಳಿಯನ್ನು ಸದೆಬಡಿಯುವುದನ್ನು ಬಿಟ್ಟು ಹಾಲೆಕ್‌ನು, ಯುದ್ಧಕ್ಕೆ ಸಿಕ್ಕದೆ ಸುರಕ್ಷಿತವಾಗಿ ಹಿಂದಿರುಗಿದರೆ ತನ್ನ ಸೈನ್ಯದ ಬಲವು ನಷ್ಟವಾಗದಂತೆ ಉಳಿದು ಮುಂದೆ ಜಯವು ಇಮ್ಮಡಿಯಾಗುವು ದೆಂದು ಆಶಿಸಿದನು! ಅಂತೂ ಉತ್ತರದ ದಂಡು ಮಾಡಬೇಕಾದ ಕೆಲಸವು ಹೆಚ್ಚಾಗಿದ್ದರೂ ಕೂಡ ಯಾವುದನ್ನೂ ಮಾಡಲಿಲ್ಲ. ಏಪ್ರಿಲ್ ಆರನೆಯ ತಾರೀಖು ಬಂದಿತು. ಆದಿನ ಜಾನ್ಸ್ಟನ್ನನು ದಕ್ಷಿಣದ ಕಡೆಯಿಂದ ಬಂದ ಸೇನೆ

ಯನ್ನೂ ಸೇರಿಸಿಕೊಂಡು ಬಂದು ಗ್ರಾಂಟನ ಮೇಲೆ ಎರಗಿದನು. ಅವನ ಆಗಮನದ ಅರಿವೇ ಇಲ್ಲದಿದ್ದ ಗ್ರಾಂಟನು ಯಾವ ಬಗೆಯ ರಕ್ಷಣೋಪಾಯವನ್ನೂ ಮಾಡಿಕೊಂಡಿರಲಿಲ್ಲ. ಹಾಲೆಕ್‌ನೂ ಗ್ರಾಂಟನೂ ಇಬ್ಬರೂ ಉದಾಸೀನರಾಗಿದ್ದರೆಂದು ತೋರುತ್ತದೆ. ಆ ಕಾಲದಲ್ಲಿ ಬ್ಯುಯೆಲ್‌ನು ಮಾತ್ರ ತನ್ನ ಸೈನ್ಯದೊಡನೆ ಗ್ರಾಂಟನಬಳಿಗೆ ಬರುತ್ತಿದ್ದನು. ಶತ್ರುವಿನ ಆಗಮನವು ಅವನಿಗೂ ತಿಳಿಯದು. ಅವನು ಬಂದು ಕೂಡಿಕೊಳ್ಳುವುದರೊಳಗೆ ಯುದ್ಧವು ನಡೆದು ಹೋಯಿತು. ಎರಡು ಸೇನೆಗಳೂ ಅಲ್ಪಸ್ವಲ್ಪ ತರಪೇತಾಗಿದ್ದುವು. ಆದರೂ ಯುದ್ಧಕಾಲದಲ್ಲಿ ಸೈನಿಕರು ಬಹಳ ಸಾಹಸವನ್ನು ಮಾಡಿದರು. ಗ್ರಾಂಟನ ಕಡೆಯವರು ಸನ್ನದ್ಧರಾಗುವುದಕ್ಕೋಸ್ಕರ ಮೊದಲು ಸ್ವಲ್ಪದೂರ ಹಿಂಜರಿಯಬೇಕಾಯಿತು. ಹಿಂದೆ ಹೋಗಿ ಅವರು ಆಯುಧವನ್ನು ಹಿಡಿದು ಹಲ್ಲುಮುಡಿ ಕಚ್ಚಿ ನಿಂತರು. ಸಂಜೆಯಾದರೂ ಕದನವು ಮುಗಿಯಲಿಲ್ಲ. ಜಾನ್‌ಸ್ಟನ್ನನು ಮಡಿದನು. ಶತ್ರುಸೈನ್ಯವು ದಿಕ್ಕುಕೆಟ್ಟಿತು. ಆದರೂ ದಕ್ಷಿಣದಕೈಯೇ ಮೇಲಾಗುವಂತೆ ತೋರಿತು. ಅಷ್ಟರಲ್ಲಿ ಅಂದರೆ ಸಂಜೆ ಬಹಳ ಹೊತ್ತಿನಮೇಲೆ ಬ್ಯುಯೆಲ್‌ನ ದಂಡು ಒದಗಿ ದಕ್ಷಿಣದ ಸಾಹಸವು ನಿರರ್ಥಕನಾಗುವಂತೆ ಮಾಡಿತು. ಮಾರನೆಯದಿನ ಬೆಳಗ್ಗೆಯೂ ಬ್ಯುಯೆಲ್‌ನ ಕಡೆಯ ದಂಡುಗಳು ಹೊಸಹೊಸದಾಗಿ ಬಂದುವು. ಗ್ರಾಂಟನು ಬಲಹೊಂದಿ ಬೋರ್ಗಾರ್ಡನ ಮೇಲೆ ನುಗ್ಗಿದನು. ತನ್ನ ಸೈನ್ಯವು ದಿಗ್ಭ್ರಮೆಹೊಂದಿ ದಡಬಡನೆ ಓಡದಂತೆ ತಪ್ಪಿಸಿ ಒಂದು ವ್ಯವಸ್ಥೆಯಿಂದ ಹಿಂದೆ ಬೀಳುವಹಾಗೆ ಮಾಡುವುದೇ ಬೋರ್ಗಾರ್ಡನಿಗೆ ಪ್ರಯಾಸವಾಯಿತು. ಆತನು ಕೋರಿಂತ್ ಪಟ್ಟಣಕ್ಕೆ ಹೋಗಿ ಹೊಕ್ಕಿಕೊಂಡನು. ಮಾರನೆಯ ದಿನ ಜನರಲ್ ಪೋಪನು ಮಿಸಿಸಿಪ್ಪಿಯ ದಡದಲ್ಲಿ ಅತ್ಯಂತ ಉತ್ತರದಲ್ಲಿದ್ದ ಕೆಲವು ದುರ್ಗಗಳನ್ನು ಸ್ವಾಧೀನಮಾಡಿಕೊಂಡನು. ಆ ವೇಳೆಯಲ್ಲಿ 7,000 ಮಂದಿ ದಕ್ಷಿಣದ ಜನರು ಸೆರೆಸಿಕ್ಕಿದರು. ಆದರೆ ಅವನು ಮುಂದಕ್ಕೆ ನುಗ್ಗಲು ಹಾಲೆಕ್‌ನ ಅಪ್ಪಣೆಯಾಗಲಿಲ್ಲ. ಹಾಲೆಕ್‌ನು ಸಾವಕಾಶವಾಗಿ ಮುಂದೆ ಹೊರಟು ಕೆಲವು ಕಾಲದ ಮೇಲೆ ಜನರಲ್ ಪೋಪನನ್ನು ಸೇರಿದನು. ಒಟ್ಟು ಸೈನ್ಯವು ಹೊರಟಿತು. ಅದು ಕಷ್ಟವಾಗದ ರೀತಿಯಲ್ಲಿ, ಬೇಕಾದ ಸುಖಗಳನ್ನು ಕಲ್ಪಿಸಿಕೊಳ್ಳುತ್ತ ಪ್ರಯಾಣ ಮಾಡಲಾಗಿ ನಾಲ್ವತ್ತು ಮೈಲಿಗಳ ದೂರವನ್ನು ಕಳೆದು ಕೋರಿಂತ್ ನಗರವನ್ನು ತಲಪಲು ಒಂದು ತಿಂಗಳ ಮೇಲೆ ಬೇಕಾಯಿತು.

"ತಿಂಗಳ್ಗೊರ್ಗಾವುದವಾ ।
ತುಂಗ ತುರಂಗಂ ಕಡಂಗಿ ಪರಿದತ್ತಾಗಳ್"

ಹೋಗಿ ನೋಡಲಾಗಿ ನಗರವು ನಿರ್ಜನವಾಗಿದ್ದಿತು. ಹಾಲೆಕ್‌ನು ಬರುವತನಕ ಅಲ್ಲಿಯೇ ಇದ್ದು ಆ ತರುವಾಯ ಹೊರಟುಹೋಗಬೇಕೆಂದು ಯಾರೂ ನೆನಸಲಿಲ್ಲ! "ಶಾಸ್ತ್ರದಪ್ರಕಾರ" ನಡೆಯುವವರ ಪಾಡೇ ಇಷ್ಟು. ಅಲ್ಲದೆ ಹಾಲೆಕ್‌ನ ಹಾಗೆ ಅಪಾಯಕ್ಕೆ ಅಷ್ಟೊಂದು ಹೆದರಬೇಕಾಗಿಲ್ಲ. ಆದರೂ ಅವನು ಕೋರಿಂತಿಗೆ ಹೋಗಲಾಗಿ ಒಂದು ಪ್ರಯೋಜನವಾಯಿತು. ಶತ್ರುಗಳು ಮಿಸಿಸಿಪ್ಪಿಯ ದಡ

ದಲ್ಲಿದ್ದ ಮತ್ತೊಂದು ದುರ್ಗವನ್ನು ತ್ಯಜಿಸಿ ಇನ್ನೂ ಹಿಂದಕ್ಕೆ ಹೊರಟುಹೋದರು. ಜೂನ್ ತಿಂಗಳ ಆರನೆಯ ತಾರೀಖಿನ ವೇಳೆಗೆ ಉತ್ತರದ ದಂಡು ಮೆಂಫಿಸ್ (Memphis) ಪಟ್ಟಣವನ್ನು ಗೆದ್ದುಕೊಂಡಿದ್ದಿತು. ಲಿಂಕನ್ನನ ಮನಸ್ಸಿನಲ್ಲಿ ಬಹುಕಾಲದಿಂದ ಇದ್ದ ಇಷ್ಟವು ಕೈಗೂಡಿತು. ಅದೇಕಾಲದಲ್ಲಿ ಸೈನ್ಯದ ಜೊತೆಯಲ್ಲಿಯೇ ನದಿಯೊಳಗೆ ಬರುತ್ತಿದ್ದ ನಾವೆಯು ಶತ್ರುಗಳ ನಾವೆಯೊಂದನ್ನು ನಾಶ ಮಾಡಿತು. ಅದಕ್ಕೆ ಮುಂಚೆ ಮಿಸಿಸಿಪ್ಪಿಯ ತೀರದಲ್ಲಿದ್ದ ನ್ಯೂ ಆರ್ಲಿಯನ್ಸ್ ಪಟ್ಟಣವು ಕೈಸೇರಿದ್ದಿತು. ಜನರಲ್ ಬಟ್ಲರನು ಲೂಸಿಯಾನವನ್ನು ಹೊಕ್ಕು ಅಲ್ಲಿ ಬೇರೂರಿ ನಿಂತನು. ಈ ರೀತಿಯಾಗಿ ಮಿಸಿಸಿಪ್ಪಿ ನದಿಯಲ್ಲಿ ಉತ್ತರವು ತನ್ನ ಆಧಿಪತ್ಯವನ್ನು ಹಬ್ಬಿಸಿತು. ಆದರೆ ವಿಕ್ಸ್‌ಬರ್ಗ್‌ನಿಂದ ಹಿಡಿದು ನ್ಯೂ ಆರ್ಲಿಯನ್ಸಿಗೆ ಸ್ವಲ್ಪ ಉತ್ತರದಲ್ಲಿರುವ ಪೋರ್ಟ್ ಹಡ್ಸನ್‌ವರೆಗಿದ್ದಷ್ಟು ಭಾಗವು ಮಾತ್ರ ಇನ್ನೂ ದಕ್ಷಿಣದ ವಶದಲ್ಲಿದ್ದಿತು. ಅಲ್ಲದೆ ಪಶ್ಚಿಮಭಾಗದಲ್ಲಿದ್ದ ದಕ್ಷಿಣದ ದಂಡು ಇನ್ನೂ ಅಕ್ಷತವಾಗಿ ಉಳಿದಿದ್ದಿತು. ಅದು ಸದ್ಯದಲ್ಲಿ ಸುಭಿಕ್ಷವಾದ ಮಾರ್ಗದಿಂದ ಹೊರಟು ಉತ್ತರವನ್ನು ನುಗ್ಗಲು ಯೋಚಿಸಿದ್ದಿತು. ಆದರೆ ಉತ್ತರಕ್ಕೆ ಇದುವರೆಗೆ ಉಂಟಾಗಿದ್ದ ಜಯವು ಅಲ್ಪವಲ್ಲ. ವಶವಾದ ಸ್ಥಳಗಳು ಪ್ರಯೋಜನಕ್ಕೆ ಬರದಿರುತ್ತಿರಲಿಲ್ಲ. ಆದ ಜಯವು ಕ್ಷಣಿಕವಾದುದಲ್ಲ. ಇಷ್ಟಾದರೂ ಉತ್ತರ ಜನಗಳ ಮನಸ್ಸಿನಲ್ಲಿ ಉಲ್ಲಾಸವಿರಲಿಲ್ಲ. ಷೈಲೋವದಲ್ಲಿ ನಡೆದ ಯುದ್ಧದಲ್ಲಿ ಪ್ರಾಣನಷ್ಟವು ಬಹಳವಾಗಿ ಅವರಿಗೆ ಅತಿಯಾಗಿ ಕೊರಗು ಉಂಟಾಗಿದ್ದಿತು. ಆದರಲ್ಲಿ ಗೆದ್ದರೂ ಕೂಡ ಈ ಕಾರಣದ ದೆಸೆಯಿಂದ ಗ್ರಾಂಟನಿಗೆ ಜನಗಳ ದೂಷಣೆಯೇ ಪ್ರತಿಫಲವಾಯಿತು. ಯುದ್ಧಕ್ಕೆ ಮುಂಚೆ ಅವನು ಆ ಸ್ಥಳದಲ್ಲಿ ತೂಕಡಿಸುತ್ತ ಕೂತನೆಂದು ಎಲ್ಲರೂ ಆಕ್ಷೇಪಿಸಿದರು. ಜನರ ಪ್ರೀತಿಯಿಂದ ಬಹಳ ಮಟ್ಟಿಗೆ ಜಾರಿದನು.

ಹೀಗೆ ಪಶ್ಚಿಮ ರಣರಂಗದಲ್ಲಿ ಸಂಗತಿಗಳು ಬೇಗ ಮೊದಲಾಗಿ ಬೇಗ ಮುಗಿದುಹೋದುವು. ಮುಂದೆ ಆ ವರ್ಷವು ಮುಗಿಯುವವರೆಗೂ ಉತ್ತರವು ಅಲ್ಲಿ ಹೆಚ್ಚಿನ ಸಾಹಸವನ್ನು ಮಾಡಲಿಲ್ಲ. ದಕ್ಷಿಣದ ಸೈನ್ಯವು ಪಶ್ಚಿಮದಿಕ್ಕಿನಿಂದ ನುಗ್ಗಿ ಉತ್ತರವನ್ನು ಹೊಕ್ಕಿತು. ಆದರೂ ವಿಶೇಷ ಲಾಭವುಂಟಾಗಲಿಲ್ಲ. ಪೂರ್ವ ರಣರಂಗದಲ್ಲಿ ಮಾತ್ರ ಅದಕ್ಕೆ ಜಯದ ಸುಗ್ಗಿಯುಂಟಾಯಿತು. 1863 ನೆಯ ವರ್ಷದ ಪೂರ್ವಾರ್ಧದಲ್ಲಿ ದಕ್ಷಿಣದ ಭಾಗ್ಯವು ಚರಮಸೀಮೆಯನ್ನು ಸೇರಿತು.

---

# ೮ನೆಯ ಅಧ್ಯಾಯ

## ಯುದ್ಧ—1863ನೆಯ ಮೇ ತಿಂಗಳವರೆಗೆ (ಪೂರ್ವದಲ್ಲಿ).

ಯುದ್ಧದ ಈ ಭಾಗದಲ್ಲಿ ಜನರಲ್ ಲೀ ಮತ್ತು ಜಾಕ್ಸನ್ನರು ಮಾಡಿದ ಸಾಹಸಗಳು ಮುಖ್ಯವಾಗಿರುವುವು. ಉತ್ತರಕ್ಕೆ ಬಹಳ ನಷ್ಟವುಂಟಾಯಿತು. ಜನರಲ್ ಮೆಕ್‌ಕ್ಲೆಲ್ಲನ್ನನು ವಾಷಿಂಗ್ಟನ್ನಿಗೆ ಬಂದನು. ಅವನಲ್ಲಿ ಜನಗಳಿಗೆ ಭರವಸೆಯು ಬಹಳವಾಗಿದ್ದಿತು. ಅವನನ್ನು "Young Napoleon "ಎಂದು ಕರೆದರು. ಜನಗಳು ತನ್ನನ್ನು ಗೌರವಿಸುವುದನ್ನು ನೋಡಿ ದಳಪತಿಯು ಹೆಮ್ಮೆಗೊಂಡನು. ಹೆಂಡತಿಗೆ ಬರೆದ ಕಾಗದಗಳಲ್ಲಿ ಆತ್ಮಸ್ತುತಿಯಲ್ಲದೆ ಮತ್ತೊಂದು ಮಾತೇ ಇಲ್ಲ. ವಾಷಿಂಗ್ಟನ್ನಿಗೆ ಬಂದಮೇಲೆ ಅವನ ಬಾಯಿಂದ ಮಾತು ಬರುವುದೇ ತಡ, ದೊಡ್ಡದೊಂದು ಸೈನ್ಯವು ಸಿದ್ಧವಾಯಿತು. ಆದರೆ ಆ ಸೈನ್ಯವನ್ನು ಉಪಯೋಗಿಸಲಾರದೆ, ಇನ್ನೂ ಕಾಲವು ಬಂದಿಲ್ಲವೆನ್ನುತ್ತ ಸಮಯವನ್ನು ಕಳೆಯುತ್ತಿರಲಾಗಿ ಪ್ರಜೆಗಳ ಗೌರವವನ್ನು ಕಳೆದುಕೊಂಡನು. ಅವನಿಗೆ ವಿರುದ್ಧವಾದೊಂದು ಪಕ್ಷವು ಹುಟ್ಟಿ ಬೆಳೆಯಿತು. ಸರ್ಕಾರವು ತನಗೆ ಸ್ವಾತಂತ್ರ್ಯವನ್ನು ಕೊಡಲಿಲ್ಲವೆಂದು ಅವನು ದೂರಿದನು. ಸ್ವಲ್ಪಕಾಲದ ಹಿಂದೆ ಒಂದು ವಿಪತ್ತು ಸಂಭವಿಸುವಂತೆ ತೋರಿತು. ಸರ್ಕಾರವು ಅವನನ್ನು ಬರಮಾಡಿಕೊಂಡು ಅದನ್ನು ತಪ್ಪಿಸಲು ನೇಮಿಸಿತು. ಅವನ ಸಹಾಯದಿಂದ ಅಪಾಯವು ಅರುಗಾಯಿತು. ಆದಾಗಿ ಕೆಲವು ಕಾಲವು ಕಳೆಯುವುದರೊಳಗೆ ಮೆಕ್‌ಕ್ಲೆಲ್ಲನ್ನನು ಯಾರಿಗೂ ಬೇಡದವನಾದನು. ಈ ಪುರಸ್ಕಾರವನ್ನು ಅನುಮೋದಿಸದ ಜನರು ಅವನಲ್ಲಿ ಮರುಕಗೊಂಡರು. ಪ್ರಜೆಗಳ ದೃಷ್ಟಿಯಲ್ಲಿ ಅವನು ಈ ರೀತಿಯಾಗಿ "ಏರುತ್ತಲೂ ಕುಗ್ಗುತ್ತಲೂ" ಇರಲು ಕಾರಣವೇನೆಂಬುದು ಈ ಅಂತಃಕಲಹದ ಸಮಯದಲ್ಲಿ ಅವನ ನಡೆವಳಿಯಿಂದ ಗೊತ್ತಾಗುವುದು.

ಲಿಂಕನ್ನನಿಗೆ ಅವನಲ್ಲಿ ವಿಶೇಷವಾದ ಭಕ್ತಿ. ತನ್ನ ದೇಶಕ್ಕಾಗಿ ಹೊಡೆದಾಡುವವರೆಲ್ಲರಲ್ಲಿಯೂ ಪ್ರೆಸಿಡೆಂಟನಿಗೆ ಭಕ್ತಿಯುಂಟು. ಮೆಕ್‌ಕ್ಲೆಲ್ಲನ್ನನು ಏಳಿಗೆಗೆ ಬರುವನೆಂದು ಜನರಲ್ ಸ್ಕಾಟನಿಗೂ ಅಭಿಪ್ರಾಯವಿದ್ದಿತು. ಸೈನಿಕರಿಗೆ ಅವನನ್ನು ಕಂಡರೆ ಅತಿ ಪ್ರೀತಿ. ಅವನೂ ಹಾಗೆಯೇ ಇದ್ದನು. ಸೈನಿಕರು ಮುಂದೆ ಅವನನ್ನೂ ಗ್ರಾಂಟನನ್ನೂ ಹೋಲಿಸಿದರು. ಗ್ರಾಂಟನ ಹೃದಯವು ಕಠಿನವಾದುದು. ಸೈನಿಕರ ಕಷ್ಟಸುಖಗಳ ಕಡೆಗೆ ಮರುಕವಿಲ್ಲದವನೆನ್ನಿಸಿಕೊಂಡನು. ಮೆಕ್‌ಕ್ಲೆಲ್ಲನ್ನನು ದಂಡನ್ನು ತಯಾರುಮಾಡುವುದರಲ್ಲಿ ನಿಪುಣನು. ಅವನ ಕಾಲದಲ್ಲಿ ದಂಡು ವ್ಯವಸ್ಥೆಯಿಂದಲೂ ಇರುತ್ತಿದ್ದಿತು. ಜನರಲ್ ಲೀಗೂ ಅವನಲ್ಲಿ ಗೌರವವಿದ್ದಿತು. ಆದರೂ ದೇಶಸೇವೆಗೂ ಲಿಂಕನ್ನನ ಕೆಲಸಗಳಿಗೂ ಅವನು ಅರ್ಹವಾದ ಸಾಧನವೇ

ಎಂಬ ಪ್ರಶ್ನೆಗೆ ತಕ್ಕ ಉತ್ತರವು ದೊರೆಯಲಾರದು. ಶತ್ರುಗಳನ್ನು ಅಡಗಿಸಲು ಅವನು ತನ್ನ ಸಾಹಸವೆಲ್ಲವನ್ನೂ ಮಾಡಿದನೆ? ಮನಸ್ಸನ್ನು ಬಿಗಿಹಿಡಿದು ಮಹತ್ತಾದ ಯಾವ ಉದ್ದೇಶವನ್ನು ಸಾಧಿಸಿದನು? ಅವನ ಸನ್ನಾಹಗಳಾದರೂ ಉತ್ತಮವಾಗಿದ್ದುವೆ? ನಡೆಯಿಸಿದ ಯುದ್ಧಗಳಲ್ಲಿ ಅವನ ಆಶಯವು ಯಾವುದಾದರೂ ಇದ್ದು ಅವನು ಅದನ್ನು ಸರ್ಕಾರಕ್ಕೆ ತಿಳಿಸಿದನೆ? ಈ ಪ್ರಶ್ನೆಗಳಲ್ಲಿ ಯಾವುದೊಂದಕ್ಕೂ ಹೌದೆಂದು ಉತ್ತರವನ್ನು ಹೇಳುವುದು ಅಸಾಧ್ಯ.

ಲಿಂಕನ್ನನಿಗೆ ತಪ್ಪುತಪ್ಪಾಗಿ ನಡೆದು ಅನರ್ಥವನ್ನು ತರದಿರುವಂತಹ ದಳಪತಿಯು ಬೇಕಾಗಿದ್ದಿತು. ಎರಡನೆಯದಾಗಿ, ಅಂಥ ಮನುಷ್ಯನು ಸಿಕ್ಕುವುದಾದರೆ ದಳಪತಿಯು ಧೈರ್ಯದಿಂದ ಮುಂದೆ ನುಗ್ಗುವಂಥವನಾಗಬೇಕು. ಉತ್ತರದ ಸರ್ಕಾರವನ್ನು ಅಪಾಯದಲ್ಲಿ ಸಿಕ್ಕಿಸಿ ಅನರ್ಥವನ್ನುಂಟುಮಾಡಲು ಅವನಿಗೆ ಅಪೇಕ್ಷೆಯಿರಲಿಲ್ಲ. ಆದರೆ ದಕ್ಷಿಣವನ್ನು ನಿಶ್ಶೇಷವಾಗಿ ಜಯಿಸಬೇಕೆಂಬುದು ಅವನ ಸಂಕಲ್ಪವಾಗಿದ್ದಿತು. ಮೆಕ್‌ಕ್ಲೆಲ್ಲನ್ನನ ದೆಸೆಯಿಂದ ಒಂದು ತಡವೆ ವಾಷಿಂಗ್ಟನ್ನನ್ನು ಸಂರಕ್ಷಿಸಿಕೊಳ್ಳುವ ಭಾರವು ಲಿಂಕನ್ನನ ತಲೆಯ ಮೇಲೆಯೇ ಬಿದ್ದಿತಾದರೂ ಅವನನ್ನು ನೇಮಿಸುವುದರಲ್ಲಿ ಪ್ರೆಸಿಡೆಂಟನಿಗೆ ಸ್ವಲ್ಪ ಭರವಸೆಯಿದ್ದಿತು. ಆ ದಳಪತಿಯು ನಂಬಿಕೆಗರ್ಹನಾದವನೆಂದು ತೋರಿತು. ಆದರೆ ನಡೆದ ಸಂಗತಿಗಳನ್ನು ನೋಡುತ್ತ ನೋಡುತ್ತ ಅವನನ್ನು ನೆಚ್ಚಿದರೆ ಯುದ್ಧವು ಮುಗಿಯದೆಂದೂ ಜಯವಾಗದೆಂದೂ ಪ್ರೆಸಿಡೆಂಟನಿಗೆ ಅಭಿಪ್ರಾಯವಂಕುರಿಸಿ ಕಾಲಕ್ರಮದಲ್ಲಿ ದೃಢಪಟ್ಟಿತು.

ಈ ರಣರಂಗದಲ್ಲಿ ಎರಡು ಕಡೆಯ ಮುಖ್ಯ ಸೈನ್ಯಗಳೂ ಏನೇನು ಮಾಡಿದುವೆಂಬುದನ್ನು ನೋಡಿದರೆ ಸಾಕು. ಬುಲ್‌ರ್ರ ಯುದ್ಧ ಮೊದಲುಗೊಂಡು 1862 ನೇ ಮಾರ್ಚಿ ತಿಂಗಳವರೆಗೂ ಜೋಸೆಫ್ ಜಾನ್ಸ್ಟನ್ನನ[1] ಸೈನ್ಯವು ಇದ್ದ ಬಳಿಯಲ್ಲಿಯೇ ಇದ್ದಿತು. ರಕ್ಷಣೆಗಾಗಿ ಕಂದಕಗಳನ್ನು ತೋಡಿಕೊಂಡುದಲ್ಲದೆ ಗೋಡೆಗಳನ್ನು ಎಬ್ಬಿಸಿಕೊಂಡಿತು. ಕವಾತುಮಾಡಿ ಶಿಕ್ಷಣ ಹೊಂದುವುದಲ್ಲದೆ ಆ ದಂಡಿಗೆ ಮತ್ತಾವ ಕೆಲಸವೂ ಇರಲಿಲ್ಲ. ಒಂದು ತಡವೆ ಮಾತ್ರ ಅದು ಪದಚಲನಮಾಡುವಂತೆ ತೋರಿತು. ಆದರೆ ಪೋಟೊಮುಕ್‌ನಿಂದ ಆಚೆಗೆ ಇದ್ದ ಉತ್ತರದ ದಳದೊಡನೆ ಯುದ್ಧಕ್ಕೆರಗಲು ಜಾನ್‌ಸ್ಟನ್ನನಿಗಾಗಲೀ ಅವನ ಕೈಕೆಳಗಿನ ದಳಪತಿಗಾಗಲೀ ಅಪೇಕ್ಷೆಯಿರಲಿಲ್ಲ; ಇನ್ನೊಂದು ಐವತ್ತು ಅರವತ್ತು ಸಾವಿರ ಸೈನಿಕರು ಬೆಂಬಲಕ್ಕಿದ್ದರೆ ಏನನ್ನಾದರೂ ಮಾಡಬಹುದೆಂದು ಅವರು ಹೇಳಿಕೊಂಡರು. ಆದರೆ ಅದು ಸಾಧ್ಯನಾಗಲಿಲ್ಲ.. ದಕ್ಷಿಣದ ಪ್ರೆಸಿಡೆಂಟನು ಅಲ್ಲಿಗೆ ಬಂದು ನೋಡಿ ನಿಯತಸ್ಥಳಗಳಲ್ಲಿಟ್ಟಿದ್ದ ಇತರ ಸೈನ್ಯಗಳನ್ನು ಹೊರಡಿಸಿ ತರಿಸುವುದಕ್ಕಾಗುವುದಿಲ್ಲವೆಂದು ಹೇಳಿಬಿಟ್ಟನು. ಹಾಗೆ ಹೇಳಲು ಅವನಿಗೆ ಕಾರಣವಿರಬಹುದು. ಆದರೆ ಉತ್ತರವನ್ನು ಜಯಿಸಲು ಸಿಕ್ಕಿದ್ದ ಸುಸಮಯವನ್ನು ದಕ್ಷಿಣವು ಆ ಅವಿವೇಕದ ದೆಸೆಯಿಂದ ಕಳೆದುಕೊಂಡಿತು. ಮೆಕ್‌ಕ್ಲೆಲ್ಲನ್ನನ ಸೈನ್ಯವೂ ಸಿದ್ಧವಾಯಿತು. ಅದರಲ್ಲಿ

---

[1] ಈ ಜಾನ್ಸ್ಟನ್ನನೂ ಆಲ್ಬರ್ಟ್ ಜಾನ್ಸ್ಟನ್ನನೂ ಬೇರೆ ಬೇರೆ ಮನುಷ್ಯರು.

1,47,000 ಮಂದಿಯೂ ದಕ್ಷಿಣದಕಡೆ 47,000 ಮಂದಿಯೂ ಭಟರಿದ್ದರು. ಆದರೆ ಉತ್ತರದ ದಳಪತಿಯು ಶತ್ರುಸೈನ್ಯವು ತನ್ನದಷ್ಟೇ ಬಲವುಳ್ಳದೆಂದು ಭಾವಿಸಿ ಕದನ ಕೈಸಗದೆ ಹೆದರಿದನು. ಜಾನ್ಸ್ಟನ್ನನು ತನ್ನದಕ್ಕಿಂತ ಉತ್ತರದಕಡೆ ಮೂರರಷ್ಟು ಸೈನ್ಯವಿದ್ದುದರಿಂದ ಅಪಾಯವು ನಿಶ್ಚಿತವೆಂದು ಅಂಜಿ ಹಿಂದು ಹಿಂದಕ್ಕೆ ಬೀಳಲಾರಂಭಿಸಿದನು. ಶೇಖರಿಸಿದ್ದ ಸಾಮಾನುಗಳೆಲ್ಲವನ್ನೂ ಸಾಗಹಾಕಿದನು. ಹೀಗಿರಲಾಗಿ ಮಾರ್ಚಿ ಒಂಭತ್ತನೆಯ ತಾರೀಖು ಅವನು ಮನಸ್ಸಾಸ್ (Manassas) ಎಂಬ ಪಟ್ಟಣವನ್ನು ಸಂಪೂರ್ಣವಾಗಿ ತ್ಯಜಿಸಿ ಹೊರಟುಹೋದನೆಂದು ವಾಷಿಂಗ್ಟನ್ನಿನಲ್ಲಿ ಸುದ್ದಿ ಹರಡಿತು. ಕೂಡಲೇ ಮೆಕ್‌ಕ್ಲೆಲ್ಲನ್ನನು ತನ್ನ ಸಮಸ್ತದಳವನ್ನೂ ತೆಗೆದುಕೊಂಡು ಅಲ್ಲಿಗೆ ನಡೆದನು. ನಿರ್ಜನವಾದ ನಗರವನ್ನು ನೋಡಿಕೊಂಡು ಹಿಂದಿರುಗುವುದೇ ಫಲವಾಯಿತು. ಜಾನ್ಸ್ಟನ್ನನು ಸದ್ದಿಲ್ಲದಂತೆಯೂ ಅಪಾಯವಿಲ್ಲದಂತೆಯೂ ಮೂವತ್ತು ಮೈಲಿಗಳ ವರೆಗೆ ದಕ್ಷಿಣಕ್ಕೆ ಹೊರಟುಹೋದನು. ಶತ್ರುಸೈನ್ಯವು ಬೆನ್ನಟ್ಟಿ ಬರುವುದೆಂದು ಅವನು ಭಾವಿಸಿದ್ದನು. ಅಂಥದೇನೂ ಆಗಲಿಲ್ಲ. ಅವನಿಗೇ ವಿಸ್ಮಯವಾಯಿತು.

ಮೆಕ್‌ಕ್ಲೆಲ್ಲನ್ನನ ಪ್ರಯತ್ನವು ಈ ಫಲವುಳ್ಳದ್ದಾಯಿತು.

ತಿಂಗಳ ಮೇಲೆ ತಿಂಗಳು ಸಾಗುತ್ತಿದ್ದಿತು. ಪತ್ರಿಕೆಗಳಲ್ಲಿ ಮಾತ್ರ ‘‘ಪೋಟೊಮಕ್‌ನಲ್ಲಿ ಎಲ್ಲವೂ ಸುರಕ್ಷಿತವಾಗಿದೆ’’ ಎಂಬ ಸುದ್ದಿಯು ತಪ್ಪದೆ ಹೊರಡುತ್ತಿದ್ದಿತು. ಉತ್ತರದವರ ಉತ್ಸಾಹವೆಲ್ಲಾ ಸೈನ್ಯವೊಂದನ್ನು ನಿರ್ಮಿಸಿ ಕೊನೆಗೊಂಡಂತೆ ತೋರಿತು. ಸೈನ್ಯವು ಸೋಮಾರಿಯಾಗಿ ಕುಳಿತಿರುವುದನ್ನು ನೋಡಿ ಅವರು ಕೋಪಗೊಂಡರು. ಮಕ್ಕಳು ಬೊಂಬೆಗಳನ್ನು ಮಾಡಿ ಸಾಲುಸಾಲಾಗಿ ಇರಿಸಿ ಅದರಿಂದ ತೃಪ್ತಿಗೊಂಡಹಾಗಾಯಿತು. ನೊವೆಂಬರ್ ತಿಂಗಳಿಂದಲೂ ಪ್ರಜೆಗಳು ‘‘ಸೈನ್ಯವು ಏನನ್ನಾದರೂ ಮಾಡಬೇಕು’’ ಎಂದು ಒದರಿದರು. ಕಾಂಗ್ರೆಸ್‌ನಿಂದ ಕಮಿಟಿಯೊಂದು ಏರ್ಪಾಡಾಯಿತು. ಏನಾದರೊಂದು ಕೆಲಸವನ್ನು ಸೈನ್ಯದ ಕೈಗೆ ಹಚ್ಚಬೇಕೆಂದು ಕಮಿಟಿಯುವರು ಪ್ರೆಸಿಡೆಂಟನಲ್ಲಿ ಒತ್ತಿಹೇಳಿದರು. ಲಿಂಕನ್ನನಿಗೆ ಮೊದಲಿಂದಲೂ ಆ ಅಭಿಪ್ರಾಯವಿದ್ದಿತು. ದಳಪತಿಗೆ ಚಟುವಟಿಕೆಯನ್ನು ಕಲಿಸಲು ಎಷ್ಟೋ ಪ್ರಯತ್ನಮಾಡಿದನು. ಆದರೆ ಆತುರಮಾಡಿ ದುಡುಕಲು ಅವನಿಗೆ ಇಷ್ಟವಿರಲಿಲ್ಲ. ಆ ಕಾರಣದಿಂದ ಅವನು ಏನಾದರೊಂದು ನೆಪವನ್ನು ಹೇಳುತ್ತ ಸೈನ್ಯಾಧಿಪತಿಯನ್ನು ಮರೆಹಾಕಿಕೊಳ್ಳುತ್ತಿದ್ದನು. ಮೆಕ್‌ಕ್ಲೆಲ್ಲನ್ನನ ಉದ್ದೇಶವೇನೋ ಹೇಳಲಾಗುವುದಿಲ್ಲ. ಹೋಗಿ ಶತ್ರುವನ್ನೆದುರಿಸುವೆನೆಂತಲೇ ಲಿಂಕನ್ನನಿಗೆ ಉತ್ತರವನ್ನು ಕಳುಹಿಸುತ್ತಿದ್ದನು. ಆದರೆ ತನ್ನ ಹೆಂಡತಿಗೆ ಬರೆದ ಕಾಗದಗಳಿಂದ ಮಾತ್ರ, ಶತ್ರುವು ಈಗಲೋ ನಾಳೆಯೋ ಬಂದು ಆಕ್ರಮಣಮಾಡುವುದೆಂದು ಅವನು ನಿರೀಕ್ಷಿಸುತ್ತಿದ್ದಂತೆ ತಿಳಿದುಬರುವುದು. ಶತ್ರುಸೈನ್ಯವು ತನ್ನದರಷ್ಟೇ ಅಥವಾ ಇನ್ನೂ ಹೆಚ್ಚಾಗಿಯೇ ಇರುವುದೆಂದು ಅವನು ನಂಬಿದ್ದನು. ಅವನ ಮಾತಿನಿಂದಲೂ ತಾಮಸದಿಂದಲೂ ಜನಗಳಿಗೆ ಅಪನಂಬಿಕೆ ಹುಟ್ಟಿತು. ಶತ್ರುವಿನ ಸುಳಿವನ್ನೂ ಸನ್ನಾಹವನ್ನೂ ತಿಳಿಯದವನು ಎಂತಹ ಸೇನಾಪತಿ? ಈ ಮೌಢ್ಯದ ಜೊತೆಗೆ ಪ್ರಬಲವಾದ ಆಕಾಂಕ್ಷೆ ಬೇರೆ. ಕಾಲವನ್ನು ಕಾದು

ಮುಂದೆ ನುಗ್ಗಿದರೆ ಶತ್ರುವಿಗೆ ಚೇತರಿಸಿಕೊಳ್ಳಲಾಗದಂತಹ ಏಟನ್ನು ಹೊಡೆಯ ಬಹುದು. ಇಲ್ಲದಿದ್ದರೆ ಪ್ರಯೋಜನವಿರದು. ಅವನು ಜನಸಹಾಯವನ್ನೂ ಧನಸಹಾಯವನ್ನೂ ಮಾಡಬೇಕೆಂದು ಸರ್ಕಾರವನ್ನು ಪ್ರಾರ್ಥಿಸುತ್ತಲೇ ಇದ್ದನು. ಆ ಪ್ರಾರ್ಥನೆಗೆ ಕೊನೆಮೊದಲೇ ಇರಲಿಲ್ಲ. ಸರ್ಕಾರವು ಸಹಾಯವನ್ನು ಕಳುಹಿಸಿದರೆ, ಕಳುಹಿಸಿದುದು ತೀರ ಕಡಿಮೆಯೆಂದು ಅವನು ಸಲಸಲವೂ ಗೊಣಗಿದನು. ಒದಗಿಸಿದುದೆಲ್ಲಾ ಏನಾಗುತ್ತಿದ್ದಿತೋ ತಿಳಿಯದು. ಅವನ ಅವಿವೇಕವು ಅಷ್ಟೇ ಅಲ್ಲ. ಪಶ್ಚಿಮದಲ್ಲಿ ಯುದ್ಧವನ್ನು ನಿರ್ವಹಿಸಲು ದಂಡು ಅಗತ್ಯವಾದುದೆಂಬುದನ್ನೂ ಮರೆತು ಅವನು ಸರ್ಕಾರವು ಒದಗಿಸಿದ ಸೈನ್ಯವನ್ನೂ ಸಾಮಾನನ್ನೂ ತನ್ನೊಬ್ಬನ ಪಾಳೆಯಕ್ಕೇ ತರಿಸಿಕೊಂಡನು.

ಈ ಕಥೆಯು ಇಷ್ಟಕ್ಕೇ ಮುಗಿಯದು. ತನ್ನ ನಡತೆಯಿಂದಲೂ ಕೂಡ ಅವನು ಲಿಂಕನ್ನನೊಡನೆಯೂ ಸರ್ಕಾರದೊಡನೆಯೂ ತನಗಿದ್ದ ಮೈತ್ರಿಯನ್ನು ಹಾಳುಮಾಡಿಕೊಂಡನು. ಸರ್ಕಾರದ ಅಧಿಕಾರಿಗಳೆಲ್ಲರೂ ಅವನ ಭಾವನೆಯಲ್ಲಿ " ನಿಷ್ಪ್ರಯೋಜಕರು." ಪ್ರೆಸಿಡೆಂಟನು ಅವನಲ್ಲಿ ಸ್ನೇಹಭಾವವನ್ನು ತೋರಿಸಿದಷ್ಟೂ ಅವನ ಅಹಂಕಾರವು ಹೆಚ್ಚಿತು. ಲಿಂಕನ್ನನು ಆಗಿಂದಾಗ ಅವನ ಮನೆಗೆ ಹೋಗಿ ಮಾತನಾಡಿ ಬರುತ್ತಿದ್ದನು. ಅದೇ ಅಭ್ಯಾಸವಾಗಿದ್ದಿತು. ಈ ಆಚರಣೆಯನ್ನು ಪ್ರೆಸಿಡೆಂಟನ ಗೌರವಕ್ಕೆ ಕಡಿಮೆಯೆಂದು ಲೋಕವು ಭಾವಿಸಿದರೂ ಲಿಂಕನ್ನನು ಆರೀತಿಯಾಗಿ ಎಣಿಸಲಿಲ್ಲ. ಪ್ರೆಸಿಡೆಂಟನು ತನ್ನಲ್ಲಿಗೆ ಬಂದಾಗಲೆಲ್ಲಾ ಮೆಕ್‌ಕ್ಲೆಲ್ಲನ್ನನು ಅವನ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಳ್ಳುತ್ತಲೂ, ಮಾತನಾಡುತ್ತ ಕುಳಿತಾಗ ಅವನ ಪ್ರಶ್ನೆಗಳನ್ನು ಕೆಲಸಕ್ಕೆ ಬಾರದವುಗಳಂತೆ ಔದಾಸೀನ್ಯದಿಂದ ಕಾಣುತ್ತಲೂ, ಆಡಳಿತದ ವಿಚಾರಗಳಲ್ಲಿ ಪ್ರೆಸಿಡೆಂಟನಿಗೆ ವಿವೇಚನೆಯೂ ಗುಟ್ಟುಗುಮಾನಿಯೂ ಸಾಲದೆಂದು ಭಾವಿಸಿದನು. ಒಂದು ದಿನ ಸಾಯಂಕಾಲ ಲಿಂಕನ್ನನೂ ಸಿವರ್ಡನೂ ಆತನ ಮನೆಗೆ ಹೋಗಿ ಆತನ ಆಗಮನವನ್ನು ನಿರೀಕ್ಷಿಸುತ್ತ ಕುಳಿತರು. ಮೆಕ್‌ಕ್ಲೆಲ್ಲನ್ನನು ಒಳಗೆ ಬಂದು ಮಹಡಿಯಮೇಲೆ ಹೋದನು. ಅವನನ್ನು ನೋಡಬೇಕೆಂದು ಪ್ರೆಸಿಡೆಂಟನು ಹೇಳಿಕಳುಹಿಸಲಾಗಿ ತನಗೆ ಆಯಾಸವಾಗಿರುವುದೆಂತಲೂ ಆರಾತ್ರಿ ಅವರೊಡನೆ ಮಾತನಾಡಲಾರನಾದ ಕಾರಣ ಕ್ಷಮಿಸಬೇಕೆಂತಲೂ ಅವನಿಂದ ಉತ್ತರವು ಬಂದಿತು. ಸಿವರ್ಡನಿಗೆ ಬಹಳ ಕೋಪ ಬಾದಿತು. ಆ ಸಮಯದಲ್ಲಿ ಲಿಂಕನ್ನನಿದ್ದು ಅವನನ್ನು ಸಮಾಧಾನಮಾಡದೇ ಇದ್ದರೆ ಏನಾದರೊಂದು ಅನರ್ಥವು ನಡೆದುಹೋಗುತ್ತಿದ್ದಿತು. ಲಿಂಕನ್ನನ ಮನಸ್ಸಿನಲ್ಲಿ, " ಮೆಕ್‌ಕ್ಲೆಲ್ಲನ್ನನು ಕುದುರೆಯನ್ನು ಹತ್ತುತ್ತಿದ್ದರೆ ರಿಕಾಪನ್ನಾದರೂ ಹಿಡಿದುಕೊಂಡೇನು, ಆತನು ನಮಗೆ ಜಯಗಳನ್ನು ಗೆದ್ದುಕೊಟ್ಟರೆ ಸಾಕು " ಎಂದಿದ್ದಿತು. ಆದರೆ ಅಂದಿನಿಂದ ಅವನ ಮನೆಯ ಬಳಿಗೆ ಹೋಗಲಿಲ್ಲ. ಮುಂದೆ ಸರ್ಕಾರದ ಅಪ್ಪಣೆಗಳನ್ನು ಕಳುಹಿಸುವಾಗ ಹೆಚ್ಚು ಮಾತಿಗೆ ಹೋಗದೆಯೂ ನಿರ್ದಾಕ್ಷಿಣ್ಯನಾಗಿಯೂ ಇರುತ್ತಿದ್ದನು.

ಡಿಸೆಂಬರ್ ತಿಂಗಳಾದರೂ ಮೆಕ್‌ಕ್ಲೆಲ್ಲನ್ನನು ಚಟುವಟಿಕೆಯನ್ನು ತೋರಿಸಲಿಲ್ಲ. ಲಿಂಕನ್ನನ ಯತ್ನವೆಲ್ಲಾ ವ್ಯರ್ಥವಾಯಿತು. ಆ ತಿಂಗಳ ಕೊನೆಯಲ್ಲಿ ದಳ

ಪತಿಯು ರೋಗಹತ್ತಿ ಮಲಗಿದನು. ಇತರ ಸೇನಾಪತಿಗಳನ್ನು ಸೇರಿಸಿ ಪ್ರೆಸಿಡೆಂಟನು ಮತ್ತೊಂದು ಏರ್ಪಾಡು ಮಾಡುವಷ್ಟರಲ್ಲಿ ದಳಪತಿಯು ಗುಣಹೊಂದಿ ಹಾಜರಾದನು. ಹಾಜರಾಗಿ, ಸೈನ್ಯವನ್ನು ತೆಗೆದುಕೊಂಡು ಹೊರಡಲು ಪ್ರತ್ಯೇಕವಾದ ಕಾಲವಿದೆಯೆಂದು ಇತರರು ಕೇಳಿದ ಪ್ರಶ್ನೆಗೆ ಉತ್ತರಹೇಳಿದನು. ಇದು ಎಲ್ಲರ ಸಹನೆಯನ್ನೂ ಮೀರಿತು. ಕೊನೆಗೆ ಲಿಂಕನ್ನನು, ಪೋಟೊಮಕ್ಕಿನ ಸೈನ್ಯವು ಫೆಬ್ರವರಿ ಇಪ್ಪತ್ತೆರಡನೆಯ ತಾರೀಖು ಪದಚಲನಮಾಡಬೇಕೆಂದು ಶಾಸನವನ್ನು ಹೊರಡಿಸಿದನು. ಅದರಿಂದ ಮೆಕ್‌ಕ್ಲೆಲ್ಲನ್ನನಿಗೆ ಎಚ್ಚರವಾಯಿತು. ಅವನು ಲಿಂಕನ್ನನು ಹೇಳಿದುದನ್ನು ನಡೆಯಿಸುವ ಯೋಚನೆಮಾಡಿದನು. '' ಇನ್ನು ಹತ್ತು ದಿನಗಳಲ್ಲಿ ರಿಚ್‌ಮಂಡ್ ನಗರವನ್ನು ತಲಪಿರುವೆನು '' ಎಂದು ಚೇಸನೊಡನೆ ಹೇಳಿದನು. ಆದರೆ ಸೋಮಾರಿತನವು ಅವನ ಜನ್ಮಕ್ಕೆ ಬಂದಹಾಗೆ ತೋರುತ್ತದೆ. ತಾನು ಯೋಚಿಸಿದ್ದ ಉಪಾಯವೇ ಸರಿಯೆಂದು ನಿಶ್ಚಯಿಸಿ ಅವನು ತನ್ನ ಉಪಾಯವನ್ನು ಸರ್ಕಾರಕ್ಕೆ ತಿಳಿಸಿದನು. ಅದು ತತ್‌ಕ್ಷಣವೇ ನಡೆಯುವಂತಹದಲ್ಲ. ಸ್ವಲ್ಪ ಕಾಲವು ಬೇಕಾಗುತ್ತಿದ್ದಿತು. ಫೆಬ್ರವರಿ 22 ನೆಯ ತಾರೀಖು ಬಂದಿತು. ಎಲ್ಲವೂ ಮೊದಲಂತೆಯೇ ಇದ್ದಿತು. ಜನಗಳು ಬಹಳ ಕೋಪಗೊಂಡರು. ಸೇನಾಪತಿಯು ಇಷ್ಟೊಂದು ಸೋಮಾರಿಯಾಗಿ ಅನರ್ಹನಾದರೂ ಪ್ರೆಸಿಡೆಂಟನು ಅವನ ಬೆಂಬಲಕ್ಕೆ ನಿಲ್ಲುತ್ತಿರುವನೆಂದು ಅವರಿಗೆ ಅಸಮಾಧಾನವಾಯಿತು. ಆದರೆ ಈ ಸಮಯದಲ್ಲಿ ಮೆಕ್‌ಕ್ಲೆಲ್ಲನ್ನನಂತೆ ಉತ್ತಮನಾದವನು ಸಿಕ್ಕುವುದು ಕಷ್ಟವಾಗಿದ್ದಿತು.

ದಳಪತಿಯ ಉಪಾಯವು ಇದು : ತನ್ನ ಸೈನ್ಯವನ್ನು ಹಡಗಿನಮೂಲಕ ತೆಗೆದುಕೊಂಡು ಹೋಗಿ ಚೆಸಾಪೀಕ್ ಕೊಲ್ಲಿಯಲ್ಲಿ ತೀರದ ಮೇಲೆ ಇಳಿಸಿ ಮುಂದೆ ಹೊರಡಬೇಕು. ಅದರ ವಿವರವನ್ನೆಲ್ಲಾ ತಿಳಿಯುವುದಕ್ಕೋಸ್ಕರ ಲಿಂಕನ್ನನು ಅವನಿಗೆ ಕೆಲವು ಪ್ರಶ್ನೆಗಳನ್ನು ಬರೆದು ಕಳುಹಿಸಿ ಉತ್ತರವನ್ನು ಕೋರಿದನು. ಸರಿಯಾದ ಉತ್ತರವು ಬರಲೇ ಇಲ್ಲ. ಅವನ ಪ್ರಶ್ನೆಗಳು ಈ ರೀತಿಯಾಗಿದ್ದುವು : ಮೆಕ್‌ಕ್ಲೆಲ್ಲನ್ನನ ಉಪಾಯವು ಲಿಂಕನ್ನನದಕ್ಕಿಂತ ಅಲ್ಪಕಾಲವನ್ನೂ ಅಲ್ಪದ್ರವ್ಯವನ್ನೂ ಹಿಡಿಯುತ್ತಿದ್ದಿತೆ ? ಆ ಉಪಾಯದಿಂದ ಜಯವು ನಿಶ್ಚಯತರವೆ ? ಅದರಿಂದ ಪ್ರಯೋಜನವು ಹೆಚ್ಚೆ ? ಇದಿಷ್ಟು ಪ್ರಶ್ನೆಗಳಿಗೂ ಶತ್ರುವಿಗೆ ತನ್ನ ಆಲೋಚನೆಯು ತಿಳಿಯದೆಂಬುದೊಂದು ಮಾತೇ ಉತ್ತರವಾಗಿದ್ದಿತು. ಅದು ನಿಜ. ಆದರೆ ಸೈನ್ಯವು ಅಲ್ಲಿ ಇಳಿಯಲಾಗಿ ಶತ್ರುವು ಎದೆಗೆಡುತ್ತಿರಲಿಲ್ಲ. ಮೆಕ್‌ಕ್ಲೆಲ್ಲನ್ನನು ಅವರ ಮೇಲೆ ಹಠಾತ್ತಾಗಿ ನುಗ್ಗುವಷ್ಟು ಚಟುವಟಿಕೆಯುಳ್ಳವನಲ್ಲ. ಪ್ರತಿಯೊಂದರಲ್ಲಿಯೂ ತಾಮಸಮಾಡುತ್ತಿದ್ದನು. ಪ್ರತಿಯೊಂದು ಆಚರಣೆಯೂ ಶತ್ರುಗಳಿಗೆ ತಿಳಿದುಹೋಗುತ್ತಿದ್ದಿತು. ರಿಚ್‌ಮಂಡ್ ನಗರಕ್ಕೆ ಐವತ್ತು ಮೈಲಿಗಳ ದೂರದಲ್ಲಿದ್ದ ಅರ್ಬಾನ (Urbana) ವೆಂಬ ಸ್ಥಳದಲ್ಲಿ ತನ್ನ ಸೈನ್ಯವನ್ನಿಳಿಸಲು ಏರ್ಪಾಡುಮಾಡಿದ್ದನು. ಅವನು ಹೀಗೆ ಯೋಚಿಸುತ್ತಿರುವಲ್ಲಿ ಜಾನ್‌ಸ್ಟನ್ನನು ತನ್ನ ದಂಡನ್ನು ಕರೆದುಕೊಂಡು ಇನ್ನೂ ದಕ್ಷಿಣಕ್ಕೆ ಹೊರಟುಹೋದನೆಂದು ಸಮಾಚಾರಬಂದಿತು. ಇನ್ನು ಉಪಾಯವಿರಲಿಲ್ಲ. ಮೆಕ್‌ಕ್ಲೆಲ್ಲನ್ನನು, ಸರ್ಕಾರದಲ್ಲಿ ಬಿಗಿ ಸಾಲದೆ ತನ್ನ ಹಂಚಿಕೆಗಳು ಶತ್ರುವಿನ ಕಿವಿ

ಯನ್ನು ಮುಟ್ಟಿದುವೆಂದು ದೂರಿದನು. ಅದು ಶುದ್ಧ ಸುಳ್ಳು. ಆಬಳಿಕ ಆರ್ಬಾನಕ್ಕೆ ಹೋಗುವುದು ವ್ಯರ್ಥವೆಂದೂ ಅದಕ್ಕೆ ಬದಲು ಮನ್ರೋದುರ್ಗವನ್ನು ಹಿಡಿಯಬೇಕೆಂದೂ ಅವನ ಬಳಿಯ ಹುದ್ದೇದಾರರು ಸೂಚಿಸಿದರು. ಜಾನ್ಸ್ಟನ್ನನು ಹೊರಟುಹೋದ ಕೆಲವು ದಿನಗಳ ತರುವಾಯ ದಳವು ಆ ಪ್ರದೇಶಕ್ಕೆ ನಡೆಯಿತು. ಇದು ಮೆಕ್‌ಕ್ಲೆಲ್ಲನ್ನನು ಮಾಡಿದ ಮಹಾಪ್ರಯತ್ನ. ಕಾಲವು ಜುಲೈ ತಿಂಗಳ ಕೊನೆಯವರೆಗೂ ಹಿಡಿಯಿತು. ಪ್ರಯತ್ನವು ಕೈಗೂಡಲಿಲ್ಲ. ಬೂದಿಯಲ್ಲಿ ಹೋಮಮಾಡಿದಂತಾಯಿತು.

ಆ ದಳಪತಿಯು ವ್ಯರ್ಥವಾಗಿ ಕಾಲಹರಣಮಾಡುತ್ತಿದ್ದನು. ತಾನು ಹೋಗುತ್ತಿರುವ ಸ್ಥಳವೆಂಥದೆಂಬುದನ್ನು ಮೊದಲು ಸ್ಪಷ್ಟವಾಗಿ ತಿಳಿದುಕೊಳ್ಳಲಿಲ್ಲ. ಅವನ ನಿರೀಕ್ಷಣೆಯಂತೆ ಶತ್ರುಗಳು ಸನ್ನದ್ಧರಾಗದೆ ಇರಲಿಲ್ಲ. ಅವರ ವಶದಲ್ಲಿದ್ದ ಯಾರ್ಕ್‌ಟೌನ್ ಎಂಬ ದುರ್ಗವನ್ನು ತಲಪುವುದರಲ್ಲಿ ಒಂದು ತಿಂಗಳನ್ನು ಕಳೆದನು. ದುರ್ಗದಲ್ಲಿ ರಕ್ಷಣೆಯು ಬಲವಾಗಿಲ್ಲದಿದ್ದುದರಿಂದ ಆಕ್ರಮಣಮಾಡಿದ್ದಪಕ್ಷದಲ್ಲಿ ಅದು ಸುಲಭವಾಗಿ ಕೈಸೇರುತ್ತಿದ್ದಿತು. ಕೂಡಲೇ ಜಾನ್ಸ್ಟನ್ನನು ಎದುರಾದನು. ಎಂದಿನಂತೆ ಮೆಕ್‌ಕ್ಲೆಲ್ಲನ್ನನು ಶತ್ರುಸೈನ್ಯವು ಅಗಾಧವಾಗಿದೆಯೆಂದೆಣಿಸಿ ಕೈಮೂಡಲು ಹಿಂದೆಗೆದನು. ದಂಡು ಬೇಕೆಂಬ ಅವನ ದೂರು ಪ್ರಾರಂಭವಾಗಲಾಗಿ ಸರ್ಕಾರವು ಅವನ ಹತ್ತಿರದ್ದ 1,00,000 ಸೈನ್ಯದ ಜೊತೆಗೆ ಸ್ವಲ್ಪ ಕಾಲದೊಳಗೆ 40,000 ದಂಡನ್ನು ಕಳುಹಿಸಿತು. ದಕ್ಷಿಣದ ಸೈನ್ಯವು ಅದರ ಅರ್ಧಕ್ಕೂ ಕಡಿಮೆಯಾಗಿದ್ದಿತು. ಸಾವಕಾಶವಾದರೆ ಶತ್ರುವು ಭದ್ರಪಡಿಸಿಕೊಳ್ಳಲಾಸ್ಪದವಾಗುವುದರಿಂದ ತತ್‌ಕ್ಷಣವೇ ಶತ್ರುವಿನ ಮೇಲೆರಗಬೇಕೆಂದು ಲಿಂಕನ್ನನು ಕಾಗದದಮೇಲೆ ಕಾಗದವನ್ನು ಬರೆದನು. ಸರ್ಕಾರವು ಮಾಡಿದಹಾಗೆ ಇನ್ನಾರೂ ಸಹಾಯವನ್ನು ಮಾಡಲಾರರು. ಆದರೂ ದಳಪತಿಯು ತನ್ನ ಕಾಗದಗಳಲ್ಲಿ ರಾಜಧಾನಿಯನ್ನೂ ರಾಜಧಾನಿಯ ನಿವಾಸಿಗಳನ್ನೂ ಸರ್ಕಾರವನ್ನೂ ತನ್ನಬುದ್ಧಿಗೆ ತೋರಿದ ಹಾಗೆ ನಿಂದಿಸಿದನು. '' ನಿನ್ನ ಕಾರ್ಯದಲ್ಲಿ ಜನರು ಹುಳುಕನ್ನು ಹುಡುಕುತ್ತಾರೆಂದು ನೀನು ಕೊರಗಬಹುದು. ಆದರೆ ನನ್ನನ್ನು ತಾನೇ ಅಂಥವರು ಬಿಟ್ಟಿದ್ದಾರೆಯೇ ? '' ಎಂದು ಲಿಂಕನ್ನನು ಉತ್ತೇಜನವನ್ನೂ ಸಮಾಧಾನವನ್ನೂ ಹೇಳಿದನು. ಮೆಕ್‌ಕ್ಲೆಲ್ಲನ್ನನ ದೂರು ಕಡಿಮೆಯಾಗಲಿಲ್ಲ. ಅವನ ಸೋಮಾರಿತನವೂ ಕಡಿಮೆಯಾಗಲಿಲ್ಲ. ಜಾನ್ಸ್ಟನ್ನನೇ ಮೇಲೆ ಬಿದ್ದು ಯುದ್ಧಮಾಡಿದನು. ದೈವವಶದಿಂದ ಉತ್ತರದವರಿಗೆ ಜಯವಾಯಿತು. ಆದರೆ ದಳಪತಿಯು ಸೋತು ಓಡುವ ಶತ್ರುವನ್ನು ಹಿಂಬಾಲಿಸಲಿಲ್ಲ. ಮೆಕ್‌ಡೊವೆಲ್ಲನು ಬರದಿದ್ದುದರಿಂದಲೇ ತಾನು ಮುಂದಕ್ಕೆ ಹೆಜ್ಜೆಹಾಕಲಿಲ್ಲವೆಂದು ಮೆಕ್‌ಕ್ಲೆಲ್ಲನ್ನನು ನೆಪಹೇಳಿದನು. ಆದರೆ ಅವನು ಬರೆದ ಕಾಗದಗಳನ್ನೋದಲಾಗಿ ಈ ಮಾತು ಸುಳ್ಳಾಗುವುದು. ಯುದ್ಧದಲ್ಲಿ ಜಯವಾಗಲಾಗಿ ವಾಷಿಂಗ್ಟನ್ನಿಗಿದ್ದ ವಿಪತ್ತು ತಪ್ಪಿತು. ಮೆಕ್‌ಡೊವೆಲ್ಲನು ಅಷ್ಟೊಂದು ಆವಶ್ಯಕವಾಗಿ ಕಾಣಲಿಲ್ಲ. ಆದ್ದರಿಂದ ಅವನನ್ನು ದಳಪತಿಯ ಬಳಿಗೆ ಸೈನ್ಯದೊಡನೆ ಕಳುಹಿಸಬೇಕೆಂದು ಪ್ರೆಸಿಡೆಂಟನು ಯೋಚಿಸಿದನು. ಅಷ್ಟರಲ್ಲಿ ಅವನ ಯೋಚನೆಯನ್ನು ನಡೆಯಗೊಡದಂತಹ ಪ್ರಸಂಗವೊಂದೊದಗಿತು.

ಜಾಕ್ಸನ್ನನ ದಂಡಯಾತ್ರೆಯು ಇದೇ ಸಮಯದಲ್ಲಿ ನಡೆಯಿತು. ಅದು ಬಹಳ ಪ್ರಸಿದ್ಧವಾದುದು. ಸೈನ್ಯಾಧಿಪತಿಗಳು ಒಬ್ಬರಾದರೂ ಹತ್ತಿರವಿರಲಿಲ್ಲ. ಪ್ರೆಸಿಡೆಂಟನೂ ಸ್ಟಾಂಟನ್ನನೂ ಸೇರಿ ಆ ವೇಳೆಯಲ್ಲಿ ಸೈನ್ಯವನ್ನು ನಡೆಯಿಸಿದರು. ರಾಜಧಾನಿಗೆ ದಕ್ಷಿಣದಲ್ಲಿ ಜನರಲ್ ಬ್ಯಾಂಕ್ಸ್ ಮತ್ತು ಫ್ರೇಮಾಂಟರ ಕೈಕೆಳಗೆ ಎರಡು ಸೈನ್ಯಗಳಿದ್ದುವು. ಬ್ಯಾಂಕ್ಸನು ಪ್ರಕೃತದಲ್ಲಿ ಷೆನಾಂಡೋವ ಬಯಲಿನಲ್ಲಿದ್ದ ಜಾಕ್ಸನ್ನನ ಮೇಲೆ ಕಾವಲಾಗಿ ಸೈನ್ಯವನ್ನಿಟ್ಟುಕೊಂಡು ಕುಳಿತಿದ್ದನು. ಅಷ್ಟರಲ್ಲಿ ಫ್ರೇಮಾಂಟನು ಪ್ರೆಸಿಡೆಂಟನ ಬಳಿಗೆ ಬಂದು ತಾನು ಪಶ್ಚಿಮ ವರ್ಜಿನಿಯದ ಮೂಲಕ ಸಾಗಿ ಟೆನ್ನೆಸ್ಸೀಯಲ್ಲಿರುವ ಸಂಯೋಗಪಕ್ಷಪಾತಿಗಳಾದ ಜನರನ್ನು ತೊಂದರೆಯಿಂದ ಪಾರುಮಾಡಿಸುವುದಾಗಿ ಸೂಚಿಸಿದನು. ಹಾಗೆ ಮಾಡಲು ಅನುಮತಿಯೂ ಲಭ್ಯವಾಯಿತು. ಆದರೆ ಅವನನ್ನು ಅಲ್ಲಿಗೆ ಕಳುಹಿಸಿಕೊಡಲು ಅವಕಾಶವಾಗಲಿಲ್ಲ. ಆದರೂ ಉತ್ತರದ ಸೈನ್ಯಗಳು ಆ ಕಾಲದಲ್ಲಿ ಒಂದೇ ಕಡೆಯಲ್ಲಿರಲಿಲ್ಲ. ಲೀಯೂ ಜಾಕ್ಸನ್ನನೂ ಒಟ್ಟಾಗಿಸೇರಿ ಏನು ಮಾಡುವರೋ ಎಂದು ಎಲ್ಲರೂ ತಲ್ಲಣಿಸುತ್ತಿದ್ದರು. ನಿರ್ಣಯಿಸಲು ಸಾಧ್ಯವಾಗಿರಲಿಲ್ಲ. ಮೇ ತಿಂಗಳ ಮೊದಲಲ್ಲಿ ಅಲ್ಲಲ್ಲಿ ಜಯಗಳನ್ನು ಪಡೆದು ಪಶ್ಚಿಮ ವರ್ಜಿನಿಯವನ್ನು ನುಗ್ಗಿ ಲೂಟಿಮಾಡಿದ್ದ ಜಾಕ್ಸನ್ನನು ಈಗ ಮುಂದಕ್ಕೆ ಹೊರಟನು. ಅವನ ಸೈನ್ಯವು ಸಣ್ಣದು. ಸುತ್ತಲೂ ಶತ್ರುವಿನ ಸೈನ್ಯಗಳು ಮುತ್ತಿಕೊಂಡಿದ್ದುವು. ಈ ಸೈನ್ಯಗಳು ಒಂದಾಗಿ ಸೇರಿ ಕೈಮಾಡಿದ್ದರೆ ಜಾಕ್ಸನ್ನನ ದಂಡು ಅರೆದುಹೋಗುತ್ತಿದ್ದಿತು. ಆದರೆ ಜಾಕ್ಸನ್ನನು ಪ್ರತಿಯೊಂದರ ಮೇಲೂ ಅದರ ಬಲಹೀನವಾದ ಕಡೆಯಿಂದ ಎರಗಿ ಬಡಿದುಹಾಕಿದನು. ವಾಷಿಂಗ್ಟನ್ನಿಗೆ ಮತ್ತೆ ವಿಪತ್ತಿನ ಸಂಭವವುಂಟಾಯಿತು. ಉತ್ತರದ ಈ ಮೂರು ದಂಡುಗಳನ್ನೂ ಒಟ್ಟು ಸೇರಿಸಿ ನಡೆಯಿಸಲು ಯಾರೂ ಸಿಕ್ಕುವಂತೆ ತೋರಲಿಲ್ಲ. ಮೆಕ್‌ಡೊವೆಲ್ಲನನ್ನು ಅವನಿದ್ದ ಸ್ಥಳದಿಂದ ಕರೆಯಿಸಿದರೆ ಪ್ರಮಾದವುಂಟಾಗುತ್ತಿದ್ದಿತು. ಆದಕಾರಣ ಪ್ರೆಸಿಡೆಂಟನು ತಾನೇ ಆಧಿಪತ್ಯವನ್ನು ವಹಿಸಿ ನಿಂತು ಮೂರು ಮಂದಿ ದಳಪತಿಗಳೂ ಹೀಗೆ ಹೀಗೆ ಮಾಡಬೇಕೆಂಬುದನ್ನು ಗೊತ್ತುಮಾಡಿದನು. ಷೆರ್ಮನ್ನನು ಹೇಳಿದಹಾಗೆ, ಅವನ "ಬುದ್ಧಿಯ ಬೆಂಬಲ" ವಿಲ್ಲದಿದ್ದರೆ ಈಕದನದಲ್ಲಿ ಸೋಲುಂಟಾಗಿ ರಾಜಧಾನಿಯು ಶತ್ರುಗಳ ಕೈಗೆ ಬೀಳುತ್ತಿದ್ದಿತು. ಲಿಂಕನ್ನನು ವ್ಯೂಹವೊಂದನ್ನು ರಚಿಸಿದನು. ಬಹಳ ಕಷ್ಟವಾದುದು. ಆದರೆ ನಿರಾಟಂಕವಾಗಿ ನಡೆದಿದ್ದರೆ ಜಾಕ್ಸನ್ನನು ಸೈನ್ಯದೊಡನೆ ಪುಡಿಪುಡಿಯಾಗುತ್ತಿದ್ದನು. ಅವನ ಯೋಚನೆಯು ನಡೆಯಲಿಲ್ಲ. ಫ್ರೇಮಾಂಟನು ಅವಿಧೇಯನಾಗಿ ಪ್ರೆಸಿಡೆಂಟನು ಹೇಳಿದುದನ್ನು ಮಾಡಲಿಲ್ಲ. ಪ್ರಾಯಶಃ ಹಗೆತೀರಿಸಿಕೊಳ್ಳುವುದಕ್ಕೋಸ್ಕರ ಅವನು ಹೀಗೆ ನಡೆದಿರಬಹುದು. ಲಿಂಕನ್ನನು ಆಕ್ಷಣವೇ ಅವನನ್ನು ಕೆಲಸದಿಂದ ತೆಗೆದನು. ಜಾಕ್ಸನ್ನನು ಅವಕಾಶಹೊಂದಿ ತಲೆ ತಪ್ಪಿಸಿಕೊಂಡು ದಕ್ಷಿಣಕ್ಕೋಡಿದನು. ಅವನಿರುವವರೆಗೂ ಮೆಕ್‌ಡೊವೆಲ್ಲನು ಮೆಕ್‌ಕ್ಲೆಲ್ಲನ್ನನನ್ನು ಸೇರಿಕೊಳ್ಳಲಾಗಲಿಲ್ಲ. ಈ ಸಮಯಕ್ಕೆ ಲೀಯು ಬಂದು ಗಾಯಹೊಂದಿದ ಜಾನ್‌ಸ್ಟನ್ನನಿಗೆ ಬದಲಾಗಿ ದಕ್ಷಿಣದ ದಂಡಿನ ಆಧಿಪತ್ಯವನ್ನು ವಹಿಸಿದನು. ಕೆಲವು ದಿವಸಗಳ ಬಳಿಕ ಪ್ರೆಸಿಡೆಂಟನು ಜನರಲ್ ಸ್ಕಾಟನ ಸಲಹೆಯನ್ನನುಸರಿಸಿ

ಜನರಲ್ ಹಾಲೆಕ್‌ನನ್ನು ಪಶ್ಚಿಮದಿಂದ ಬರಮಾಡಿ ಮುಖ್ಯಸೇನಾಪತಿಯನ್ನಾಗಿ ಗೊತ್ತುಮಾಡಿದನು. ಅವನ ಪೂರ್ವದ ಸ್ಥಾನಕ್ಕೆ ಗ್ರಾಂಟನು ಏರಿದನು. ಹಾಲೆಕ್‌ನು ಕೊನೆಯವರೆಗೂ ವಾಷಿಂಗ್ಟನ್ನಿನಲ್ಲಿಯೇ ನಿಂತು ಯುದ್ಧದ ವಿಚಾರದಲ್ಲಿ ಆಲೋಚನೆಗಳನ್ನು ಹೇಳುತ್ತಿದ್ದನು.

ರಿಚ್‌ಮಂಡನ್ನು ಸಾವಕಾಶವಾಗಿ ತಲಪುತ್ತಿದ್ದ ಮೆಕ್‌ಕ್ಲೆಲ್ಲನ್ನನ ದಂಡಿಗೂ ಲೀಯ ದಂಡಿಗೂ ಕೆಲವು ಯುದ್ಧಗಳಾದುವು. ಫಲಿತಾಂಶವು ಒಂದೊಂದರಲ್ಲಿ ಒಂದೊಂದು ವಿಧವಾಗಿರುತ್ತಿದ್ದಿತು. ಒಟ್ಟಿನಲ್ಲಿ ಉತ್ತರದ ಸೈನ್ಯಕ್ಕೆ ಭದ್ರವಾದೊಂದು ಸ್ಥಳವು ಲಭ್ಯವಾಗಿ ಅನುಕೂಲವಾಗಿದ್ದಿತು. ಆ ಸಮಯದಲ್ಲಿ ಜಾಕ್ಸನ್ನನು ತನ್ನ ಸೈನ್ಯವನ್ನು ತೆಗೆದುಕೊಂಡು ಬಂದು ಉತ್ತರದ ಪಡೆಯ ಬಲಭಾಗದ ಮೇಲೆ ಬಿದ್ದನು. ಸನ್ನಿವೇಶವು ಮೆಕ್‌ಕ್ಲೆಲ್ಲನ್ನನಿಗೆ ಬಹಳ ಅಪಾಯವನ್ನುಂಟುಮಾಡುವಂತಹದಾಗಿದ್ದಿತು. ಅವನು ಬಹಳ ಹೆದರುವನೆಂದು ಲೀಯು ತಿಳಿದಿದ್ದನು. ಮೆಕ್‌ಕ್ಲೆಲ್ಲನ್ನನೂ ಅಂಥವನೇ. ಯುದ್ಧದಲ್ಲಿ ಜಯವಾಗಿ ಉತ್ತರಕ್ಕೆ ಅನುಕೂಲವಾಗುವುದನ್ನು ಅವನು ಮುಖ್ಯವೆಂದು ಎಣಿಸಲಿಲ್ಲ; ಸೋತಪಕ್ಷದಲ್ಲಿ ನಿರಪಾಯವಾಗಿ ಹಿಂದಿರುಗಲು ಮಾರ್ಗವನ್ನು ಹುಡುಕಿಟ್ಟುಕೊಳ್ಳುವುದು ಮುಖ್ಯವಾಗಿದ್ದಿತು. ಕೈಕೆಳಗಿನ ಹುದ್ದೇದಾರರು ಯುದ್ಧಮಾಡಲು ಆತುರವುಳ್ಳವರಾಗಿದ್ದರು. ಈತಡವೆ ಮಾತ್ರ ಅವನು ಹಾಗೆ ಮಾಡಲಿಲ್ಲ. ಲೀಯ ತಿಳುವಳಿಕೆಯು ತಪ್ಪಾಯಿತು. ಮೆಕ್‌ಕ್ಲೆಲ್ಲನ್ನನು ಹಿಂಜರಿದು, ತಾನು ಮೊದಲಿದ್ದ ಸ್ಥಳಕ್ಕೆ ಹೋಗದೆ ಬೇರೊಂದು ಸ್ಥಳಕ್ಕೆ ಹೋದನು. ಇಲ್ಲಿ ಸೈನ್ಯವು ಸುರಕ್ಷಿತವಾಯಿತು. ಯಾವಾಗ ಬೇಕಾದರೂ ಈ ಸ್ಥಳದಿಂದ ರಿಚ್‌ಮಂಡಿನ ಮೇಲೆ ದಂಡೆತ್ತಿ ನಡೆಯಬಹುದು. ಆದರೆ ದಕ್ಷಿಣವು ಹೆದರಲಿಲ್ಲ. ತನ್ನ ಸೇನಾಪತಿಯ ಮೇಲೆ ಭಾರಹಾಕಿ ಸ್ವಸ್ಥವಾಗಿದ್ದಿತು. ಸೇನಾಪತಿಯೂ ಕೂಡ ತನ್ನ ಮೇಲೆ ಬಿದ್ದ ಭಾರವನ್ನು ಹೊರಲು ಸಮರ್ಥನಾದವನು.

ಆರೇಳು ದಿನಗಳಲ್ಲಿ ಮೂರನೆಯ ದಿನ ನಡೆದ ಯುದ್ಧದಲ್ಲಿ ಪ್ರಾಣಹಾನಿಯೂ ರಕ್ತಶೋಷಣೆಯೂ ಬಹಳವಾಯಿತು. ಮೆಕ್‌ಕ್ಲೆಲ್ಲನ್ನನು ಅದನ್ನು ನೋಡಿ ನೊಂದುಕೊಂಡನು. ಅವನ ದಂಡಿನಲ್ಲಿಯೂ ಅನೇಕರು ಗಾಯಪಟ್ಟು ಬಿದ್ದರು. ಆ ಕೂಡಲೇ ಹೆಚ್ಚಾಗಿ ಸೈನಿಕರನ್ನು ಕಳುಹಿಸಬೇಕೆಂದು ಪ್ರೆಸಿಡೆಂಟನಿಗೆ ತಂತಿಯನ್ನು ಕೊಟ್ಟನು. ತನ್ನ ಸೈನ್ಯವು ಬಹಳ ದುರ್ಬಲವಾದುದೆಂದು ಅವನಿಗೆ ತೋರಿತು. ಕೊನೆಯಲ್ಲಿ ''ಸೈನ್ಯವೇನಾದರೂ ಉಳಿದಪಕ್ಷದಲ್ಲಿ, ನಿಮಗಾಗಲೀ ಅಥವಾ ವಾಷಿಂಗ್ಟನ್ನಿನಲ್ಲಿ ಇನ್ನಾರಿಗಾಗಲೀ ಧನ್ಯವಾದಗಳನ್ನು ಹೇಳಬೇಕಾಗಿಲ್ಲವೆಂದು ಬಾಯಿಬಿಟ್ಟು ಹೇಳುವೆನು. ನಮ್ಮ ಈ ಸೈನ್ಯವು ಧ್ವಂಸವಾಗಲು ನೀವು ನಿಮ್ಮ ಕೈಲಾದುದೆಲ್ಲವನ್ನೂ ಮಾಡಿರುವಿರಿ'' ಎಂದಿದ್ದನು. ಸೇನಾಪತಿಯ ಧ್ವನಿಯು ಈ ರೀತಿಯಾಗಿದ್ದರೂ ಯುದ್ಧದ ಸೆಕ್ರೆಟರಿಯ ಧ್ವನಿಯು ಭರವಸೆಯಿಂದ ತುಂಬಿದ್ದಿತು. ರಿಚ್‌ಮಂಡ್‌ನಗರವು ವಶವಾಗುವುದೆಂತಲೇ ಅವನು ನಂಬಿದನು. ಅದಾದ ಮೇಲೆ ಶತ್ರುವಿನ ಬೇರನ್ನೇ ಕಿತ್ತುಹಾಕಿದಂತಾಗುವುದರಿಂದ ಯುದ್ಧವು ಮುಗಿದು ಹೋಗುವುದೆಂದು ಭಾವಿಸಿ ಸೈನ್ಯಕ್ಕೆ ಜನಗಳನ್ನು ಸೇರಿಸುವುದನ್ನು ನಿಲ್ಲಿಸಿಬಿಟ್ಟನು.

ಎಂತಹ ದುಡುಕಿನ ಕೆಲಸ ! ಆದರೆ ಈಗ, ಸಿವರ್ಡನ ಮೂಲಕ ಸಂಸ್ಥಾನಗಳ ಗೌರ್ನರುಗಳನ್ನು ಪ್ರಾರ್ಥಿಸಿ 300,000 ಮಂದಿಯುಳ್ಳ ಸೈನ್ಯವನ್ನು ಮೆಕ್‌ಕ್ಲೆಲ್ಲನ್ನನ ಬೆಂಬಲಕ್ಕೆ ಕಳುಹಿಸಲು ಸರ್ವಸಾಹಸವನ್ನೂ ಮಾಡಿದನು. ಲಿಂಕನ್ನನಿಗೆ ಇದೆಲ್ಲಾ ವಿಚಿತ್ರವೆಂದು ತೋರಿತು. ಅವನು ಬಹಳವಾಗಿ ದಿಗಿಲುಬಿದ್ದನು. ಮೆಕ್‌ಕ್ಲೆಲ್ಲನ್ನನಿಗೆ ಬುದ್ಧಿಯು ನೆಟ್ಟಗಿರುವುದೇ ಎಂಬ ಸಂಶಯವೂ ಉಂಟಾಯಿತು. ಅವನು ದಳಪತಿಗೆ ಉತ್ತರವನ್ನು ಕಳುಹಿಸಿದನು. '' ಎಷ್ಟು ಕಷ್ಟವಾದರೂ ಎಷ್ಟುನಷ್ಟವಾದರೂ ಚಿಂತೆಯಿಲ್ಲ, ಸೈನ್ಯವನ್ನು ಉಳಿಸು ; ಆದಷ್ಟು ಬೇಗ ಸೈನ್ಯವನ್ನು ಕಳುಹಿಸುವೆವು. ಆದರೆ ಅದು ಈ ದಿನ, ಅಥವಾ ನಾಳೆನಾಡಿದ್ದಿನೊಳಗಾಗಿ ನಿನ್ನನ್ನು ತಲಪಲಾರದು. ಸೈನ್ಯವನ್ನು ಕಳುಹಿಸಿಕೊಡಬೇಕೆಂದು ನೀನು ಕೇಳಿದುದು ತಪ್ಪಲ್ಲ. ಬೇಗ ಕಳುಹಿಸಲಿಲ್ಲವೆಂದು ನಮ್ಮನ್ನು ದೂರುವುದು ತಪ್ಪು. ನಿನ್ನ ಸೈನ್ಯಕ್ಕಾಗಲೀ ನಿನಗಾಗಲೀ ಅಪಾಯವುಂಟಾದರೆ ನಿನಗೆ ಎಷ್ಟು ಸಂಕಟವಾಗುವುದೋ ನನಗೂ ಅಷ್ಟೇ ಸಂಕಟವಾಗುವುದು. ಯುದ್ಧವು ಒಂದೇಸಮನಾದರೆ ಅಥವಾ ನೀನು ಆದರಲ್ಲಿ ಸೋತರೆ ಪ್ರಯೋಜನವಾಗದು. ನಾವು ವಾಷಿಂಗ್ಟನ್ನನ್ನು ಕಾಪಾಡಿದೆವು. ಶತ್ರುವು ನಿನ್ನಮೇಲೆ ತಿರುಗಿತು. ಅಲ್ಲಿದ್ದ ಸೈನ್ಯವನ್ನು ನಿನಗೆ ಕಳುಹಿಸಿದ್ದರೆ, ಸೈನ್ಯವು ನಿನ್ನನ್ನು ಸೇರುವಷ್ಟರೊಳಗೇ ನಾವು ನಾಶವಾಗುತ್ತಿದ್ದೆವು. ಒಂದು ವಾರದ ಹಿಂದೆ, ಶತ್ರುವಿನ ಸೈನ್ಯವೊಂದು ರಿಚ್‌ಮಂಡಿನಿಂದ ಹೊರಟು ವಾಷಿಂಗ್ಟನ್ನಿನ ಕಡೆಗೆ ನಡೆಯುತ್ತಿರುವುದಾಗಿ ನೀನೇ ತಿಳಿಸಿದ್ದೆ. ಸ್ಥಿತಿಯು ಹೀಗಿರುವಾಗ ನೀನಾಗಲೀ ಸರ್ಕಾರವಾಗಲೀ ತಪ್ಪಿಗೆ ಸಿಕ್ಕಲಾರರಿ. ದಯೆಯಿಟ್ಟು ಸದ್ಯದಲ್ಲಿ ಅಲ್ಲಿನ ಸ್ಥಿತಿಯು ಹೇಗಿರುವುದೆಂಬುದನ್ನು ಕೂಡಲೇ ತಿಳಿಸು ''.

ದಂಡು, ದಂಡು, ದಂಡು ! ದಂಡು ಬೇಕೆಂದು ಮೆಕ್‌ಕ್ಲೆಲ್ಲನ್ನನಿಂದ ತಂತಿಯು ಬರುತ್ತಲೇ ಇದ್ದಿತು. ಕಳುಹಿಸುವ ದಂಡು ಅಲ್ಪ ಸ್ವಲ್ಪವಾದರೆ ಅವನಿಗೆ ಖಂಡಿತ ಸಾಲದು. ಅಷ್ಟೊಂದು ಸೈನ್ಯವನ್ನು ಕಳುಹಿಸಲಾಗುವುದಿಲ್ಲವೆಂದು ಹೇಳಿ ಲಿಂಕನ್ನನು, '' ಸೈನ್ಯವು ಬರದಿದ್ದರೆ ನನ್ನ ತಪ್ಪು ಸ್ವಲ್ಪವೂ ಇಲ್ಲವೆಂದು ನೀನು ಹೇಳುವೆ. ನಿನ್ನ ಶಕ್ತಿಮೀರಿ ನೀನು ನಿರ್ವಹಿಸಬೇಕೆಂದು ನಾನು ಹೇಳುವುದಾಗಿ ಭಾವಿಸಿದ್ದರೆ ದಯೆಯಿಟ್ಟು ಅಂಥ ಭಾವನೆಯನ್ನು ಬಿಡು. ಅದೇರೀತಿಯಲ್ಲಿ, ನನ್ನಿಂದ ಸಾಧ್ಯವಾಗದುದನ್ನು ಬೇಕೆಂದು ಕೇಳಕೂಡದೆಂತಲೇ ನನ್ನ ಪ್ರಾರ್ಥನೆಗಳು '' ಎಂದು ಕೊನೆಯಲ್ಲಿ ಬರೆದನು. ಈ ಪ್ರಸಂಗದಲ್ಲಿ, ವಾಷಿಂಗ್ಟನ್ನಿನ ರಕ್ಷಣೆಯು ಬಲವಾಗಿರಬೇಕೆಂದು ಪ್ರೆಸಿಡೆಂಟನ ಮನಸ್ಸಿನಲ್ಲಿದ್ದ ಯೋಚನೆಯು ವ್ಯರ್ಥವಾದುದಲ್ಲ. ಸಾಧ್ಯವಾಗದುದನ್ನು ಕಳುಹಿಸೆಂದು ಪ್ರಾರ್ಥಿಸುತ್ತಿರಲು ಮೆಕ್‌ಕ್ಲೆಲ್ಲನ್ನನ ಮನಸ್ಸಿನಲ್ಲಿ ಚಪಲವಿದ್ದುದು ಸುಳ್ಳಲ್ಲ. ಆದರೆ ಅವನ ವಿಷಯದಲ್ಲಿ ಲಿಂಕನ್ನನಿಗಿದ್ದ ಅಸಾಧಾರಣವಾದ ತಾಳ್ಮೆಯೂ ಭರವಸೆಯೂ ಸುಳ್ಳಲ್ಲ.

ಲೀಯೊಡನೆ ಯುದ್ಧಮಾಡಲು ದಳಪತಿಯು ಕ್ಷೇಮವಾದೊಂದು ಸ್ಥಳಕ್ಕೆ ಹೋದನಷ್ಟೆ. ಅಲ್ಲಿಗೆ ಹೋದ ಐದು ದಿವಸಗಳ ಮೇಲೆ ಅವನು ಪ್ರೆಸಿಡೆಂಟನಿಗೆ ಉದ್ದನಾದೊಂದು ಕಾಗದವನ್ನು ಬರೆದನು. ಅದರಲ್ಲಿ ಪ್ರೆಸಿಡೆಂಟನ ಕರ್ತವ್ಯ

ಗಳನ್ನು ಕುರಿತು ನಾನಾವಿಧವಾದ ಸಲಹೆಗಳಿದ್ದುವು. ಆ ಕಾಗದವನ್ನು ಕಳುಹಿಸ ಬೇಕೆಂದಿರುವಷ್ಟರಲ್ಲಿ ಪ್ರೆಸಿಡೆಂಟನೇ ಅಲ್ಲಿಗೆ ಬಂದನು. ಪ್ರಕೃತದ ಸ್ಥಿತಿಯನ್ನು ನೋಡಿಕೊಂಡು ಹೋಗಬೇಕೆಂಬುದು ಪ್ರಯಾಣದ ಉದ್ದೇಶನಾಗಿದ್ದಿತು. ಮೆಕ್‌ಕ್ಲೆಲ್ಲನ್ನನು ತನ್ನ ಕಾಗದವನ್ನು ಲಿಂಕನ್ನನ ಕೈಗೆ ಕೊಟ್ಟನು. ಲಿಂಕನ್ನನು ಓದಿ ನೋಡಿದನು. ಯಾವುದೊಂದು ಉತ್ತರವನ್ನೂ ಹೇಳಲಿಲ್ಲ.

ದಳಪತಿಯ ಮತ್ತು ಅವನ ಹುದ್ದೇದಾರರ ಅಭಿಪ್ರಾಯಗಳೇನೆಂಬುದನ್ನು ಪ್ರೆಸಿಡೆಂಟನು ವಿಚಾರಿಸಿದನು. ಅಭಿಪ್ರಾಯಗಳು ಒಂದಕ್ಕೊಂದು ವ್ಯತ್ಯಸ್ತನಾದರೂ, ಹುದ್ದೇದಾರರಿಗೆ, ಅಲ್ಲಿಯೇ ನಿಂತು ಯುದ್ಧಮಾಡಬೇಕೆಂಬ ಅಪೇಕ್ಷೆಯು ಬಹಳವಾಗಿದ್ದಿತು. ಆದರೆ ಅಲ್ಲಿನ ಹವವು ಸರಿಬಿದ್ದು ದಂಡು ಆರೋಗ್ಯದಿಂದ ಇರುವುದೇ ಎಂದು ಲಿಂಕನ್ನನಿಗೆ ಚಿಂತೆಹಿಡಿಯಿತು. ಅದಲ್ಲದೆ, ಮೆಕ್‌ಕ್ಲೆಲ್ಲನ್ನನು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊಡಲಿಲ್ಲ. ಸೈನ್ಯವು ಇಷ್ಟೇ ಇದೆ ಎಂಬುದನ್ನು ಸರಿಯಾಗಿ ಹೇಳಲಿಲ್ಲ. ರಿಚ್‌ಮಂಡನ್ನು ಸ್ವಾಧೀನಮಾಡಿಕೊಳ್ಳುವುದು ದೊಡ್ಡ ಕೆಲಸವಲ್ಲ; ಆದರೆ ಹೆಚ್ಚು ಸೇನೆಯು ಬೇಕು. ಪ್ರೆಸಿಡೆಂಟನಿಗೆ ಬೇಸರವಾಯಿತು. ಯಾವ ಮಾತಿಗಾದರೂ ದಂಡು ಬೇಕೆಂಬ ಪಲ್ಲವಿಯು ಹೊರತು ಮತ್ತಾವುದನ್ನೂ ಮೆಕ್‌ಕ್ಲೆಲ್ಲನ್ನನು ಹಾಡಲಿಲ್ಲ. ರಾಜಧಾನಿಯ ರಕ್ಷಣೆಗಾಗಿ ಇಟ್ಟಿರುವ ಸೈನ್ಯದಲ್ಲಿ ಕಡಿಮೆ ಹಾಕಿ ಮೆಕ್‌ಕ್ಲೆಲ್ಲನ್ನನಿಗೆ ಸಹಾಯವನ್ನು ಕಳುಹಿಸಲಾಗುವುದಿಲ್ಲವೆಂದು ಪ್ರೆಸಿಡೆಂಟನು ಹೇಳಿಬಿಟ್ಟನು.

ಹಾಲೆಕ್‌ನು ವಾಷಿಂಗ್ಟನ್ನಿಗೆ ಬಂದನು. ಬಂದ ಮಾರನೆಯ ದಿನವೇ ಅವನು ಸರ್ಕಾರದ ಅಪ್ಪಣೆಯ ಪ್ರಕಾರ ಮೆಕ್‌ಕ್ಲೆಲ್ಲನ್ನನ ಬಳಿಗೆ ಹೋದನು. ಹವವೂ ಸೈನಿಕರ ದೇಹಾರೋಗ್ಯವೂ ಕೆಡುವುದೆಂದು ಅವನಿಗೆ ಭೀತಿಯುಂಟಾಯಿತು. ಇತ್ತಲಾಗಿ, ಕೇಳಿದ ವಿಚಾರಕ್ಕೆಲ್ಲಾ ಮೆಕ್‌ಕ್ಲೆಲ್ಲನ್ನನು ಒಂದು ಸಾರಿ ಉಂಟೆನ್ನುತ್ತಲೂ ಮತ್ತೊಂದು ಸಾರಿ ಇಲ್ಲವೆನ್ನುತ್ತಲೂ ಆಗಬಹುದೆನ್ನುತ್ತಲೂ ಕೂಡದೆನ್ನುತ್ತಲೂ ಉತ್ತರ ಹೇಳಿದನು. ಹಾಲೆಕ್‌ನು ರಾಜಧಾನಿಗೆ ಹೋಗುವ ಕಾಲದಲ್ಲಿ ಅವನು, ತನ್ನ ದಂಡನ್ನೆಲ್ಲಾ ಹಿಂದಕ್ಕೆ ತೆಗೆದುಕೊಂಡು ಹೋಗಿ ಪೋಪನನ್ನು ಸೇರಬೇಕೆಂಬುದೇ ತನ್ನ ಅಭಿಮತವೆಂದು ಹೇಳಿದನು. ಆದರೆ ಹಾಲೆಕ್‌ನು ರಾಜಧಾನಿಯನ್ನು ತಲಪಿದ ಮೇಲೆ, ಮೆಕ್‌ಕ್ಲೆಲ್ಲನ್ನನು ಇದ್ದ ಸ್ಥಳದಲ್ಲಿಯೇ ನಿಂತು ಹೊಸದಾಗಿ ಬಂದ ಸೈನ್ಯವನ್ನು ಜೊತೆಮಾಡಿಕೊಂಡು ಪದಚಲನಮಾಡಲು ನಿಶ್ಚಯಿಸಿರುವುದಾಗಿ ಸಮಾಚಾರ ಬಂದಿತು. ಅವನೊಡನೆ ಇದ್ದ ಇತರ ಅಧಿಪತಿಗಳು ಹಿಂದಿರುಗುವುದೇ ಸರಿಯೆಂದು ಒತ್ತಾಯಮಾಡಿ ಮಂಜೂರಾತಿಗಾಗಿ ಹೇಳಿಕಳುಹಿಸಿದರು. ಅವರ ಮಾತನ್ನು ನಡೆಯಿಸುವುದು ಯುಕ್ತವೆಂದು ಹಾಲೆಕ್‌ನೂ ಲಿಂಕನ್ನನೂ ಭಾವಿಸಿದರು. ಸೈನ್ಯವನ್ನೆಲ್ಲಾ ಒಂದು ಕಡೆ ಸೇರಿಸಿ ರಾಜಧಾನಿಯನ್ನು ಕಾಪಾಡುವುದೊಂದೇ ಈಗಿನ ಸ್ಥಿತಿಯಲ್ಲಿ ಉಪಾಯವಾಗಿದ್ದಿತು. ಬಹಳನಾಗಿ ಆಲೋಚಿಸಿ ಅವರು ಈ ಮಾರ್ಗವನ್ನು ನಿರ್ಣಯಿಸಿದರು.

ಈ ಸಂದರ್ಭದಲ್ಲಿ ಯಾವ ಮಂತ್ರಿಯಾದರೂ ಅಥವಾ ಯಾವ ರಾಜನಾದರೂ

ಲಿಂಕನ್ನನು ಮಾಡಿದಂತೆ ಮಾಡಬೇಕಾಗುತ್ತಿದ್ದಿತು. ಆದರೆ ನಷ್ಟಗಳು ಕೂಡಲೇ ಪ್ರಾರಂಭವಾದುವು. ಅವುಗಳನ್ನು ನೋಡಿದರೆ, ಮೆಕ್‌ಕ್ಲೆಲ್ಲನ್ನನ ಮಾರ್ಗವನ್ನು ಅನುಸರಿಸದೆ ಉಪೇಕ್ಷಿಸಿದ ಸರ್ಕಾರಕ್ಕೆ ಆದ ಶಿಕ್ಷೆಯೆಂಬಂತೆ ತೋರುತ್ತಿದ್ದಿತು. ಆದರೆ ಉತ್ತರದಲ್ಲಿ ಆಡಳಿತವು ಒಂದು ನೆಲೆಗೆ ಬಂದಿದ್ದಿತು. ಸರ್ಕಾರವು ಅದರಿಂದ ಮುಂದಿದ್ದ ಮಾರ್ಗವನ್ನು ಅನುಸರಿಸಿ ಹೊರಡಲಾಗಿ, ಮೊದಲು ಸ್ವಲ್ಪ ನಷ್ಟವಾದರೂ, ಕೊನೆಯಲ್ಲಿ ಜಯವನ್ನು ಪಡೆಯಿತು. ಮೆಕ್‌ಕ್ಲೆಲ್ಲನ್ನನು ರಿಚ್‌ಮಂಡನ್ನು ಆಕ್ರಮಣಮಾಡಿ ವಶಮಾಡಿಕೊಂಡಿದ್ದರೂ, ಆ ಕಾಲದಲ್ಲಿ ರಾಜಧಾನಿಗೆ ಅಪಾಯ ತಟ್ಟದೆ ಸುರಕ್ಷಿತವಾಗಿದ್ದರೂ ಕೂಡ ದಕ್ಷಿಣದ ಸೊಕ್ಕನ್ನು ಮುರಿದಂತಾಗುತ್ತಿರಲಿಲ್ಲ. ದಾರಿಯು ಅದಲ್ಲವೇ ಅಲ್ಲ. ರಿಚ್‌ಮಂಡ್ ನಗರದ ಮೇಲೆ ನುಗ್ಗುವುದಾಗಿ ಹೆದರಿಸುತ್ತ, ಉತ್ತರದ ಸೈನ್ಯವು ಅದೇ ಸಮಯದಲ್ಲಿ ಪಶ್ಚಿಮಭಾಗದಿಂದ ಮೇಲೆ ಬಿದ್ದು ದಕ್ಷಿಣವು ಇಟ್ಟಿದ್ದ ಮೂಲಬಲವನ್ನು ಧ್ವಂಸಮಾಡಬೇಕು ; ಅಲ್ಲಲ್ಲಿರುತ್ತಿದ್ದ ಇತರ ದಕ್ಷಿಣದ ದಂಡುಗಳನ್ನೂ ಒಂದೊಂದಾಗಿ ಸದೆಬಡಿಯುತ್ತಿರಬೇಕು. ಹಾಗಾದರೆ, ಎಲ್ಲಾಕಡೆಯಿಂದಲೂ ಪೆಟ್ಟು ಬಿದ್ದು ದಕ್ಷಿಣವು ಪಾದಾಕ್ರಾಂತವಾಗುತ್ತಿದ್ದಿತು. ಈವುಪಾಯವು ಮೊದಲಿಂದಲೂ ಲಿಂಕನ್ನನ ಮನಸ್ಸಿನಲ್ಲಿದ್ದಿತು. ಇನ್ನಾವುದೂ ಅಷ್ಟು ಸಾಧುವಾಗಿ, ಕಾರ್ಯಸಾಧಕವಾಗಿರುವಂತೆ ತೋರಲಿಲ್ಲ. ಇತ್ತಲಾಗಿ ಮುಂದೆ ಒಂಭತ್ತು ತಿಂಗಳೊಳಗೆ ದಕ್ಷಿಣವು ಬುಲ್‌ರನ್, ಫ್ರೆಡರಿಕ್ಸ್‌ಬರ್ಗ್ ಮತ್ತು ಚಾನ್ಸೆಲರ್ಸ್‌ವಿಲ್ ಎಂಬ ಮೂರು ಸ್ಥಳಗಳಲ್ಲಿ ಉತ್ತರವನ್ನು ಸೋಲಿಸಿತು. ಆದರೆ ಈ ಸೋಲುಗಳಿಂದ ಉತ್ತರಕ್ಕೆ ಹೆಚ್ಚಾದ ಕೆಡಕು ಉಂಟಾಗಲಿಲ್ಲ. ಈ ಸಮಯದಲ್ಲಿ ಜೆಫೆರ್‌ಸನ್ ಡೇವಿಸ್ಸನು ಇತರ ಯೋಚನೆಗಳನ್ನೆಲ್ಲಾ ಬಿಟ್ಟು, ಕದನಗಳಲ್ಲಿ ಸೋತು ಓಡುತ್ತಿರುವ ಉತ್ತರದ ಸೈನ್ಯವನ್ನು ಹಿಂಬಾಲಿಸಿ ನುಗ್ಗಿದ್ದರೆ ಬಹಳ ಅನುಕೂಲವಾಗುತ್ತಿದ್ದಿತು. ಅವನು ಅದನ್ನು ಮಾಡಲಿಲ್ಲ—ಪ್ರಾಯಶಃ ಮಾಡಲಾಗಲಿಲ್ಲ. ಇನ್ನೂ ಒಂದು ಅವಿವೇಕದ ಕೆಲಸವನ್ನು ಮಾಡಿದನು. ಯಾವ ಸ್ಥಳದಲ್ಲಿ ಅಪಾಯವಿರಲಿಲ್ಲವೋ ಅಲ್ಲಿ ಬಹಳ ಅಪಾಯವಿರುವುದೆಂದು ಉತ್ಪ್ರೇಕ್ಷಿಸಿ ಅವನು ದೊಡ್ಡದೊಂದು ಸೈನ್ಯದೊಡನೆ ಲೀಯನ್ನು ನಿಲ್ಲಿಸಿದನು. ಇದು ವ್ಯರ್ಥಶ್ರಮ.

ಈ ಕಾಲದಲ್ಲಿ ಪೋಪನು ಚದರಿದ್ದ ದಂಡನ್ನು ಕೂಡಿಸಿ ತಯಾರುಮಾಡುವುದರಲ್ಲಿ ಬಹಳವಾಗಿ ಮನಸ್ಸಿಟ್ಟನು. ಸರದಾರರೂ ದಳಪತಿಗಳೂ ಅಲ್ಲಲ್ಲಿ ಸಣ್ಣ ಸಣ್ಣ ಸೈನ್ಯಗಳನ್ನು ಇಟ್ಟುಕೊಂಡು ತಮಗೆ ತೋರಿದಹಾಗೆ ಮಾಡುತ್ತಿರಗೊಡಲಿಲ್ಲ. ಪೂರ್ವಭಾಗದ ಯೋಧರನ್ನು ಕೀಳಾಗಿ ಕಂಡುದಲ್ಲದೆ ವರ್ಜೀನಿಯದ ಪ್ರಜೆಗಳಲ್ಲಿ ಒರಟುತನವನ್ನು ತೋರಿಸಿದನೆಂದು ಅಪರಾಧವು ಅವನ ಮೇಲೆ ಹೊತ್ತಿತು. ಆದರೆ ಒಟ್ಟಿನಲ್ಲಿ ಪ್ರಜೆಗಳಿಗೆ ಯುದ್ಧದಲ್ಲಿ ಭರವಸೆಯು ಹುಟ್ಟಿತು. ಅವನು ಕೆಲಸದಲ್ಲಿ ಬಹಳ ಸಮರ್ಥನಾದವನು. ಸದ್ಯದಲ್ಲಿ, ಪೋಪನ ಮತ್ತು ಮೆಕ್‌ಕ್ಲೆಲ್ಲನ್ನನ ಸೈನ್ಯಗಳನ್ನು ಒಂದು ಕಡೆಯಲ್ಲಿ ಸೇರಿಸಬೇಕೆಂಬ ಅಂಶವು ಎಲ್ಲರ ಮನಸ್ಸಿನಲ್ಲಿಯೂ ಹುಟ್ಟಿತು. ಮೆಕ್‌ಕ್ಲೆಲ್ಲನ್ನನು ಸೈನ್ಯದೊಡನೆ ಇದ್ದ ಸ್ಥಳದಲ್ಲಿರಲೆಂದು ಹೇಳಿ ಪೋಪನು ವರ್ಜೀನಿಯದೊಳಕ್ಕೆ ನುಗ್ಗಿದನು. ಆದರೆ ಅವನು ನುಗ್ಗಿದುದು ತೀರ ಹೆಚ್ಚಾ

ಯಿತು. ಲೀಯು ಜಾಕ್ಸನ್ನನನ್ನು ಕಳುಹಿಸಿದನು. ಆತನ ವೇಗವು ಮಿಂಚಿಗೆ ಸಮವಾಗಿದ್ದಿತು. ಈ ಹೊತ್ತಿನಲ್ಲಿ ಈ ಸ್ಥಳದಲ್ಲಿರುತ್ತಾನೆಂಬುದನ್ನು ತಿಳಿಯುವುದಕ್ಕಾಗುತ್ತಿರಲಿಲ್ಲ. ಪೋಪನಿಗೆ ಸ್ವಲ್ಪ ಪೆಟ್ಟು ಬಿದ್ದಿತು. ಆದರೆ ಉಪಾಯದಿಂದ ತಲೆತಪ್ಪಿಸಿಕೊಂಡನು. ಸೈನ್ಯವು ಸಾಲದಿದ್ದುದರಿಂದ ಮೆಕ್‌ಕ್ಲೆಲ್ಲನ್ನನು ಪೋಪನ ಸಹಾಯಕ್ಕೆ ತಂಡತಂಡವಾಗಿ ದಂಡನ್ನು ಕಳುಹಿಸಿದನು. ಕಡೆಯ ಪಕ್ಷ ಇದರಲ್ಲಾದರೂ ಚಟುವಟಿಕೆಯನ್ನೂ ವಿವೇಚನೆಯನ್ನೂ ತೋರಿಸಬಹುದಾಗಿದ್ದಿತು. ಇದರಲ್ಲಿಯೂ ಅವನು ತಾಮಸಮಾಡಿದನು. ತಡವಾಗಲು ಅವನು ಹಾಲೆಕ್‌ನ ಆಜ್ಞೆಗಳನ್ನು ಮತ್ತೆ ಮತ್ತೆ ಧಿಕ್ಕರಿಸಿ ನಡೆಯಿಸದಿದ್ದುದೇ ಕಾರಣವಾಯಿತು. ಆದರೆ, ಪೋಪನು ತನ್ನ 1,50,000 ಸೈನಿಕರೊಡನೆ ಲೀಯ 55,000 ಸೈನಿಕರ ಮೇಲೆ ಯುದ್ಧಮಾಡುವ ದಿನವು ಸಮೀಪಿಸಿತು. ಲೀಯು ಜಾಕ್ಸನ್ನನೊಡನೆ ಆಲೋಚಿಸಿ ಕೆಲಸಮಾಡಿದನು. ತನ್ನ ಸೈನ್ಯವು ಅಲ್ಪವಾದರೂ ಅವನು ಮಾಡಿದ ಸಾಹಸವು ಅತ್ಯಂತ ಆಶ್ಚರ್ಯಕರವಾದುದು. ಅವನ ವ್ಯೂಹರಚನೆಯನ್ನು ನೋಡಿದವರು ಬೆರಗಾಗದಿರುವುದಿಲ್ಲ. ಲೀಯು ಶತ್ರುಗಳ ಎದುರಿನಲ್ಲಿಯೇ ತನ್ನ ಸೈನ್ಯವನ್ನು ವಿಭಾಗಮಾಡಿ, ಪೋಪನಿಗೂ ವಾಷಿಂಗ್ಟನ್ನಿಗೂ ಸಂಬಂಧವು ತಪ್ಪಿಹೋಗುವಂತೆ ಮಾಡುವುದಕ್ಕೋಸ್ಕರ ಜಾಕ್ಸನ್ನನನ್ನು ಬಳಸಾದೊಂದು ದಾರಿಯಿಂದ ಕಳುಹಿಸಿದನು. ಅದಾದ ಮೇಲೆ ಎರಡು ಕಡೆಯ ದಳಪತಿಗಳೂ ನೈಪುಣ್ಯವನ್ನು ಉಪಯೋಗಿಸಿ ತಮ್ಮ ಸೈನ್ಯವನ್ನು ನಿಲ್ಲಿಸಿದರು. ಒಂದು ಸೈನ್ಯವು ಏನುಮಾಡುತ್ತಿರುವುದೆಂಬುದನ್ನು ಮತ್ತೊಂದು ತಿಳಿಯಲಾಗಲಿಲ್ಲ. ಪೋಪನು ಪೂರಾ ಕೋಪ ಹೊಂದಿದನು. ಅವನ ಬುದ್ಧಿಯು ವಿವೇಕದ ಮೇರೆಯನ್ನು ಮೀರಿತು. ಸ್ವಲ್ಪ ದೂರ ಹಿಂದೆ ಬಿದ್ದು ಕ್ಷೇಮವಾದ ಸ್ಥಳದಿಂದ ಶತ್ರುವಿನ ಆಕ್ರಮಣವನ್ನು ನಿರೀಕ್ಷಿಸುವುದಕ್ಕೆ ಬದಲಾಗಿ ಅವನು ಲೀಯ ಸೈನ್ಯದ ಮೇಲೆರಗಿದನು. ಬುಲ್‌ರನ್‌ನಿನ ಹೊರಸುತ್ತಿನಲ್ಲಿ ಎರಡು ದಿನಗಳ ವರೆಗೆ ಯುದ್ಧವು ನಡೆದು ಪೋಪನಿಗೆ ಸಂಪೂರ್ಣವಾದ ಸೋಲುಂಟಾಯಿತು. ಅವನು ವಾಷಿಂಗ್ಟನ್ನಿಗೆ ಹಿಂದಿರುಗಿ ನಿವೃತ್ತನಾದನು. ಈ ಅನರ್ಥವುಂಟಾಗಲು ತನ್ನ ಆ ಜಡಭರತದಳಪತಿಯೇ ಕಾರಣನೆಂದು ಲಿಂಕನ್ನನು ನಂಬಿದನು. ಪೋಪನಿಗೆ ಜನಸಹಾಯವನ್ನು ಒದಗಿಸುವಾಗ ತಡಮಾಡಿ ಅವನು ಕೆಲಸವನ್ನು ಕೆಡಿಸಿದ್ದನು. ಯುದ್ಧದಲ್ಲಿ ಅಪಜಯವಾಗಬೇಕೆಂದು ಹಾರೈಸಿದನೆಂತಲೂ ಪ್ರೆಸಿಡೆಂಟನು ನಂಬಿದನು.

ವಾಷಿಂಗ್ಟನ್ನಿನಲ್ಲಿ ರಕ್ಷಣೆಯು ಎಂಥಾ ಆಕ್ರಮಣಕ್ಕೂ ಜಗ್ಗುವದಾಗಿರಲಿಲ್ಲ. ಲೀಯು ಮೇರಿಲೆಂಡನ್ನು ಪ್ರವೇಶಿಸಿ ಸೂರೆಮಾಡಲು ನಿಶ್ಚಯಿಸಿದನು. ಹಾಗೆ ಮಾಡುವುದರಿಂದ ಶತ್ರುವಿನ ದೃಷ್ಟಿಯು ಆ ಕಡೆ ತಿರುಗಿ ವರ್ಜಿನಿಯದಲ್ಲಿ ಬೆಳೆಗಳ ಕುಯಿಲು ನಿರ್ವಿಘ್ನವಾಗಿ ನಡೆಯುತ್ತಿದ್ದಿತು. ಈ ಸೈನ್ಯವೊಂದೇ ಅಲ್ಲ. ದಕ್ಷಿಣದ ಮತ್ತೊಂದು ಪಡೆಯು ಕೆಂಟಕಿಯ ಮೇಲೆ ನಡೆದು ಬರುತ್ತಿದ್ದಿತು. ಅದು ಸಾಹಸವೆಷ್ಟನ್ನು ಮಾಡುವುದೋ ತಿಳಿಯದು. ಈ ಸ್ಥಿತಿಯನ್ನು ನೋಡಿ ಲಿಂಕನ್ನನು ಸ್ವಲ್ಪ ಕಳವಳ ಹೊಂದಿದನು. ಮಂತ್ರಿಗಳ ಮಾತನ್ನೂ ಪ್ರಜೆಗಳ ಅಭಿಪ್ರಾಯವನ್ನೂ ಕಾಯಲಿಲ್ಲ. ಗೌರವಕ್ಕೆ ಕಡಿಮೆಯೆಂಬ ಭಾವನೆಯನ್ನೂ ಕಡೆಗಂಡು ಅವನು

ಬಾಯಿಮಾತಿನಿಂದ ಮೆಕ್‌ಕ್ಲೆಲ್ಲನ್ನನಿಗೆ ವಾಷಿಂಗ್ಟನ್ನಿನ ದಂಡನ್ನೆಲ್ಲಾ ಕೈಕೆಳಗೆ ತೆಗೆದುಕೊಳ್ಳಬೇಕೆಂದು ಹೇಳಿ ಕಳುಹಿಸಿದನು. ಅವನು ತಾನು ಯುದ್ಧಮಾಡದಿದ್ದರೂ ಇತರರನ್ನು ಯುದ್ಧಕ್ಕೆ ಸಿದ್ಧಮಾಡುವನೆಂದು ಲಿಂಕನ್ನನು ತನ್ನ ಸೆಕ್ರಿಟರಿಯೊಡನೆ ಹೇಳಿದನು. ದಳಪತಿಗೆ ಹೀಗೆ ಹಾಗೆ ಮಾಡಬೇಕೆಂದು ಸೂಚನೆಗಳು ಬರಲಿಲ್ಲ. ತನಗೆ ತೋರಿದುದನ್ನು ಮಾಡಲೆಂದು ಬಿಟ್ಟು, ಸಮಯದಲ್ಲಿ ಅವನು ಹೇಗೆ ಆಚರಿಸುವನೆಂಬುದನ್ನು ಸರ್ಕಾರವೂ ಲಿಂಕನ್ನನೂ ನಿರೀಕ್ಷಿಸುತ್ತ ನಿಂತರು.

ಎದುರಾಳಿಯು ತಡಮಾಡುವನೆಂದು ಲೀಯು ಯೋಚಿಸಿದನು. ಮೊದಲಿನಂತೆಯೇ ತನ್ನ ಸೈನ್ಯವನ್ನು ಎರಡು ಪಾಲುಮಾಡಿ ಒಂದನ್ನು ಜಾಕ್ಸನ್ನನ ವಶದಲ್ಲಿ ಬಿಟ್ಟನು; ಬಿಟ್ಟು ತಾನು ಮುಂದೆ ಹೋದನು. ಜಾಕ್ಸನ್ನನು ಹಾರ್ಪರ್ಸ್ ಫೆರ್‍ರಿಯ ಬಳಿಯಲ್ಲಿರುವ ಉತ್ತರದ ಕೋಟೆಯೊಂದನ್ನು ಮುತ್ತಿ ವಶಪಡಿಸಿಕೊಳ್ಳಬೇಕಾಗಿದ್ದಿತು. ಉತ್ತರದ ಸೈನಿಕನೊಬ್ಬನು ಒಂದು ದಿನ ನೆಲದಮೇಲೆ ಬಿದ್ದಿದ್ದ ಸಿಗರೆಟ್ಟಿನ ಪೆಟ್ಟಿಗೆಯೊಂದನ್ನು ಕೈಗೆ ತೆಗೆದುಕೊಂಡನು. ಅದನ್ನು ದಕ್ಷಿಣದ ಸೈನ್ಯದಲ್ಲಿ ಯಾವನೋ ಅಧಿಕಾರಿಯು ತಿಳಿಯದೆ ಕೆಡವಿದ್ದಂತೆ ತೋರುತ್ತದೆ. ಪೆಟ್ಟಿಗೆಯ ಸುತ್ತಲೂ ಒಂದು ಚೂರು ಕಾಗದವು ಸುತ್ತಿದ್ದಿತು. ಅದರೊಳಗೆ ಲೀಯು ಮಾಡಬೇಕೆಂದಿದ್ದ ಕಾರ್ಯಕ್ರಮವು ಸ್ಪಷ್ಟವಾಗಿ ಬರೆಯಲ್ಪಟ್ಟದ್ದಿತು. ಸೈನಿಕನು ಅದನ್ನು ತೆಗೆದುಕೊಂಡು ಹೋಗಿ ಅಧಿಪತಿಯ ಕೈಗೆ ಕೊಟ್ಟನು. ಲೀಯನ್ನು ಸೈನ್ಯದೊಡನೆ ಅರೆದುಬಿಡಲು ಇದು ಸುಸಮಯವಾಗಿದ್ದಿತು. ಮೆಕ್‌ಕ್ಲೆಲ್ಲನ್ನನಿಗೆ ಮನಸ್ಸು ಬರಲೇ ಇಲ್ಲ. ತನ್ನಲ್ಲಿ ತುರಗಸೈನ್ಯವು ಸಾಲದೆಂಬುದು ಅವನ ನೆಪವಾಯಿತು. ಯುದ್ಧಭೂಮಿಯಲ್ಲಿ ಅವನು ಮಾಡಿದುದು ಇಷ್ಟು—ಶತ್ರುವಿಗೆ ಅವಕಾಶಗಳನ್ನು ಕೊಡಕೂಡದು. ಅವನು ಮುಂದೆ ನುಗ್ಗದೆ ತಾಮಸ ಮಾಡಲಾಗಿ ನಡೆದ ವಿಷಯವು ತಿಳುವಳಿಕೆಗೆ ಬಂದು ಲೀಯು ಹಿಂದೆ ಬಿದ್ದು ಹಾರ್ಪರ್ಸ್ ಫೆರ್‍ರಿಯ ಕಡೆಗೆ ಸರಿದನು. ಆದರೆ ಆ ದುರ್ಗವನ್ನು ತಲಪಿ ಜಾಕ್ಸನ್ನನೊಡನೆ ಸೇರಿಕೊಳ್ಳಲಿಲ್ಲ. ಹಾರ್ಪರ್ಸ್ ಫೆರ್‍ರಿಗೆ ಸ್ವಲ್ಪ ದೂರದಲ್ಲಿ ನಿಂತನು. ಮೆಕ್‌ಕ್ಲೆಲ್ಲನ್ನನು ಅದನ್ನು ಕಂಡು ತನ್ನ ಮೇಲೆ ಬೀಳುವನು; ಆದುದರಿಂದ ಯುದ್ಧವು ಪ್ರಾರಂಭಿಸುವುದಕ್ಕೆ ಮುಂಚೆಯೇ ಜಾಕ್ಸನ್ನನಿಗೆ ಸೂಚನೆಯನ್ನು ಕೊಟ್ಟರೆ ಅವನು ಹೋಗಿ ಹಿಂದಿನಿಂದ ಮೆಕ್ಲೆಲ್ಲನ್ನನ ಮೇಲೆ ಬೀಳುವನು. ಇದು ಲೀಯ ಯೋಚನೆಯಾಗಿದ್ದಿತು. ಮೆಕ್‌ಕ್ಲೆಲ್ಲನ್ನನು ಮುಂದೆ ಹೊರಟುಬರುವುದರಲ್ಲಿ ಬಹಳ ತಾಮಸ ಮಾಡಿದನು. ಅವನ ಬೇನೆಯೇ ಅದು. ಅದರ ದೆಸೆಯಿಂದ ಉತ್ತರಕ್ಕೆ ಅನೇಕ ಕದನಗಳಲ್ಲಿ ಸೋಲುಂಟಾಯಿತು. ಅನೇಕ ಅನುಕೂಲಗಳು ನಷ್ಟವಾದುವು. ಯುದ್ಧವು ಬೇಗ ಮುಗಿಯುವುದಕ್ಕೆ ಪ್ರತಿಯಾಗಿ ಬಹಳ ಕಾಲ ಹಿಡಿಯಿತು. ಜಾಕ್ಸನ್ನನು ನಡೆದುಬಂದು ಲೀಯನ್ನು ಸೇರಿಕೊಂಡನು. ಉತ್ತರದ ಸೈನ್ಯವು ಅವರ ಹತ್ತಿರಕ್ಕೆ ಬಂದು ಆಂಟಿಯಟಮ್ ಎಂಬ ಒಳನುಗ್ಗಿನ ಬಳಿ ನಿಂತಿತು. ಸೆಪ್ಟೆಂಬರ್ ಹದಿನೇಳನೆಯ ತಾರೀಖಿನ ದಿನ ಮೆಕ್‌ಕ್ಲೆಲ್ಲನ್ನನು ತನ್ನ ಸೈನ್ಯಕ್ಕೆ ಅಪ್ಪಣೆಯನ್ನು ಕೊಟ್ಟನು. ಆದರೆ ಯುದ್ಧಕಾಲದಲ್ಲಿ ಶ್ರದ್ಧೆಯನ್ನು ವಹಿಸಲಿಲ್ಲ.

ಸೈನ್ಯವು ಒಗ್ಗಟ್ಟಿನಿಂದಿರಲಿಲ್ಲ. ಒಂದೊಂದು ಭಾಗದ ಸರದಾರರು ಒಂದೊಂದು ಸಾರಿ ನುಗ್ಗಿದರು. ಒಟ್ಟಾದ ಪ್ರಯತ್ನವೇ ಇರಲಿಲ್ಲ. ಪ್ರತಿಯೊಂದು ಭಾಗವೂ ಸೋತು ಹಿಂದೆ ಬಿದ್ದಿತು. ಬೇಗ ಬೇಗ ಯುದ್ಧಗಳಾಗಿ ಬೇಗ ಬೇಗ ಜಯವಾದಷ್ಟೂ ದಕ್ಷಿಣದ ಅನುಕೂಲಗಳು ಹೆಚ್ಚುತ್ತಿದ್ದುವು. ಆ ಜಯಕ್ಕಾಗಿ ಯಾವುದನ್ನು ಮಾಡಿದರೂ ನಷ್ಟವೆನ್ನಿಸಿಕೊಳ್ಳುತ್ತಿರಲಿಲ್ಲ. ಎಷ್ಟು ನಷ್ಟವಾದರೂ ಸರಿಯೆ, ಜಯವನ್ನು ಸಂಪಾದಿಸಬೇಕಾಗಿದ್ದಿತು. ಲೀಯು ಅದನ್ನು ತಿಳಿದಿದ್ದನು. ಈ ಹೊಡೆದಾಟವು ಮುಗಿಯಿತು. ಮಾರನೆಯ ದಿನ ಬೆಳಗಿನಲ್ಲಿ ನೋಡಲಾಗಿ ಲೀಯ ಸೈನ್ಯದಲ್ಲಿ ಸ್ಥಿತಿಯು ವಿಶೇಷವಾಗಿ ಹೊಲಸಾಗಿದ್ದಿತು. ಹಿಂದಡಿಯಿಡುವುದೇ ಉಚಿತವೆಂದು ಅವನು ನಿಶ್ಚಯಿಸಿದನು.

ಒಟ್ಟಿನಲ್ಲಿ ಉತ್ತರದ ಸೈನ್ಯಕ್ಕೇ ಜಯವಾಗಿದ್ದಿತು. ಜಯವೆಂದು ಹೇಳಲಾಗದಿದ್ದರೂ ಅನುಕೂಲಗಳು ಹೆಚ್ಚಾಗಿ ದೊರೆತಿದ್ದುವು. ಈ ಸಮಯದಲ್ಲಿ ಶತ್ರುವನ್ನು ಹಿಂಬಾಲಿಸಿದ್ದರೆ ಸಾಕಾಗಿದ್ದಿತು. ವಾಷಿಂಗ್ಟನ್ನಿನಿಂದ ಸಹಾಯವು ಪುಷ್ಕಳವಾಗಿ ಬಂದಿತು. ಲಿಂಕನ್ನನು ''ದಯವಿಟ್ಟು ಅವನು ಗಾಯಹೊಂದದೆ ಹೋಗಗೊಡಕೂಡದು'' ಎಂದು ತಂತಿ ಕೊಟ್ಟನು. ಲೀಯು ಇದ್ದ ಸ್ಥಳವೂ ವಿಪತ್ತಿನಿಂದ ತುಂಬಿದ್ದಿತು. ಒಂದು ಕಡೆಯಲ್ಲಿ ಪೋಟೊಮುಕ್ಕಿದ್ದಿತು. ಇನ್ನೊಂದು ಕಡೆ ಎರಡರಷ್ಟಿದ್ದ ಉತ್ತರದ ಸೈನ್ಯವು ಹೊಂಚುತ್ತಿದ್ದಿತು. ಇನ್ನು ಕೆಲವು ಸೈನ್ಯಗಳು ಹತ್ತಿರದಲ್ಲಿಯೇ ಅಲ್ಲಲ್ಲಿದ್ದುವು. ಕೈಕೆಳಗಿನ ಅಧಿಕಾರಿಗಳು, ಲೀಯ ಮೇಲೆ ಕೈ ಮಾಡಿ ಅವನ ಸೈನ್ಯವು ನದಿಯೊಳಕ್ಕೆ ಮುಗ್ಗರಿಸುವಂತೆ ಮಾಡಬೇಕೆಂದು ಮೆಕ್‌ಕ್ಲೆಲ್ಲನ್ನನಲ್ಲಿ ಒತ್ತರಮಾಡಿದರು. ಅವರ ಮಾತು ನಡೆಯಲಿಲ್ಲ. ಲೀಯು ನಿರಾಯಾಸವಾಗಿ ನದಿಯನ್ನು ದಾಟಿದನು. ಯುದ್ಧಭೂಮಿಯಲ್ಲಿ ಪಾಳೆಯವನ್ನು ಹೂಡಿದ ಮೆಕ್‌ಕ್ಲೆಲ್ಲನ್ನನು ಹದಿನೈದು ದಿನಗಳ ವರೆಗೆ ಕದಲಲೇ ಇಲ್ಲ. ತನ್ನ ಸೈನ್ಯದ ಸ್ಥಿತಿಯು ಸರಿಯಾಗಿಲ್ಲವೆಂದೂ ಸನ್ನಾಹವು ಸಾಲದೆಂತಲೂ ಅವನು ನ್ಯೂನತೆಗಳನ್ನು ಹೇಳಿರಬಹುದು. ಅದಲ್ಲದೆ ಶತ್ರುಸೈನ್ಯವು ಅಗಾಧವಾಗಿರುವುದೆಂದು ಮೆಕ್‌ಕ್ಲೆಲ್ಲನ್ನನು ಮೊದಲಿನಂತೆ ಉತ್ಪ್ರೇಕ್ಷಿಸಿದನು. ಲೀಯು ಪೋಟೊಮುಕ್ಕನ್ನು ಸುರಕ್ಷಿತವಾಗಿ ದಾಟಿದನು. ತನ್ನ ದಳಪತಿಯ ಆಚರಣೆಯನ್ನು ಅತ್ಯಂತ ಉತ್ಕಂಠಿತೆಯಿಂದ ನೋಡಿಕೊಳ್ಳುತ್ತಲಿದ್ದ ಪ್ರೆಸಿಡೆಂಟನು ಅಸಮಾಧಾನ ಹೊಂದಿ ಪಾಳೆಯಕ್ಕೆ ಬಂದನು. ಬಂದವನು, ಮೆಕ್‌ಕ್ಲೆಲ್ಲನ್ನನು ಕೂಡಲೇ ಹೊರಟು ಅದ್ಭುತಕಾರ್ಯಗಳನ್ನು ಸಾಧಿಸಿಬಿಡುವೆನೆಂದು ಭರವಸೆ ಹೊಂದಿ ಹಿಂದಿರುಗಿದನು. ಮತ್ತೆ ಮರುಳಾದನು. ಜಡಭರತನು ತನ್ನ ಹೆಜ್ಜೆಯನ್ನು ತೆಗೆದು ಮುಂದಕ್ಕೆ ಹೊರಡಲೇ ಇಲ್ಲ. ಕಾಗದಗಳೂ ತಂತಿಗಳೂ ಪ್ರೆಸಿಡೆಂಟನಿಂದ ಒಂದರಮೇಲೊಂದು ಬಂದವು. ಅಷ್ಟು ಸಾಲದೆ ಅವನು ಹಾಲೆಕ್‌ನ ಮೂಲಕವೂ ತಂತಿಗಳನ್ನೂ ಕಾಗದಗಳನ್ನೂ ಕಳುಹಿಸಿದನು. ಪ್ರಯತ್ನಮಾಡಿದರೆ ಲೀಯು ರಿಚ್‌ಮಂಡನ್ನು ಸೇರದಂತೆ ಅಡ್ಡಿಮಾಡಿಬಿಡಬಹುದೆಂದು ಅವನಿಗೆ ನಂಬಿಕೆಯಿದ್ದಿತು. ಮೆಕ್‌ಕ್ಲೆಲ್ಲನ್ನನು ತನ್ನ ತುರಗಸೈನ್ಯವು ವಿಶೇಷವಾಗಿ ದಣಿದಿರುವುದಾಗಿ ಹೇಳಿಕಳುಹಿಸಿದನು. ಲಿಂಕನ್ನನಿಗೆ

ಕೋಪ ಬಂದಿತು. "ದಣಿವಾಗಲು ಆಂಟಿಯಟಮ್ ಕದನದಿಂದೀಚಿಗೆ ನಿನ್ನ ಕುದುರೆಗಳು ಏನೇನನ್ನು ಮಾಡಿಬಿಟ್ಟಿರುವುವು?" ಎಂದು ಬರೆದನು. ಸೈನ್ಯವೂ ಸೈನ್ಯಕ್ಕೆ ದೊರತಿರುವ ಶಿಕ್ಷಣವೂ ಸಾಲದೆಂದು ಬಹಳ ದಿನಗಳಿಂದ ಕಾಲವನ್ನು ತಳ್ಳುತ್ತಿದ್ದಾತನ ದೃಷ್ಟಿಯು ಈ ನ್ಯೂನತೆಯನ್ನು ಸರಿಪಡಿಸದೆ ಎಲ್ಲಿ ಹೋಗಿದ್ದಿತು? ಶತ್ರುವಿನ ತುರಗಸೈನ್ಯವು ಅವನಿದ್ದ ಸ್ಥಳದ ಹೊರಸುತ್ತಿನಲ್ಲಿ ಬಂದು ಹಾವಳಿ ಮಾಡಿದ್ದಿತು. ಅದನ್ನು ತಿಳಿದು ಅವನು ಏನು ಮಾಡುತ್ತಿದ್ದನು? ಆ ದಿನವೇ ಪ್ರೆಸಿಡೆಂಟನಿಂದ ತಂತಿ ಬಂದಿತು. 'ನೀನು ಪೂರಾ ಹೆದರುವೆಯೆಂದು ನಾನು ಹಿಂದಿಯೇ ತಿಳಿಸಿದ್ದೆನು. ಅದು ಸ್ಮರಣೆಯಲ್ಲಿರಬಹುದು. ನಿನ್ನ ಶತ್ರುವು ಸದಾ ಮಾಡುತ್ತಿರುವುದನ್ನು ನೀನು ಮಾಡಲಾರೆಯೆಂದು ಹೇಳುವುದಾದರೆ ಅದು ಹೆದರಿಕೆ ಯಲ್ಲವೆ? ಶತ್ರುವು ವಿಶ್ರಾಂತಿಯನ್ನೂ ಸನ್ನಾಹವನ್ನೂ ನಿರೀಕ್ಷಿಸುತ್ತ ಕುಳಿತಿರು ವನೆ? ಪದಚಲನಮಾಡು, ಬೇಗ ಬೇಗ ಯುದ್ಧಮಾಡುತ್ತಿರು. ಇನ್ನು ಇಪ್ಪತ್ತು ನಾಲ್ಕು ಘಂಟೆಗಳೊಳಗಾಗಿ ರಿಚ್‌ಮಂಡ್ ನಗರವು ಕೈಸೇರದಿರದು." ಆಮೇಲೆ, ಸ್ಥಿತಿಯನ್ನು ಸಂಕ್ಷೇಪವಾಗಿ ವಿವರಿಸಿ ಕೊನೆಯಲ್ಲಿ ಹೀಗೆಂದನು—"ಪ್ರಯತ್ನ ಮಾಡೆಂದು ನಾನು ಹೇಳುವೆನು, ಪ್ರಯತ್ನವಿಲ್ಲದಿದ್ದರೆ ನಮ್ಮ ಮನೋರಥವು ಕೈಗೂಡದು. ಶ್ರಮವನ್ನು ತೆಗೆದುಕೊಂಡಾದರೂ ನಮ್ಮಹತ್ತಿರ ಬರುವ ಶತ್ರು ವನ್ನು ಹೊಡೆದು ಸೋಲಿಸದಿದ್ದಮೇಲೆ, ನಾವು ಶ್ರಮವನ್ನು ತೆಗೆದುಕೊಂಡು ಹೋಗಿ ಶತ್ರುವನ್ನು ಹೊಡೆದು ಸೋಲಿಸಲಾಗುವುದಿಲ್ಲ." ಅವನ ತಾಳ್ಮೆಯು ಕೊನೆ ಯನ್ನು ಮುಟ್ಟುತ್ತ ಬಂದಿತು. ಐದು ವಾರಗಳ ಮೇಲೆ ಮೆಕ್‌ಕ್ಲೆಲ್ಲನ್ನನು ಪೋಟೊ ಮುಕ್ಕನ್ನು ದಾಟಲು ಹೊರಟನು. ಅದಷ್ಟನ್ನು ಮಾಡಲು ಒಂದು ವಾರವು ಬೇಕಾಯಿತು. ನೊವೆಂಬರ್ ಐದನೆಯ ತಾರೀಖಿನ ದಿನ ಲಿಂಕನ್ನನು ಬೇಸರ ಹೊಂದಿ ಅವನನ್ನು ಕೆಲಸದಿಂದ ತೆಗೆದುಹಾಕಿದನು. ಜನರಲ್ ಬರ್ನ್‌ಸೈಡನು ಆ ಪದವಿಗೆ ನೇಮಿಸಲ್ಪಟ್ಟನು.

ಮೆಕ್‌ಕ್ಲೆಲ್ಲನ್ನನು ಯಾವುದಾದರೊಂದು ಹೊಡೆದಾಟದಲ್ಲಿ ನಿಸ್ಸಂಶಯವಾದ ವಿಜಯವನ್ನು ಪಡೆಯುವನೆಂದು ಪ್ರೆಸಿಡೆಂಟನೆಣಿಸಿದ್ದನು. ಅವನಂಥವನು ಮತ್ತೊ ಬ್ಬನು ಸಿಕ್ಕಲಾರನೆಂದು ಅವನಿಗೆ ಅಭಿಪ್ರಾಯವಿದ್ದಿತು. ಈಗ ಅವನನ್ನು ಕೆಲಸ ದಿಂದ ತಪ್ಪಿಸಿದುದಕ್ಕಾಗಿ ತನ್ನಮೇಲೆ ಕೆಲವರು ದೋಷವನ್ನು ಹೇರುವರೆಂಬುದನ್ನು ನೆನಸಿಕೊಂಡು ಅವನಿಗೆ ಖೇದನಾಯಿತು. ದೂಷಣೆಯು ಬಂದೇ ಬಂದಿತು. ಮೆಕ್‌ಕ್ಲೆಲ್ಲನ್ನನು ಡೆಮೊಕ್ರೆಟನಾದುದರಿಂದ ಅವನನ್ನು ಪ್ರೆಸಿಡೆಂಟನು ತೆಗೆದು ಹಾಕಿದನೆಂದು ಈಗಲೂ ಜನಗಳು ಹೇಳಿಕೊಳ್ಳುತ್ತಾರೆ. "ಆದರೆ ಯುದ್ಧದಲ್ಲಿ ನೈಪುಣ್ಯವನ್ನು ಕುರಿತು ವಿಚಾರಮಾಡುವಾಗ ನಾನು ಪಕ್ಷಪಾತಮಾಡೆನೆಂದು ಪ್ರಪಂಚಕ್ಕೇ ಗೊತ್ತಿದೆ" ಎಂದು ಲಿಂಕನ್ನನು ಹೇಳಿದನು. ಸೈನ್ಯಾಧಿಪತಿಯಾದ ರಿಪಬ್ಲಿಕನನೊಬ್ಬನು ಒಂದು ವಾರದ ಮೇಲೆ ಸೈನ್ಯದ ಅಧಿಕಾರಿಗಳೂ ಕೂಡ ಸರ್ಕಾ ರದ ಪಂಗಡಕ್ಕೆ ಸೇರಿದವರಾಗಿರಬೇಕೆಂಬುದನ್ನು ಸೂಚಿಸಿ ಲಿಂಕನ್ನನಿಗೆ ಕಾಗದ ವನ್ನು ಬರೆದನು. ಕಟುವಚನದ ಉತ್ತರವು ಬಂದಿತು. ಯುದ್ಧದಲ್ಲಿ ರಿಪಬ್ಲಿಕನ

ರಂತೆಯೇ ಡೆಮೊಕ್ರೆಟರೂ ಸಹಾಯಮಾಡಬಲ್ಲರೆಂಬುದನ್ನು ಲಿಂಕನ್ನನು ತಿಳಿಸಿದನು. ಆದರೆ ಮೆಕ್‌ಕ್ಲೆಲ್ಲನ್ನನ ವಿಷಯದಲ್ಲಿ ಪ್ರೆಸಿಡೆಂಟನಿಗೆ ಪ್ರಬಲವಾದ ಸಂಶಯವುಂಟಾಗಿದ್ದಿತು. ಮತ್ತೊಬ್ಬನು ಸಿಕ್ಕದಿದ್ದುದರಿಂದ ಅವನು ಮೆಕ್‌ಕ್ಲೆಲ್ಲನ್ನನ ತಾಮಸವನ್ನೂ ಹೆದರಿಕೆಯನ್ನೂ ಕ್ಷಮಿಸಿರಬಹುದು. ತನ್ನ ಕರ್ತವ್ಯವನ್ನು ಸರಿಯಾಗಿ ಮಾಡುತ್ತಿದ್ದ ಅಧಿಕಾರಿಯು ಯಾವ ಪಂಗಡದವನೆಂಬುದು ಅವನಿಗೆ ಬೇಕಾಗಿರಲಿಲ್ಲ. ಆದರೆ ತನ್ನ ಕರ್ತವ್ಯದ ನಡುವೆ ತಾನು ಬೇರೊಂದು ಪಂಗಡದವನೆಂಬ ಭೇದಬುದ್ಧಿಯನ್ನೂ ಶತ್ರುವಿಗೆ ಗಾಯವಾಗಬಾರದೆಂಬ ಅಂತಃಕರಣವನ್ನು ತಂದು ಕೆಲಸವನ್ನು ಹಾಳುಮಾಡುವ ಮನುಷ್ಯನು ಸೈನ್ಯದಲ್ಲಿ ಆಧಿಪತ್ಯವನ್ನು ವಹಿಸಲು ತಕ್ಕವನಲ್ಲ. ಮೆಕ್‌ಕ್ಲೆಲ್ಲನ್ನನು ಸೋಮಾರಿತನವನ್ನೂ ನಿಸ್ಸತ್ವವನ್ನೂ ತೋರಿಸಲು ಇದೇ ಕಾರಣವೆಂದು ಅವನಿಗೆ ನಂಬಿಕೆಯುಂಟಾಯಿತು. ಮೆಕ್‌ಕ್ಲೆಲ್ಲನ್ನನು ಲೀಯೊಡನೆ ಯುದ್ಧಮಾಡಿ ಸೋಲಿಸುವನೇ ಅಥವಾ ಲೀಯು ತೊಂದರೆಗೆ ಸಿಕ್ಕದಂತೆ ತಪ್ಪಿಸಿಕೊಂಡು ದಕ್ಷಿಣಕ್ಕೆ ಹೊರಟು ಹೋಗಗೊಡುವನೇ ಎಂಬುದನ್ನು ನೋಡಿ ಅವನ ನಡತೆಯನ್ನು ನಿರ್ಧರಿಸಬೇಕೆಂದು ಲಿಂಕನ್ನನು ಮನಸ್ಸಿನಲ್ಲಿ ಯೋಚಿಸಿಕೊಂಡನು. ಲೀಯು ಹೊರಟುಹೋದನು. ಹೋದುದಕ್ಕಾಗಿ ನಷ್ಟವಾಯಿತೆಂದು ಮೆಕ್‌ಕ್ಲೆಲ್ಲನ್ನನು ಭಾವಿಸಿದಂತೆ ಕಾಣಲಿಲ್ಲ. ಲಿಂಕನ್ನನು ಅವನನ್ನು ತೆಗೆದುಹಾಕಿದನು.

ಲಿಂಕನ್ನನು ಹಾಗೆ ಸಂಶಯಪಡಲು ಹೆಚ್ಚಿನ ಪ್ರಮಾಣಗಳಿದ್ದುವೋ ಇಲ್ಲವೋ ತಿಳಿಯದು. ಆದರೆ ಕೆಲವು ಕಾಲದ ಮೇಲೆ ಪ್ರಮಾಣವು ದೊರೆಯಿತು. ಮೆಕ್‌ಕ್ಲೆಲ್ಲನ್ನನಿಗೆ ಜನರಲ್ ಸ್ಮಿತ್ ಎಂಬ ಆಪ್ತನಿದ್ದನು. ಅವನೊಡನೆ ದಳಪತಿಯು ತನ್ನ ಕಷ್ಟಸುಖಗಳನ್ನು ಹೇಳಿಕೊಳ್ಳುತ್ತಿದ್ದನು. ಆತನಿಂದ ಮೆಕ್‌ಕ್ಲೆಲ್ಲನ್ನನ ವಿಚಿತ್ರ ನಾದಾಚಿತ್ತವೃತ್ತಿಯ ಕಾರಣವು ಪತ್ತೆಯಾಯಿತು. ನ್ಯೂಯಾರ್ಕಿನಲ್ಲಿ ಫರ್ನಾಂಡೊ ವುಡ್ ಎಂಬ ಅಧಿಕಾರಿಯಿದ್ದನು. ಆತನು ಡೆಮೊಕ್ರೆಟರ ಕಡೆಯವನು. ಮೆಕ್‌ಕ್ಲೆಲ್ಲನ್ನನು ಚೆಸಾಪೀಕ್ ಕೊಲ್ಲಿಯ ಸುತ್ತಿನಲ್ಲಿದ್ದಾಗ ಆತನು ಅಲ್ಲಿಗೆ ಹೋಗಿ, 1864ರಲ್ಲಿ ಒದಗುವ ಪ್ರೆಸಿಡೆಂಟನ ಚುನಾವಣೆಯಲ್ಲಿ ಡೆಮೊಕ್ರೆಟರೆಲ್ಲರೂ ದಳಪತಿಗೆ ಚೀಟಿಹಾಕುವಂತೆ ಮಾಡುವುದಾಗಿ ಆಸೆ ಹುಟ್ಟಿಸಿದನು. ಈ ಉಪಕಾರಕ್ಕೆ ಪ್ರತಿಯಾಗಿ ಮೆಕ್‌ಕ್ಲೆಲ್ಲನ್ನನು, ದಕ್ಷಿಣಕ್ಕೆ ಸಮಾಧಾನವುಂಟಾಗುವ ರೀತಿಯಲ್ಲಿ ಯುದ್ಧ ಮಾಡುವೆನೆಂದು ಕರಾರನ್ನು ಬರೆದುಕೊಡಬೇಕಾಗಿದ್ದಿತು. ಮೆಕ್‌ಕ್ಲೆಲ್ಲನ್ನನು ಒಪ್ಪಿಕೊಂಡು ಕರಾರನ್ನು ಬರೆದನು. ಬರೆದು ತನ್ನ ಆಪ್ತನಾದ ಸ್ಮಿತ್‌ನಿಗೆ ತೋರಿಸಿದನು. ಆತನು ದ್ರೋಹಾಚರಣೆಯೆಂದು ಅದನ್ನು ಖಂಡಿತವಾಗಿ ನಿಷೇಧಿಸಿದನು. ಮೆಕ್‌ಕ್ಲೆಲ್ಲನ್ನನು ಅವನ ಮಾತಿಗೆ ಒಡಂಬಟ್ಟು ಸುಮ್ಮನಿದ್ದುಬಿಟ್ಟನು. ಆದರೆ ಆಂಟಿಯಟಮ್ ಯುದ್ಧವು ಮುಗಿದ ಕೂಡಲೇ ವುಡ್‌ನು ಅಲ್ಲಿಗೆ ಬಂದನು. ಈ ತಡವೆ ನಿರ್ವಾಹವಿಲ್ಲದವನಾಗಿ ಕರಾರನ್ನು ಬರೆದು ಕೊಟ್ಟನು. ಅದಕ್ಕಾಗಿಯೇ ಅವನು ಮುಂದೆ ಉದಾಸೀನನಾದುದು. ಈ ಪ್ರಸಂಗದಲ್ಲಿ ಎಲ್ಲರೂ ತಪ್ಪುದಾರಿಯನ್ನು ಹಿಡಿದಿದ್ದರು. ಮೆಕ್‌ಕ್ಲೆಲ್ಲನ್ನನು ಕರಾರಿನ ವಿಷಯವನ್ನು ಸಾವಧಾನವಾಗಿ ಯೋಚಿಸಲಿಲ್ಲ; ಪ್ರೆಸಿಡೆಂಟನಾಗಬಹುದೆಂಬ ದುರಾಶೆಗೊಳಗಾದನು: ತಾನು

ಮಾಡುತ್ತಿರುವುದು ದ್ರೋಹವೆಂಬುದು ಅವನ ಗೊತ್ತಿಗೆ ಬರಲಿಲ್ಲ. ಡೆಮೊಕ್ರೆಟರು ದಕ್ಷಿಣವು ಆರೀತಿಯಾದ ಆಚರಣೆಯಿಂದ ಸಮಾಧಾನಹೊಂದುವುದೇ ಎಂಬು ದನ್ನು ಯೋಚಿಸಲಿಲ್ಲ; ಅಥವಾ ಯೋಚಿಸಿ, ಅದು ಸಾಧ್ಯವಲ್ಲವೆಂಬುದನ್ನು ತಿಳಿಯ ಲಿಲ್ಲ. 1860ರಲ್ಲಿ ದಕ್ಷಿಣವನ್ನು ಸಮಾಧಾನಪಡಿಸುವುದಕ್ಕಾಗಿ ಸಿವರ್ಡನೂ ಸರ್ಕಾ ರವೂ ಮಾಡಿದ ಪ್ರಯತ್ನಗಳು ವಿಫಲನಾಗಿದ್ದುವು. ಈಗ ಆರೀತಿ ಮಾಡಲು ಹವಣಿಸಿದರೆ ಉತ್ತರದಲ್ಲಿ ಬಲವು ಕಡಿಮೆಯೆಂದು ದಕ್ಷಿಣವು ಭಾವಿಸಿ ಮತ್ತಷ್ಟು ಜೋರಾಗುತ್ತಿದ್ದಿತು. ಲೀಯು ತಪ್ಪಿಸಿಕೊಂಡು ಹೋಗಬೇಕೆಂಬುದು ಮೆಕ್ ಕ್ಲೆಲ್ಲನ್ನನ ಅಪೇಕ್ಷೆಯಾಗಿರಲಿಲ್ಲ. ಆದರೆ, ಅವನು ತಪ್ಪಿಸಿಕೊಂಡು ಹೋಗದಂತೆ ಮಾಡಬೇಕೆಂಬುದೂ ಅಪೇಕ್ಷೆಯಾಗಿರಲಿಲ್ಲ. ಉದಾಸೀನನಾಗಿ ಏನಾದರೊಂದು ನೆಪವನ್ನು ಹೇಳಿದರೆ ತೀರಿತೆಂದು ಅವನು ಭಾವಿಸಿದನು. ತಪ್ಪೋ ನೆಪ್ಪೋ, ಪರೀಕ್ಷೆಯು ನಿಜವಾಯಿತು.

ಹೆಚ್ಚಿನ ಪ್ರಯೋಜನವಾಗಲಿಲ್ಲ. ಬರ್ನ್‌ಸೈಡನನ್ನು ಚುನಾಯಿಸಿದುದು ತಪ್ಪಾಯಿತು. ಮೆಕ್‌ಕ್ಲೆಲ್ಲನ್ನನ ಕೈಕೆಳಗಿದ್ದ ಅಧಿಕಾರಿಗಳು ತಮ್ಮ ವ್ಯವಸಾಯದ ಬಲದಿಂದ ವಿಶ್ವಾಸಕ್ಕೆ ಅರ್ಹತೆಯನ್ನು ಪಡೆದಿದ್ದರು. ಅವರೊಳಗೆ ಜನರಲ್ ಬರ್ನ್‌ಸೈಡನೇ ಜ್ಯೇಷ್ಠನಾದವನು. ನಾವೆಯೊಡನೆ ಹೋಗಿ ಪ್ರಯತ್ನಮಾಡಿ ಅವನು ಕೆಲವು ಬಂದರುಗಳನ್ನು ದಕ್ಷಿಣದ ಕೈಯಿಂದ ಕಿತ್ತುಕೊಂಡಿದ್ದನು. ಮೆಕ್ ಕ್ಲೆಲ್ಲನ್ನನಿಗೂ ಅವನಿಗೂ ಬಹಳ ಸ್ನೇಹವಿದ್ದಿತು. ಇದಿಷ್ಟನ್ನೂ ನೋಡಿ ಲಿಂಕನ್ನನು ಅವನನ್ನು ಚುನಾಯಿಸಿದನು. ಆ ವರುಷದ ಕೊನೆಯುವರೆಗೆ ಅವನು ಅಧಿಕಾರ ದಲ್ಲಿದ್ದು, ಒಂದು ಪ್ರಯತ್ನದಲ್ಲಿ ವಿಫಲನಾಗಿ ತನ್ನ ಉದ್ಯೋಗವನ್ನು ಕಳೆದು ಕೊಂಡನು. ಡಿಸೆಂಬರ್ ತಿಂಗಳಲ್ಲಿ ಲೀಯು ಭದ್ರವಾದೊಂದು ಸ್ಥಳದಲ್ಲಿ ಸೈನ್ಯ ದೊಡನೆ ಇಳಿದನು. ಅವನ ಮೇಲೆ ಕೈಮಾಡಲೆಳಸಿ ಬರ್ನ್‌ಸೈಡನು ದಂಡನ್ನು ತೆಗೆದುಕೊಂಡು ಹೊರಟನು. ಯುದ್ಧಮಾಡಬೇಕೆಂಬ ಆತುರದಿಂದಲೋ ಅಥವಾ ತಿಳುವಳಿಕೆಯಿಲ್ಲದೆ ದುಡುಕಿನಿಂದಲೊ ಅವನು ಅಜೇಯವಾಗಿದ್ದ ಸ್ಥಳದಲ್ಲಿ ಲೀಯ ಮೇಲೆರಗಿದನು. ಹಾಗೆ ಮಾಡಕೂಡದೆಂದು ಲಿಂಕನ್ನನಿಂದ ನಿಷೇಧವು ಸಾರಿ ಸಾರಿ ಬಂದಿದ್ದಿತು. ಬರ್ನ್‌ಸೈಡನು ಆ ಆಜ್ಞೆಯನ್ನು ಲಕ್ಷಿಸಲಿಲ್ಲ. ಸಂಪೂರ್ಣ ವಾದ ಸೋಲೂ ಘೋರವಾದ ಪ್ರಾಣನಾಶವೂ ಪರಿಣಾಮವಾದುವು. ಸೈನ್ಯವು ಅವನ ಅಧಿಕಾರವನ್ನು ಧಿಕ್ಕರಿಸುವಂತಹ ಸ್ಥಿತಿಗೆ ಬಂದಿತು. ಜನರಲ್ ಹೂಕರ್ ಮೊದಲಾದ ಹುದ್ದೇದಾರರು ಬಹಳವಾಗಿ ದೂರಿದರು. ಇಷ್ಟಾದರೂ ಬರ್ನ್ ಸೈಡನು ಇನ್ನೂ ಅದೇ ಸ್ಥಳದಲ್ಲಿ ಶತ್ರುವಿನ ಮೇಲೆ ನುಗ್ಗಬೇಕೆಂದು ಮೊಂಡತನ ಮಾಡಿದನು. ಲಿಂಕನ್ನನು ಬಹಳ ಪ್ರಯಾಸಪಟ್ಟು ಅದನ್ನು ತಪ್ಪಿಸಿದನು. ಆ ಮೇಲೆ ಹಾಲೆಕ್‌ನ ಬಳಿಗೆ ಹೋಗಿ ಬರ್ನ್‌ಸೈಡನು ಮಾಡಿದುದು ಯುಕ್ತವೇ ಅಥವಾ ಅಯುಕ್ತವೇ ಎಂಬುದನ್ನು ನಿರ್ಧರವಾಗಿ ಹೇಳಬೇಕೆಂದು ಪ್ರಾರ್ಥಿಸಿದನು. ಹಾಲೆಕ್‌ನಿಗೆ ಏನನ್ನು ಹೇಳುವುದಕ್ಕೂ ತಿಳಿಯಲಿಲ್ಲ. ಪ್ರತ್ಯುತ್ತರವಾಗಿ ತನ್ನ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟನು. ಬರ್ನ್‌ಸೈಡನು ತನ್ನ ರಾಜೀನಾಮೆ

ಯನ್ನು ಕಳುಹಿಸಿದನು. ಒಂದಾವೃತ್ತಿ ವಿಫಲನಾದ ಮಾತ್ರಕ್ಕೆ ಕೆಲಸವನ್ನು ಬಿಡಬೇಕಾದುದಿಲ್ಲವೆಂದು ಲಿಂಕನ್ನನು ಯೋಚಿಸಿ ರಾಜೀನಾಮೆಯನ್ನು ಅಂಗೀಕರಿಸಲಿಲ್ಲ. ಅಲ್ಲದೆ ಮತ್ತೊಬ್ಬ ದಳಪತಿಯನ್ನು ಹುಡುಕುವುದು ಕಷ್ಟವಾಗಿತ್ತು. ತಾನು ಕೆಲಸದಲ್ಲಿರಬೇಕಾದ ಪಕ್ಷದಲ್ಲಿ ತನಗೆ ಪ್ರತಿಭಟಿಸಿದ ಅಧಿಕಾರಿಗಳೆಲ್ಲರನ್ನೂ ಕೆಲಸದಿಂದ ತೆಗೆಯಬೇಕೆಂದು ಬರ್ನ್‌ಸೈಡನು ಸೂಚಿಸಿದನು. ಇನ್ನು ಬೇರೆಯ ಉಪಾಯವಿರಲಿಲ್ಲ. ಅವನ ರಾಜೀನಾಮೆಯನ್ನು ಸರ್ಕಾರವು ಅಂಗೀಕರಿಸಿತು.

ಮುಂದೆ ಯಾವ ಮನುಷ್ಯನನ್ನು ನೇಮಿಸಬೇಕೆಂಬುದು ಕಷ್ಟಕ್ಕಿಟ್ಟಿತು. ಮಂತ್ರಿಸಭೆಯಲ್ಲಿ ಚರ್ಚೆಯು ಬಹಳವಾಯಿತು. ಪಶ್ಚಿಮದಲ್ಲಿದ್ದ ದಳಪತಿಯನ್ನು ವಾಷಿಂಗ್ಟನ್ನಿಗೆ ಕರೆಯಿಸುವುದು ಯುಕ್ತವಾಗಿರಲಿಲ್ಲ. ಚೇಸನ ಸಲಹೆಯ ಮೇರೆ ಜನರಲ್ ಹೂಕರನು ನೇಮಿಸಲ್ಪಟ್ಟನು. ಅವನಿಗೆ ಪ್ರೆಸಿಡೆಂಟನಿಂದ ಕಾಗದವೊಂದು ಬಂದಿತು. ಅದರ ಧ್ವನಿಗೂ ಮೆಕ್‌ಕ್ಲೆಲ್ಲನ್ನನಿಗೆ ಬರೆದ ಕಾಗದಗಳ ಧ್ವನಿಗೂ ಹೋಲಿಕೆಯೇ ಇರಲಿಲ್ಲ. "ಪೋಟೊಮಕ್‌ನಲ್ಲಿರುವ ಸೈನ್ಯಕ್ಕೆ ನಿನ್ನನ್ನು ಅಧಿಪತಿಯಾಗಿ ನೇಮಿಸಿದ್ದೇನೆ. ಕೆಲವು ಕಾರಣಗಳ ಆಧಾರದ ಮೇಲೆ ಹೀಗೆ ಮಾಡಿದ್ದೇನೆ. ಆದರೆ ನಿನ್ನ ನಡತೆಯಲ್ಲಿ ಕೆಲವು ಅಂಶಗಳನ್ನು ನೋಡಿ ನನಗೆ ಬಹಳ ಅತೃಪ್ತಿಯುಂಟಾಗಿದೆ. ನೀನು ಸಾಹಸಿಯೂ ಕುಶಲನೂ ಆದ ಯೋಧನೆಂದು ನಾನು ನಂಬಿದ್ದೇನೆ. ಹಾಗಿರುವುದು ನನಗೆ ಬಹಳ ಇಷ್ಟವಾದುದು. ಯುದ್ಧಕಾರ್ಯಗಳಲ್ಲಿ ಆಡಳಿತದ ವಿಷಯಗಳನ್ನು ನೀನು ಬೆರಸುವುದಿಲ್ಲವೆಂದು ಭಾವಿಸಿದ್ದೇನೆ. ಬೆರಸದಿರುವುದೇ ಯೋಗ್ಯವಾದುದು. ನಿನ್ನ ಪ್ರಯತ್ನಗಳಲ್ಲಿ ನಿನಗೆ ಭರವಸೆಯಿರುವುದೆಂದು ಹೇಳುತ್ತೀ. ಅದು ಶ್ಲಾಘ್ಯವಾದುದೇ. ಆದರೆ ಅಷ್ಟು ಅಗತ್ಯನಾದುದಲ್ಲ. ನಿನ್ನ ಮನಸ್ಸಿನಲ್ಲಿ ಆಕಾಂಕ್ಷೆಯು ಬಲವಾಗಿರುವುದು. ಅದನ್ನು ಹಿಡಿತದಲ್ಲಿಟ್ಟರು. ನಿನಗೆ ಒಳ್ಳೆಯದೇ ಆಗುವುದು. ಆದರೆ ಜನರಲ್ ಬರ್ನ್‌ಸೈಡನ ಬಳಿಯಲ್ಲಿದ್ದಾಗ ನೀನು ನಿನ್ನ ಆಕಾಂಕ್ಷೆಯನ್ನೇ ಪ್ರಧಾನವಾಗಿಟ್ಟುಕೊಂಡು ಅವನಿಗೆ ಎದುರು ಬೀಳಲು ಪ್ರಯತ್ನಿಸಿದೆ. ಅದರಿಂದ ದೇಶಕ್ಕೂ, ಸಮಾನಸ್ಕಂಧನೂ ಗೌರವಸ್ಥನೂ ಆದ ಅಧಿಕಾರಿಗೂ ಬಹಳವಾದ ಕೆಡಕನ್ನುಂಟುಮಾಡಿದಂತಾಯಿತು. ಸೈನ್ಯದಲ್ಲಿಯೂ ಸರ್ಕಾರದಲ್ಲಿಯೂ ನಿರಂಕುಶನಾದ ಅಧಿಕರ್ತನೊಬ್ಬನಿದ್ದರೆ ಕೆಲಸವು ಸಾಗುವುದೆಂದು ನೀನು ಹೇಳಿರುವುದಾಗಿ ಕೇಳಿರುತ್ತೇನೆ. ಅದು ಕೇವಲ ಜನಶ್ರುತಿಯಲ್ಲ. ನೀನು ಬಾಯಿಬಿಟ್ಟು ಅಂಥ ಮಾತನ್ನು ಆಡಿದೆಯೆಂತಲೇ ನಾನು ತಿಳಿದುಕೊಳ್ಳುತ್ತೇನೆ. ನಿನ್ನ ಅಭಿಪ್ರಾಯದ ಪ್ರಕಾರವೇ ನಿನ್ನನ್ನು ನೇಮಿಸಿದೆನೆಂದು ತಿಳಿಯಬೇಡ. ನೀನು ಆಡಿದ ಮಾತನ್ನು ಲಕ್ಷ್ಯಕ್ಕೆ ತಂದುಕೊಂಡಿಲ್ಲ. ಜಯಗಳನ್ನು ಸಂಪಾದಿಸಬಲ್ಲ ದಳಪತಿಗಳು ಮಾತ್ರವೇ ಸರ್ಕಾರವನ್ನು ವಶಪಡಿಸಿಕೊಂಡು ನಿರಂಕುಶರಾದ ಪ್ರಭುಗಳನ್ನು ನಿರ್ಮಿಸಬಲ್ಲರು. ಆದಕಾರಣ ನೀನು ಈಗ ಜಯಗಳನ್ನು ಸಂಪಾದಿಸಿಕೊಡಬೇಕು. ಸರ್ಕಾರದಲ್ಲಿ ನಿರಂಕುಶನಾದ ಅಧಿಕರ್ತನಾಗುವುದನ್ನು ಆ ಬಳಿಕ ನಾನು ನೋಡಿಕೊಳ್ಳುತ್ತೇನೆ. ಆಡಳಿತವು ಸುಗಮವಾಗುವಂತೆ ಮಾಡುವುದು ನನ್ನ ಕೆಲಸ. ಸರ್ಕಾರವು ತನ್ನಿಂದ ಒದಗುವ

ಸಹಾಯವೆಲ್ಲವನ್ನೂ ನಿನಗೆ ಕಳುಹಿಸುವುದು. ಅದು ಹಿಂದೆಯೂ ಅಷ್ಟೇ ಮಾಡಿತ್ತು; ಮುಂದೆಯಾದರೂ ಅಷ್ಟೇಮಾಡುವುದು—ಆದರೆ ತಮ್ಮ ಅಧಿಪತಿಯ ಕಾರ್ಯಗಳಲ್ಲಿ ತಪ್ಪನ್ನು ಹುಡುಕುವುದನ್ನೂ, ಆತನಲ್ಲಿ ಬಳಕೆಯಿಂದಿರದೆ ಮುಚ್ಚುಮರೆ ಮಾಡುವುದನ್ನೂ ನೀನು ಸೈನಿಕರಿಗೆ ಕಲಿಸಿದೆ. ಸೈನಿಕರು ನಿನ್ನಲ್ಲಿಯೂ ಆ ನಡತೆಯನ್ನು ತೋರಿಸುವರೆಂತಲೇ ನನ್ನ ಕಲ್ಪನೆ. ಸೈನ್ಯದಲ್ಲಿ ಇಂತಹ ಬುದ್ಧಿಯಿರಲಾಗಿ ನೀನಾಗಲೀ, ಅಥವಾ ಈಸಮಯದಲ್ಲಿ ಬದುಕಿದ್ದ ಪಕ್ಷದಲ್ಲಿ ನೆಪೋಲಿಯನ್ನನಾಗಲೀ ಅಂತಹ ಸೈನ್ಯದಿಂದ ಸಹಾಯವನ್ನು ಪಡೆದು ಮಂಗಳವನ್ನು ಹೊಂದಲಾರನು. ಎಚ್ಚರಿಕೆ! ದುಡುಕಬೇಡ, ದುಡುಕಬೇಡ; ಆದರೆ ಸಾಹಸಿಕನಾಗಿರುತ್ತ ಬಹಳ ಜಾಗರೂಕತೆಯಿಂದ ವ್ಯವಹರಿಸು. ವ್ಯವಹರಿಸಿ ನಮಗೆ ಯುದ್ಧಗಳನ್ನು ಗೆದ್ದುಕೊಡು.''

ಜನರಲ್ ಹೂಕರನಿಗೆ ಆಶ್ಚರ್ಯವಾಯಿತು. ವೃದ್ಧನಾದ ತಂದೆಯಂತೆ ಆತನು ನನಗೆ ಬುದ್ಧಿ ಹೇಳುತ್ತಿದ್ದಾನೆ—ಎಂದು ಬಹಳ ಸಂತೋಷವನ್ನು ಹೊಂದಿದನು. ಅವನ ಗುಣವು ಒಳ್ಳೆಯದು, ಮನಸ್ಸು ಪ್ರಸನ್ನವಾದುದು. ಸೈನ್ಯವನ್ನು ಏರ್ಪಾಡುಮಾಡುವುದರಲ್ಲಿ ಜಾಣನು. ದಳಪತಿಯಾದ ಕೂಡಲೇ ಅವನು ಜನರು ಸೈನ್ಯವನ್ನು ತ್ಯಜಿಸಿ ಹೋಗುತ್ತಿದ್ದುದನ್ನು ನಿಲ್ಲಿಸಿದನು. ಉತ್ತರದ ತುರಗಸೈನ್ಯವನ್ನು ಬಲಪಡಿಸಬೇಕೆಂದು ಆಲೋಚಿಸಿದನು—ಸೈನ್ಯದಲ್ಲಿ ಮೆಕ್‌ಕ್ಲೆಲ್ಲನ್ನನು ಕಲಿಸಿದ್ದ ಸೋಮಾರಿತನವನ್ನು ನೋಡಿ ವ್ಯಾಕುಲವಾಯಿತು. ಸ್ವಭಾವತಃ ಧೈರ್ಯಸ್ವರೂ ಸಾಹಸಿಗಳೂ ಆದವರು ಆ ಗುಣಗಳು ಪ್ರಕಾಶಕ್ಕೆ ಬರಲು ಅವಕಾಶವು ಸಾಲದಿದ್ದುದರಿಂದ ಸೋಮಾರಿಗಳಾಗಿದ್ದರು. ಹೂಕರನು ಏಪ್ರಿಲ್ 29ನೆಯ ತಾರೀಖು ಮುಂದೆ ನಡೆದು ಲೀಯ ಸೈನ್ಯದ ಮೇಲೆ ಮೂರು ದಿನಗಳವರೆಗೆ ಯುದ್ಧಮಾಡಿದನು. ಯುದ್ಧಕಾಲದಲ್ಲಿ ಹೂಕರನಿಗೆ ಪೂರಾ ಗಾಯವಾಯಿತು. ಅವನು ಕೋಪಗೊಡು, ವಿವೇಕವನ್ನು ಮರೆತು ಯುದ್ಧಮಾಡಿದನು. ಕೊನೆಯಲ್ಲಿ ಸೋಲಬೇಕಾಯಿತು. ನಷ್ಟವು ಬಹಳವಾಯಿತು. ಹಿಂಜರಿದು ನದಿಯನ್ನು ದಾಟಿದನು. ದಕ್ಷಿಣಕ್ಕೆ ಮತ್ತೊಂದು ಜಯವು ಲಭಿಸಿತು. ಆದರೆ ಈ ಹೊಡೆದಾಟದಲ್ಲಿ ಜಾಕ್ಸನ್ನನು ಮಡಿದನು.

ಚಾರ್ಲ್‌ಸೆಲರ್ಸ್‌ವಿಲ್ ಬಳಿಯಲ್ಲಿ ಉತ್ತರದವರಿಗುಂಟಾದ ಈ ಅಪಜಯವು ಇತರ ರಾಜ್ಯಗಳಲ್ಲಿ ದಕ್ಷಿಣದ ವಿಜಯವನ್ನು ಮೊಳಗುವಂತೆ ತೋರಿತು. ಲಿಂಕನ್ನನೂ ಅವನ ಮಂತ್ರಿಗಳೂ ಭೂಮಿಗಿಳಿದು ಹೋದರು. ಸದ್ಯದಲ್ಲಿಯೇ ಲೀಯು ದೊಡ್ಡದೊಂದು ದಂಡನ್ನು ತೆಗೆದುಕೊಂಡು ಬರುವುದಾಗಿ ಪ್ರವಾದವೆದ್ದಿತು. ಅದರ ಜೊತೆಗೆ, ಈಚೀಚೆಗೆ ಉತ್ತರದ ಪ್ರಯತ್ನವು ಪಶ್ಚಿಮದ ಪ್ರದೇಶಗಳಲ್ಲಿ ಸಫಲವಾಗುವುದೋ ಇಲ್ಲವೋ ಎಂದು ಸಂಶಯವನ್ನುಂಟುಮಾಡುವಂಥದಾಗಿದ್ದಿತು. ಉತ್ತರದ ಕಳವಳವು ಹೆಚ್ಚಿತು. ಆದರೆ ಕೂಡಲೇ ದೆಸೆಯು ತಿರುಗಿತು. ಯುದ್ಧದ ಗೊಂದಲವೂ ಕೂಡ ಬೇಗ ನಿವೃತ್ತಿಗೊಂಡಿತು. ಪ್ರಕೃತದಲ್ಲಿ ಯುದ್ಧಕ್ಕಿಂತಲೂ ಆಡಳಿತವು ಮುಖ್ಯವಾದುದು. ಆಂಟಿಯಟಮ್ ಬಳಿಯಲ್ಲಿ ನಡೆದ ಯುದ್ಧದ ಫಲಿತಾಂಶಗಳು ಆಡಳಿತಕ್ಕೆ ಹೇಗೆ ಸಂಬಂಧಿಸಿ ಅದನ್ನು ಎಷ್ಟರಮಟ್ಟಿಗೆ ಬದಲಾಯಿಸಿದುವೆಂಬುದನ್ನು ತಿಳಿಯಬಹುದು.

---

# ೧ ನೆಯ ಅಧ್ಯಾಯ

## ಬಿಡುಗಡೆ.

ಬುಲ್‌ರನ್ನಿನ ಎರಡನೆಯ ಯುದ್ಧದ ಸುದ್ದಿಯು ಇಂಗ್ಲೆಂಡಿನಲ್ಲಿ ಹರಡಿತು. ಉತ್ತರ ಅಮೇರಿಕಕ್ಕೆ ಇನ್ನು ಉಳಿಗಾಲವಿಲ್ಲವೆಂದು ಅಲ್ಲಿನ ಮಂತ್ರಿಯು ನಿರ್ಧರ ಮಾಡಿದನು. ಸೋತು ಸೋತು ಪೆಟ್ಟುತಿನ್ನುತ್ತಿರುವ ಉತ್ತರವನ್ನು ಬಿಡಿಸಿ, ಎರಡು ಭಾಗಗಳಿಗೂ ಸಂಧಿಯನ್ನುಂಟುಮಾಡಬೇಕೆಂದು ಆ ರಾಜ್ಯದ ಪ್ರಜೆಗಳು ಮಾತ ನಾಡಲಾರಂಭಿಸಿದರು. ಆದರೆ ಮುಂದೆ ಎರಡು ತಿಂಗಳೊಳಗಾಗಿ ಆ ಯೋಚನೆ ಯೆಲ್ಲಾ ದೂರವಾಯಿತು. ಫ್ರೆಡರಿಕ್ಸ್‌ಬರ್ಗ್ ಮತ್ತು ಚಾನ್ಸೆಲರ್ಸ್‌ವಿಲ್ ಕದನ ಗಳಲ್ಲಿ ಉತ್ತರದವರಿಗೇ ಸೋಲಾದರೂ ಆ ದುರ್ದಶೆಯು ಮತ್ತೆ ಕಾಣಿಸಿಕೊಳ್ಳಲಿಲ್ಲ. ಈ ನಡುವೆ ಆಂಟಿಯಟಂ ಯುದ್ಧವು ನಡೆದು ಜಯದ ಭರವಸೆಯು ಊರ್ಜಿತ ವಾಯಿತು. ಅಷ್ಟೇ ಅಲ್ಲ. ಆ ಯುದ್ಧವಾದ ಐದು ದಿನಗಳೊಳಗಾಗಿ ಒಂದು ಸಂಗತಿಯೊದಗಿತು.

ಸೆಪ್ಟೆಂಬರ್ 22 ನೆಯ ತಾರೀಖಿನ ದಿನ ಲಿಂಕನ್ನನು ಒಂದು ಪ್ರಕಟನೆಯನ್ನು ಹೊರಡಿಸಿದನು. ಅದರ ಮುಖ್ಯಾಂಶವು ಇಷ್ಟು:—"That on the first day of January in the year of our Lord One thousand eight hundred and sixty three, all persons held as slaves within any State or designated part of a State, the people whereof shall then be in rebellion against the United States, shall be then, thence-forward, and for ever free."

ಈ ಪ್ರಕಟನೆಯ ಯುಕ್ತಿಯುಕ್ತತೆಯನ್ನೂ ಪರಿಣಾಮವನ್ನೂ ಪರಿಶೀಲಿಸ ಬಹುದು. ಸಾಧಾರಣಕಾಲದಲ್ಲಿ ಪ್ರೆಸಿಡೆಂಟನಿಗೆ ಅಂಥದನ್ನು ಮಾಡಲು ಅಧಿಕಾರ ವಿರುತ್ತಿರಲಿಲ್ಲ. ನ್ಯಾಯವಿಧಾಯಕಸಭೆಯೂ ಕೂಡ ಒಬ್ಬ ಗುಲಾಮನನ್ನು ಬಿಡಿಸಿ ಸ್ವತಂತ್ರನನ್ನಾಗಿ ಮಾಡಲಾರದಿದ್ದಿತು. ಈ ಅಡಚಣೆಯಿದ್ದುದರಿಂದಲೇ ಲಿಂಕನ್ನನು ಯುದ್ಧಕಾಲದಲ್ಲಿ ಆ ಕೆಲಸವನ್ನು ಮಾಡಿದನು. ಪ್ರೆಸಿಡೆಂಟನಾದ ಅವನು ಯುದ್ಧ ಕಾಲದಲ್ಲಿ ಸರ್ವಸೇನಾಪತಿಯೆನ್ನಿಸಿಕೊಂಡನು. ಯುದ್ಧಕಾಲದಲ್ಲಿ ಶತ್ರುಗಳ ಪದಾರ್ಥವನ್ನು ವಶಪಡಿಸಿಕೊಳ್ಳಲು ಅವನಿಗೆ ಅಧಿಕಾರವಿದ್ದಿತು. ಅಂಥ ಕೆಲಸಗಳನ್ನು ಮಾಡಿ ಶತ್ರುವಿನ ಬಲವನ್ನು ಕುಗ್ಗಿಸುವುದರಿಂದ ಧರ್ಮವನ್ನು ದಾಟಿದಂತಾಗು ವುದಿಲ್ಲ. ಪ್ರಕೃತದಲ್ಲಿ ಗುಲಾಮನು ಶತ್ರುವಿನ ಪದಾರ್ಥಗಳಲ್ಲಿ ಒಬ್ಬನಾದುದರಿಂದ ಅವನನ್ನು ಸೆರೆಹಿಡಿದು ಅವನ ವಿಷಯದಲ್ಲಿ ತನಗೆ ತೋರಿದ ಹಾಗೆ ಮಾಡಲು ಪ್ರೆಸಿಡೆಂಟನಿಗೆ ಸ್ವಾತಂತ್ರ್ಯವಿದ್ದಿತು. ತನ್ನ ಪ್ರಕಟನೆಯು ನ್ಯಾಯಬದ್ಧವಾಗಲು ಯುದ್ಧಸಮಯದಲ್ಲಿ ಸಾಕಾದಷ್ಟು ಅವಶ್ಯಕತೆಯೂ ಅದರ ದೆಸೆಯಿಂದ ಉತ್ತರದ

ಬಲವು ಹೆಚ್ಚುವುದೆಂಬ ಅಂಶವೂ ತೋರಿಬಂದರೆ ಸಾಕಾಗಿದ್ದಿತು. ಆಗ ಸ್ವತಂತ್ರರಾದ ಗುಲಾಮರು ಮುಂದೆಯೂ ಸ್ವತಂತ್ರರೆನ್ನಿಸಿಕೊಳ್ಳುತ್ತಿದ್ದರು. ಪ್ರಕಟನೆಯು ಯುದ್ಧಕಾಲದ ಕಾನೂನಾಗಿದ್ದಿತು. ಯುದ್ಧದ ಪರಿಣಾಮವು ಅದು ಯುಕ್ತವಾದುದೆಂಬುದನ್ನು ದೃಢಪಡಿಸಿತು. ಆ ಕಾನೂನಿನ ದೆಸೆಯಿಂದ ದಕ್ಷಿಣದಲ್ಲಿ ಕೆಲಸಗಾರರು ಸಿಕ್ಕುವುದು ಕಷ್ಟವಾಗಿ ಕೆಲಸಗಳು ಬಹಳವಾಗಿ ನಿಂತುಹೋದುವು. ಯುದ್ಧದ ಕೊನೆಕೊನೆಯಲ್ಲಿ ಉತ್ತರದ ದಂಡಿನಲ್ಲಿ 180,000 ಮಂದಿ ನೀಗ್ರೋಗಳು ಆಯುಧವನ್ನು ಹಿಡಿದು ನಿಂತಿದ್ದರು. ಅವರಿಂದ ಇತರವಿಧವಾಗಿಯೂ ಸಹಾಯವು ದೊರೆಯುತ್ತಿದ್ದಿತು. ದಕ್ಷಿಣದಲ್ಲಿ ಗೆದ್ದ ಅನೇಕಪ್ರದೇಶಗಳು ಅನಾರೋಗ್ಯಕರವಾಗಿ ಬಿಳಿಯ ಜನರು ಅಲ್ಲಿ ವಾಸಮಾಡಲಾಗುತ್ತಿರಲಿಲ್ಲ. ಅಂಥ ಸ್ಥಳಗಳಲ್ಲಿ ನೀಗ್ರೋಗಳು ವಾಸಮಾಡಿದರು. ಅವರ ಸಹಾಯವಿಲ್ಲದಿದ್ದರೆ ಯುದ್ಧವು ಅಷ್ಟು ಬೇಗ ಮುಗಿಯುತ್ತಿರಲಿಲ್ಲವೆಂದು ಲಿಂಕನ್ನನು ಹೇಳಿದನು. ಅಲ್ಲದೆ, 1863 ನೆಯ ವರ್ಷದ ಪ್ರಕಟನೆಯ ದೆಸೆಯಿಂದ ಉತ್ತರವು ಒಂದು ಮಾರ್ಗವನ್ನು ಹಿಡಿದು ಹೊರಟಂತಾಗಿ, ಮತ್ತೆ ಆ ಮಾರ್ಗವನ್ನು ಬಿಟ್ಟು ಹಿಂದಿರುಗಲಾಗದಂತಹ ನಿರ್ಬಂಧವುಂಟಾಯಿತು. ಯುದ್ಧದಲ್ಲಿ ಜಯಿಸಲೇಬೇಕೆಂಬ ಅಗತ್ಯವುಂಟಾಯಿತು. ಆದರೆ ಲಿಂಕನ್ನನು ಫಲಿತಾಂಶವನ್ನು ಲೆಕ್ಕಹಾಕಿಕೊಂಡು ಕೆಲಸಮಾಡಲಿಲ್ಲ. ಯುದ್ಧಕಾಲನಾದುದರಿಂದ ಗುಲಾಮರಿಗೆ ಬಿಡುಗಡೆಯಾಗಲು ಹೆಚ್ಚು ಅವಕಾಶವು ಸಿಕ್ಕಿತು. ಶತ್ರುಗಳ ವಶದಲ್ಲಿರುವ ಪದಾರ್ಥಗಳನ್ನು ಕೈಸೇರಿಸಿಕೊಳ್ಳಲು ಒಂದು ಪಕ್ಷಕ್ಕೆ ಸಂಪೂರ್ಣವಾದ ಅಧಿಕಾರವುಂಟು. ಲಿಂಕನ್ನನು ಆ ನೆವವನ್ನು ಹುಡುಕಿದನು. ಪ್ರಕಟನೆಯನ್ನು ಹೊರಡಿಸಿ ಆಚರಣೆಗೆ ತರಲಾಗಿ ಕಾಲಕ್ರಮದಲ್ಲಿ ಆಗುತ್ತಿದ್ದ ಮುಕ್ತಿಯು ಬೇಗಲೇ ಆದಂತಾಯಿತು. ಅಂತಃಕಲಹವು ಒದಗಲು ದಾಸ್ಯವು ಕಾರಣವಾದುದರಿಂದ ಅದನ್ನು ನಿರ್ಮೂಲಮಾಡಿದರೆ ದಂಗೆಯನ್ನು ಅಡಗಿಸಲು ದಾರಿಯು ದೊರೆತಂತಾಗುತ್ತಿದ್ದಿತು.

ಉತ್ತರವು ಇದೊಂದು ಪ್ರಯತ್ನದಿಂದ ತೃಪ್ತಿಪಡಲಿಲ್ಲ. ಮೊದಲಿಂದಲೂ ಅಲ್ಲಿನ ಜನರು ದಾಸ್ಯವನ್ನು ದ್ವೇಷಿಸುತ್ತ ಅದನ್ನು ಎಂದಿಗೆ ನಿರ್ನಾಮಮಾಡುವೆವೋ ಎಂದು ಹಾರೈಸುತ್ತಿದ್ದರು. ಅವರ ಭಾವನೆಯಲ್ಲಿ ಲಿಂಕನ್ನನು ಮಾಡುತ್ತಿದ್ದುದು ತೀರ ಸಾಲದು. ಬೆಟ್ಟವನ್ನು ಗುದ್ದಲಿಯಿಂದ ಕೆತ್ತಿ ಉರುಳಿಸುವುದಕ್ಕೆ ಹೊರಟ ಹಾಗಿದ್ದಿತು. ಅಂಥವರಿಗೆ ಯುದ್ಧವು ಕೊನೆಗೊಂಡರೂ ದಾಸ್ಯವು ಕೊನೆಗೊಳ್ಳದೆ ಉಳಿಯುವುದನ್ನು ನೋಡಿ ಸಹಿಸಲಾಗುತ್ತಿರಲಿಲ್ಲ. ಅನೇಕರಿಗೆ, ಯುದ್ಧಮಾಡುತ್ತಿರುವುದು ದಾಸ್ಯವನ್ನು ಅಡಗಿಸುವುದಕ್ಕೋಸ್ಕರಲೇ ಎಂದು ಪ್ರಕಟಮಾಡಿದ್ದ ಪಕ್ಷದಲ್ಲಿ ಉತ್ತರವನ್ನು "ಎಚ್ಚರಗೊಳಿಸಿ" ಐಕಮತ್ಯವನ್ನುಂಟುಮಾಡುವುದು ಸಾಧ್ಯವಾಗುವುದೆಂದು ತೋರಿತು. ಈ ರೀತಿಯಾಗಿ ಹೊರಗಿನ ರಾಜ್ಯಗಳಲ್ಲಿದ್ದ ಅಮೆರಿಕದ ರಾಯಭಾರಿಗಳು ಅಭಿಪ್ರಾಯಪಟ್ಟರು. ಉತ್ತರವು ತಾನು ಯುದ್ಧಮಾಡುತ್ತಿದ್ದುದಕ್ಕೆ ಶಾಸನಕ್ರಮವನ್ನು ಉದ್ಧಾರಮಾಡುವುದೇ ಮುಖ್ಯಕಾರಣವೆಂತಲೂ ದಕ್ಷಿಣದ ಆಚರಣೆಗಳನ್ನು ನಿಷೇಧಿಸುವುದು ಕಾರಣವಲ್ಲವೆಂತಲೂ ಹೇ

ದ್ದರೆ ಯೂರೋಪಿನಲ್ಲಿ ಜನರಿಗೆ ಆ ಉದ್ದೇಶವು ಅರ್ಥವಾಗುತ್ತಿರಲಿಲ್ಲ. ಅಲ್ಲದೆ ರಾಜ್ಯದೊಳಗಿನ ದುರಾಚಾರವನ್ನೆಲ್ಲಾ ತಪ್ಪಿಸುವುದನ್ನು ಬಿಟ್ಟು ಉತ್ತರವು ಯಾವುದೋ ಕೇವಲ ನಿಷ್ಪ್ರಯೋಜಕವಾದ ಕೆಲಸವನ್ನು ಮಾಡಲು ಹೊರಟಿರುವು ದೆಂದು ಭಾವಿಸಿ ಅವರು ಅದನ್ನು ಕೀಳಾಗಿ ಎಣಿಸುತ್ತಿದ್ದರು. ಆ ಭಾಗವು ದಾಸ್ಯದ ಮೇಲೆ ಕೈಮಾಡುತ್ತಿಲ್ಲವೆಂದು ಹೇಳಲಾಗಿ ಇಂಗ್ಲೆಂಡಿನ ಜನರು "ಏಕೆ ಮಾಡ ಬಾರದು ?" ಎಂದು ಆಕ್ಷೇಪಿಸಿದರು. ಅವರಲ್ಲಿ ಉತ್ತರವನ್ನು ಕಂಡರೆ ಆಗದವರೂ ಕೂಡ ಅದು ದಾಸ್ಯದ ಮೇಲೆ ಯುದ್ಧಕ್ಕೆ ಹೊರಟಿದೆಯೆಂಬುದನ್ನು ತಿಳಿದಿದ್ದರೆ ಪಕ್ಷಪಾತವನ್ನು ತೋರಿಸದಿರುತ್ತಿರಲಿಲ್ಲ. ಅವರ ಚಿತ್ತವೃತ್ತಿಯನ್ನು ಚೆನ್ನಾಗಿ ತಿಳಿದುಕೊಳ್ಳದೆ ಸಿವರ್ಡನು, ದಾಸ್ಯವನ್ನು ಅಡಗಿಸುವುದಕ್ಕಾಗಿ ಯುದ್ಧವು ನಡೆಯು ತ್ತಿಲ್ಲವೆಂದು ಹೇಳುವಂತೆ ರಾಯಭಾರಿಗಳಿಗೆಲ್ಲಾ ಕಟ್ಟುಮಾಡಿದ್ದನು. ಗುಲಾಮರನ್ನು ಸ್ವತಂತ್ರರನ್ನಾಗಿ ಮಾಡಿದರೆ ಹತ್ತಿಯ ವ್ಯಾಪಾರವು ನಿಂತುಹೋಗಿ ತಮಗೆ ನಷ್ಟ ವಾಗುವುದೆಂದು ಅಲ್ಲಿಯ ಪ್ರಜೆಗಳು ಕೋಪಗೊಳ್ಳುವರು ; ಕೋಪಗೊಂಡರೆ ಉತ್ತರಕ್ಕೆ ಹೊರಗಿನ ಆಸರೆಯು ತಪ್ಪಿಹೋಗುವುದು—ಹೀಗೆಂದು ಅವನು ಹೆದರಿ ದನು. ಈ ಅವಕಾಶವನ್ನು ನೋಡಿ ದಕ್ಷಿಣವು ತನ್ನಂತೆಯೇ ಉತ್ತರವೂ ದಾಸ್ಯದಲ್ಲಿ ಪ್ರೀತಿಯನ್ನು ತೋರಿಸುತ್ತಿರುವುದೆಂದೂ ಅದನ್ನು ಅಡಗಿಸಲು ಪ್ರಯತ್ನಮಾಡು ತ್ತಿಲ್ಲವೆಂದೂ ವ್ಯಂಗ್ಯಾರ್ಥಮಾಡಿ ಪ್ರಚಾರಪಡಿಸಿತು. ಆದರೆ ಈ ಆರೋಪಣೆಯು ತಪ್ಪಿದರೆ ಉತ್ತರದ ವಿಷಯದಲ್ಲಿ ಇತರ ರಾಜ್ಯಗಳಿಗಿದ್ದ ದುರ್ಭಾವನೆಯು ತಪ್ಪು ತ್ತಿದ್ದಿತು. ಸ್ನೇಹವಿಲ್ಲದಿರಬಹುದು, ಆದರೆ ದ್ವೇಷವಿರುತ್ತಿರಲಿಲ್ಲ. ಲಿಂಕನ್ನನು ಇದನ್ನು ತಿಳಿದನು. ಆದರೂ ಕೂಡ ದಾಸ್ಯದ ವಿಷಯದಲ್ಲಿ ನಿರ್ಣಯಪೂರ್ವಕವಾದ ವ್ಯವಹಾರವನ್ನು ನಡೆಯಿಸಲು ಕಾರಣಗಳನ್ನು ಹುಡುಕಿ ಇಟ್ಟುಕೊಂಡು ಅವನು ಹದಿನೇಳು ತಿಂಗಳವರೆಗೆ ಕಾದನು. ಸಮಯವು ಬಂದಿತು.

ಯುದ್ಧವು ಪ್ರಾರಂಭವಾದ ಕೂಡಲೇ ಈ ಕೆಲಸವನ್ನೇಕೆ ಮಾಡಬಾರದಾಗಿ ತ್ತೆಂದು ಕೇಳಬಹುದು. ಅಗತ್ಯವೆಂದು ಕಾಣುವವರೆಗೂ ಅವನು ಪ್ರಕಟನೆಯ ನ್ನು ಹೊರಡಿಸಲಿಲ್ಲ. ಅಲ್ಲದೆ ಪ್ರಕಟನೆಯು ಗುಲಾಮರಿಗೆ ನಿಶ್ಚಯವಾಗಿ ಬಿಡುಗಡೆ ಯನ್ನುಂಟುಮಾಡಬಲ್ಲದೆಂಬುದನ್ನು ತಿಳಿಯುವವರೆಗೂ ಹೊರಡಿಸಲಿಲ್ಲ. ಅದೂ ಅಲ್ಲದೆ ಉತ್ತರದ ಮನಸ್ಸು ಇಂಥದೇ ಎಂಬುದು ಪ್ರಾರಂಭದಲ್ಲಿ ಸ್ಪಷ್ಟವಾಗಿರಲಿಲ್ಲ. ಈ ನಿಬಂಧನೆಯುಂಟಾದ ಮೇಲೆ ಜನರು ತಮ್ಮ ಮನಸ್ಸನ್ನು ಬದಲಾಯಿಸಿ, ಅದು ಬೇಡವೆಂದು ಹೇಳಿದರೆ ಆಬಳಿಕ ಮಾಡುವುದೇನು ? ಜನಗಳ ಮನಸ್ಸಿನ ಚಾಂಚಲ್ಯ ವನ್ನು ತಿಳಿದು ಲಿಂಕನ್ನನು ಯುದ್ಧದಲ್ಲಿ ಅವರು ಮನಸ್ಸಿಟ್ಟು ಸ್ಥಿರವಾದೊಂದು ಅಭಿಪ್ರಾಯವನ್ನು ಹೊಂದುವವರೆಗೂ ನಿರೀಕ್ಷಿಸಿದನು. ಯುದ್ಧದಲ್ಲಿ ಮೊದಲು ಮೊದಲು ಉತ್ತರಕ್ಕೆ ಸೋಲುಂಟಾದುದರಿಂದಲೂ ಒಂದು ಅನುಕೂಲವಾಯಿತು. ಜನಗಳ ಕೋಪವು ಹೆಚ್ಚುತ್ತ ಹೆಚ್ಚುತ್ತ ಬಂದು, ದಕ್ಷಿಣವನ್ನೂ ಅದಕ್ಕೆ ಸಂಬಂಧ ಪಟ್ಟುದೆಲ್ಲವನ್ನೂ ಧ್ವಂಸಮಾಡಬೇಕೆನ್ನುವಷ್ಟುಮಟ್ಟಿಗೆ ನಿಂತಿತು. ಸ್ಥಿತಿಯು ಅಷ್ಟಕ್ಕೆ ಬರುವುದಕ್ಕೆ ಮೊದಲೇ ಆ ಕೆಲಸವನ್ನು ಮಾಡಿದ್ದರೆ ಅದು ಪ್ರಾಯಶಃ

ಸ್ಥಿರವಾಗಿ ನಿಂತು ರಾಜ್ಯದಲ್ಲಿ ಮಾರ್ಪಾಡು ಮಾಡುತ್ತಿರಲಿಲ್ಲ. ಜನಗಳಲ್ಲಿ ಕೆಲವರು ಆತುರಪಡುತ್ತ, ನೂರು ವರುಷಗಳಲ್ಲಿ ಮಾಡಲಾಗುವಂತಹದನ್ನು ಒಂದು ಕ್ಷಣ ದೊಳಗೆ ಮಾಡಿಬಿಡಬೇಕೆನ್ನುತ್ತಿದ್ದರು. 1861 ರಲ್ಲಿ ಫ್ರೇಮಾಂಟನು ಪ್ರಕಟನೆ ಯನ್ನು ಹೊರಡಿಸಿದನು. ಆದರೆ ಜನಗಳಲ್ಲಿ ಮತ್ತೊಂದು ಭಾಗಕ್ಕೆ ಅಂತಹ ಆತುರವು ಇಷ್ಟವಾಗಿರಲಿಲ್ಲ. ಬರುತ ಬರುತ ಲಿಂಕನ್ನನು ಜನಗಳ ಅಭಿಪ್ರಾಯ ವನ್ನು ಲೆಕ್ಕಕ್ಕೆ ತರುತ್ತಲೇ ಇರಲಿಲ್ಲ. ಆದಕಾರಣವೇ ಹಿತೈಷಿಗಳೆನ್ನಿಸಿಕೊಂಡವರೂ ಕೂಡ ಅವನನ್ನು ದೂರಮಾಡಿ ದ್ವೇಷಿಸಲಾರಂಭಿಸಿದರು. ಹೀಗಾದರೂ ಚಿಂತೆಯಿಲ್ಲ, ಉತ್ತರವು ಒಗ್ಗಟ್ಟಿನಿಂದ ನಿಂತು ಯುದ್ಧಮಾಡಲೆಂದು ಲಿಂಕನ್ನನು ಹೇಳಿದನು. ಸಂಯೋಗವೆಂಬ ಮಾತನ್ನು ಬಿಟ್ಟು ವಿಮೋಚನೆಯೆಂಬ ಮಾತನ್ನು ಹಿಡಿದಿದ್ದರೆ ಉತ್ತರದಲ್ಲಿ ಒಡಕು ಉಂಟಾಗಿ ಕೈಗೊಂಡ ಕೆಲಸಕ್ಕೆ ಮುಳಿಬರುತ್ತಿದ್ದಿತು. ದಾಸ್ಯದ ವಿಷಯದಲ್ಲಿ ತಿರಸ್ಕಾರವನ್ನಾಗಲೀ ಪುರಸ್ಕಾರವನ್ನಾಗಲೀ ತೋರಿಸಲು ಒಂದು ಸಂಸ್ಥಾನಕ್ಕೆ ಸ್ವಾತಂತ್ರ್ಯವುಂಟೆಂಬ ಅಂಶವನ್ನು ಉತ್ತರದಲ್ಲಿ ಎಲ್ಲರೂ ಒಪ್ಪಿ ಕೊಳ್ಳುತ್ತಿದ್ದರು. ಉತ್ತರದ ಸಂಸ್ಥಾನಗಳಲ್ಲಿ ನಾಲ್ಕು ಮೊದಲಿಂದ ಕೊನೆಯ ವರೆಗೂ ದಾಸ್ಯವನ್ನು ಪ್ರೋತ್ಸಾಹಿಸಿ ಪೋಷಿಸಿದುವು.[1]

ದಾಸ್ಯವು ಕಾಲಕ್ರಮದಲ್ಲಿ ತೊಡೆದು ಹೋಗುವುದಾದರೆ ಲಿಂಕನ್ನನು ಸಾಹಸವೇನನ್ನೂ ಮಾಡಿದಂತಾಗುತ್ತಿರಲಿಲ್ಲ. 1861 ನೆಯ ಡಿಸೆಂಬರ್ ತಿಂಗಳಲ್ಲಿ ಅವನು ಸಭೆಯಲ್ಲಿ ತನ್ನ ಒರದಿಯನ್ನು ಓದಿದನು. ಅದರೊಳಗೆ ದಾಸ್ಯದ ವಿಚಾರ ದಲ್ಲಿ ತನ್ನ ವ್ಯವಹಾರದ ರೀತಿಯನ್ನು ನಮೂದುಮಾಡಿದ್ದನು. ದಕ್ಷಿಣದಲ್ಲಿದ್ದ ಪದ್ಧತಿಗಳ ಗೊಡವೆಗೆ ಹೋಗಲೇ ಕೂಡದೆಂದು ನಿಷೇಧಮಾಡುತ್ತಿದ್ದ ಡೆಮೊಕ್ರೆಟ ರಿಗೆ, ಯುದ್ಧದಲ್ಲಿ ಜಯವುಂಟಾಗಬೇಕಾಗಿದ್ದರೆ ಒಂದೊಂದುವೇಳೆ ಕೂಲಂಕಷ ವಾದ ಪ್ರಯತ್ನಗಳು ಅವಶ್ಯಕವಾಗುವುವು ; ಅಗತ್ಯವಾದರೆ ಅಂತಹ ಪ್ರಯತ್ನ ಗಳನ್ನು ನಡೆಯಿಸಲೇಬೇಕಾಗುವುದು, ಎಂದು ಸೂಚಿಸಿದನು. ಆದರೆ ಯುದ್ಧ ದಲ್ಲಿ ಒರಟುತನವನ್ನೂ ನಿಷ್ಕಾರಣವಾದ ಕ್ರೌರ್ಯವನ್ನೂ ತೋರಿಸುವುದರಲ್ಲಿ ಅವನಿಗೆ ಸಮ್ಮತಿಯಿರಲಿಲ್ಲ. ಹೀಗೆ ಒರಟುತನವನ್ನು ತೋರಿಸಿದರೆ ದಕ್ಷಿಣ ದಲ್ಲಿ ದುಷ್ಟಪದ್ಧತಿಗಳು ತಪ್ಪಿ ಜನಗಳು ಸೌಜನ್ಯದ ಮೂರುತಿಗಳಾಗುತ್ತಿರಲಿಲ್ಲ. ಸಾವಕಾಶನಾಗಿ ಕೆಲಸಮಾಡಿ ಕಾಲಾನುಕಾಲದಲ್ಲಿ ಬಿಡುಗಡೆಮಾಡುವುದು ಸರ್ವೋತ್ತಮವೇ ಹೊರತು ಏಕಾಏಕಿ ನುಗ್ಗಿ ಬಿಡುಗಡೆ ಮಾಡಲೆಳಸುವುದರಿಂದ ಪ್ರಯತ್ನವು ನಿರರ್ಥಕವಾಗಬಹುದಲ್ಲದೆ ಬಿಡುಗಡೆಹೊಂದಿದ ನೀಗ್ರೋಗಳಿಗೂ

---

[1] ಉತ್ತರ ದಕ್ಷಿಣಗಳೆಂದು ಅಮೆರಿಕದಲ್ಲಿ ವಿಭಾಗವುಂಟಾದುದು ದಾಸ್ಯವನ್ನು ಪೋಷಿಸುತ್ತ ಅಥವಾ ದ್ವೇಷಿಸುತ್ತಿದ್ದುದರ ಆಧಾರದಿಂದಲ್ಲವೆಂಬುದು ಈ ವೇಳೆಗೆ ಸ್ಪಷ್ಟವಾಗಿರಬಹುದು. ಸಂಯೋಗವನ್ನು ರಕ್ಷಿಸಿ ಅಮೆರಿಕವನ್ನು ಸಂಯುಕ್ತ ಸಂಸ್ಥಾನವನ್ನಾಗಿ ಇಟ್ಟುಕೊಂಡಿರಬೇಕೇ ಅಥವಾ ಬೇಡವೇ ಎಂಬುದೇ ಆ ವಿಭಾ ಗದ ಮೂಲತತ್ವವಾಗಿದ್ದಿತು.

ಕೂಡ ಪ್ರಯೋಜನವು ಅಲ್ಪವಾಗುತ್ತಿದ್ದಿತು. ಈ ಅಭಿಪ್ರಾಯವನ್ನು ನೋಡಿ, ಆತುರ ಪಡುತ್ತಿದ್ದವರು ಪ್ರೆಸಿಡೆಂಟನು ತಾಮಸಮಾಡುವವನೂ ಉದಾಸೀನನೂ ಆದವನೆಂದು ಅಸಹನೆಯನ್ನು ಹೊಂದುತ್ತಿದ್ದರು. ಅವನ ಮಾತಿನಲ್ಲಿ ಶ್ರದ್ಧೆಯಿರುವಂತೆ ತೋರ್ಪಡುತ್ತಿರಲಿಲ್ಲ. ಪ್ರೆಸಿಡೆಂಟನು ನಮ್ಮ ಕಡೆಗೆ ಸೇರಿದವನಲ್ಲವೆಂದು ಅವರ ಮನಸ್ಸಿಗೆ ತೋರುತ್ತಿದ್ದಿತು. ನಿಜ ; ಅವನು ಅಂಥವರ ಕಡೆಗೆ ಸೇರಿದವನಲ್ಲ. ದಾಸ್ಯದಲ್ಲಿ ಇಬ್ಬರಿಗೂ ಸಮವಾದ ದ್ವೇಷವಿದ್ದಿತು. ಅದನ್ನು ಶಾಶ್ವತವನ್ನಾಗಿ ಮಾಡಲು ನಡೆಯುವ ಪ್ರಯತ್ನಗಳನ್ನು ತುಳಿದುಹಾಕಲು ಲಿಂಕನ್ನನಂತೆ ಇತರರು ಶ್ರಮಪಡುತ್ತಿರಲಿಲ್ಲ. ಆದರೆ ಇತರರು ದಾಸ್ಯದ ದೆಸೆಯಿಂದ ಯಜಮಾನರನ್ನು ದ್ವೇಷಿಸುತಿದ್ದರು. ಲಿಂಕನ್ನನಲ್ಲಿ ಮಾತ್ರ ಆ ದ್ವೇಷವಿರಲಿಲ್ಲ. ದಾಸ್ಯವನ್ನು ಸ್ಥಿರಪಡಿಸುವಂತಹ ಪ್ರಯತ್ನಗಳಿಗೆಲ್ಲಾ ಅವನು ಆಸ್ಪದವನ್ನು ಕೊಡದಿರಬಹುದು. ಆದರೆ ಯಜಮಾನರಿಗೆ ಕೆಡಕನ್ನುಂಟುಮಾಡಬೇಕೆಂಬ ದೌರ್ಜನ್ಯವಿರಲಿಲ್ಲ. ''ಅಪಕಾರೇಚ್ಛೆಯಿಂದ ಯಾವುದನ್ನೂ ಮಾಡಲಾರೆನು. ನನ್ನ ಪ್ರಯತ್ನದಲ್ಲಿ ಅದಕ್ಕೆ ಸ್ಥಳವಿಲ್ಲ'' ಎಂದು ಅವನು ಲೂಸಿಯಾನದ ಮನುಷ್ಯನೊಬ್ಬನಿಗೆ ಬರೆದನು. ನೀಗ್ರೋಗಳು ತನ್ನಂತೆಯೇ ಮನುಷ್ಯರು. ಆದಕಾರಣ ಲಿಂಕನ್ನನು, ಅವರಿಗೆ ಬಂಧವಿಮೋಚನೆಯನ್ನು ಮಾಡಿದರೆ, ಅವರ ನಾಗರಿಕತೆಗಾಗಿ ಎಲ್ಲವನ್ನೂ ಮಾಡಿದಂತಾಗುವುದಿಲ್ಲವೆಂದು ಭಾವಿಸಿದನು. ಆದರೂ, ಸಾಮೋಪಾಯದಿಂದ ಆ ಕಾರ್ಯವು ನಡೆಯದಿದ್ದುದಕ್ಕಾಗಿ ಅವನಿಗೆ ಕೊರಗು ಉಂಟಾಯಿತು

1862 ನೆಯ ವರುಷದ ಆದಿಭಾಗದಲ್ಲಿ, ಆಫ್ರಿಕದ ಗುಲಾಮರನ್ನು ತಂದು ತಂದು ಮಾರುವ ದುಷ್ಪದ್ಧತಿಯನ್ನು ನಿಶ್ಶೇಷವಾಗಿ ಅಡಗಿಸಿಬಿಡಬೇಕೆಂಬ ಉದ್ದೇಶದಿಂದ ಇಂಗ್ಲೆಂಡೂ ಸಂಯುಕ್ತಸರ್ಕಾರವೂ ಕರಾರುಮಾಡಿಕೊಂಡುವು. ಅದನ್ನು ಲಕ್ಷ್ಯದಲ್ಲಿಡದೆ ಸಮುದ್ರಗಳ್ಳನೊಬ್ಬನು ವ್ಯಾಪಾರವಮಾಡುತಲೇ ಇದ್ದು, ಸಿಕ್ಕಿಬಿದ್ದನು. ಅವನಿಗೆ ಮರಣದಂಡನೆಯಾಯಿತು. ಅದೇಕಾಲದಲ್ಲಿ ಲಿಂಕನ್ನನು, ದಿಲಾವೇರ್‌ನಲ್ಲಿ ಅಲ್ಲಿನ ನ್ಯಾಯವಿಧಾಯಕ ಸಭೆಯ ಮೂಲಕ ಒಂದು ಕಾನೂನನ್ನು ಚಲಾವಣೆಗೆ ತರಲು ಹವಣಿಸಿದ್ದನು. ಆ ಸಂಸ್ಥಾನದಲ್ಲಿದ್ದ ಗುಲಾಮರಿಗೆ ಬಿಡುಗಡೆಯಾಗಿ ಅವರು ಅಭಿವೃದ್ಧಿಗೆ ಬರಲು ಏರ್ಪಾಡುಗಳನ್ನು ಮಾಡಬೇಕೆಂಬುದೂ, ನಷ್ಟಪರಿಹಾರಕ್ಕಾಗಿ ಯಜಮಾನರಿಗೆ ಸಂಯುಕ್ತಸರ್ಕಾರವು ದ್ರವ್ಯವನ್ನು ಕೊಡಬೇಕೆಂಬುದೂ, ಅವನ ಅಪೇಕ್ಷೆಯಾಗಿದ್ದಿತು. ದಿಲಾವೇರ್ ಸಂಸ್ಥಾನವು ಈ ರೀತಿಯಾಗಿ ಮೇಲಸಂಕ್ತಿಯನ್ನು ಹಾಕಿದರೆ ಮೇರಿಲೆಂಡು ಅದನ್ನು ಅನುಸರಿಸುವುದಲ್ಲದೆ ಮುಂದೆ ಆ ಚಿತ್ತವೃತ್ತಿಯು ಇನ್ನೂ ದೂರದೂರಕ್ಕೆ ಹರಡುವುದೆಂದು ಅವನು ನಿರೀಕ್ಷಿಸಿದನು. ಅಲ್ಲಿನ ಪ್ರತಿನಿಧಿಗಳ ಸಭೆಯು ಅನುಕೂಲವಾಗಿದ್ದರೂ ಸಂಸ್ಥಾನದ ಸೆನೇಟ್ ಸಭೆಯು ಮಸೂದೆಯನ್ನು ತಿರಸ್ಕರಿಸಿತು. ಲಿಂಕನ್ನನು ಪ್ರಜೆಗಳೆಲ್ಲರನ್ನೂ ಪ್ರಾರ್ಥಿಸಲೆಳಸಿ, ಕಾಂಗ್ರೆಸ್ ಸಭೆಗೆ ಒಂದು ಸಂದೇಶವನ್ನು ಕಳುಹಿಸಿ, ಗುಲಾಮರನ್ನು ಬಿಡುಗಡೆಮಾಡಲು ಪ್ರಯತ್ನಿಸುವ ಸಂಸ್ಥಾನಗಳಿಗೆ ದ್ರವ್ಯಸಹಾಯಮಾಡಬೇಕೆಂದು ಸಭೆಯ ಅನುಮೋದನವನ್ನು ಅಪೇಕ್ಷಿಸಿದನು.

ಉತ್ತರಭಾಗದಲ್ಲಿದ್ದ ದಾಸ್ಯದ ರಾಷ್ಟ್ರಗಳು ಆ ಪ್ರಯತ್ನವನ್ನು ಮಾಡಿದಕೆ ಅದು ದಕ್ಷಿಣದ ದಾಸ್ಯದ ಮೇಲೆ ಕೈಮಾಡುವುದಕ್ಕೆ ಪೀಠಿಕೆಯಾಗುತ್ತಿದ್ದಿತು. ಗಡಿಯ ಸಂಸ್ಥಾನಗಳಲ್ಲಿ ದಾಸ್ಯವನ್ನು ತಪ್ಪಿಸಿದರೆ, ಅವು ತನ್ನ ಕಡೆಗೆ ಸೇರುವುದೆಂದು ದಕ್ಷಿಣಕ್ಕಿದ್ದ ನಿರೀಕ್ಷಣೆಯು ವ್ಯರ್ಥವಾಗಿ ಅದರ ಬಲವು ಕಡಿಮೆಯಾಗುವುದೆಂಬ ಅಂಶವನ್ನು ಲಿಂಕನ್ನನು ಮುಖ್ಯವಾಗಿ ವಿವರಿಸಿದ್ದನು. ಪತ್ರಿಕೆಯೊಂದರ ಸಂಪಾದಕನಿಗೆ ಬರೆದ ಸ್ವಂತಪತ್ರವೊಂದರಲ್ಲಿ, ಯುದ್ಧವು ಬೇಗ ಮುಗಿಯುವುದರಿಂದ ಎಷ್ಟು ದ್ರವ್ಯವು ಉಳಿದು ಲಾಭವಾಗುವುದೋ ಅದಕ್ಕಿಂತ ಈ ಪರಿಹಾರದ್ರವ್ಯವು ಎಷ್ಟೋ ಕಡಿಮೆಯೆಂಬುದನ್ನು ಲೆಕ್ಕಹಾಕಿ ತೋರಿಸಿದ್ದನು. ತನ್ನ ಮಸೂದೆಯ ವಿಷಯವಾಗಿ ಸಭೆಯಲ್ಲಿ ಚರ್ಚೆನಡೆಯುತ್ತಿದ್ದಾಗಲೂ ನಡೆದಮೇಲೂ ಅವನು ಗಡಿಯ ರಾಜ್ಯಗಳ ಸಭಿಕರನ್ನೂ ಸೆನೇಟರುಗಳನ್ನೂ ಬರಮಾಡಿಕೊಂಡು, ಈರ್ಷ್ಯಾಸೂಯೆಗಳನ್ನು ಬಿಟ್ಟು ವಿಮರ್ಶೆಯಿಂದಲೂ ಉದಾರಬುದ್ಧಿಯಿಂದಲೂ ಆ ಅಂಶವನ್ನು ಆಲೋಚಿಸಬೇಕೆಂದು ಪ್ರಾರ್ಥಿಸಿದನು ; ಲೋಕಕ್ಕೆ ಉಪಕಾರಮಾಡಲು ಇದು ಒಳ್ಳೆಯ ಸಮಯವೆಂಬುದನ್ನೂ ತೋರಿಸಿದನು. ಈ ಸಂಸ್ಥಾನಗಳು ಸಹಾಯವನ್ನೊದಗಿಸುವುವೆಂದು ದಕ್ಷಿಣವು ಭರವಸೆಹೊಂದಿರುವುದು. ಆ ಭರವಸೆಯಿಂದಲೇ ಅದು ಯುದ್ಧವನ್ನು ನಡೆಯಿಸುತ್ತಲಿರುವುದು. ದಕ್ಷಿಣವು ಗಡಿಯ ಸಂಸ್ಥಾನಗಳಲ್ಲಿ ಕೆಂಟಕಿಗೂ ಮೇರಿಲೆಂಡಿಗೂ ತನ್ನ ದಂಡನ್ನು ಕಳುಹಿಸಿ ಜನಗಳನ್ನೆಲ್ಲಾ ದಂಗೆಯೆಬ್ಬಿಸಲು ಪ್ರಯತ್ನವನ್ನೂ ಮಾಡಿತು. ಈ ಸಂಸ್ಥಾನಗಳಲ್ಲಿ ತನ್ನ ಕಾರ್ಯಕ್ಕಾಗಿ ಅದು ಗುಲಾಮರ ಯಜಮಾನರನ್ನು ಸಾಧನವನ್ನಾಗಿ ಉಪಯೋಗಿಸಲು ಯೋಚಿಸಿತು. '' ಆ ಸಾಧನವನ್ನು ಅವರ ಕಣ್ಣೆದುರಿಗೇ ಮುರಿದು ಹಾಕಿ '' ಎಂದು ಲಿಂಕನ್ನನು ಗಡಿಯ ಸೀಮೆಗಳ ಸಭಿಕರನ್ನು ಪ್ರಾರ್ಥಿಸಿದನು. ಆದರೆ ಅವರಿಗೆ ನೂರಾರು ಕುಂದಕಗಳು ಕಂಡುಬಂದವು. ಕಾರ್ಯವು ಸುಲಭವೆಂಬಂತೆ ಕಾಣಲಿಲ್ಲ. ಕಾಂಗ್ರೆಸ್ ಸಭೆಯು ಪ್ರೆಸಿಡೆಂಟನ ಸಲಹೆಯನ್ನು ಅನುಮೋದಿಸಿ ಕಾನೂನನ್ನು ರಚಿಸಿತು. ಅಷ್ಟೇ ಅಲ್ಲ. ಹದಿನಾಲ್ಕುವರ್ಷಗಳ ಹಿಂದೆ ಲಿಂಕನ್ನನು ಸೂಚಿಸಿದ್ದಂತೆ, ಕೊಲಂಬಿಯ ಡಿಸ್ಟ್ರಿಕ್ಟಿನಲ್ಲಿ ದಾಸ್ಯವನ್ನು ತಪ್ಪಿಸಬೇಕೆಂದು ಕಟ್ಟಳೆಯಾಯಿತು. ಯಜಮಾನರಿಗೆ ನಷ್ಟಕ್ಕಾಗಿ ಹಣವು ಕೊಡಲ್ಪಟ್ಟಿತು. ಇಷ್ಟಪಟ್ಟು ಹೋಗುವಂತಹ ಗುಲಾಮರನ್ನು ಲೈಬೀರಿಯಕ್ಕೆ ಕರೆದುಕೊಂಡುಹೋಗಿ ನಾಸಕ್ಕೇರ್ಪಾಡು ಮಾಡಲು ಸ್ವಲ್ಪ ದ್ರವ್ಯವು ಪ್ರತ್ಯೇಕವಾಗಿ ಇಡಲ್ಪಟ್ಟಿತು. ನೀಗ್ರೋಗಳ ಹುಡುಗರಿಗೆ ವಿದ್ಯೆಯನ್ನು ಕಲಿಸಬೇಕೆಂದು ಲಿಂಕನ್ನನು ಸೂಚಿಸಿದನು. ಆ ವರ್ಷ ಇಷ್ಟು ಮಾತ್ರ ನಡೆಯಿತು.

ಈ ವಿಚಾರದಲ್ಲಿ ಲಿಂಕನ್ನನು ಇತರರ ಆಲೋಚನೆಗಳನ್ನು ಮನಸ್ಸಿಗೆ ತಂದುಕೊಳ್ಳಲಿಲ್ಲ. ಅವನಿಗೆ ತನ್ನಮನಸ್ಸಿನಲ್ಲಿದ್ದುದೆಲ್ಲವನ್ನೂ ಪ್ರಜೆಗಳಿಗೆ ತಿಳಿಸಲಾಗುತ್ತಿರಲಿಲ್ಲ. ಮಂತ್ರಿಸಭೆಯಲ್ಲಿ ಕೂಡ ಆ ವಿಚಾರವನ್ನೆತ್ತಲಿಲ್ಲ. ಅವನ ಕೋರಿಕೆಗೆ ಗಡಿಯ ಸೀಮೆಗಳು ಒಪ್ಪಿದ್ದರೆ ದಕ್ಷಿಣದ ಉದ್ದೇಶಕ್ಕೆ ಭಂಗಬರುತ್ತಿದ್ದಿತೋ ಇಲ್ಲವೋ ತಿಳಿಯದು. ಆ ಸಮಯದಲ್ಲಿ ಮೆಕ್‌ಕ್ಲೆಲ್ಲನ್ನನು ವರ್ಜೀನಿಯವನ್ನು

ಸ್ವಾಧೀನಪಡಿಸಿಕೊಳ್ಳುವನೆಂತಲೇ ಎಲ್ಲರೂ ನಿರೀಕ್ಷಿಸಿದ್ದರು. ಕಾಲವು ಕಳೆದರೂ ಅವನ ಸೈನ್ಯವನ್ನು ಸರ್ಕಾರವು ಹಿಂದಕ್ಕೆ ಕರೆದಿರಲಿಲ್ಲ. ವರ್ಜೀನಿಯದಲ್ಲಿ ದಕ್ಷಿಣ ಭಾಗದ ಸೈನ್ಯಕ್ಕೇನಾದರೂ ಸೋಲು ಸಂಭವಿಸಿ ಆ ರಾಜ್ಯವು ಕೈಬಿಟ್ಟು ಹೋಗಿದ್ದರೆ ದಕ್ಷಿಣವು ಕೆಂಟಕಿಯ ಮೇಲೆ ದಂಡೆತ್ತಿಹೋಗಿ ತನ್ನ ನಷ್ಟವನ್ನು ಸರಿಪಡಿಸಿಕೊಳ್ಳುತ್ತಿದ್ದಿತು. ಆದರೆ ವರ್ಜೀನಿಯವು ಕೈಬಿಟ್ಟು ಹೋಗಲಿಲ್ಲ. ಆದರೂ ಸೈನ್ಯವು ಕೆಂಟಕಿಯೊಳಕ್ಕೆ ನುಗ್ಗಿತು. ಅಲ್ಲಿನ ಜನರು ದಕ್ಷಿಣದ ಪರನಾಗಿ ದಂಗೆಯೆದ್ದಿದ್ದರು. ಆದಕಾರಣ ಲಿಂಕನ್ನನ ಆಲೋಚನೆಯು ಯುಕ್ತವಾಗಿದ್ದಿತು. ಅದರಂತಯೇ, ದಕ್ಷಿಣವು ವರ್ಜೀನಿಯದಲ್ಲಿ ಸೋತು, ಉತ್ತರದ ಸರ್ಕಾರವು ತನ್ನ ನಿಶ್ಚಯದ ಪ್ರಕಾರ ನಡೆದಿದ್ದರೆ, ಗುಲಾಮರ ಬಿಡುಗಡೆಯು ಗಡಿಯ ಸೀಮೆಗಳಲ್ಲಿ ಮೊದಲಾಗಿ ಇತರ ಪ್ರದೇಶಗಳಿಗೂ ಹಬ್ಬುವುದೆಂದಿದ್ದ ಆಲೋಚನೆಯೂ ಯುಕ್ತವಾಗಿದ್ದಿತು. ಆದರೆ ಪರಿಹಾರದ್ರವ್ಯದ ವಿಷಯದಲ್ಲಿ ತೊಂದರೆಯು ಬರುತ್ತಿದ್ದಿತು. ಮೇಲು ಪಂಕ್ತಿಯನ್ನನುಸರಿಸಬೇಕೆಂಬ ನಿಶ್ಚಯವು ಬಹುಕಾಲದವರೆಗೆ ನಿಲ್ಲುತ್ತಿರಲಿಲ್ಲ. ಅಬ್ರಹಾಮ್ ಲಿಂಕನ್ನನು ಈ ವಿಚಾರವನ್ನು ಪರ್ಯಾಲೋಚಿಸಿದ್ದನು. ಆದರೂ ಅವನಲ್ಲಿ ಭರವಸೆಯು ಕಡಮೆಯಾಗಿರಲಿಲ್ಲ.

ಈ ಸಾಹಸವು ಒಂದು ವೇಳೆ ವಿಫಲವಾದ ಪಕ್ಷದಲ್ಲಿ ಮುಂದಿನ ದಾರಿಯೇನೆಂಬುದನ್ನು ಅವನು ಯೋಚಿಸುತ್ತಿದ್ದನು. 1862ನೆಯ ಜುಲೈನಲ್ಲಿ ಕೊನೆಯ ಸಾರಿ ಗಡಿಯ ಸೀಮೆಗಳನ್ನು ಪ್ರಾರ್ಥಿಸಿ ನೋಡಿದನು. ಆಗ ಮೆಕ್‌ಕ್ಲೆಲ್ಲನ್ನನು ಇನ್ನೂ ಚೆಸಾಪೀಕ್ ಕೊಲ್ಲಿಯಿಂದ ಹಿಂದಿರುಗಿ ಬಂದಿರಲಿಲ್ಲ. ಆ ಮಾರನೆಯ ದಿವಸ ಪ್ರೆಸಿಡೆಂಟನು ಸಿವರ್ಡ್ ಮತ್ತು ಬೇಟ್ಸ್‌ರೊಡನೆ '' ಇನ್ನು ಈ ಕೆಲಸವನ್ನು ಮಾಡುವುದು ಅವಶ್ಯಕವಾಯಿತು. ಜನಗಳ ಉದ್ಧಾರವು ನಡೆದೇ ತೀರಬೇಕು. ಗುಲಾಮರೆಲ್ಲರನ್ನೂ ಬಿಡುಗಡೆ ಮಾಡಬೇಕು. ಅಥವಾ ನಾವು ಸೋತು ಶರಣಾಗತರಾಗಬೇಕು—ಇಷ್ಟು ನಿಶ್ಚಯಕ್ಕೆ ಬಂದಿದ್ದೇನೆ '' ಎಂದು ಗುಟ್ಟಾಗಿ ಹೇಳಿದನು. ಜುಲೈ 22ನೆಯ ತಾರೀಖಿನ ದಿನ ಸೆನೇಟ್ ಸಭೆಯಲ್ಲಿ ಅವನು ತನ್ನ ಪ್ರಕಟನೆಯ ಮುಸೂದೆಯನ್ನು ಓದಿದನು. ಆ ವೇಳೆಗೆ ಅವನ ಮನಸ್ಸು ನಿಶ್ಚಿತವಾಗಿದ್ದಿತು. ಮಂತ್ರಿಗಳ ಸಲಹೆಯಾವುದನ್ನೂ ಕಾಯುತ್ತ ನಿಲ್ಲಲಾಗುತ್ತಿರಲಿಲ್ಲ. ಮಂತ್ರಿಗಳು ಒಬ್ಬೊಬ್ಬರು ಒಂದೊಂದು ಆಕ್ಷೇಪಣೆಯನ್ನು ತೆಗೆದರು. ಅವುಗಳನ್ನೆಲ್ಲಾ ಮೊದಲೇ ಆಲೋಚಿಸಿ ಲಿಂಕನ್ನನು ಉತ್ತರವನ್ನು ಹೊಂದಿಸಿಕೊಂಡಿದ್ದನು. ಆದರೆ ಸಿವರ್ಡನ ಆಕ್ಷೇಪಣೆಯು ಅವನಿಗೆ ಆಶ್ಚರ್ಯವನ್ನುಂಟುಮಾಡಿತು. ತನಗೆ ಅದು ತೋರಲೇ ಇಲ್ಲವೆಂದು ಲಿಂಕನ್ನನು ಸ್ನೇಹಿತನೊಬ್ಬನೊಡನೆ ಹೇಳಿದನು. ಯುದ್ಧದಲ್ಲಿ ಸೋಲುಗಳುಂಟಾಗಿ ಜನರ ಮನಸ್ಸು ಇಳಿದುಹೋಗಿದ್ದಾಗ ಈ ಪ್ರಕಟನೆಯನ್ನು ಹೊರಡಿಸಿದರೆ '' ಆರ್ತಸ್ವರ '' ವಾಗುವುದೇ ವಿನಾ ಬೇರೊಂದಾಗುವುದಿಲ್ಲ ; ಜಯವಾದ ಸಮಯದಲ್ಲಿ ಹೊರಡಿಸಿದರೆ ಪ್ರಯೋಜನವು ಬಹಳವಿರುವುದು—ಎಂದು ಸಿವರ್ಡನು ಸೂಚಿದನು.

ಸಿವರ್ಡನ ಮಾತು ಯುಕ್ತವಾಗಿದ್ದಿತು. ನಷ್ಟದ ಸಮಯದಲ್ಲಿ ಪ್ರಕಟನೆಯು

ಪ್ರಚಾರಕ್ಕೆ ಬಂದಿದ್ದರೆ ಜನಗಳ ಮನಸ್ಸು ಕೆಟ್ಟುಹೋಗಿ ಉತ್ತರವು ಪ್ರಾಯಶಃ ಖಂಡಿಸಿ ಹೋಗುತ್ತಿದ್ದಿತು. ಪ್ರಚಾರಮಾಡಿದ ಉದ್ದೇಶವೂ ಭಗ್ನವಾಗುತ್ತಿದ್ದಿತು ಲಿಂಕನ್ನನಿಗೆ ಅಪೇಕ್ಷೆಯೂ ಆತುರವೂ ಬಹಳವಾಗಿದ್ದಿತು. ಆದರೂ ಸಿವರ್ಡನ ಅಭಿಪ್ರಾಯವನ್ನು ಕೇಳಿ ತಡೆದನು. ಮಸೂದೆಯನ್ನು ಒಂದು ಕಡೆಗೆ ಒತ್ತರಿಸಿ, ಸರಿಯಾದ ಕಾಲವು ಬರುವವರೆಗೂ ಅದನ್ನು ಬಹಿರಂಗಮಾಡುವುದಿಲ್ಲವೆಂದು ನಿರ್ಧರಿಸಿದನು.

ಮುಂದೆ ಎರಡು ತಿಂಗಳುಗಳು ಕಳೆದುವು. ಪ್ರಜೆಗಳು ಯುದ್ಧದ ಸಂಬಂಧವಾಗಿ ಬಹಳವಾಗಿ ಕಳವಳಹೊಂದಿದ್ದರು. ಲಿಂಕನ್ನನು ಯಾವ ಕದನವು ನಡೆದು ಏನು ಸುದ್ದಿ ಬರುವುದೋ ಎಂದು ಹೆದರುತ್ತಿದ್ದನು. ತನ್ನನ್ನು ಪಂಗಡಗಳೂ ಜನಗಳೂ ದೂರ ದೂರ ಮಾಡುತ್ತಿರುವರೆಂಬುದನ್ನು ಅವನು ಮನಸ್ಸಿಗೆ ಹಾಕಿಕೊಳ್ಳಲಿಲ್ಲ. ಉತ್ತರದ ಡೆಮೊಕ್ರೆಟರು ವಿರೋಧಿಗಳಾಗಿದ್ದರು. ಕಾಂಗ್ರೆಸ್‌ನಲ್ಲಿ ಅವನ ಸಲಹೆಯ ಪ್ರಕಾರ ರಚಿಸಲ್ಪಟ್ಟ ನಿಬಂಧನೆಗಳನ್ನು ಆಚರಣೆಗೆ ತರದಂತೆ ಮಾಡುವುದಾಗಿ ಅವರು ಸಂಕಲ್ಪಮಾಡಿದ್ದರು. ರಿಪಬ್ಲಿಕನರಲ್ಲಿ ಕೂಲಂಕಷರು ಅವನ ಸಲಹೆಗಳನ್ನು ಬಹಳ ತಿರಸ್ಕಾರದಿಂದ ಕಂಡರು. ಮೇ ತಿಂಗಳಲ್ಲಿ ದಾಸ್ಯದ ವಿಚಾರದಲ್ಲಿ ಸ್ವತಂತ್ರವಾಗಿ ಆಚರಿಸಲೆಳಸಿದ ಕೂಲಂಕಷನೊಬ್ಬನ ಕೆಲಸವನ್ನು ತಡೆದು ತಪ್ಪಿಸಲಾಗಿ ಅವರಿಗೆ ಮತ್ತಷ್ಟು ರೇಗಿತು. ಜನರಲ್ ಹಂಟರ್ ಎಂಬ ಸೈನ್ಯಾಧಿಪತಿಯು ಸರ್ಕಾರದ ಅಪ್ಪಣೆಯ ಪ್ರಕಾರ ದಕ್ಷಿಣಕೆರೊಲಿನಕ್ಕೆ ಹೋಗಿ ಅಲ್ಲಿನ ಪೋರ್ಟ್ ರಾಯಲ್ ಎಂಬ ದುರ್ಗವನ್ನು ಹಿಡಿದಿದ್ದನು. ಸುತ್ತಲಲ್ಲಿದ್ದು ಹತ್ತಿಯ ಬೆಳೆಗೆ ಪ್ರಸಿದ್ಧಿ ಹೊಂದಿದ್ದ ಕೆಲವು ದ್ವೀಪಗಳೂ ಕೂಡ ವಶವಾಗಿದ್ದುವು. ಅಷ್ಟೊಂದು ಜಯಗಳಾದ ಕೂಡಲೇ ಆತನ ಅಹಂಕಾರವು ನೆತ್ತಿಗೇರಿತು. ದಕ್ಷಿಣಕೆರೊಲಿನ, ಜಾರ್ಜಿಯ ಮತ್ತು ಫ್ಲಾರಿಡ ಸಂಸ್ಥಾನಗಳಲ್ಲಿದ್ದ ಗುಲಾಮರೆಲ್ಲರೂ ನಿರ್ಬಂಧದಿಂದ ವಿಮುಕ್ತರಾದರೆಂದು ಪ್ರಕಟಪಡಿಸಿದನು. ಲಿಂಕನ್ನನು ಇದನ್ನು ಖಂಡಿತ ನಡೆಯಗೊಡಲಿಲ್ಲ. ಕಾಂಗ್ರೆಸ್ ಸಭೆಯು ಆ ವರುಷದ ಬೇಸಿಗೆಯಲ್ಲಿ ದಂಗೆಕೋರರ ಸೊತ್ತನ್ನು ಆಕ್ರಮಿಸುವ ವಿಚಾರದಲ್ಲಿ ಕೆಲವು ಕಾನೂನುಗಳನ್ನು ಮಾಡುತ್ತಲಿದ್ದಿತು. ಅವುಗಳ ದೆಸೆಯಿಂದ ಗುಲಾಮರಲ್ಲಿ ಬಹಳ ಮಂದಿಗೆ ಬಿಡುಗಡೆಯಾಗುವುದೆಂದು ಎಲ್ಲರೂ ಭಾವಿಸಿದರು. ಲಿಂಕನ್ನನು ಅದನ್ನು ಒಪ್ಪಲಿಲ್ಲ. ಶಾಸನಕ್ರಮದಲ್ಲಿರುವ ನಿಯಮಗಳಿಗೆ ಅದು ವಿರುದ್ಧವಾದುದು. ದಂಗೆಕೋರನೊಬ್ಬನು ಸತ್ತರೆ, ಅವನ ಆಸ್ತಿಯನ್ನೆಲ್ಲಾ ಸರ್ಕಾರವು ವಶಪಡಿಸಿಕೊಂಡು ಪ್ರತೀಕಾರವನ್ನೂ ಕ್ರೌರ್ಯವನ್ನೂ ತೋರಿಸಲೆಳಸುವುದು ತೀರ ಅಲ್ಪವಾದ ಗುಣವೆಂದು ಖಂಡಿಸಿದನು. ಮಸೂದೆಯಲ್ಲಿ ತಿದ್ದುಪಾಟುಗಳಾದುವು. ಅವನು ಅನುಮೋದಿಸಿದನು. ಅನೇಕರಿಗೆ ಅನುಮಾನಬಂದಿತು. ರಿಪಬ್ಲಿಕನರಿಗೆ ಪ್ರೆಸಿಡೆಂಟನು ತಮ್ಮ ಪಕ್ಷವನ್ನೇನಾದರೂ ತ್ಯಜಿಸುತ್ತಿರುವನೆ ಎಂದು ಸಂಶಯವು ಹುಟ್ಟಿತು. ಕಾಂಗ್ರೆಸ್‌ನಲ್ಲಿ ಸಭಿಕರೂ ಕೂಡ ಆತನಲ್ಲಿ ಅಸೂಯೆಯನ್ನು ಹೊಂದಿದರು. "ದೊರೆಗಳ ಇಷ್ಟ" ವೆಂದು ಅವರು ಗೊಣಗುತ್ತ ಹಾಸ್ಯಮಾಡತೊಡಗಿದರು. ಯಾವ ಕಾನೂನನ್ನು ರಚಿಸಬೇಕಾದರೂ

ಮೊದಲು "ದೊರೆಗಳ ಇಷ್ಟ" ವನ್ನು ತಿಳಿದುಕೊಳ್ಳಬೇಕಾಗಿದ್ದಿತು. ಸಭೆಯ ಜನರು ಶಕ್ತರು; ಶ್ರಮಪಟ್ಟು ಕೆಲಸಮಾಡುವವರು. ಆದರೆ ಪ್ರೆಸಿಡೆಂಟನ ಮಾರ್ಗವನ್ನು ಎಲ್ಲಾ ವಿಷಯದಲ್ಲಿಯೂ ಅನುಸರಿಸುತ್ತಿರಲು ಮಾತ್ರ ಅವರಿಗೆ ಇಷ್ಟವಿರಲಿಲ್ಲ.

ಆಗಸ್ಟ್ ಮತ್ತು ಸೆಪ್ಟೆಂಬರ್ ತಿಂಗಳುಗಳಲ್ಲಿ ಆತನ ಹೆದರಿಕೆಯು ತೀರ ಹೆಚ್ಚಿತು. ಯಾರು ಏನು ಅತ್ಯಾಚಾರಮಾಡಿ ಇಷ್ಟು ದಿನಗಳ ಪ್ರಯತ್ನವನ್ನೂ ಹಾಳುಮಾಡಿಬಿಡುವರೋ ಎಂಬುದೂ, ಅವನು ಧೈರ್ಯವಿಲ್ಲದವನೂ ಅರ್ಧ ಮನಸ್ಸಿನವನೂ ಆದವನೆಂದು ಜನಗಳು ಆಡಿಕೊಳ್ಳುತ್ತಿದ್ದ ಮಾತೂ ಸೇರಿ ಅವನಿಗೆ ಬಹಳ ಚಿಂತೆಯನ್ನು ಉಂಟುಮಾಡಿದುವು. ಆದರೆ ತನ್ನ ಮನೋಗತಗಳು ಇಂಥ ವೆಂಬುದನ್ನು ಜನಗಳಿಗೆ ತಿಳಿಯಹೇಳಲಾಗದಿದ್ದುದರಿಂದ ಅರ್ಧ ಅಪವಾದಗಳು ಬರುತ್ತಿದ್ದುವು. ದಾಸ್ಯವನ್ನು ಉದ್ಧರಿಸಲು ಅಪೇಕ್ಷೆಯುಳ್ಳವರಿಗೆ ಹೀಗೆ ಬರೆದನು: "It may as well be understood once for all that I shall not surrender this game leaving any available card unplayed." ದಾಸ್ಯವನ್ನು ದ್ವೇಷಿಸುವವರಿಗೆ ಬೇರೊಂದು ವಿಧವಾದ ಬರೆವಣಿಗೆಯಿದ್ದಿತು. ಎರಡನೆಯ ಬುಲ್‌ರನ್‌ಯುದ್ಧವು ನಡೆಯುವುದೆನ್ನುವಷ್ಟರಲ್ಲಿ ಹೊರೇಸ್ ಗ್ರೀಲಿ ಎಂಬಾತನು ಪ್ರೆಸಿಡೆಂಟನು ತನಗೆ ಬರೆದ ಕಾಗದವೊಂದನ್ನು ಪತ್ರಿಕೆಯಲ್ಲಿ ಪ್ರಕಟಪಡಿಸಿ ಆತನಿಗೆ ದಾಸ್ಯದಲ್ಲಿಯೇ ಅಭಿಮಾನವಿರುವುದೆಂದು ದೂರಿದನು. ಲಿಂಕನ್ನನು ಅದಕ್ಕೆ ಕೂಡಲೇ ಉತ್ತರವನ್ನು ಬರೆದನು. ಬರೆದು, ಸಂಯೋಗದ ರಕ್ಷಣೆಯೇ ತನ್ನ ಚರಮೋದ್ದೇಶವೆಂಬುದನ್ನೂ ಆ ಕೆಲಸಕಾಗಿ ಸರ್ವಪ್ರಯತ್ನವನ್ನೂ ಮಾಡುವೆನೆಂಬುದನ್ನೂ ತಿಳಿಸಿದನು.

ಜನಗಳೊಡನೆ ವಾದಮಾಡುವುದಕ್ಕೆ ಇಷ್ಟವಿಲ್ಲದಿದ್ದರೂ ಅವನು ಜನರಲ್ ಪೋಪನಿಗೆ ಸೋಲಾದ ಒಂದೆರಡು ವಾರಗಳ ತರುವಾಯ ಅದರಲ್ಲಿ ಕೈಯಿಡಬೇಕಾಯಿತು. ಅದರ ದೆಸೆಯಿಂದ ಮನಸ್ಸಿನ ಸ್ವಸ್ಥತೆಗೆ ಬಲುಮಟ್ಟಿಗೆ ಕುಂದಕವುಂಟಾಯಿತು. ಅವನು ದಾಸ್ಯದ ಪ್ರಚಾರಕ್ಕೆ ವಿರುದ್ಧವಾಗಿ ಹೊಡೆದಾಡುತ್ತಿದ್ದುದನ್ನು ನೋಡಿ ಇಲ್ಲಿನ್ವಾದ ಕ್ಲೆರ್ಜಿಗಳು ಕೆಲವರು ಪ್ರೆಸಿಡೆಂಟನಲ್ಲಿ ಆಚಾರನಿಷ್ಠೆಯು ಸಾಲದೆಂದು ದೂಷಿಸಿದರು. ಆಬಳಿಕ ಚಿಕಾಗೋವಿನ ಚರ್ಚಿನಿಂದ ನಿಯೋಗಿಗಳ ಪಡೆಯೊಂದು ಅವನ ಬಳಿಗೆ ಬಂದು, ಗುಲಾಮರಿಗೆಲ್ಲಾ ಬಿಡುಗಡೆಯಾಗಬೇಕೆಂದು ಭಗವಂತನಿಂದ ಸಂದೇಶ ಬಂದಿದೆ; ಆದ್ದರಿಂದ ಆ ಕೆಲಸವನ್ನು ಮೊದಲು ಮಾಡಬೇಕು ಎಂದು ಬಹಳ ಗರ್ವದ ಮಾತುಗಳನ್ನಾಡಿತು. ಲಿಂಕನ್ನನು, "ಪರಸ್ಪರ ವಿರುದ್ಧವಾದ ಅಭಿಪ್ರಾಯಗಳೂ ಬುದ್ಧಿವಾದಗಳೂ ನನ್ನ ಕಿವಿಗೆ ಬೀಳುತ್ತಿರುವುವು. ನೀವು ಭಗವಂತನ ಇಷ್ಟವನ್ನು ನಡೆಯಿಸುತ್ತಿರುವುದಾಗಿ ತಿಳಿದಿರುವಿರಿ. ಆದರೆ ಎರಡರಲ್ಲೊಂದು ಪಕ್ಷವು ತಪ್ಪಾಗಿ ಭಾವಿಸುತ್ತಿದೆಯೆಂದು ನನಗೆ ದೃಢವಾಗಿ ತೋರುತ್ತದೆ. ನೀವೂ ಕೂಡ ನಿಮ್ಮ ದಾರಿಯು ಸರಿ, ಇತರರದು ಶುದ್ಧಾಂಗವಾಗಿ ತಪ್ಪು ಎಂದು ಭಾವಿಸುತ್ತೀರಿ. ಆ ಮತ್ತೊಂದು ಪಕ್ಷದವರಿಗೂ ಇದೇ ಭಾವನೆ

ಯಿರಬಹುದು. ಆದರೆ, ನೀವು ಹೇಳುವಹಾಗೆ ಪರಮಾತ್ಮನು ನನ್ನ ಕರ್ತವ್ಯಕ್ಕೆ ಸಂಬಂಧಪಟ್ಟ ಈ ಅಂಶದಲ್ಲಿ ತನ್ನ ಮನೋಗತವನ್ನು ಯಾರಿಗಾದರೂ ತಿಳಿಸುವು ದಾದಪಕ್ಷದಲ್ಲಿ ಮುಖ್ಯವಾಗಿ ನನಗೆ ಮೊದಲು ತಿಳಿಸದಿರಲಾರನು. ನಮ್ಮ ಈ ಸ್ಥಿತಿ ಯಲ್ಲಿ ಗುಲಾಮರೆಲ್ಲರೂ ಸ್ವತಂತ್ರರೆಂದು ಪ್ರಕಟಿಸುವುದರಿಂದ ಏನು ಪ್ರಯೋಜನ ವುಂಟಾದೀತು ? ಪ್ರಕಟನೆಯು ಉಪಯೋಗಕ್ಕೆ ಬಾರದಿದ್ದಮೇಲೆ ಅದಕ್ಕೂ, ಹಿಂದೆ ರೋಮಿನ ಪೋಪನು ಧೂಮಕೇತುವಿನ ವಿಷಯದಲ್ಲಿ ಮಾಡಿದ ಆಜ್ಞೆಗೂ ವ್ಯತ್ಯಾಸ ವೇನಿದ್ದೀತು ? ಈ ಕುಂದಕಗಳನ್ನೆಲ್ಲಾ ತೋರಿಸುತ್ತಿರುವೆನೆಂದು ನೀವು ನನ್ನ ಮೇಲೆ ಕೋಪಮಾಡಕೂಡದು. ಅಂಥವುಗಳಿರುವುದರಿಂದಲೇ ನೀವು ಹೇಳುವಂತಹ ಯಾವುದಾದರೊಂದು ಪ್ರಯತ್ನವನ್ನು ಮಾಡಲು ಸಾಧ್ಯವಾಗಿಲ್ಲ. ಗುಲಾಮರಿಗೆಲ್ಲಾ ಸ್ವಾತಂತ್ರ್ಯವನ್ನು ಕೊಟ್ಟಿರುವುದಾಗಿ ಪ್ರಕಟಮಾಡುವುದನ್ನು ಇನ್ನೂ ನಿಶ್ಚಯ ಮಾಡಿಲ್ಲ. ಆ ವಿಚಾರದಲ್ಲಿ ಇತರರ ಆಲೋಚನೆಯನ್ನೂ ಕೇಳಬೇಕಾಗಿದೆ. ಆದರೆ ಇಷ್ಟನ್ನು ಮಾತ್ರ ನಿಮಗೆ ಧೈರ್ಯ ಹೇಳಬಲ್ಲೆನು : ಈ ವಿಚಾರವು ನನ್ನ ಮನಸ್ಸಿ ನಲ್ಲಿದೆ ; ಇತರರಿಗಿಂತ ಹೆಚ್ಚಾಗಿ ಹಗಲೂ ರಾತ್ರಿಯೂ ಚಿಂತೆಮಾಡುತ್ತಿದ್ದೇನೆ. ಪರಮಾತ್ಮನ ಇಚ್ಛೆಯು ಹೇಗಿರುವುದೋ ಆರೀತಿಯಾಗಿ ಕೆಲಸವು ಸಾಗುವುದು'' ಎಂದನು. ಈ ಉತ್ತರದಲ್ಲಿ ಸ್ವಲ್ಪ ಅಶಾಂತತೆಯು ತೋರಿ ಬಂದರೂ ಕೂಡ ಅವನ ಮನಸ್ಸಿನ ನಿಜವಾದ ಭಾವನೆಯೆಂತಹದೆಂಬುದು ತಿಳಿಯುತ್ತಿದ್ದಿತು.

ಅದೇ ತಿಂಗಳಲ್ಲಿ ಲಿಂಕನ್ನನು ಒಂದು ಪ್ರಬಂಧವನ್ನು ಬರೆದನು. ಬರೆದು ಸ್ವಂತವಾಗಿ ಓದಲು ಇಟ್ಟುಕೊಂಡನು. ಆಗ ಅವನ ಮನಸ್ಸು ವ್ಯಾಕುಲ ಹೊಂದಿದ್ದಿತು. '' ಎಲ್ಲಿ ಹೋದರೂ ಭಗವಂತನ ಇಷ್ಟವೇ ನಡೆಯುವುದು. ದೊಡ್ಡ ದೊಡ್ಡ ವಿವಾದಗಳಲ್ಲಿ ಎರಡು ಪಂಗಡಗಳೂ ಕೂಡ ಭಗವಂತನ ಇಷ್ಟವನ್ನು ಅನು ಸರಿಸಿ ನಡೆಯುವುದಾಗಿ ಉದ್ಘೋಷಿಸುವುವು. ಹೀಗೆ ಭಾವಿಸುವುದರಲ್ಲಿ ಎರಡು ಪಂಗಡಗಳೂ ತಪ್ಪುಮಾಡುತ್ತಿರಬಹುದು. ಆದರೆ ಒಂದಂತೂ ಖಂಡಿತವಾಗಿ ಮಾಡುತ್ತಿರುವುದು. ಭಗವಂತನು ಒಂದು ವಿವಾದದಲ್ಲಿ ಎರಡು ಕಡೆಯೂ ಇರುತ್ತ ಏಕಕಾಲದಲ್ಲಿ ಅನುಕೂಲನಾಗಿಯೂ ಪ್ರತಿಕೂಲನಾಗಿಯೂ ಇರಲಾರನು. ಪ್ರಕೃತದ ಅಂತಃಕಲಹದಲ್ಲಿ ಆತನ ಉದ್ದೇಶವು ನಮ್ಮೆರಡು ಕಡೆಯ ಉದ್ದೇಶಗಳಿಗಿಂತಲೂ ಬೇರೆಯಾದುದಿರಬಹುದು. ಆದರೂ ಆತನ ಉದ್ದೇಶವು ನೆರವೇರಲು ಮನುಷ್ಯನೇ ತಕ್ಕ ಸಾಧನವಾಗಿರುವನು. ಮನುಷ್ಯನು ಒಂದು ಉದ್ದೇಶದಿಂದ ಕೆಲಸವನ್ನು ಮಾಡು ತ್ತಿರಬಹುದು. ಆದರೆ ಆ ಕೆಲಸದ ಮೂಲಕವೇ ಭಗವಂತನು ತನ್ನ ಉದ್ದೇಶವನ್ನು ಸಾಧಿಸುವನು. ಈಯುದ್ಧವು ನಡೆಯಬೇಕೆಂದು ಭಗವಂತನ ಸಂಕಲ್ಪವಿರುವುದೆಂಬ ಮಾತನ್ನು ನಾನು ಪ್ರಾಯಶಃ ಒಪ್ಪಿಕೊಳ್ಳುವೆನು ; ಅದು ಈಗಲೇ ಮುಗಿಯ ಕೂಡದೆಂಬುದು ಆತನ ಇಷ್ಟವಿರಬಹುದು. ಆತನ ಶಕ್ತಿಯು ಅಸಾಧಾರಣವಾದುದು. ನಾವು ಒಬ್ಬರಿಗೊಬ್ಬರು ಹೊಡೆದಾಡದೆಯೇ ಸಂಯೋಗವನ್ನು ಉಳಿಸುವುದೂ ನಾಶಮಾಡುವುದೂ ಆತನಿಂದ ಸಾಧ್ಯವಾಗಿದ್ದಿತು. ಆದರೂ ಜಗಳವು ಮೊದಲಾ ಯಿತು. ಮೊದಲಾದಮೇಲೆ ಕ್ಷಣದಲ್ಲಿ ಆತನು ಯಾವುದಾದರೊಂದು ಪಂಗಡಕ್ಕೆ

ಜಯುವನ್ನು ಕೊಡಬಹುದಾಗಿದ್ದಿತು. ಆದರೂ ಯುದ್ಧವು ನಡೆಯುತ್ತಲೇ ಇರುವುದು'' ಸದ್ಯದ ಸ್ಥಿತಿಯಲ್ಲಿ ಸಂಯೋಗದ ರಕ್ಷಣೆಗೆ ಯಾವಯಾವ ಹಂಚಿಕೆಗಳು ಅವಶ್ಯಕವೋ ಅವೆಲ್ಲವೂ ಕರ್ತವ್ಯವೆಂದು ಅವನು ಭಾವಿಸಿದನು. ಆದರೂ, ಬಂಧ ವಿಮೋಚನೆಗೆ ಪ್ರಯತ್ನವನ್ನು ಮಾಡುವುದಾದರೆ ತಾನು ಭಗವಂತನ ಇಷ್ಟವನ್ನೇ ನಡೆಯಿಸುತ್ತಿರುವಂತೆಯೂ ಭಾವನೆಯುಂಟಾಯಿತು. ಸರಿಯಾದ ಕಾಲವು ಬಂದಾಗ ಆಕೆಲಸವನ್ನು ಮಾಡಿಬಿಡಬೇಕೆನ್ನುವುದು ನ್ಯಾಯವೇ ; ಆದರೆ ಸರಿಯಾದ ಕಾಲವಾವುದು ಎಂಬುದು ದೊಡ್ಡ ಯೋಚನೆಯಾಗಿದ್ದಿತು. ತಾನು ಹೇಗೆ ಖಂಡಿತಮಾಡಿದನೆಂಬುದನ್ನು ಲಿಂಕನ್ನನು ಸಭೆಯವರಿಗೆ ಹೇಳಿದನು.

ಆಂಟಿಯುಟಮ್ ಯುದ್ಧದ ಸುದ್ದಿಯು ಬಂದಿತು. ಪ್ರೆಸಿಡೆಂಟನು ಪ್ರಕಟನೆಯ ಪ್ರಬಂಧವನ್ನು ಪೆಟ್ಟಿಗೆಯಿಂದ ತೆಗೆದನು. ತೆಗೆದು ಓದಿದನು. ಆಮೇಲೆ ಯುದ್ಧಭೂಮಿಗೆ ಪ್ರಯಾಣವು ಒದಗಿತು. ಆದರೆ ಯುದ್ಧವಾದ ಐದು ದಿನಗಳ ಮೇಲೆ ಅವನು ಮಂತ್ರಿಗಳನ್ನೆಲ್ಲಾ ಬರಮಾಡಿದನು. ಅಲ್ಲಿ ಮೊದಲು ಒಂದು ಪುಸ್ತಕವನ್ನು ತೆಗೆದು ಒಂದು ಭಾಗವನ್ನು ಓದಿದನು. ಮನಸ್ಸಿಗೆ ಆಯಾಸವು ಬಹಳವಾದಾಗ ಅವನು ಹಾಗೆ ಮಾಡುತ್ತಿದ್ದನು. ಮಂತ್ರಿಗಳು ಸಂತೋಷಹೊಂದಿದರು. ಆದರೆ ಸ್ಟ್ಯಾಂಟನ್ ಎಂಬ ಯುದ್ಧದ ಸೆಕ್ರಿಟರಿಗೆ ಮಾತ್ರ ಈ ವಿಧಾನವು ರುಚಿಸಲಿಲ್ಲ. ತಲೆ ಹೋಗುವ ಸಮಯದಲ್ಲಿ ನಕಲಿಯು ಅವನಿಗೆ ಬೇಕಾಗಿರಲಿಲ್ಲ. ಆದರೂ ಅದು ಪ್ರೆಸಿಡೆಂಟನ ವಾಡಿಕೆಯಾಗಿದ್ದಿತು. ಆಮೇಲೆ, ಬಹಳಮಟ್ಟಿಗೆ ತಾನು ಯುದ್ಧಕ್ಕೂ ದಾಸ್ಯಕ್ಕೂ ಇರುವ ಸಂಬಂಧವನ್ನು ಚಿಂತಿಸಿರುವುದಾಗಿ ಹೇಳಿ ಕೆಲವು ವಾರಗಳ ಹಿಂದೆ ಒಂದು ಪ್ರಬಂಧವನ್ನೋದಿದುದನ್ನು ಜ್ಞಾಪಿಸಿದನು. ಆಗಿನಿಂದಲೂ ಅವನಿಗೆ ಮನಸ್ಸಿನಲ್ಲಿ ಅದರ ಯೋಚನೆಯೇ ಬಲವಾಗಿದ್ದಿತು. ಈಗ ಸಕಾಲವಾಗಿ ತೋರುತ್ತಿದ್ದಿತು ; ಆದಕಾರಣ ಪ್ರಕಟನೆಯನ್ನು ಬೇಗಲೇ ಹೊರಡಿಸಬೇಕು. '' ಶತ್ರು ಸೈನ್ಯವು ಫ್ರೆಡರಿಕ್‌ನಲ್ಲಿದ್ದಾಗ ನಾನು, ಅದು ಮೇರಿಲೆಂಡಿನಿಂದ ಹೊರಕ್ಕೆ ಓಡಿಸಲ್ಪಟ್ಟ ಕೂಡಲೇ ಅತ್ಯಂತ ಉಪಯುಕ್ತನಾದೊಂದು ಪ್ರಕಟನೆಯನ್ನು ಪ್ರಚಾರಪಡಿಸಬೇಕೆಂದು ನಿಶ್ಚಯಮಾಡಿದೆನು. ಅದನ್ನು ಹೆರರಿಗೆ ಹೇಳಲಿಲ್ಲ—ನನ್ನ ಮನಸ್ಸಿನಲ್ಲಿಯೇ ಇಟ್ಟೆನು.''—ಇಲ್ಲಿಸ್ವಲ್ಪ ಅನುಮಾನಮಾಡಿದನು— '' ಆ ನಿಶ್ಚಯವನ್ನು ಭಗವಂತನೆದುರಿಗೆ ಮಾಡಿದೆನು. ಶತ್ರುಸೈನ್ಯವನ್ನು ಈಗ ಓಡಿಸಿಯಾಯಿತು. ನನ್ನ ಮನಸ್ಸಿನ ನಿಶ್ಚಯವನ್ನು ಇನ್ನು ಪೂರ್ತಿಗೊಳಿಸುವೆನು. ಈಗ, ನಾನು ಇಲ್ಲಿ ಬರೆದಿರುವುದನ್ನು ನಿಮ್ಮೆಲ್ಲರೆದುರಿಗೆ ಓದುವುದಕ್ಕೋಸ್ಕರ ನಿಮ್ಮನ್ನು ಬರಮಾಡಿದೆನು. ಇದರ ಮುಖ್ಯಾಂಶಗಳಲ್ಲಿ ನಿಮ್ಮ ಆಲೋಚನೆಯು ಬೇಕಾಗಿಲ್ಲ. ಅದನ್ನು ನಾನೇ ಆಲೋಚಿಸಿರುವೆನು. ಆದರೆ, ಹೀಗೆ ಹೇಳಿ ನಿಮ್ಮಲ್ಲಿ ಯಾರೊಬ್ಬರಿಗೂ ಅವಮಾನವನ್ನು ಮಾಡಬೇಕೆಂಬುದು ಖಂಡಿತವಾಗಿ ನನ್ನ ತಾತ್ಪರ್ಯವಲ್ಲ,'' ಎಂದನು. ಆಮೇಲೆ ಪ್ರಬಂಧದಲ್ಲಿದ್ದ ವಾಕ್ಯರಚನೆಯ ವಿಷಯವಾಗಿಯೂ ಇತರ ಅಂಶಗಳ ವಿಷಯವಾಗಿಯೂ ಅವರ ಸಲಹೆಗಳನ್ನು ಪ್ರಾರ್ಥಿಸಿ, ಕೊನೆಯಲ್ಲಿ ಹೀಗೆಂದನು :—

'' ಇನ್ನೊಂದು ವಿಚಾರ. ಈ ಸಂದರ್ಭದಲ್ಲಿ ಇತರರು ನನಗಿಂತ ಚೆನ್ನಾಗಿ ನಿರ್ವಹಿಸ

ಬಲ್ಲವರಾಗಿರಬಹುದು. ಪ್ರಜೆಗಳಿಗೆ ನನ್ನಲ್ಲಿರುವುದಕ್ಕಿಂತಲೂ ಹೆಚ್ಚಿನ ನಂಬಿಕೆಯು ಮತ್ತೊಬ್ಬನಲ್ಲಿದ್ದ ಪಕ್ಷದಲ್ಲಿ ಆತನು ನನ್ನ ಸ್ಥಾನವನ್ನಾಕ್ರಮಿಸಲು ಅರ್ಹನಾದವನು. ಬಹಳ ಸಂತೋಷದಿಂದ ಆತನಿಗೆ ಸ್ಥಳವನ್ನು ಬಿಟ್ಟುಕೊಡುತ್ತೇನೆ. ಪ್ರಜೆಗಳಿಗೆ ನನ್ನಲ್ಲಿ ಹಿಂದೆಯಿದ್ದಷ್ಟು ವಿಶ್ವಾಸವು ಈಗ ಇಲ್ಲ. ಆದರೂ, ಎಲ್ಲಾ ವಿಚಾರಗಳನ್ನೂ ಪರಿಶೀಲಿಸಿ ನೋಡಿದರೆ ಇನ್ನಾರಲ್ಲಿಯೂ ಅವರಿಗೆ ಇಷ್ಟು ವಿಶ್ವಾಸವಿರುವಂತೆ ಕಾಣುವುದಿಲ್ಲ. ಅದು ಹೇಗಾದರೂ ಇರಲಿ, ಸದ್ಯದಲ್ಲಿ ಮತ್ತೊಬ್ಬನು ನನ್ನ ಸ್ಥಾನವನ್ನು ಆಕ್ರಮಿಸಲು ನ್ಯಾಯವಾದ ಮಾರ್ಗವು ಯಾವುದೂ ಕಾಣುವುದಿಲ್ಲ. ನಾನು ಇಲ್ಲಿದ್ದೇನೆ ; ಇರುವಾಗ ನನ್ನಿಂದ ಸಾಧ್ಯವಾದುದನ್ನೆಲ್ಲಾ ಮಾಡಬೇಕು. ಅನುಷ್ಠೇಯವೆಂದು ನಿಶ್ಚಯಿಸಿ ನಾನು ಮಾಡಿದ ಕೆಲಸದಲ್ಲಿ ಉತ್ತರವಾದಿತ್ವವನ್ನು ಇನ್ನೊಬ್ಬರ ತಲೆಯ ಮೇಲೆ ಹೇರಲಾಗುವುದಿಲ್ಲ. ನಾನೇ ಹೊರಬೇಕು.'' ಆಮೇಲೆ ಪ್ರಬಂಧದ ವಿಷಯವನ್ನು ಕುರಿತು ಬಲವಾದ ಚರ್ಚೆಯು ನಡೆಯಿತು. ತಿದ್ದುಪಾಟುಗಳು ಹೆಚ್ಚಾಗಲಿಲ್ಲ. ಆಂಟಿಯಟಮ್ ಯುದ್ಧಕ್ಕೆ ಮುಂಚೆ ಅವನ ಕಳವಳವು ಬಹಳವಾಯಿತು. ಸಣ್ಣಮಗುವಿನಂತೆ ಲಿಂಕನ್ನನು ಅಡ್ಡಬಿದ್ದು, ಜಯವುಂಟಾಗಿ, ಶತ್ರುವು ಮೇರಿಲೆಂಡನ್ನು ಬಿಟ್ಟು ಓಡಿಹೋದರೆ ತಾನು ಅದನ್ನು ತನ್ನ ಪ್ರಯತ್ನದ ಸಾಧುತೆಯ ಸೂಚನೆಯೆಂದು ಅಂಗೀಕರಿಸಿ, ನಿಶ್ಚಯವಾಗಿಯೂ ಮುಂದಡಿಯಿಟ್ಟು ಸಾಹಸಮಾಡುವುದಾಗಿ ಶಪಥಮಾಡಿದ್ದನು. '' ಒಂದು ವಿಚಾರದಲ್ಲಿ ಯಾವ ಮಾರ್ಗವನ್ನು ಅನುಸರಿಸಬೇಕೆಂಬುದು ಗೊತ್ತಾಗದಿದ್ದರೆ ಈವಿಧವಾಗಿ ಇತ್ಯರ್ಥಮಾಡಲು ಯೋಚಿಸುವುದು ವಿಚಿತ್ರವಾಗಿ ಕಾಣಬಹುದು. ಭಗವಂತನು ಗುಲಾಮರಿಗೆ ಅನುಕೂಲನಾಗಿಯೇ ಇತ್ಯರ್ಥಮಾಡಿದ್ದನು.''

ಪ್ರಕಟನೆಯ ಜನ್ಮವೃತ್ತಾಂತವು ಈ ರೀತಿಯಾಗಿದ್ದಿತು. ಅದರಿಂದ ಫಲಿತವಾದ ಅಂಶಗಳನ್ನು ನೋಡಬಹುದು. '' ವೃತ್ತಾಂತಪತ್ರಿಕೆಗಳೂ ಹೆಸರುವಾಸಿಯನ್ನು ಪಡೆದ ಜನಗಳೂ ಹೊಗಳಿಬಿಟ್ಟರೆ ಸಾಲದು. ಸ್ವಾಭಿಮಾನಿಯಾದವನು ಮಾತ್ರವೇ ಆ ಪ್ರಶಂಸೆಯಿಂದ ತೃಪ್ತನಾದಾನು '' ಎಂದು ಲಿಂಕನ್ನನು ಕಾಗದವೊಂದರಲ್ಲಿ ಬರೆದನು. ಆದರೆ ಅಷ್ಟು ಮಾಡಿದರೂ ಸೈನ್ಯಕ್ಕೆ ಜನಗಳು ಹೆಚ್ಚು ಹೆಚ್ಚಾಗಿ ಸೇರಲಿಲ್ಲ. ಅಕ್ಟೋಬರ್ ನೊವೆಂಬರ್ ತಿಂಗಳುಗಳಲ್ಲಿ ಕಾಂಗ್ರೆಸ್ ಸಭೆಯಲ್ಲಿ ಸಭಿಕತನಕ್ಕಾಗಿ ಚುನಾವಣೆಗಳು ನಡೆದುವು. ಡೆಮೊಕ್ರೆಟರ ಪಕ್ಷವು ಬಲಗೊಳ್ಳುತ್ತ ಬಂದಿತು. ಆದರೂ ರಿಪಬ್ಲಿಕನರು ಸ್ಥಾನದಿಂದ ಜಾರಲಿಲ್ಲ. ಡೆಮೊಕ್ರೆಟರ ವಿರೋಧವು ದಿನದಿನಕ್ಕೆ ಹೆಚ್ಚಿತು. ಪ್ರೆಸಿಡೆಂಟನು ಯುದ್ಧದ ಉದ್ದೇಶವನ್ನು ಬದಲಾಯಿಸಿ, ದಾಸ್ಯದ ಮೇಲೆ ದಂಡೆತ್ತಿ ಹೊರಡುತ್ತಿರುವನೆಂದು ಅವರು ದೂರತೊಡಗಿದರು. ಚುನಾವಣೆಯ ಕಾಲದಲ್ಲಿ '' ಶಾಸನಕ್ರಮವು ಈಗ ಇರುವ ಹಾಗೆಯೂ ಸಂಯೋಗವು ಹಿಂದೆ ಇದ್ದಹಾಗೂ ಇರಬೇಕು'' ಎಂಬುದು ಅವರ '' ಪಲ್ಲವಿ '' ಯಾಗಿದ್ದಿತು. ಪ್ರಜೆಗಳು ಯುದ್ಧದಲ್ಲಿ ಜಯವುಂಟಾಗದಿದ್ದುದಕ್ಕಾಗಿ ಖಿನ್ನರಾಗಿದ್ದರು. ಅವರಿಗೆ ಡೆಮೊಕ್ರೆಟರ ಮಾತುಗಳೂ ಬೋಧನೆಗಳೂ ಮನಸ್ಸಿಗೆ ಅಂಟಿದುವು. ಯಾವುದಾದರೊಂದು ಜಯವು ದೊರೆತ ಬಳಿಕ ಹೊಸ ಪ್ರಕಟನೆ

ಯನ್ನು ಚಲಾವಣೆಗೆ ತಂದುದೇ ಉತ್ತಮವಾಯಿತು. ಲಿಂಕನ್ನನಲ್ಲಿ ಅವರಿಗೆ ಭರವಸೆಯು ಕಡಿಮೆಯಾಗಿದ್ದಿತು. ಆದರೆ ಯಾವ ಮನುಷ್ಯನಲ್ಲಿ ತಾನೇ ಪ್ರಜೆಗಳಿಗೆ ನಂಬಿಕೆಯು ಬಹಳ ಕಾಲದವರೆಗೆ ನಿಂತೀತು ? ಲಿಂಕನ್ನನಿಗೆ ಜನರನ್ನು ಆಕರ್ಷಿಸಲು ಬಾರದು. ಅಲ್ಲದೆ, ಈ ವೇಳೆಗೆ ಅವನು ತೀರ ಹಳಬನಾಗಿ ಬಿಟ್ಟನು. ಜನರು ಅವನನ್ನು "old Abe", "uncle Abe", "Father Abraham" ಎಂಬ ಹೆಸರುಗಳಿಂದ ಕರೆಯುತ್ತಿದ್ದರು.

ತನ್ನ ವಾರ್ಷಿಕಸಂದೇಶದಲ್ಲಿ ಲಿಂಕನ್ನನು 1862ನೆಯ ಡಿಸೆಂಬರ್‌ನಲ್ಲಿ ದಾಸ್ಯದ ವಿಷಯದಲ್ಲಿ ನ್ಯಾಯವಾದ ಮತ್ತು ನಿರ್ಣಯಪೂರ್ವಕವಾದ ವ್ಯವಹಾರವನ್ನು ಮಾಡಬೇಕೆಂದು ಸೂಚಿಸಿದನು. ಶಾಸನಕ್ರಮದಲ್ಲಿ ಈ ಬದಲಾವಣೆಗಳನ್ನು ಮಾಡಿ ಪ್ರಚಾರಕ್ಕೆ ತರಬೇಕು :—ದಂಗೆಯಲ್ಲಿ ಸೇರಿರುವ ಅಥವಾ ಸೇರದಿರುವ ಸಂಸ್ಥಾನವು 1900ನೆಯ ವರುಷದೊಳಗೆ ತನ್ನಲ್ಲಿ ಪ್ರಚಾರದಲ್ಲಿರುವ ದಾಸ್ಯವನ್ನು ತಪ್ಪಿಸಲು ಒಪ್ಪಿಕೊಂಡರೆ ಪರಿಹಾರದ್ರವ್ಯವನ್ನು ಒದಗಿಸಿಕೊಡುವುದಾಗಿ ಸಂಯುಕ್ತಸರ್ಕಾರವು ಕಾಗದವನ್ನು ಬರೆದು ಮಾತುಕೊಡಬೇಕು ; ಯುದ್ಧದ ಸಮಯದಲ್ಲಿ ಸ್ವತಂತ್ರನಾದ ಗುಲಾಮನು ಮುಂದೂ ಕೂಡ ಸ್ವತಂತ್ರನಾಗಿಯೇ ಇರಲು ಅರ್ಹನಾದವನು. ಅವನನ್ನಿಟ್ಟಿದ್ದ ಯಜಮಾನನು ತನ್ನ ನಷ್ಟಕಾಗಿ ಹಣವನ್ನು ಪಡೆಯಬೇಕು ; ನೀಗ್ರೋಗಳಿಗೆ ಬೇರೊಂದು ವಾಸಸ್ಥಳವನ್ನೇರ್ಪಡಿಸಿ ಅನುಕೂಲಮಾಡಲು ಕೆಲವು ಹಣವನ್ನು ವೆಚ್ಚಮಾಡಬೇಕು—ಶಾಸನಕ್ರಮವನ್ನು ಬದಲಾಯಿಸದಯೇ ಈ ಕೆಲಸಗಳಲ್ಲಿ ಅನೇಕವನ್ನು ಮಾಡಿದ್ದರೂ ಕೂಡ, ಕೊನೆಯಲ್ಲಿ ಸಂಯೋಗವನ್ನು ಮತ್ತೆ ಸ್ಥಾಪಿಸುವಾಗ ಇವುಗಳಿಂದ ಹೆಚ್ಚಿನ ತೃಪ್ತಿಯುಂಟಾಗುತ್ತಿದ್ದಿತು. ದಾಸ್ಯವನ್ನು ಅಡಗಿಸಲು ಈಗ ಎಲ್ಲರೂ ಒಟ್ಟಾಗಿ ಸೇರಿ ಪ್ರಯತ್ನಿಸಬೇಕಾಗಿರುವುದರಿಂದ ಉತ್ತರದ ಜನಗಳು ತಮ್ಮತಮ್ಮಲ್ಲಿರುವ ಭೇದಭಾವಗಳನ್ನೆಲ್ಲಾ ತೊರೆದು ಆಲೋಚಿಸುವಂತೆ ಸಭೆಯು ಮಾಡಬೇಕೆಂತಲೂ ಅವನು ಸೂಚಿಸಿದನು. "ಹಿಂದಿನ ಸಮಾಧಾನಕಾಲದಲ್ಲಿ ಹುಟ್ಟಿದ ಮಾತುಗಳು ಈ ಪ್ರಳಯಕಾಲದಲ್ಲಿ ಕೆಲಸಕ್ಕೆ ಬಾರವು. ಸದ್ಯದಲ್ಲಿ ತೊಂದರೆಗಳು ರಾಶಿರಾಶಿಯಾಗಿ ದಾರಿಯಲ್ಲಿ ಅಡಕವಾಗಿರುವುವು. ನಾವು ಅವುಗಳನ್ನೆಲ್ಲಾ ದಾಟಬೇಕು. ನಮ್ಮ ಸ್ಥಿತಿಯು ಅಪೂರ್ವದೃಷ್ಟವಾದುದು ; ಹೊಸಹೊಸದಾಗಿ ಚಿಂತಿಸಿ ಹೊಸಹೊಸದಾಗಿ ಕಾರ್ಯಗಳನ್ನು ಮಾಡಬೇಕು. ಮೊದಲು ನಮ್ಮನ್ನು ನಾವು ಸ್ವತಂತ್ರರನ್ನಾಗಿ ಮಾಡಿಕೊಳ್ಳಬೇಕು. ಆಮೇಲೆ ನಮ್ಮ ರಾಜ್ಯವನ್ನು ಉಳಿಸಿಕೊಳ್ಳೋಣ. ನಮ್ಮ ಈ ಕಥೆಯೆಲ್ಲಾ ನಮ್ಮ ಕಾಲಕ್ಕೇ ಮರೆತುಹೋಗುವುದೆಂದು ಅಥವಾ ಮರೆತುಹೋಗಲೆಂದು ನಾವು ಹಾರೈಸಬಹುದು. ಆದರೆ ಮುಂದಿನವರ ಸ್ಮರಣೆಯಿಂದ ಅದು ದೂರವಾಗದು. ಸಂಯೋಗವನ್ನು ರಕ್ಷಿಸಲು ಬದ್ಧರಾಗಿದ್ದೇವೆಂದು ನಾವು ಹೇಳುವೆವು. ಈ ನಮ್ಮ ಹೇಳಿಕೆಯನ್ನು ಲೋಕವು ಮರೆಯುವುದಿಲ್ಲ. ಸಂಯೋಗವನ್ನು ಯಾವ ರೀತಿಯಿಂದ ಸಂರಕ್ಷಿಸಬೇಕೆಂಬುದು ನಮಗೆ ಗೊತ್ತುಂಟು. ಸಂರಕ್ಷಿಸುವ ಉಪಾಯವು ನಮಗೆ ಗೊತ್ತಿರುವುದೆಂಬುದು ಲೋಕಕ್ಕೇ ತಿಳಿದಿರು

ವುದು. ಗುಲಾಮನಿಗೆ ಸ್ವಾತಂತ್ರ್ಯವನ್ನು ಕೊಡೋಣ. ಕೊಡಲಾಗಿ, ಸ್ವತಂತ್ರ ನಾದವನ ಸ್ವಾತಂತ್ರ್ಯವನ್ನೂ ಉಳಿಸಿ ಸ್ಥಿರಪಡಿಸಿದಂತಾಗುವುದು. ಭೂಮಿಯ ಮೇಲೆ ಮನುಷ್ಯನು ಏನೇನನ್ನು ಕಳೆದುಕೊಂಡರೂ ಸ್ವಾತಂತ್ರ್ಯವೊಂದನ್ನು ಮಾತ್ರ ತನ್ನದೆಂದು ನಂಬುವನು. ಕೊನೆಯಲ್ಲಿ ಅದೊಂದು ಮಾತ್ರ ಅವನಿಗೆ ಆಧಾರವಾಗಿ ಉಳಿಯುವುದು. ಇತರ ಉಪಾಯಗಳಿಂದ ನಮ್ಮ ಕೆಲಸಗಳಲ್ಲಿ ಗೆಲುವುಂಟಾಗ ಬಹುದು. ಆದರೆ ಅದರ ಸಹಾಯವು ಮಾತ್ರ ನಮಗೆ ದೃಢವಾಗಿದ್ದಲ್ಲಿ ಅಪಜಯ ವೆಂದಿಗೂ ಉಂಟಾಗುವುದಿಲ್ಲ.'' ಲಿಂಕನ್ನನ ನಂಬಿಕೆಯು ಎಷ್ಟಿದ್ದಿತೆಂಬುದು ಕೊನೆಯ ಕೆಲವು ಮಾತುಗಳಿಂದ ಗೊತ್ತಾಗುವುದು. ಉತ್ತರವು ಯುದ್ಧವೊಂದ ರಿಂದಲೇ ಅಲ್ಲ, ಮತ್ತೊಂದು ವಿಧವಾದ ವ್ಯವಹಾರದಿಂದಲೂ ಕೂಡ ಜಯವನ್ನು ಪಡೆದು ಸಂಯೋಗವನ್ನು ಶಿಥಿಲವಾಗದಂತೆ ಉಳಿಸುವುದೆಂದು ಅವನಿಗೆ ದೃಢವಾ ಗಿದ್ದಿತು. ದಾಸ್ಯದ ಮೇಲೆ ಕೈಯೆತ್ತಲೊಲ್ಲದಿದ್ದ ಡೆಮೊಕ್ರೆಟರೆಲ್ಲರೂ ಮೂರು ವರ್ಷ ಗಳು ಕಳೆಯುವುದರೊಳಗೆ ರಾಜ್ಯದ ಸ್ಥಿತಿಯನ್ನು ನೋಡಿ ತಮ್ಮ ಹಿಂದಿನ ಅವಿವೇಕ ಕ್ಕಾಗಿ ಕೊರಗಿರಬಹುದು. ಲಿಂಕನ್ನನ ವ್ಯವಹಾರವನ್ನು ಅಲ್ಪವೆಂದು ಭಾವಿಸಿ ತೃಪ್ತಿಹೊಂದದಿದ್ದ ರಿಪಬ್ಲಿಕನರೂ ಕೂಡ ಕೊರಗಿರಬಹುದು. ಪ್ರೆಸಿಡೆಂಟನು ಫಲಿ ತಾಂಶವನ್ನು ಗುಣಿಸಿ ನಿಶ್ಚಯಮಾಡಿಕೊಂಡು, ತನ್ನೊಡನೆ ಆಗ ಸೇರಿ ನಿರ್ವಾಹ ಮಾಡಲು ಒಲ್ಲದಿದ್ದ ಈ ಪಂಗಡಗಳು ಮುಂದೆ ಕೊರಗುವುವೆಂದು ಊಹಿಸಿರಬಹುದು. ಪ್ರಕಟನೆಯನ್ನು ಹೊರಡಿಸಿ ಪ್ರೆಸಿಡೆಂಟನು ಮುಂದೆ ಬರುವ ವಿಚಾರಕ್ಕೆ ಈಗಲೇ ಸೂಚನೆಯನ್ನು ಕೊಟ್ಟನು.

ಆಡಳಿತದ ವಿಷಯಗಳಲ್ಲಿ ಪರಿಶ್ರಮವುಳ್ಳವರು ಪ್ರಕೃತದ ದಾಸ್ಯಕ್ರಮವನ್ನೂ ಯುದ್ಧದ ಜಡಪ್ರಕೃತಿಯನ್ನೂ ಕುರಿತು ಸರ್ಕಾರದೊಡನೆ ಚರ್ಚೆಮಾಡಿದರು. ಅದರಿಂದ ಮಂತ್ರಿಸಭೆಯಲ್ಲಿ ಒಂದು ಅಪಾಯವು ಬಂದಿತು. ಆಡಳಿತದ ಎಲ್ಲಾ ಭಾಗಗಳಲ್ಲಿಯೂ ಸಿವರ್ಡನು ಕೈ ಹಾಕಿ ಕೈ ಹಾಕಿ ಕೆಡಿಸುತ್ತಿರುವನೆಂದು ಕೆಲವರು ಭಾವಿಸಿದರು. ಅದಕ್ಕೆ ಸರಿಯಾಗಿ ಎರಡು ಮೂರು ತಿಂಗಳ ಹಿಂದೆ ಅವನು ಬರೆದುದೆಂದು ಒಂದು ಕಾಗದವು ಅವರ ಕೈಗೆ ಸಿಕ್ಕಿತು. ಅವನನ್ನು ಆಚೆಗೆ ತಳ್ಳ ಲೆಳಸಿ ಅವರು ತಮ್ಮಲ್ಲಿ ಕೆಲವರನ್ನು ಕಳುಹಿಸಿ ಯುದ್ಧದ ನಿರ್ವಾಹವು ಸಫಲವಾಗು ವುದಕ್ಕೋಸ್ಕರ ಮಂತ್ರಿಸಭೆಯಲ್ಲಿ ಬದಲಾವಣೆಗಳನ್ನು ಮಾಡಬೇಕೆಂದು ಪ್ರೆಸಿ ಡೆಂಟನಲ್ಲಿ ಅಹವಾಲನ್ನು ಹೇಳಿಸಿದರು. ಯುದ್ಧದ ಸ್ಥಿತಿಯು ಸಮರ್ಪಕವಾ ಗಿರಲಿಲ್ಲ. ಈ ಪ್ರಯತ್ನದಿಂದ ಸಿವರ್ಡನೊಬ್ಬನಲ್ಲದೆ ಚೇಸನೂ ಸ್ಟಾಂಟನ್ನನೂ ನಿವೃತ್ತರಾಗುವರೆಂದು ಯೋಚಿಸಿ ಕನ್ಸರ್ವೇಟಿವ್ ಪಕ್ಷದವರೂ ಅವರೊಡನೆ ಬೆರೆದರು. ಭಿನ್ನಾಭಿಪ್ರಾಯಗಳ ದೆಸೆಯಿಂದ ಪರಸ್ಪರ ವಿರೋಧಿಗಳಾದರೂ ಅವರು ಯುದ್ಧದ ಪ್ರಯತ್ನದಲ್ಲಿ ಜಯವನ್ನಪೇಕ್ಷಿಸಿ ಏಕೀಭವಿಸಿದರು. ಅದನ್ನು ಕೇಳಿ ಸಿವ ರ್ಡನು ರಾಜೀನಾಮೆಯನ್ನು ಕೊಟ್ಟನು. ಆದರೆ ಆ ವಿಚಾರವು ಬಹಿರಂಗವಾಗ ಲಿಲ್ಲ. ಅವನಲ್ಲಿ ಸ್ವಾಭಿಮಾನವು ಸ್ವಲ್ಪವಿದ್ದರೂ ಮನಸ್ಸುಮಾತ್ರ ಒಳ್ಳೆಯದು. ಆ ಮನುಷ್ಯನೊಡನೆ ಸೇರಿ ಕೆಲಸವನ್ನು ನಿರ್ವಹಿಸುವುದು ಯಾರಿಗಾದರೂ

ಸಂತೋಷವನ್ನುಂಟುಮಾಡುತ್ತಿದ್ದಿತು. ಸ್ವಾಮಿಯಾದವನು ವಿವೇಕಶಾಲಿಯಾದ ಪಕ್ಷದಲ್ಲಿ ಅವನು ಅತ್ಯಂತ ಉಪಯುಕ್ತನಾದ ಮಂತ್ರಿ. ಸ್ವಾಮಿಯು ಅವಿವೇಕಿಯಾದರೆ (ಮುಂದೆ ಒಬ್ಬ ಪ್ರೆಸಿಡೆಂಟನು ಆದಹಾಗೆ) ಸಿವರ್ಡನೊಡನೆ ಕ್ಷೇಮದಿಂದ ಬಾಳುತ್ತಿರಲಿಲ್ಲ. ಸ್ಟಾಂಟನ್ನನು ಅತ್ಯಂತ ವಿಧೇಯನು ; ಯುದ್ಧದ ಇಲಾಖೆಯಲ್ಲಿ ಅತ್ಯಂತ ಶಕ್ತನು. ಚೇಸನೂ '' ಒಳ್ಳೆಯವನು, ಬಹಳ ಶಕ್ತನು.'' ಆಯವ್ಯಯಗಳ ಇಲಾಖೆಯಲ್ಲಿ ಅವನ ಹಾಗೆ ತಿಳಿದವನು ಸಿಕ್ಕುವುದು ಕಷ್ಟವಾಗುತ್ತಿದ್ದಿತು. ಇಷ್ಟಾದರೂ ಅವನ ಗುಣವು ಕುತ್ಸಿತವಾದುದು. ಯಾವನು ಮುಖ್ಯಸ್ಥನಾಗಿ ತೋರಿ ಜನವನ್ನೂ ಧನವನ್ನೂ ತನ್ನ ವಶದಲ್ಲಿಟ್ಟುಕೊಂಡಿರುವನೋ ಅಂಥವನಲ್ಲಿ ಚೇಸನು ಅಡಿಯಾಳಾಗುತ್ತಿದ್ದನು. ತನ್ನ ಈ ನಡತೆಯೆಂತಹದೆಂಬುದು ಅವನಿಗೇ ಗೊತ್ತಿದ್ದಿತು. ಆದರೆ ನಾಚಿಕೆಯಿರಲಿಲ್ಲ. ಈ ಅಂಶವು ಲಿಂಕನ್ನಿನಿಗೆ ತಿಳಿಯಿತು. ಸಿವರ್ಡನ ಮೇಲೆ ದೂರು ಬರಲು ಅವನೇ ಮುಖ್ಯವಾಗಿ ಕಾರಣನೆಂದು ಪ್ರೆಸಿಡೆಂಟನು ನಂಬಿದನು. ಆದರೆ ಇಬ್ಬರನ್ನೂ ತನ್ನ ಬಳಿಯಲ್ಲಿ ಕೆಲಸದಲ್ಲಿ ಉಳಿಸಿಕೊಳ್ಳುವುದು ಆ ಸಮಯದಲ್ಲಿ ಅಗತ್ಯವಾಗಿದ್ದಿತು. ಸ್ಥಿತಿಯು ಹಾಗಿದ್ದರೂ ಈ ಪ್ರಸಂಗದಲ್ಲಿ ಒಬ್ಬನು ತಾನು ಗೆದ್ದನೆಂದೂ ಮತ್ತೊಬ್ಬನು ತಾನು ಸೋತೆನೆಂದೂ ಭಾವಿಸಲು ಅವಕಾಶವಿರಕೂಡದೆಂದು ಅವನು ಸಂಕಲ್ಪಿಸಿದ್ದನು. ಜನಗಳ ಕಡೆಯಿಂದ ನಿಯೋಗಿಗಳು ಪ್ರೆಸಿಡೆಂಟನಲ್ಲಿಗೆ ಬಂದರು. ಸಿವರ್ಡನು ರಾಜೀನಾಮೆಯನ್ನು ಕೊಟ್ಟು ಹೊರಟುಹೋಗಿದ್ದನು. ಪ್ರೆಸಿಡೆಂಟನು ತನ್ನ ಮತ್ತು ಮಂತ್ರಿಗಳೆದುರಿಗೆ ನಿಯೋಗಿಗಳು ತಮ್ಮ ಅಹವಾಲನ್ನು ಹೇಳಿಕೊಳ್ಳಬಹುದೆಂದು ವಿಧಾಯಕಮಾಡಿದನು. ಸಿವರ್ಡನ ಪರವಾಗಿ ನಿಂತು ಅವನ ಮೇಲೆ ಬರುವ ಆಕ್ಷೇಪಣೆಗಳಿಗೆಲ್ಲಾ ಸಮಾಧಾನಹೇಳುವ ಕೆಲಸವು ಚೇಸನ ತಲೆಯ ಮೇಲೆಯೇ ಬಿದ್ದಿತು. ಎಂತಹ ದುರ್ದಶೆ! ತಾನು ಯಾರ ಮೇಲೆ ಜನರನ್ನು ಎತ್ತಿ ಕಟ್ಟಿದ್ದನೋ ಅವನನ್ನೇ ಅದೇ ಜನರೆದುರಿಗೆ ಈಗ ರಕ್ಷಿಸಬೇಕಾಯಿತು. ನಿಯೋಗಿಗಳು ಹಿಂದಿರುಗಿದರು. ತಮ್ಮ ಇಷ್ಟು ಪ್ರಯತ್ನವೂ ಸಿವರ್ಡನನ್ನು ಕೆಲಸದಿಂದ ತೆಗೆದುಹಾಕಿಸಬೇಕೆಂಬ ಉದ್ದೇಶಕ್ಕೇ ಹೌದೋ ಅಲ್ಲವೋ ಎಂದು ಅವರಿಗೆ ಸಂದೇಹ ಬಂದಿತು. ಮಾರನೆಯ ದಿನ ಚೇಸನು ರಾಜೀನಾಮೆಯನ್ನು ಕೊಟ್ಟನು. ಮಂತ್ರಿಗಳಿಬ್ಬರೂ ಕೆಲಸವನ್ನು ಬಿಡಲು ಯತ್ನಿಸಿದ್ದರಿಂದ ಲಿಂಕನ್ನನಿಗೆ ಅವಕಾಶವು ಸಿಕ್ಕಿತು. ಇಬ್ಬರಿಗೂ ಮನುಮೆ ಹೇಳಿ ಇಬ್ಬರನ್ನೂ ಅಧಿಕಾರದಲ್ಲಿ ನಿಲ್ಲಿಸಿಕೊಂಡನು. ಅವರು ಹೋದ ದಾರಿಯಲ್ಲಿ ಹೋಗಲೆಂದು ಇಬ್ಬರನ್ನೂ ಬಿಟ್ಟಿದ್ದರೆ ಆ ಸಮಯದಲ್ಲಿ ಬಹಳ ಪ್ರಮಾದವುಂಟಾಗುತ್ತಿದ್ದಿತು.

1863ನೆಯ ವರ್ಷ ಜನವರಿ ಒಂದನೆಯ ತಾರೀಖು ಪ್ರೆಸಿಡೆಂಟನು ಪ್ರಕಟನೆಗೆ ತನ್ನ ರುಜುಹಾಕಿದನು. ದಕ್ಷಿಣದಲ್ಲಿದ್ದರೂ '' ದಂಗೆ ''ಗೆ ಸೇರದಿದ್ದ ಕೆಲವು ಸಣ್ಣ ಪ್ರದೇಶಗಳಲ್ಲಿ ಆ ಪ್ರಕಟನೆಯು ಚಲಾವಣೆಗೆ ಬರುತ್ತಿರಲಿಲ್ಲ. ಸೈನ್ಯದ ಮತ್ತು ನಾವೆಯ ಅಧಿಕಾರಿಗಳಿಗೆ ತಮ್ಮ ಬಳಿಗೆ ಬಂದು ಮರೆಹೋಗುವ ಗುಲಾಮರೆಲ್ಲರನ್ನೂ ಸ್ವತಂತ್ರರೆಂದು ಭಾವಿಸಿ ಕಾಪಾಡಬೇಕೆಂದು ಕಟ್ಟಪ್ಪಣೆಯಾಯಿತು. ಗುಲಾಮರು ಕ್ರೂರಕರ್ಮದಲ್ಲಿ ಸಗದಂತೆ ತಡೆಯಬೇಕೆಂದು ಸರ್ಕಾರವು ಕೋರಿತು.

ಕೆಲಸವು ಸಿಕ್ಕಿದಲ್ಲಿ ಅವರು ನ್ಯಾಯವಾದ ಕೂಲಿಗೆ ಕೆಲಸಮಾಡಬೇಕು. ಪ್ರಾಯ ಸಮರ್ಥರಾದ ಗುಲಾಮರನ್ನು ಸೈನ್ಯಕ್ಕೆ ಸೇರಿಸಿಕೊಂಡು ದಳಪತಿಗಳು ಮುಖ್ಯ ವಾಗಿ ಪಾಳೆಯದಲ್ಲಿ ಕೆಲಸಗಳನ್ನು ಮಾಡಿಸಬಹುದು. ಆ ವರ್ಷವು ಕಳೆಯುವುದ ರೊಳಗಾಗಿ ಒಂದುಲಕ್ಷ ಮಂದಿ ನೀಗ್ರೋಜನಗಳು ಸೈನಿಕರಾಗಿದ್ದರು. ಅವರಲ್ಲಿ ಅರ್ಧಜನರು ಯುದ್ಧಮಾಡುತ್ತಲೂ ಉಳಿದವರು ಸೈನ್ಯದಲ್ಲಿ ಇತರ ಕೆಲಸಗಳನ್ನು ಮಾಡುತ್ತಲೂ ಇದ್ದರು. ಉಮೇದುವಾರರಾಗಿ ದಂಡನ್ನು ಸೇರುತ್ತಿದ್ದ ಬಿಳಿಯಜನರ ಸಂಖ್ಯೆಯು ಬಹಳ ಕಡಿಮೆಯಾಯಿತು. ಅಲ್ಲದೆ ಬಿಳಿಯಜನರಿಗೆ ರೈಲುದಾರಿ ಯನ್ನು ಸರಿಮಾಡುವುದೇ ಮೊದಲಾದ ಕೆಲವು ಕೆಲಸಗಳು ಸರಿಬೀಳುತ್ತಿರಲಿಲ್ಲ. ಆದಕಾರಣ ಅವರಿಗೆ ಬದಲು ನೀಗ್ರೋಗಳು ಬಹಳ ಸಹಾಯವನ್ನು ಮಾಡು ತ್ತಿದ್ದರು. ನೀಗ್ರೋಗಳ ಸೈನ್ಯವು ಧೈರ್ಯದಿಂದ ಯುದ್ಧಮಾಡಿತು; ಸೈನಿಕರು ಬಹಳ ವಿಧೇಯರಾಗಿದ್ದರು. ಅವರಿಗೂ ಅವರ ಮೇಲಿರುವ ಹುದ್ದೇದಾರರಿಗೂ ಅತ್ಯಂತ ಕ್ರೂರವಾದ ಶಿಕ್ಷೆಯನ್ನು ಮಾಡಿ ಕೊಲ್ಲಿಸುವುದಾಗಿ ಜೆಫರ್ಸನ್ ಡೇವಿಸ್ಸನು ಗರ್ಜಿಸಿದನು. ಒಂದುಸಾರಿ ಮಾತ್ರ ಅವನು ತನ್ನ ಮಾತನ್ನು ನಡೆಯಿಸಿದನು. ಅನೇಕ ನೀಗ್ರೋಜನರು ಕೊಲ್ಲಲ್ಪಟ್ಟರು. ಆದರೂ ಆ ಜನರು "ಮೌನವಾಗಿ ನಿಂತು ಹಲ್ಲುಮುಡಿ ಕಚ್ಚಿ ಸ್ಥಿರವಾದ ದೃಷ್ಟಿಯಿಂದ ಕೂಡಿ, ಕೈಯಲ್ಲಿ ಸನೀನನ್ನು ಶಿಥಿಲವಾಗದಂತೆ ಹಿಡಿದು ಯುದ್ಧಮಾಡಿದರು. ಲೋಕಕ್ಕೆ ಅವರ ಉಪಕಾರವು ಬಹಳವಾಯಿತು." ಮೊದಲುಮೊದಲು ಸೈನ್ಯದ ಹುದ್ದೇದಾರರಿಗೆ ನೀಗ್ರೋಗಳನ್ನು ಸೇರಿಸಿಕೊಳ್ಳಲು ಮನಸ್ಸು ಬರಲಿಲ್ಲ. ಆದರೆ ಆ ಭಾವನೆಯು ನೀಗ್ರೋಗಳ ಗುಣವನ್ನು ನೋಡಿ ಬದಲಾಯಿಸಿತು. ಅಧಿಕಾರಿಯೊಬ್ಬನು ತನ್ನ ಬಿಳಿಯ ಜನದ ದಂಡಿನಲ್ಲಿದ್ದ ಕೆಲಸವನ್ನು ಬಿಟ್ಟು ನೀಗ್ರೋಗಳ ದಂಡಿನದೊಂದು ಭಾಗದ ಆಧಿ ಪತ್ಯವನ್ನು ವಹಿಸಿದನು. ವಹಿಸಿ ಧೈರ್ಯದಿಂದ ಯುದ್ಧಮಾಡುತ್ತ ಸತ್ತನು.

ಹೊರಗಿನಿಂದ ತಲೆತಪ್ಪಿಸಿಕೊಂಡು ಇಲ್ಲಿಗೆ ರಕ್ಷಣೆಗಾಗಿ ಬರುತ್ತಿದ್ದ ಜನ ರನ್ನು ಕಾಪಾಡುವುದಕ್ಕಿಂತಲೂ ನೀಗ್ರೋಗಳಲ್ಲಿ ಸೈನ್ಯಕ್ಕೆ ಸೇರುವವರನ್ನು ಕೂಡಿಸಿ ತಯಾರುಮಾಡುವುದು ಸುಲಭವಾದ ಕೆಲಸವಾಯಿತು. ಮೊದಲಬಗೆಯ ಜನರು ಪಶ್ಚಿಮದಲ್ಲಿದ್ದ ಗ್ರಾಂಟನ ಪಾಳೆಯಕ್ಕೆ ಒಟ್ಟೊಟ್ಟಾಗಿ ನುಗ್ಗಿದರು. ಅಂಥವರ ಅನುಕೂಲಕ್ಕಾಗಿ ಸರ್ಕಾರವು ಬಹಳವಾಗಿ ಪ್ರಯತ್ನಮಾಡಿತು. ಜಾನ್ ಈಟನ್ ಎಂಬ ಉಪದೇಶಿಯು ಅವರ ನೈತಿಕಾಚರಣೆಗಳನ್ನು ನೋಡಿಕೊಳ್ಳುವುದಕ್ಕಾಗಿ ನೇಮಿಸಲ್ಪಟ್ಟನು. ಆತನಿಂದ ನೀಗ್ರೋಗಳ ವಿಷಯದಲ್ಲಿ ಲಿಂಕನ್ನನ ವ್ಯವಹಾರ ವೆಂತಹದೆಂಬುದು ತಿಳಿದುಬರವುದು. ಕೆಲವು ಕಾಲವಾದ ಬಳಿಕ ಈಟನ್ನನು ಒಂದು ಕೆಲಸಕ್ಕಾಗಿ ವಾಷಿಂಗ್ಟನ್ನಿಗೆ ಬಂದನು. ಬಂದು ಪ್ರೆಸಿಡೆಂಟನ ದರುಶನವನ್ನು ತೆಗೆದುಕೊಂಡನು. ಪ್ರೆಸಿಡೆಂಟನ ನಡತೆಯನ್ನು ನೋಡಿ ಬಹಳ ಆಶ್ಚರ್ಯವಾಯಿತು. ಅದಲ್ಲದೆ, ನೀಗ್ರೋಗಳ ಪ್ರಸಕ್ತಿಯಲ್ಲಿ ಅತ್ಯಂತ ಗಾಢವಾದ ತಿಳುವಳಿಕೆಯಿರುವುದೆಂಬು ದನ್ನು ತಿಳಿದಾಗಲಂತೂ ಆತನ ವಿಸ್ಮಯವನ್ನು ಹೇಳಿತೀರದು. ಪ್ರಶ್ನೆಯಾದ ಮೇಲೆ ಪ್ರಶ್ನೆಹಾಕಿ ಲಿಂಕನ್ನನು ಅವನಿಂದ ಅನೇಕ ವಿಚಾರಗಳನ್ನು ತಿಳಿದುಕೊಂಡನು.

ಈಟನ್ನನು ಅವುಗಳಿಗೆ ಉತ್ತರವಾಗಿ, ನೀಗ್ರೋಗಳ ಯೋಚನೆಯೇನೆಂಬುದನ್ನೂ ಬುದ್ಧಿಶಕ್ತಿಯೆಷ್ಟೆಂಬುದನ್ನೂ ಆಕಾಂಕ್ಷೆಯೆಂತಹದೆಂಬುದನ್ನೂ ವಿವರಿಸಿದನು. ನೀಗ್ರೋಗಳಲ್ಲಿ ಕೆಲವರು ವಿದ್ಯೆಕಲಿತು ಮುಂದಕ್ಕೆ ಬಂದಿದ್ದರು. ಅಂಥವರ ಚರಿತ್ರೆಯೂ ತಿಳುವಳಿಕೆಯೂ ಎಷ್ಟೆಂದು ಪ್ರೆಸಿಡೆಂಟನು ಬಹಳ ಆದರವಿಟ್ಟು ಕೇಳಿದನು. ಆ ಜಾತಿಯ ಜನಗಳ ಬುದ್ಧಿಯು ಇಷ್ಟೆಂಬುದನ್ನು ಆ ಕೆಲವರ ಮೂಲಕ ತಿಳಿಯಬಹುದಾಗಿದ್ದಿತು. ಈಟನ್ನನು ಮುಂದೆ ಅನೇಕ ವೇಳೆ ರಾಜಧಾನಿಗೆ ಬಂದನು. ಬಂದ ಕಾಲದಲ್ಲಿ ಪ್ರೆಸಿಡೆಂಟನ ದರುಶನವನ್ನು ಪಡೆಯದೆ ಹೋಗುತ್ತಿರಲಿಲ್ಲ. ಪ್ರೆಸಿಡೆಂಟನ ಮಾತುಕಥೆಗಳಿಂದ ನೀಗ್ರೋಗಳಲ್ಲಿ ಆತನಿಗೆ ಸಂಪೂರ್ಣವಾದ ಮರುಕವುಂಟೆಂಬುದನ್ನು ಈಟನ್ನನು ಧೃಢಮಾಡಿದನು. ಒಂದು ತಡವೆ ಉಪದೇಶಿಯು ಪ್ರೆಸಿಡೆಂಟನನ್ನು ನೋಡಲು ಹೋದನು. ಪ್ರೆಸಿಡೆಂಟನಿಗೆ ಬಹಳ ಯೋಚನೆ ಹತ್ತಿದ್ದಿತು. ನೀಗ್ರೋಗಳ ವಾಸಕ್ಕೋಸ್ಕರ ಏರ್ಪಡಿಸಬೇಕೆಂದಿದ್ದ ಪ್ರದೇಶವೊಂದರಲ್ಲಿ ಒಂದು ಬಗೆಯ ಹುಳುವಿದ್ದಿತು. ಅದು ಬರಿಕಾಲಲ್ಲಿ ನಡೆಯುವವರ ಕಾಲ್ಬೆರಳಿನ ಉಗುರುಗಳ ಸಂದಿನಲ್ಲಿ ಸೇರಿ ಗಾಯವನ್ನೂ ನೋವನ್ನೂ ಮಾಡುತ್ತಿದ್ದಿತು. ಆ ಪ್ರದೇಶದಲ್ಲಿ ಅಂತಹ ಹುಳುಗಳು ಹೆಜ್ಜೆಹೆಜ್ಜೆಗೂ ತುಂಬಿದ್ದುವು. ಅವುಗಳ ದೆಸೆಯಿಂದ, ನೀಗ್ರೋಜನಗಳನ್ನು ಅಲ್ಲಿಗೆ ಕಳುಹಿಸಿ ವಾಸಮಾಡಿಸಲು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾದುವು. ಪ್ರೆಸಿಡೆಂಟನು ಅವುಗಳನ್ನು ನಿವೃತ್ತಿಮಾಡಲಾರದೆ ಬಹಳ ಚಿಂತಾಪರನಾಗಿದ್ದನು. ಉಪದೇಶಿಗೆ ವಿಸ್ಮಯವಾಗಲು ಇನ್ನೂ ಒಂದು ಕಾರಣವಿದ್ದಿತು. ಆಗ ಗೆಟ್ಟಿಸ್‌ಬರ್ಗ್ ಮತ್ತು ವಿಕ್ಸ್‌ಬರ್ಗ್ ಯುದ್ಧಗಳು ನಡೆದು ಬಹು ಸ್ವಲ್ಪಕಾಲವಾಗಿದ್ದಿತು. ಅವುಗಳಲ್ಲಾದ ನಷ್ಟವು ಎಂದಿಗೂ ಮರೆಯದಂತಹ ನಷ್ಟವೆಂದುಕೊಂಡು ಜನರು ದುಃಖಿಸುತ್ತಿದ್ದರು. ಸರ್ಕಾರವು ಖಿನ್ನವಾಗಿದ್ದಿತು. ಪ್ರೆಸಿಡೆಂಟನಿಗಂತೂ ಕೆಲಸಗಳು ಹೊರೆಹೊರೆಯಾಗಿ ಬಿದ್ದಿದ್ದುವು. ಹೀಗಿದ್ದಾಗಲೂ ಕೂಡ ಅವನು ಕೌ ದ್ವೀಪ (Cow Island) ದಲ್ಲಿದ್ದ ನೀಗ್ರೋಗಳಿಗಿದ್ದ ಅಪಾಯವನ್ನು ತಪ್ಪಿಸಲು ಯೋಚಿಸುತ್ತಿದ್ದನು. ಈಟನ್ನನು ಕೆಲವು ದಿನಗಳ ಮೇಲೆ ಹೋಗಿ ಮತ್ತೊಂದಾವೃತ್ತಿ ಪ್ರೆಸಿಡೆಂಟನನ್ನು ನೋಡಿದನು. ಲಿಂಕನ್ನನು ಸ್ವಲ್ಪ ಸ್ವಲ್ಪ ನಾಚುತ್ತ, ಫ್ರೆಡರಿಕ್ ಡಗ್ಲಸ್ ಎಂಬ ಉಪದೇಶಿಯು ತನ್ನನ್ನು ಬಂದು ನೋಡುವಂತೆ ಮಾಡಬೇಕೆಂದು ಆತನನ್ನು ಕೇಳಿಕೊಂಡನು! ಡಗ್ಲಸ್‌ನು ಬಂದು ದರ್ಶನವನ್ನು ತೆಗೆದುಕೊಂಡನು. ಅವನು ಗುಲಾಮನಾಗಿ ಹುಟ್ಟಿದರೂ ಗುಲಾಮರಲ್ಲಿ ಎಲ್ಲರಿಗಿಂತ ಹೆಚ್ಚಿನ ಗಟ್ಟಿಗನು. ನೀಗ್ರೋಗಳಿಗೆ ಸ್ನೇಹಿತರಾಗಿ ಹಿತೇಚ್ಛುಗಳಾದ ಅನೇಕ ಬಿಳಿಯ ಜನರೊಡನೆ ಮಾತನಾಡಿ ಬಂದಿದ್ದನು. ಪ್ರೆಸಿಡೆಂಟನಲ್ಲಿಗೂ ಬಂದನು. ಬಂದವನು ದಕ್ಷಿಣದ ಸೈನಿಕರು ಸೆರೆಸಿಕ್ಕಿದ ನೀಗ್ರೋಗಳನ್ನು ಕೊಲ್ಲುತ್ತಿದ್ದ ಕಟುಕತನಕ್ಕೆ ಪ್ರತಿಯಾಗಿ ಮಾಡಲು ತನಗೆ ಯಾವ ಉಪಾಯವೂ ತೋರದೆಂದು ತನ್ನ ದುಃಖವನ್ನು ಹೇಳಿಕೊಂಡನು. ಪ್ರೆಸಿಡೆಂಟನೊಡನೆ ಮಾತನಾಡಿ ಹಿಂದಿರುಗಿದಾಗ ಅವನಿಗೆ ಹುಚ್ಚು ಹಿಡಿಯುವಷ್ಟು ಸಂತೋಷವುಂಟಾಗಿದ್ದಿತು. ನೀಗ್ರೋಗಳ ವಿಷಯದಲ್ಲಿ ತಾನು ಮಾಡಬೇಕೆಂದಿದ್ದುದನ್ನು ಲಿಂಕನ್ನನು ಅವನಿಗೆ ವಿವರಿಸಿರಬಹುದು; ಅದು

ಅವನಿಗೆ ಅರ್ಥವಾಗಿರಬಹುದು. ಆದರೆ ಡಗ್ಲಸ್ ಉಪದೇಶಿಯು ಅದರಿಂದ ಸಂತುಷ್ಟನಾಗಿರಲಿಲ್ಲ. "ಆತನು ನನ್ನನ್ನು ಒಬ್ಬ ಮನುಷ್ಯನಂತೆ ಭಾವಿಸಿ ಉಪಚರಿಸಿದನು" ಎಂದು ಅವನು ಹೇಳಿದನು; "ನಾವಿಬ್ಬರೂ ಮೈಯ ಬಣ್ಣದಲ್ಲಿ ಬೇರೆಬೇರೆಯಾದವರೆಂದು ನನಗೆ ಸ್ಫೂರ್ತಿಯುಂಟಾಗಲು ಆತನು ಸ್ವಲ್ಪವೂ ಅವಕಾಶವನ್ನು ಕೊಡಲಿಲ್ಲ."

ಲಿಂಕನ್ನನು ಇದೇ ಬಣ್ಣದ ವಿಷಯವನ್ನು ಕುರಿತು ನೀಗ್ರೋಜನಗಳೆದುರಿಗೆ ಉಪನ್ಯಾಸಮಾಡಿದನು. ಸೇರಿದ್ದ ಜನರಲ್ಲಿ ಕೆಲವರು ಹುಟ್ಟುತಾ ಸ್ವತಂತ್ರರಾದ ವರು; ಅಥವಾ ಕೆಲವು ಕಾಲದಿಂದೀಚೆಗೆ ಸ್ವತಂತ್ರರಾಗಿದ್ದವರು. ಅವರು ತಮ್ಮ ಪಂಗಡದ ಏಳಿಗೆಗಾಗಿ ಬಹಳ ಶ್ರಮಪಡುತ್ತ ಗಣನೆಗೆ ಬಂದಿದ್ದರು. ತಮ್ಮ ಜನ ಗಳಿಗೆ ತಿಳಿಯ ಹೇಳಿ ಅವರು ಹೊಸದಾದ ಪ್ರದೇಶದಲ್ಲಿ ಹೋಗಿ ವಾಸಮಾಡುವಂತೆ ಆ ಪ್ರಮುಖರು ಪ್ರಯತ್ನಿಸಬೇಕೆಂಬುದು ಲಿಂಕನ್ನನ ಅಪೇಕ್ಷೆಯಾಗಿದ್ದಿತು. ಆ ಕೆಲಸಕ್ಕೆ ಅವರು ತಕ್ಕವರಾಗಿದ್ದರು. ಸಾಮಾನ್ಯರಾದ ನೀಗ್ರೋಗಳಲ್ಲಿ ಮನ ಸ್ಸೆಲ್ಲವೂ ದಾಸ್ಯದಿಂದ ತುಂಬಿ ಇತರವಿಧವಾದ ಯೋಚನೆಗಳಿಗೆ ಸ್ಥಳವೇ ಇರಲಿಲ್ಲ. ಆದ್ದರಿಂದ ಆ ಮುಖಂಡರ ಮೂಲಕ ನೀಗ್ರೋಜನಗಳ ಮನಸ್ಸಿನ ಆ ಭಾವನೆಯನ್ನು ಬಿಡಿಸುವುದು ಅವಶ್ಯಕವಾಗಿದ್ದಿತು. ಅವರನ್ನು ಏಳಿಗೆಗೆ ತರಲು ಮೊದಲು ಅವ ರನ್ನು ದಾಸ್ಯವೃತ್ತಿಗೆ ಅವಕಾಶವಿಲ್ಲದಿರುವ ಮತ್ತೊಂದು ಪ್ರದೇಶಕ್ಕೆ ಒಯ್ಯುವುದು ಯುಕ್ತವೆಂದು ನಂಬಿ ಪ್ರೆಸಿಡೆಂಟನು ಇಷ್ಟೆಲ್ಲಾ ಸಾಹಸವನ್ನು ಮಾಡಿದನು. "ನೀಗ್ರೋಗಳಿಗೆ ಸಂಭವಿಸಿರುವ ಕಷ್ಟನಷ್ಟಗಳು ಮನುಷ್ಯನಾದವನಿಗೆ ಯೋಗ್ಯ ವಾದವುಗಳಲ್ಲ. ಆದರೆ ಅವರು ಸ್ವತಂತ್ರರಾದರೂ 'ಪೂರ್ವಜನ್ಮದ ವಾಸನೆ'ಯ ದೆಸೆಯಿಂದ ಬಿಳಿಯ ಜನರ ಸ್ಥಿತಿಗೆ ಅಷ್ಟುಬೇಗ ಬರುವುದಿಲ್ಲ. ಅಮೆರಿಕದೊಳಗೆ ವಾಸಮಾಡಿದರೆ ವರ್ಣವ್ಯತ್ಯಾಸವು ಗೋಚರಕ್ಕೆ ಬಂದು ಮೊದಲಿನಂತೆಯೇ ತೊಂದರೆಯು ಪ್ರಾರಂಭಿಸುವುದು. ಆದಕಾರಣ ಅವರನ್ನು ದೂರವಾಗಿಡಬೇಕು. ಮೈಬಣ್ಣದಲ್ಲಿ ಉತ್ತಮರಾದವರಿಗೆ ಅಹಂಕಾರವೂ ಅಸಡ್ಡೆಯೂ ಹುಟ್ಟಿ, ದ್ವೇಷವೂ ಜಗಳವೂ ಹತ್ತಿಕೊಂಡು ಉರಿಯುವುವು. ಎರಡು ಕಡೆಯವರಿಗೂ ಇದರ ದೆಸೆ ಯಿಂದ ನಷ್ಟ." ಈ ವಿಚಾರವು ಕೇಳುವವರಿಗೆ ರುಚಿಸದಿದ್ದರೂ ಕೂಡ ಇರುವ ಸ್ಥಿತಿಯು ಇಂತಹದೆಂದು ಲಿಂಕನ್ನನು ಎಲ್ಲವನ್ನೂ ವಿಶದವಾಗಿ ಮುಚ್ಚುಮರೆ ಮಾಡದೆ ಹೇಳಿದನು. ಮೊದಲಿಂದಲೂ ಅನುಮಾನಪಡುತ್ತ ಬಿಳಿಯಜನರಿಂದ ತಿರಸ್ಕಾರವೊಂದನ್ನೇ ನಿರೀಕ್ಷಿಸುತ್ತಿದ್ದ ನೀಗ್ರೋಗಳಲ್ಲಿ ಮೋಸದ ಮಾತುಗಳನ್ನಾಡ ಹತ್ತಿದರೆ ಕೆಲಸವು ಸಾಗದು ; ಆ ಜನರು ನಂಬರು. ಅವರ ಸಂದೇಹವು ಯಾವ ದೊಂದು ಮಾತಿಗೂ ನಡುವೆ ಕುಳಿತು ವಿಘ್ನಮಾಡುವುದು. ಲಿಂಕನ್ನನು ಅವರನ್ನು ತನ್ನ ಸಮಾನರೆಂತಲೇ ಭಾವಿಸಿ ಮಾತನಾಡಿದನು. ಹೀಗೆ ಭಾವಿಸುವುದು ನೀಗ್ರೋ ಗಳೊಡನೆ ಮದುವೆ ಮುನೆತನಗಳನ್ನು ನಡೆಯಿಸುವುದಕ್ಕಲ್ಲ. ಆಡಳಿತದಲ್ಲಿ ಸೇರಿಸಿ ಕೊಳ್ಳುವುದಕ್ಕೋಸ್ಕರವಲ್ಲ. ನೈತಿಕವಿಚಾರ. ನೀಗ್ರೋಗಳು ತಮಗೂ ಸ್ವಲ್ಪ ಬೆಲೆಯುಂಟೆಂದು ಇತರರು ತಿಳಿಯುವುದನ್ನು ನೋಡಿ ತೃಪ್ತಿಹೊಂದಿದರು. "ಭಗ

ವಂತನ ದೃಷ್ಟಿಯಲ್ಲಿ ಎಲ್ಲರೂ ಸಮಾನರು, ಎಲ್ಲರೂ ಬಂಧು''ಗಳೆಂಬುದು ಲಿಂಕನ್ನನ ಅಭಿಪ್ರಾಯವಾಗಿದ್ದಿತು.

ದಾಸ್ಯದ ಗತಿಯು ಮುಂದೇನಾಯಿತೆಂಬುದನ್ನು ವಿಚಾರಮಾಡಬಹುದು. 1863ನೆಯ ವರ್ಷ ನೋಡಲಾಗಿ ಮೇರಿಲೆಂಡಿನ ಮತ್ತು ಮಿಸ್ಸೌರಿಯ ಪ್ರಜೆಗಳು ಅದನ್ನು ನಿರ್ಮೂಲಮಾಡುವ ಉದ್ದೇಶದಿಂದ ಸನ್ನಾಹಮಾಡಿಕೊಳ್ಳುತ್ತಿದ್ದರು. ಪರಿಹಾರದ್ರವ್ಯವನ್ನು ಕೊಡಬೇಕೆಂಬ ಮಸೂದೆಗಳು ಸಭೆಯಲ್ಲಿ ಚರ್ಚೆಗೊಳಪಟ್ಟು ಕಾನೂನಾಗುವುದರಲ್ಲಿದ್ದುವು. ಕಾಲಕ್ರಮದಲ್ಲಲ್ಲದೆ ತತ್‌ಕ್ಷಣವೇ ದಾಸ್ಯವು ತಪ್ಪುವುದಾದರೆ ಆ ಪರಿಹಾರದ್ರವ್ಯವನ್ನು ಹೆಚ್ಚಿಸುವುದಕ್ಕೂ ಸಭಿಕರು ಸಿದ್ಧವಾಗಿದ್ದರು. ಡೆಮೊಕ್ರೆಟರು ಅಂಥವುಗಳಿಗೆ ಅಡ್ಡಿಹಾಕಿದರು. ರಿಪಬ್ಲಿಕನರಲ್ಲಿ ಅನೇಕರು ಮಸೂದೆಗಳ ವಿಚಾರದಲ್ಲಿ ಉತ್ಸಾಹವನ್ನು ತೋರಿಸಲಿಲ್ಲ. ತಪ್ಪಾದ ಕೆಲಸವನ್ನು ಮಾಡುತ್ತಿದ್ದ ಯಜಮಾನರಿಗೆ ಸ್ವತಂತ್ರರಾದ ಗುಲಾಮರ ಪರವಾಗಿ ಹಣವನ್ನೇಕೆ ಕೊಡಬೇಕೆಂದು ಅವರು ನಿರಾಕರಿಸಿದರು. ಹಣವನ್ನು ಕೊಡದೆಯೇ ದಾಸ್ಯವು ನಾಶಹೊಂದುವಾಗ ಈ ವ್ಯರ್ಥವ್ಯಯವು ಬೇಕಿಲ್ಲವೆಂದು ಲೆಕ್ಕಹಾಕಿರಬಹುದು. ಆದರೆ ಪ್ರಮುಖರಾದವರು ಮಾತ್ರ ಮಸೂದೆಗಳು ಕಾನೂನಾಗುವುದಕ್ಕಾಗಿ ಬಹಳವಾದ ಸಾಹಸವನ್ನು ಮಾಡಿದರು. ಇಲ್ಲಿಯ ಪಾಡು ಹೀಗಾದ ಮೇಲೆ ಪಶ್ಚಿಮವರ್ಜಿನಿಯ ಕೆಂಟಕಿ, ಮತ್ತು ಟೆನ್ನೆಸ್ಸೀ ಸಂಸ್ಥಾನಗಳಲ್ಲಿ ಅಂತಹ ಮಸೂದೆಗಳನ್ನೂ ಕಾನೂನುಗಳನ್ನೂ ತರುವುದು ಸಾಧ್ಯವಲ್ಲ. ಲಿಂಕನ್ನನು 1862 ರಲ್ಲಿ ತನ್ನ ಸಂದೇಶವನ್ನು ಸಭೆಯ ಅವಗಾಹನೆಗಾಗಿ ಕಳುಹಿಸಿದಮೇಲೆ ಮತ್ತೆ ಕಾಲಕ್ರಮದಲ್ಲಿ ವಿಮೋಚನೆಯಾಗಬೇಕೆಂಬ ತತ್ವವನ್ನೂ ಪರಿಹಾರದ್ರವ್ಯವನ್ನು ಕೊಡಬೇಕೆಂಬ ತತ್ವವನ್ನೂ ಒತ್ತಾಯಮಾಡಿ ಹೇಳಲಿಲ್ಲ. ಆದರೆ ದಿಲಾವೇರಿನಲ್ಲಿ ಪ್ರತಿಯೊಬ್ಬ ಗುಲಾಮನನ್ನೂ ಸರ್ಕಾರವು ಬೆಲೆಗೆ ತೆಗೆದುಕೊಂಡು ಕೆಲಸಕ್ಕೆ ಸೇರಿಸಿತು. 1864ನೆಯ ವರ್ಷವು ಕಳೆಯುವುದರೊಳಗೆ ಮೇಲೆ ಹೇಳಿರುವ ಸಂಸ್ಥಾನಗಳ ಮನಸ್ಸು ಮತ್ತೊಂದು ವಿಧವಾಗಿ ಬದಲಾಯಿಸಿತು. ಮೇರಿಲೆಂಡ್, ಕೆಂಟಕಿ, ಟೆನ್ನೆಸ್ಸೀ, ಮಿಸ್ಸೌರಿ ಈ ಸಂಸ್ಥಾನಗಳಲ್ಲಿ ಜನಗಳು ಪರಿಹಾರದ್ರವ್ಯವನ್ನು ಕೊಡದೆಯೇ ಗುಲಾಮರಿಗೆಲ್ಲಾ ವಿಮೋಚನೆಯಾಗಬೇಕೆಂದು ವಿಧಿಸಿದರು. ಈ ನಡುವೆ ಸರ್ಕಾರದ ಸೈನ್ಯವು ಲೂಸಿಯಾನವನ್ನು ಜಯಿಸಿ ಸಂಯೋಗಕ್ಕೆ ಸೇರಿಸಿಕೊಂಡಿದ್ದಿತು. ಕಾಂಗ್ರೆಸ್ ಸಭೆಯು ಅದರ ವಿಷಯದಲ್ಲಿ ಉದಾಸೀನವಾಗಿದ್ದಿತು; ಒಂದೊಂದುವೇಳೆ ಸೈನ್ಯದ ಅಧಿಪತಿಗಳು ಅಸಹನೆಯನ್ನು ತೋರಿಸುತ್ತಿದ್ದರು. ಆದರೂ ಲಿಂಕನ್ನನು ಅಲ್ಲಿನ ಜನರಿಗೆ ಧೈರ್ಯ ಹೇಳುತ್ತ ಶತ್ರುಬಾಧೆಯುಂಟಾಗದಂತೆ ಸಂರಕ್ಷಿಸುತ್ತಿದ್ದನು. ಆ ಜನರು ದಾಸ್ಯಕ್ಕೆ ಎಂದೆಂದಿಗೂ ಬಹಿಷ್ಕಾರ ಹಾಕುವಂತಹದೊಂದು ಸರ್ಕಾರವನ್ನೇರ್ಪಡಿಸಿಕೊಂಡರು. ಆ ಸಮಯದಲ್ಲಿ, ಚೆನ್ನಾಗಿ ವಿದ್ಯೆಕಲಿತು ತಿಳುವಳಿಕೆ ಹೊಂದಿರುವ ನೀಗ್ರೋಗಳಿಗೂ ಚೀಟಿಯನ್ನು ಹಾಕಲು ಅವಕಾಶವನ್ನು ಕೊಡಬೇಕೆಂದು ಲಿಂಕನ್ನನು ಸೂಚಿಸಿದನು. ಅವನು ಸತ್ತ ನಾಲ್ಕುವರುಷಗಳ ಮೇಲೆ ಶಾಸನಕ್ರಮದಲ್ಲಿ ಒಂದು ಬದಲಾವಣೆಯಾಯಿತು. ಅಮೆರಿಕದಲ್ಲಿ ಯಾವಬಗೆಯ ಪ್ರಜೆಯಾದರೂ ಆಡಳಿತದ ಸಲುವಾಗಿ

ನಡೆಯುತ್ತಿದ್ದ ಚುನಾವಣೆಯಲ್ಲಿ ಜನಗಳಿಗೆ ಚೀಟಿಯನ್ನು ಕೊಡಲು ಅಧಿಕಾರವನ್ನು ಹೊಂದಿದನು—ಜನಾಂಗವು ಬೇರೆಯೆಂದಾಗಲೀ ಬಣ್ಣವು ಬೇರೆಯೆಂದಾಗಲೀ ತಾರತಮ್ಯವಿರಲಿಲ್ಲ. ಆದರೆ ನೀಗ್ರೋಗಳಿಗೆ ಆ ಅಧಿಕಾರವನ್ನು ಕೊಡಲು ಎರಡು ಕಾರಣಗಳಿದ್ದುವು. ಒಂದು ಕಡೆಯಲ್ಲಿ ಸ್ಥಿರವಾಗಿ ನಿಲ್ಲದೆ ಅವರು ಊರಿಂದ ಊರಿಗೂ ದೇಶದಿಂದ ದೇಶಕ್ಕೂ ತಿರುಗುವುದು ತಪ್ಪಿತು; ಹಾಗೆ ತಿರುಗುತ್ತಿದ್ದರೆ, ಜೀವನದ ಪಾಡಿಗಾಗಿ ಮತ್ತೆ ದಾಸತ್ವಕ್ಕೊಪ್ಪಿ ಸೇರಿಕೊಳ್ಳುವ ಸಂಭವವಿದ್ದಿತು.—ಈಗ ಆ ಭಯವೂ ತಪ್ಪಿತು. ಕಾರಣವಾವುದಾದರೂ ಇರಲಿ, ಎರಡು ಜನಗಳಿಗೂ ಸ್ನೇಹ ವುಂಟಾಗಲು ಆಸ್ಪದವು ದೊರೆಯಿತು. ಇತರ ರಾಜ್ಯಗಳಲ್ಲಿಯೂ ಕೂಡ ಜನರು ಲಿಂಕನ್ನನ ಸಲಹೆಯನ್ನು ಒಪ್ಪಿ ಅನುಸರಿಸಿದರು. ಲಿಂಕನ್ನನು ಸತ್ತನು; ಆದರೆ ನೀಗ್ರೋವಿನ ಹಕ್ಕುಬಾಧ್ಯತೆಗಳಿಗಾಗಿ ಹೊಡೆದಾಡುವ ಉದಾರಬುದ್ಧಿಯು ಅವ ನೊಂದಿಗೆ ಸತ್ತುಹೋಯಿತೆಂದು ಹೇಳಲಾಗುವುದಿಲ್ಲ. ಆದರೂ ದಾಸ್ಯದ ವಿಷಯ ದಲ್ಲಿ ಅವನ ಹಾಗೆ ಪ್ರವರ್ತಿಸುವಂತಹ ಮಹಾತ್ಮನು ಮುಂದೆ ಅನೇಕವರುಷಗಳ ವರೆಗೆ ಕಾಣಲಿಲ್ಲ.

ಮುಂದೆ 1864ರಲ್ಲಿ ಹೊಸಬನೊಬ್ಬ ಪ್ರೆಸಿಡೆಂಟನನ್ನು ಚುನಾಯಿಸುವ ಗದ್ದಲ ಬಂದಿತು. ಜನಗಳು ಯಾರು ಅರ್ಹರೆಂಬುದಕ್ಕೆ ಕೆಲವು ಹೆಸರಿನ ಪಟ್ಟಿಗಳನ್ನು ತಿರಿವಿಹಾಕಿ, ಕೊನೆಗೆ, ಆ ಸಮಯದಲ್ಲಿ ಲಿಂಕನ್ನನೊಬ್ಬನೇ ಅರ್ಹನೆಂದು ನಿರ್ಣ ಯಿಸಿದರು. ಯುದ್ಧದ ಮಧ್ಯದಲ್ಲಿ ಮತ್ತೊಬ್ಬನನ್ನು ಪ್ರೆಸಿಡೆಂಟನ ಪದವಿಯಲ್ಲಿ ತಂದಿಡುವುದು ಯುಕ್ತವಲ್ಲ. ಜನರು ಅವನನ್ನೇ ಚುನಾಯಿಸಿದರು. ಕಾಂಗ್ರೆಸ್ ಸಭೆಯು ಅಮೆರಿಕದೊಳಗೆ ದಾಸ್ಯವು ಸರ್ವತ್ರ ನಿಷೇಧಮಾಡಲ್ಪಟ್ಟಿರುವುದೆಂದು ವಿಧಾಯಕಮಾಡಿತು. ಈ ನಿಬಂಧನೆಯುಂಟಾಗುವ ಕಾಲದಲ್ಲಿ ಲಿಂಕನ್ನನು ಎಲ್ಲರಿಗೂ ಹೇಳಿ ಎಲ್ಲರ ಕಿವಿಯನ್ನೂ ನುಲಿದು ಸಾಹಸಮಾಡಿದನು. ತನ್ನ ಸಂದೇಶದಲ್ಲಿಯೂ ಕೂಡ ಅದೇಮಾತನ್ನು ಹೇಳಿದನು; ಎಲ್ಲರನ್ನೂ ಪ್ರಾರ್ಥಿಸಿದನು. ಮಂತ್ರಿಸಭೆ ಯನ್ನು ಬಿಟ್ಟು ಮಸೂದೆಯು ಬೇಗ ಹೊರಟುಹೋದರೂ ಕಾಂಗ್ರೆಸ್ ಸಭೆಯಲ್ಲಿ ತಕ್ಕಡಿಯನ್ನೇರಿ ನಿಂತಿತು. ಯಾವ ಕಡೆಗೂ ನಿರ್ಧರವಾಗಿ ತೂಗಲಿಲ್ಲ. ಅದಕ್ಕೆ ನಿಬಂಧನೆಯೆಂಬ ಮುದ್ರೆಯನ್ನೊತ್ತಲು ಜನವು ಸಾಲದಿದ್ದಿತು. ಕೆಲವರು ಇನ್ನೂ ಅನುಮಾನಮಾಡುತ್ತಿದ್ದರು. ಅಂಥವರನ್ನು ತಮ್ಮ ಕಡೆಗೆಳೆದುಕೊಳ್ಳಲು ಎರಡು ಕಡೆಯವರೂ ಪ್ರಯತ್ನಿಸಿದರು. ಲಿಂಕನ್ನನೂ ಸುಮ್ಮನಿರಲಿಲ್ಲ. ತಪ್ಪೋ ನೆಪ್ಪೋ, ಇನ್ನೂ ಅಂಜುತ್ತ ಅಂಜುತ್ತ ನಿರ್ಣಯಮಾಡದಿದ್ದ ಆ ಜನರನ್ನು ಹೆದರಿಸಿ ಯಾದರೂ ತನ್ನವರನ್ನಾಗಿ ಮಾಡಿಕೊಳ್ಳುವುದೊಂದೇ ಉಪಾಯವೆಂದು ಅವನು ಯೋಚಿಸಿದನು. ಯೋಚಿಸಿ, ಇಬ್ಬರು ಡೆಮೊಕ್ರೆಟ್ ಸಭಿಕರನ್ನು ಆರಿಸಿಕೊಂಡನು. ದ್ರೋಹಕಾರ್ಯಗಳನ್ನು ಮಾಡುವವರೆಂದು ಅವರ ತಲೆಯಮೇಲೆ ಅಪವಾದವು ಬಿದ್ದಿದ್ದಿತು. ಆದರೆ ಸರಿಯಾದ ಪ್ರಮಾಣವಿಲ್ಲದುದರಿಂದ ಅವರು ಇನ್ನೂ ಮಾರ್ಷಿ ಯಲ್ ಲಾದ ಹಿಡಿತಕ್ಕೆ ಸಿಕ್ಕಿರಲಿಲ್ಲ. ಲಿಂಕನ್ನನು ಅವರನ್ನು ಕರೆಯಿಸಿಕೊಂಡು ಹೇಳಿದನು.—"ಮಸೂದೆಯು ಮಂಜೂರಾಗಲು ಸಂದೇಹಾಸ್ಪದವಾದ ಆ ಕೆಲವು

ಚೀಟಿಗಳು ಅವಶ್ಯಕವಾಗಿರುವುವು. ನಾನು ಸಂಯುಕ್ತಸಂಸ್ಥಾನಗಳಲ್ಲಿ ಪ್ರೆಸಿಡೆಂಟನು. ಪ್ರೆಸಿಡೆಂಟನು ಯುದ್ಧಕಾಲದಲ್ಲಿ ಅಗಾಧವಾದ ಅಧಿಕಾರವನ್ನು ಚಲಾವಣೆಗೆ ತರಬಹುದು ; ಭಯಂಕರವಾದ ಮಾರ್ಗದಲ್ಲಿ ನಡೆಯಬಹುದು. ಇದೋ ನಮ್ಮ ನಮ್ಮಲ್ಲಿ ಹೇಳುತ್ತೇನೆ ; ನೀವು ಆ ಚೀಟಿಗಳನ್ನು ನನ್ನ ಪಕ್ಷಕ್ಕೆ ಒದಗಿಸಿಕೊಡಬೇಕು. ಹೋಗಿರಿ '' ಎಂದು ಹೇಳಿದನು. ಈ ನಡತೆಯು ತಪ್ಪೋ ಸರಿಯೋ ಬೇಕಿಲ್ಲ ; ಅಂತೂ ಅವನ ಮಸೂದೆಯು 1865ರಲ್ಲಿ ನಿಬಂಧನೆಯಾಯಿತು. ಸಭೆಯಲ್ಲಿ ಮೂರರಲ್ಲಿ ಎರಡಕ್ಕಿಂತಲೂ ಹೆಚ್ಚುಭಾಗವು ಅದನ್ನು ಅನುಮೋದಿಸಿದ್ದಿತು. ಉಸಿರುಹಿಡಿದು ನಿರೀಕ್ಷಿಸುತ್ತ ಗ್ಯಾಲರಿಯಲ್ಲಿ ಕುಳಿತಿದ್ದ ಪ್ರೇಕ್ಷಕಜನಗಳು ಸಂತೋಷದಿಂದ ಕುಣಿದಾಡಿಬಿಟ್ಟರು. ಅಂತಹ ದೃಶ್ಯವನ್ನು ಮರೆಯಲಾಗುವುದಿಲ್ಲವೆಂದು ಈಗಲೂ ಕೆಲವರು ಹೇಳುತ್ತಾರೆ.

ನಮ್ಮ ಕಾಲದಲ್ಲಿ, ಇಂಗ್ಲೆಂಡಿನಲ್ಲಿಯೂ ಅಮೆರಿಕದಲ್ಲಿಯೂ ಪ್ರಜೆಗಳು ಜನಜನಕ್ಕೆ ತಾರತಮ್ಯಗಳನ್ನು ಹಚ್ಚಿ ಪಕ್ಷಪಾತಮಾಡುತ್ತಾರೆ. ಅವರಿಗೆ ಜಾತಿಯೂ ಜನಾಂಗವೂ ಮುಖ್ಯವಾಗಿರುವುವು. ತಮ್ಮಂತೆಯೇ ಮತ್ತೊಬ್ಬರೂ ಬಾಧ್ಯರೆಂಬುದನ್ನು ತಿಳಿಯುವವರು ಬಹಳ ಸ್ವಲ್ಪಮಂದಿ. ಮನುಷ್ಯನಿಗಾಗಿ ಮನುಷ್ಯನು ಕಷ್ಟಪಟ್ಟನು. ಕಷ್ಟಪಡುತ್ತಿದ್ದಾನೆ. ಅಂಥದರಲ್ಲಿ ಎರಡುಗಳಿಗೆಯ ಕಾಲದ ಆ ಅಹಂಕಾರವೇಕೆ ? ಲಿಂಕನ್ನನು ಗುಲಾಮರನ್ನು ವಿಮುಕ್ತರನ್ನಾಗಿ ಮಾಡಲು ಬಹಳ ಸಹಾಯಮಾಡಿದನು. ಆದರೆ ಆ ಕೆಲಸವು ತನ್ನಿಂದಲೇ ಆಯಿತೆಂದು ತಿಳಿಯಲಿಲ್ಲ. ಹಾಗೆ ತಿಳಿಯುವಂತಹ ಅಹಂಕಾರವೂ ಏಕೆ ? ಆ ಪ್ರಸಂಗದಲ್ಲಿ ತಾನು ಭಗವಂತನಿಂದ ನಿಯಮಿತನಾದ ಕೇವಲ ಸಾಧನವೆಂದು ಅವನು ಭಾವಿಸಿದನು. ಭಗವಂತನ ಇಷ್ಟಾಪೂರ್ತಿಗೆ ನಾವೆಲ್ಲಾ ಉಪಕರಣಗಳಲ್ಲದೆ ಮತ್ತೇನು ? ''I claim not'' ಎಂದು ಈ ಸಂದರ್ಭದಲ್ಲಿ ಲಿಂಕನ್ನನು ಹೇಳಿದನು ''to have controlled events, but confess plainly that events have controlled me'' 1864ರಲ್ಲಿ ಕೆಲವು ಬಾಲಕರು ಸೇರಿ, ಇನ್ನುಮುಂದೆ ಹುಡುಗ ಗುಲಾಮರಿರದಂತೆ ಮಾಡಬೇಕೆಂದು ಪ್ರಾರ್ಥಿಸಿ ಪ್ರೆಸಿಡೆಂಟನಿಗೆ ಅಹವಾಲನ್ನು ಬರೆದರು. ಲಿಂಕನ್ನನು ''ಅವರ ಅಂತಃಕರಣವು ಇಷ್ಟು ಉದಾರವೂ ದಯಾರ್ದ್ರವೂ ಆಗಿರುವುದನ್ನು ನೋಡಿ ನನಗೆ ಬಹಳ ಸಂತೋಷವಾಯಿತೆಂದು ಹೇಳು. ಆದರೆ ಅವರ ಪ್ರಾರ್ಥನೆಯನ್ನು ನಡೆಯಿಸಲು ನನಗೆ ಶಕ್ತಿಯಿಲ್ಲ. ಆ ಪರಮಾತ್ಮನಲ್ಲಿ ಅಂತಹ ಶಕ್ತಿಯಿರುವುದು. ಅವನು ಅವರ ಪ್ರಾರ್ಥನೆಯನ್ನು ಸಲ್ಲಿಸದಿರಲಾರನು.'' ಎಂದು ಉತ್ತರವನ್ನು ಹೇಳಿಕಳುಹಿಸಿದನು. ಅವನು ಹುಡುಗರ ಪ್ರಾರ್ಥನೆಯನ್ನು ನೆರವೇರಿಸಲು ಕೈಲಾದಷ್ಟನ್ನು ಮಾಡಿದನು. ಮನುಷ್ಯನಾಗಿ ಹುಟ್ಟಿದವನಿಗೆ ಸ್ವಾತಂತ್ರ್ಯವು ಸ್ಥಿರವಾಗುವುದಕ್ಕೋಸ್ಕರ ಲಿಂಕನ್ನನು ಬಹಳ ಹೆಣಗಿದನು. ಅವನ ಪ್ರಯತ್ನಗಳು ವಿವೇಚನೆಯಿಂದ ಮಾಡಿದಂಥವುಗಳು ; ಅವುಗಳಲ್ಲಿ ಸ್ವಾರ್ಥವಿರಲಿಲ್ಲ. ಅವನ ಗುಣವನ್ನೂ, ಅವನ ಕೆಲಸವನ್ನೂ, ಮಾಡಿದ ಲೋಕಸೇವೆಯನ್ನೂ ನೋಡುತ್ತ ನೋಡುತ್ತ ಅವುಗಳ ಮಹತ್ವವೂ ಅವುಗಳಿಗಾಗಿ ಆ ಮನುಷ್ಯನಲ್ಲಿ ನಮ್ಮ ಭಕ್ತಿಭಾವವೂ ಹೆಚ್ಚುವುವು.

---

# ೧ನೆಯ ಅಧ್ಯಾಯ

## ಯುದ್ಧ—1863ನೆಯ ವರ್ಷದ ಕೊನೆಯುವರೆಗೆ.

ಪೂರ್ವರಣರಂಗದಲ್ಲಿ ನಡೆದ ಹೊಡೆದಾಟವನ್ನು 1863ನೆಯ ಬೇಸಿಗೆಯ ವರೆಗೆ ಹೇಳಿ ನಿಲ್ಲಿಸಿದುದಾಯಿತು. ಉತ್ತರದ ಮೇಲೆ ಮತ್ತೊಂದು ತಡವೆ ದಂಡೆತ್ತಿ ಹೊರಡಲು ಲೀಯು ಸನ್ನಾಹಮಾಡುತ್ತಿದ್ದನು. ಈಗ ಪಶ್ಚಿಮ ರಣರಂಗ ದಲ್ಲಿ ಏನು ನಡೆಯಿತೆಂಬುದನ್ನು ನೋಡಬಹುದು. 1862ನೆಯ ವರ್ಷದ ಮೇ ತಿಂಗಳಿಂದ ಈಚೆಗೆ ಅಲ್ಲಿನ ವಿಚಾರಗಳನ್ನು ಹೇಳಿಲ್ಲ.

ಮೇ ತಿಂಗಳಿಂದ ವರ್ಷಾಂತದವರೆಗೂ ವಿಶೇಷವೇನೂ ನಡೆಯಲಿಲ್ಲ. ಎರಡು ಕಡೆಯ ಸೈನ್ಯಗಳಲ್ಲಿ ಯಾವುದೂ ಮುಂದೆ ನುಗ್ಗಿ ಸಾಹಸಮಾಡಲಿಲ್ಲ. ಸಾಹಸಮಾಡಲು ಉತ್ತರದಲ್ಲಿ ಅನೇಕ ತೊಂದರೆಗಳಿದ್ದುವು. ಯಾವುದನ್ನು ಮಾಡುವುದಕ್ಕೂ ತೋರುತ್ತಿರಲಿಲ್ಲ. ಲಿಂಕನ್ನನು ಬಹಳನಾಗಿ ವ್ಯಾಕುಲಹೊಂದಿ ದನು. ಪೂರ್ವರಣರಂಗದ ಮತ್ತು ಗುಲಾಮರ ಬಂಧವಿಮೋಚನೆಯ ಯೋಚನೆ ಗಳ ಜೊತೆಗೆ ಇದೂ ಸೇರಿತು.

ಹಾಲೆಕ್‌ನು ಕೋರಿಂತಿಗೆ ಬಂದನು. ಆಗ ಟೆನ್ನೆಸ್ಸೀಯ ಮಧ್ಯಭಾಗವೂ ಪಶ್ಚಿಮಭಾಗವೂ ಶತ್ರುಗಳ ಬಾಧೆಯಿಲ್ಲದೆ ಸುರಕ್ಷಿತವಾಗಿದ್ದುವು. ಅವನು ತನ್ನ ಪೂರ್ವದ ಯೋಚನೆಯ ಪ್ರಕಾರ ಟೆನ್ನೆಸ್ಸೀಯ ಪೂರ್ವಭಾಗದಲ್ಲಿದ್ದ ಸಂಯೋಗ ಭಕ್ತರಿಗೆ ಒತ್ತಾಸೆಮಾಡಲು ಅಪೇಕ್ಷಿಸಿದನು. ಅವರಿಗೆ ದಕ್ಷಿಣದ ಕಿರ್ಬಿಸ್ಮಿತ್ ಎಂಬ ದಳಪತಿಯ ಕಿರುಕುಳವು ಅತಿಯಾಗಿದ್ದಿತು. ಆ ಪ್ರಯತ್ನವನ್ನು ನಡೆಯಿ ಸುವ ಮೊದಲು ಚಟ್ಟನೂಗವೆಂಬ ಸ್ಥಳವನ್ನು ಆಕ್ರಮಿಸಿ ಉತ್ತರದ ಸೈನ್ಯವು ವ್ಯವಹರಿಸಲು ಅನುಕೂಲಿಸುವಂತೆ ಆಧಾರಪ್ರದೇಶವೊಂದನ್ನು ಕಲ್ಪಿಸಬೇಕಾಗಿ ದ್ದಿತು. ಹಾಲೆಕ್‌ನು ಚಟುವಟಿಕೆಯುಳ್ಳವನೂ ತತ್ಪರನೂ ಆದ ದಳಪತಿಯಲ್ಲ. ದಾರಿಯ ರೈಲುರಸ್ತೆಯನ್ನು ಸರಿಪಡಿಸುತ್ತ ಜೂನ್ ತಿಂಗಳೆಲ್ಲವನ್ನೂ ಕಳೆದನು. ಆದರೆ ಸದ್ಯದಲ್ಲಿಯೇ ವಾಷಿಂಗ್‌ಟನ್ನಿಗೆ ಹಿಂದಿರುಗಬೇಕಾಯಿತು. ಗ್ರಾಂಟನು ಅವನ ಸ್ಥಾನಕ್ಕೆ ಬಂದನು. ಹೋಗುವಾಗ ಹಾಲೆಕ್‌ನು, ರಕ್ಷಣೋಪಾಯವನ್ನು ಮಾತ್ರ ಮಾಡುತ್ತ, ತಾನಾಗಿಯೇ ಶತ್ರುವಿನ ಮೇಲೆ ಬೀಳದಂತಿರಬೇಕೆಂದು ಗ್ರಾಂಟನಿಗೂ ಕೋರಿಂತನ್ನು ಮುಖ್ಯಸ್ಥಾನವಾಗಿಟ್ಟುಕೊಂಡು ಚಟ್ಟನೂಗದ ಕಡೆಗೆ ನಡೆಯಬೇಕೆಂದು ಬ್ಯುಯೆಲ್‌ನಿಗೂ ಅಪ್ಪಣೆಮಾಡಿದನು. ಆದರೆ ಬ್ಯುಯೆಲ್‌ನು ಕೋರಿಂತಿಗೆ ಬದಲು ನಾಷ್‌ವಿಲ್ ಪಟ್ಟಣವನ್ನು ಮುಖ್ಯಸ್ಥಾನವನ್ನಾಗಿಟ್ಟುಕೊಳ್ಳು ವುದರಲ್ಲಿ ಅನುಕೂಲ್ಯವು ಹೆಚ್ಚೆಂದು ಪ್ರೆಸಿಡೆಂಟನಲ್ಲಿ ವಿವರಿಸಿ ಅವನಿಂದ ಅದೇ ಪ್ರಕಾರವಾಗಿ ಮಾಡಲು ಅನುಮತಿಯನ್ನು ಪಡೆದು ಹೊರಟನು. ನಡುವೆ ಎರಡಾ

ವೃತ್ತಿ ದಕ್ಷಿಣದ ಕುದುರೆಯ ದಂಡು ನುಗ್ಗಿ ಅವನಿಗೆ ಆಟಂಕವನ್ನುಂಟುಮಾಡಿತು. ಈ ಕಾರಣದಿಂದ ಅವನ ಪ್ರಯಾಣವು ತಡವಾಯಿತು. ಬ್ಯುಯೆಲ್‌ನು ಸ್ವಲ್ಪ ಮಟ್ಟಿಗೆ ಹಿಂದೆ ಬೀಳಬೇಕಾಯಿತು. ಅನತಿದೂರದಲ್ಲಿ ದಕ್ಷಿಣದ ದಂಡುಗಳಿದ್ದರೂ ಕೂಡ ಕದನವು ನಡೆಯಲಿಲ್ಲ ಆವೆರಡರ ದಳಪತಿಗಳೂ ಯೋಚಿಸಿ ಕೆಂಟಕಿಯ ಮುಖ್ಯಪಟ್ಟಣವಾದ ಫ್ರಾಂಕ್‌ಫರ್ಟನ್ನು ವಶಪಡಿಸಿಕೊಳ್ಳಲು ಹೊರಟರು.

ಸೈನ್ಯದ ಮೇಲೆ ಭಾರಹಾಕಿ ಜಯದಾಸೆಯನ್ನಿಟ್ಟುಕೊಂಡಿದ್ದ ಉತ್ತರದವರ ಉತ್ಕಂಠಿತೆಯನ್ನಂತೂ ಹೇಳಿತೀರದು. ದಕ್ಷಿಣದ ಸೈನ್ಯವು ಕೆಂಟಕಿಯೊಳಕ್ಕೆ ನುಗ್ಗಲಾಗಿ ಅದು ಎಂದಿಗಿಂತ ಹೆಚ್ಚಾಯಿತು. ಬ್ಯುಯೆಲ್‌ನು ಲೂಯಿಸ್‌ವಿಲ್‌ಗೆ ಬಂದನು. ಆ ವೇಳೆಗೆ ಆಂಟಿಯುಟಮ್ ಕದನವು ನಡೆದು ಒಂದು ವಾರವಾಗಿದ್ದಿತು. ಅದರೊಳಗೆ ಲಭಿಸಿದ ಜಯದಿಂದ ಸಂತುಷ್ಟರಾದ ಜನರು ತಮ್ಮ ಸೈನ್ಯವು ಶತ್ರುವನ್ನು ಹಿಂಬಾಲಿಸಿ ಹೋಗಿ ಅಗಾಧವಾದ ಕಾರ್ಯಗಳನ್ನೆಲ್ಲಾ ಮಾಡುವುದೆಂದು ನಿರೀಕ್ಷಿಸಿದರು. ಬ್ಯುಯಲ್‌ನು ಯಾವುದನ್ನೂ ಮಾಡಲಿಲ್ಲ. ಅವನಿಗೆ ಸಾಮರ್ಥ್ಯವು ಸಾಲದೆಂದು ಜನರು ದೂರಿದರು. ಸ್ಟಾಂಟನ್ನನು ಸೇನಾಪತಿಯನ್ನು ಅವನ ಅಶಕ್ತತೆಗಾಗಿ ಕೆಲಸದಿಂದ ತೆಗೆಯಬೇಕೆಂದು ತವಕಿಸುತ್ತಿದ್ದನು. ಆದರೆ ಲಿಂಕನ್ನನಿಗೆ, ಬ್ಯುಯೆಲ್‌ನು ಲೂಯಿಸ್‌ವಿಲ್‌ನ್ನು ತಲಪಿ ನಿಂತಕೂಡಲೇ ಮುಂದಾಗಿ ನುಗ್ಗಿ ಶತ್ರುವಿನ ಮೇಲೆ ಬೀಳುವನೆಂಬ ಭಾವನೆಯಿದ್ದಿತು. ಅವನ ದಂಡು ಶತ್ರುವಿನದಕ್ಕಿಂತ ಹೆಚ್ಚಾಗಿದ್ದಿತಲ್ಲದೆ ಚೆನ್ನಾಗಿ ತರಪೇತನ್ನೂ ಹೊಂದಿದ್ದಿತು. ಆದರೆ ಬ್ಯುಯೆಲ್‌ನು ಲೂಯಿಸ್‌ವಿಲ್ಲಿಗೆ ಹೋದಮೇಲೆ ನಿಂತುಬಿಟ್ಟನು. ಅವನು ಅಲ್ಲಿರುವಾಗ ಲಿಂಕನ್ನನಿಂದ ಅಪ್ಪಣೆ ಬಂದಿತು. ದಳಪತಿಯು ನಿವೃತ್ತನಾಗಿ ಅವನ ಕೈಕೆಳಗಿದ್ದ ಟಾಮಸ್ ಎಂಬಾತನು ನೇಮಿಸಲ್ಪಟ್ಟನು. ಆದರೆ, ಸರ್ಕಾರವು ಬ್ಯುಯೆಲ್‌ನಿಗೆ ಅನ್ಯಾಯಮಾಡುತ್ತಿರುವುದೆಂದು ವಾದಿಸಿ ಟಾಮಸ್‌ನು ಒಂದು ಕಾಗದವನ್ನು ಬರೆದು ತನಗೆ ವಹಿಸಿದ ಆಧಿಪತ್ಯವನ್ನು ತಿರಸ್ಕರಿಸಿದನು. ಲಿಂಕನ್ನನು ಇರುವ ವಿಷಯವನ್ನು ತಿಳಿದು, ತನ್ನ ಅಪ್ಪಣೆಯನ್ನು ರದ್ದುಮಾಡಿ ಬ್ಯುಯೆಲ್‌ನನ್ನು ಆಧಿಪತ್ಯದಲ್ಲಿ ನಿಲ್ಲಿಸಿದನು.

ಅಕ್ಟೋಬರ್ ೮ನೆಯ ತಾರೀಖಿನ ದಿನ ಒಂದು ಯುದ್ಧವು ನಡೆಯಿತು. ಬ್ಯುಯೆಲ್‌ನ ಸೈನ್ಯವು ಎರಡರಷ್ಟಿದ್ದರೂ ಅದನ್ನು ಸರಿಯಾಗಿ ಉಪಯೋಗಿಸಲಾಗಲಿಲ್ಲ. ಅದಕ್ಕೆ ಕಾರಣವಿದ್ದಿತು. ಅವನ ಕೈಕೆಳಗಿನ ಸರದಾರನೊಬ್ಬನು ಯುದ್ಧವನ್ನಾರಂಭಿಸಿ ತಾನು ಮಾಡಿದುದನ್ನು ಅಧಿಪತಿಗೆ ತಿಳಿಸಲೇ ಇಲ್ಲ. ಯುದ್ಧವು ಹರಡಿ ಬ್ಯುಯೆಲ್‌ನಿದ್ದ ತಾವಿಗೂ ಬಂದಿತು. ಸುಳಿವೇ ಇಲ್ಲದಿರುವಾಗ ಶತ್ರುವು ಬಂದು ಎದುರಾದುದನ್ನು ನೋಡಿ ಅವನ ಸೈನಿಕರು ಸ್ವಲ್ಪ ಕದಲಿದರು. ನಷ್ಟವು ಬಹಳವಾಯಿತು. ಬ್ಯುಯೆಲ್‌ನ ಮೇಲೆ ದೂರೂ ಅಸಮಾಧಾನವೂ ಹೆಚ್ಚಾಯಿತು. ಜನರು ವಿಶೇಷವಾಗಿ ಕಳೆಗುಂದಿದರು. ಯುದ್ಧವು ಮುಗಿದ ಮೇಲೆ ದಕ್ಷಿಣದ ದಳಪತಿಯು ಸ್ವಲ್ಪ ಹಿಂದಕ್ಕೆ ಹೋಗಿ ಕಿರ್ಬಿಸ್ಮಿತ್‌ನನ್ನು ಸೇರಿಕೊಂಡನು. ಆದರೆ ಮುಂದೆ ಸ್ವಲ್ಪ ದಿನಗಳ ಮೇಲೆ ಜನರಲ್ ಬ್ರಾಗನು ಕೆಂಟಕಿಯನ್ನು ಬಿಟ್ಟು

ಹೊರಟುಹೋಗಲು ನಿಶ್ಚಯಿಸಿದನು. ಅವನ ನಿರೀಕ್ಷಣೆಯ ಪ್ರಕಾರ ಜನರು ಬಂದು ದಕ್ಷಿಣದ ಸೈನ್ಯವನ್ನು ಸೇರಿಕೊಳ್ಳಲಿಲ್ಲ. ಪಲಾಯನದ ಉದ್ದೇಶವನ್ನು ತಿಳಿದು ಬ್ಯುಯೆಲ್ಲನು ಸ್ವಲ್ಪ ದೂರದವರೆಗೆ ಹಿಂಬಾಲಿಸಿದನು. ಆದರೆ ಮುಂದೆ ರಸ್ತೆಗಳು ಕೆಟ್ಟುಹೋಗಿ ದೊಡ್ಡದೊಡ್ಡ ಸೈನ್ಯಗಳು ಹೋಗುವಹಾಗಿರಲಿಲ್ಲ. ಅವನು, ನಾಷ್ವಿಲ್ ಪಟ್ಟಣವನ್ನು ಸೇರಿ, ಅಲ್ಲಿಂದ ಚಟ್ಟನೂಗದ ಕಡೆ ಹೊರಡಬೇಕೆಂದು ನಿಷ್ಕರ್ಷೆಮಾಡಿದನು. ಆದರೆ, ತತ್‌ಕ್ಷಣವೇ ಚಟ್ಟನೂಗದ ಕಡೆಗೆ ನಡೆಯಬೇಕೆಂದು ವಾಷಿಂಗ್ಟನ್ನಿಂದ ಅಪ್ಪಣೆ ಬಂದಿತು. ಬ್ಯುಯೆಲ್ಲನು ಅದನ್ನುಮಾತ್ರ ಖಂಡಿತವಾಗಿ ಮಾಡಲಾಗುವುದಿಲ್ಲವೆಂದು ಹೇಳಿ, ಸರ್ಕಾರಕ್ಕೆ ಬೇರೊಬ್ಬ ಸೇನಾಪತಿಯನ್ನು ಗೊತ್ತುಮಾಡಬೇಕೆಂಬ ಇಷ್ಟವಿದ್ದ ಪಕ್ಷದಲ್ಲಿ ಇದು ಸರಿಯಾದ ಕಾಲವೆಂದು ತಿಳಿಸಿದನು. ಅಕ್ಟೋಬರ್ ತಿಂಗಳ ಕೊನೆಯಲ್ಲಿ ಅವನು ನಿವೃತ್ತನಾದನು. ಈ ಮಧ್ಯದಲ್ಲಿ, ಗ್ರಾಂಟನನ್ನು ತಡೆಯುವುದಕ್ಕೆಂದು ಅಲ್ಲಿಯೇ ಉಳಿದಿದ್ದ ದಕ್ಷಿಣದ ಸೈನ್ಯಗಳು ಅವನೊಡನೆ ಎರಡಾವೃತ್ತಿ ಯುದ್ಧಮಾಡಿ ಎರಡಾವೃತ್ತಿಯೂ ಸೋತುವು. ಉತ್ತರದ ಕಡೆ ರೋಸ್‌ಕ್ರ್ಯಾಸ್ (Rosecrans) ಎಂಬಾತನು ಗ್ರಾಂಟನ ಕೈಕೆಳಗೆ ದಂಡಿನ ಮೇಲ್ವಿಚಾರಣೆಯನ್ನು ವಹಿಸಿದ್ದನು. ಆತನು ಏಳಿಗೆಗೆ ಬರತಕ್ಕವನಿರುವನೆಂದು ಎಲ್ಲರೂ ಮಾತನಾಡಿಕೊಳ್ಳುತ್ತಿದ್ದರು. ಸರ್ಕಾರವು ಅವನನ್ನು ಬ್ಯುಯೆಲ್ಲನ ಸ್ಥಾನಕ್ಕೆ ನೇಮಿಸಿತು. ರೋಸ್‌ಕ್ರ್ಯಾಸನು ನಾಷ್ವಿಲ್ಲಿಗೆ ಹೋದನು. ಆದರೆ, ಆಹಾರಪದಾರ್ಥವನ್ನು ಸರಿಯಾಗಿ ಶೇಖರಿಸಿ, ರೈಲುರಸ್ತೆಯು ನಾಶವಾದರೂ ತನಗೆ ತೊಂದರೆಯಾಗದಂತೆ ಮಾಡಿಕೊಳ್ಳುವವರೆಗೂ ತಾನು ಮುಂದಕ್ಕೆ ಹೆಜ್ಜೆಯಿಡುವುದಿಲ್ಲವೆಂದು ಆತನು ಬ್ಯುಯೆಲ್ಲನಂತೆ ಖಂಡಿತವಾಗಿ ಹೇಳಿಬಿಟ್ಟನು. ಕೊನೆಗೆ ಸೈನ್ಯದೊಡನೆ ಹೊರಟು ಮುರ್‌ಫ್ರೀಸ್‌ಬರೊ ಎಂಬ ಸ್ಥಳಕ್ಕೆ ಬಂದನು. ಇಲ್ಲಿ ಡಿಸೆಂಬರ್‌ನ ಕೊನೆಯಲ್ಲಿ ಬ್ರಾಗನು ಅವನನ್ನು ಎದುರಿಸಿ ಯುದ್ಧಮಾಡಿದನು. ಮೊದಲು ಸ್ವಲ್ಪ ಜಯವಾಯಿತು. ಆದರೂ ಅದರಿಂದ ಪ್ರಯೋಜನ ಹೊಂದಿ ಅವನು ಇನ್ನಷ್ಟು ಜಯವನ್ನು ಪಡೆಯಲು ಉತ್ತರದ ಸೇನಾಪತಿಗಳು ಅವಕಾಶವನ್ನು ಕೊಡಲಿಲ್ಲ. ಬ್ರಾಗನ ಕಡೆ ನಷ್ಟವು ವಿಶೇಷವಾಯಿತು. ರೋಸ್‌ಕ್ರ್ಯಾಸನು ಹಿಂಜರಿಯಬಹುದೆಂದೆಣಿಸಿ ಅವನು ಕೆಲವು ದಿನಗಳವರೆಗೆ ಅಲ್ಲಿ ಕಾದನು. ಆದರೆ ಆಮೇಲೆ ತಾನೇ ಹಿಂಜರಿದು ಹೋಗಬೇಕಾಯಿತು. ಆ ಯುದ್ಧದಲ್ಲಿ ಉತ್ತರವೇ ಜಯಹೊಂದಿತೆಂದು ಹೇಳಬಹುದು. ಜನರ ಮನಸ್ಸು ಸ್ವಲ್ಪ ಸ್ವಸ್ಥವಾಯಿತು. ಆದರೆ ಪ್ರಯೋಜನವು ಹೆಚ್ಚಾಗಲಿಲ್ಲ. ರೋಸ್‌ಕ್ರ್ಯಾಸನು ತನ್ನ ಹೆಜ್ಜೆಯನ್ನು ಕದಲಿಸದೆ ಅಲ್ಲಿ ಆರು ತಿಂಗಳವರೆಗೆ ನಿಂತುಬಿಟ್ಟನು. ಉತ್ತರದ ಸೈನ್ಯವು ಮೊದಲಿಗಿಂತ ಹೆಚ್ಚಾಗಿ ಟೆನ್ನೆಸ್ಸೀಯನ್ನು ಸ್ವಾಧೀನಮಾಡಿಕೊಂಡಂತಾಯಿತು. ಆದರೆ ಇತರ ಸ್ಥಳಗಳೊಡನೆ ಸಂಬಂಧದಲ್ಲಿರಲಾಗಲಿಲ್ಲ. ಅದು ಬಹು ದೂರವಾಗಿದ್ದಿತು. ಅಲ್ಲದೆ ದಕ್ಷಿಣದ ಸೈನ್ಯದಲ್ಲಿ ಪ್ರಬಲವಾಗಿದ್ದ ಕುದುರೆಗಳು ನುಗ್ಗಿಬಂದು ಇದ್ದಬದ್ದ ಸಂಸರ್ಗವನ್ನು ತಪ್ಪಿಸಿಬಿಡುತ್ತಿದ್ದುವು. ಆದುದರಿಂದ ಮುಂದೆ ಹೋಗಲಾಗಲಿಲ್ಲ. ಆಹಾರಪದಾರ್ಥಗಳನ್ನು ಆ ಪ್ರದೇಶದ ನಿವಾಸಿಗಳಿಂದ ಪಡೆಯಬಹುದೆಂದು ಲಿಂಕನ್ನನು ತಿಳಿಸಿ

ದನು. ಅದು ಸಾಧ್ಯವಲ್ಲವೆಂದು ಬ್ಯುಯೆಲ್ಲನೂ ರೋಸ್‌ಕ್ರಾಸನೂ ನಿರಾಕರಿಸಿ ಬಿಟ್ಟರು. ಇತರ ಸೈನ್ಯಾಧಿಪತಿಗಳಿಗೂ ಕೂಡ ಆ ಕಾಲದಲ್ಲಿ ಹಾಗೆ ತೋರಿತು.

ಹಾಲೆಕ್‌ನು ಕೋರಿಂತಿಗೆ ಹೋದ ಕ್ಷಣವೇ ಚಟ್ಟನೂಗವು ವಶವಾಗುವುದೆಂದು ಉತ್ತರವು ಭಾವಿಸಿದ್ದಿತು. ಬ್ಯುಯೆಲ್ಲನು ಆ ಕೆಲಸವನ್ನು ಮಾಡಲಿಲ್ಲವೆಂದು ಅವನನ್ನು ಕೆಲಸದಿಂದ ತೆಗೆದುದೂ ಆಯಿತು. ಆದರೂ ಒಂದು ವರುಷದ ವರೆಗೆ ಆ ಸ್ಥಳವು ದಕ್ಷಿಣದವರ ಸ್ವಾಧೀನದಲ್ಲಿಯೇ ಇದ್ದಿತು. ಜನರ ಅಸಹನೆಯಂತೂ ಮಿತಿಮೀರುತ್ತಿದ್ದಿತು. ಯುದ್ಧದಲ್ಲಿ ಜಯವನ್ನು ಪಡೆದು ಶತ್ರುವಿಗೆ ನಷ್ಟವನ್ನು ಹೊರಿಸದಿದ್ದ ದಳಪತಿಯು ಕೆಲಸಕ್ಕೆ ಬಾರದವನೆಂದೂ ಅವನ ವಿಷಯದಲ್ಲಿ ಎಳ್ಳಷ್ಟೂ ಮರುಕವನ್ನು ತೋರಬಾರದೆಂದೂ ಅವರು ಕೂಗಿದರು. ಆದರೆ ಲಿಂಕನ್ನನು ಅಷ್ಟುದೂರ ಹೋಗಲಿಲ್ಲ. ಅಂಥವನನ್ನು ಕೆಲಸದಿಂದ ತೆಗೆದರೆ ಸಾಕೆಂದು ಸುಮ್ಮನಿದ್ದನು. ಅವನ ಮಾತಿನಂತೆ ಹಾಲೆಕ್‌ನು ಪಶ್ಚಿಮಭಾಗದಲ್ಲಿದ್ದ ದಳಪತಿಗಳಿಗೆ ಕಾಗದವನ್ನು ಬರೆದು, ಯುದ್ಧಗಳಲ್ಲಿ ಗೆಲ್ಲುವವರಿಗೆ ಉಚ್ಛ್ರಾಯ ಸ್ಥಿತಿಗೆ ಬರಲು ಅವಕಾಶವು ದೊರೆಯುವುದೆಂದೂ, ಹಾಗೆ ಪ್ರಶಸ್ತವಾದ ಕಾರ್ಯಗಳನ್ನೂ ಸಾಹಸವನ್ನೂ ಮಾಡದಿದ್ದವರು ಮೇಲ್ಪಟ್ಟ ಅಧಿಕಾರಿಗಳಾದರೂ ಹಿಂದೆ ಬೀಳುವರೆಂದೂ ಸೂಚಿಸಿದನು. ಮುಂದೆ ಈ ವಿಧವಾದ ಕಾಗದವು ಜನರಲ್ ಗ್ರಾಂಟನಿಗೂ ರೋಸ್‌ಕ್ರಾಸನಿಗೂ ಒಂದೊಂದು ಬಂದಿತು. ಕೊನೆಗೆ ಬ್ಯುಯೆಲ್ಲನ ಸ್ಥಾನಕ್ಕೆ ರೋಸ್‌ಕ್ರಾಸನು ಬಂದನು. ಬ್ಯುಯೆಲ್ಲನನ್ನು ತೆಗೆಯಲು ಮತ್ತೊಂದು ಕಾರಣವು ಒದಗಿತು. ಇಂಡಿಯಾನ ಒಹಿಯೋ ಮತ್ತು ಇಲ್ಲಿನ್ವಾದ ಗೌರ್ನರರು ಅವನ ಮೇಲೆ ವಿಶೇಷವಾದ ದೂರನ್ನು ತಂದರು. ಆ ದೂರನ್ನು ಅಲ್ಪವೆಂದು ಕಡೆಗಾಣಲಾಗಲಿಲ್ಲ. ಲಿಂಕನ್ನನಿಗೆ ಪಶ್ಚಿಮದ ದಳಪತಿಗಳಲ್ಲಿ ಹೆಚ್ಚಾದ ಪರಿಚಯವಿರಲಿಲ್ಲ. ಆದಕಾರಣ ಅವರ ನಡತೆಗಳನ್ನು ಸ್ವಂತವಾಗಿ ತಿಳಿಯಲು ಅವಕಾಶವಿಲ್ಲದೆ ಅವನು ಪರೋಕ್ಷವಾಗಿ ವಿಚಾರಿಸಿಕೊಳ್ಳುತ್ತಿದ್ದನು. ದರ್ಶನಾಪೇಕ್ಷಿಗಳಾಗಿ ಬಂದವರೊಡನೆ ಮಾತನಾಡುತ್ತ ಮಧ್ಯದಲ್ಲಿ ಆ ದಳಪತಿಗಳ ಸಂಬಂಧವಾಗಿ ಪ್ರಶ್ನೆಗಳನ್ನು ಹಾಕಿ ಸಮಾಚಾರವನ್ನು ತಿಳಿಯುತ್ತಿದ್ದನು. ಆದರೆ ತನ್ನ ಉದ್ದೇಶವನ್ನು ಅವರಿಗೆ ತಿಳಿಸುತ್ತಿರಲಿಲ್ಲ. ಯುದ್ಧವನ್ನು ನಡೆಯಿಸತಕ್ಕವರ ಸಾಮರ್ಥ್ಯವನ್ನೂ ನಡತೆಯನ್ನೂ ತಿಳಿದುಕೊಳ್ಳುವುದು ಮೇಲ್ಪಟ್ಟವನಿಗೆ ಮುಖ್ಯವಾದುದು. ಆ ತಿಳುವಳಿಕೆಯಿಂದ ಅನೇಕವೇಳೆ ಕಾರ್ಯಸಾಧನೆಯಾಗುವುದು. ಪ್ರೆಸಿಡೆಂಟನು ಆ ಮಾರ್ಗದಲ್ಲಿ ಬಹಳ ಪ್ರಯತ್ನಮಾಡಿದನು. ಆದಕಾರಣ ಯುದ್ಧಾರಂಭವಲ್ಲಿ, ಅನುಕೂಲರಾದ ದಳಪತಿಗಳನ್ನು ಹುಡುಕಿ ನೇಮಿಸುವುದು ದೊಡ್ಡದೊಂದು ಕಷ್ಟವಾಗಿ ಪರಿಣಮಿಸಿತು. ಈ ಭಾಗದಲ್ಲಿ ಯಾವಾಗಲೂ ಬಹಳ ದೃಷ್ಟಿಯಿಟ್ಟಿರುತ್ತ, ಸಮರ್ಥರೆಂದು ಕಂಡುಬಂದವರಿಗೆ ಅವನು ಬಹಳ ಸಹಾಯವನ್ನೂ ಉತ್ತೇಜನವನ್ನೂ ಒದಗಿಸುತ್ತಿದ್ದನು. ಆದರೆ, ಅವನು ಇಷ್ಟೊಂದು ಶ್ರದ್ಧೆಯನ್ನು ವಹಿಸಿ ಯುದ್ಧದ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದರೂ, ಪ್ರೆಸಿಡೆಂಟನಲ್ಲಿ ಧೈರ್ಯವೂ ಸಾಹಸವೂ ಸಾಲದೆಂಬ ಜನಗಳ ಅಪವಾದವು ತಪ್ಪಲಿಲ್ಲ. ತಮ್ಮ ಆಶೆಯನ್ನು ನಿರಾಶೆಮಾಡುವ

ದಳಪತಿಯನ್ನು ತತ್‌ಕ್ಷಣವೇ ಕೆಲಸದಿಂದ ತೆಗೆಯಬೇಕೆಂದು ಅವರು ಅವನಲ್ಲಿ ಅತಿಯಾಗಿ ಒತ್ತಾಯಮಾಡುತ್ತಿದ್ದರು. ಜಯಶಾಲಿಯಾದ ದಳಪತಿಯನ್ನು ಪತ್ತೆ ಮಾಡಿ ನೇಮಿಸದಿದ್ದುದಕ್ಕಾಗಿ ಪತ್ರಿಕೆಗಳೂ ಕಾಗದಪತ್ರಗಳೂ ವಿಧವಿಧವಾಗಿ ಅವನ ಮೇಲೆ ಆಕ್ಷೇಪಣೆಯನ್ನು ಹೇರಿದುವು. ಒಬ್ಬ ದಳಪತಿಯು ಒಂದಾವೃತ್ತಿ ನಿರಾಶೆಯನ್ನುಂಟುಮಾಡಿದರೂ ಮತ್ತೊಂದು ಬಾರಿ ಅವಕಾಶವನ್ನು ಕೊಟ್ಟು ನೋಡೋಣವೆಂದು ಮನಸ್ಸಿದ್ದರೂ ಕೂಡ ಪ್ರೆಸಿಡೆಂಟನು ಜನರು ತನ್ನಲ್ಲಿಟ್ಟಿರುವ ನಂಬಿಕೆಯನ್ನು ಕೆಡಿಸಬಾರದೆಂದು ಭಾವಿಸಿ ತನ್ನ ತಾಳ್ಮೆಯನ್ನೊತ್ತರಿಸಿ, ಒಂದಾವೃತ್ತಿ ಪ್ರಯತ್ನದಲ್ಲಿ ನಿರರ್ಥಕನಾದಾತನನ್ನು ಕೆಲಸದಿಂದ ತೆಗೆದುಹಾಕಿದನು. ಈ ವ್ಯವಹಾರದಿಂದ ಇತರರಿಗೆ ಸಾಹಸಮಾಡಲು ನ್ಯಾಯವಾದ ಅವಕಾಶವು ದೊರೆಯಿತು. ಅವನು ಮಾಡಿದುದು ಯುಕ್ತವಾಗಿದ್ದಿತು.

ಲಿಂಕನ್ನನ ಮೇಲೆ ಜನಗಳ ಆಕ್ಷೇಪಣೆಯು ವಿಶೇಷವಾಗಿದ್ದುದರಿಂದ ಇಷ್ಟನ್ನು ಹೇಳಬೇಕಾಯಿತು. ಇನ್ನು ಪಶ್ಚಿಮದ ವಿದ್ಯಮಾನಗಳನ್ನು ನೋಡಬಹುದು. ಅವುಗಳೊಳಗೆ ದಳಪತಿಯೊಬ್ಬನ ವೃತ್ತಾಂತವು ಬೆರೆದುಕೊಳ್ಳುವುದು. ಆತನು ಹಿಂದೆ ತೀರ ಅಪಯಶಸ್ಸನ್ನು ಹೊಂದಿದ್ದನು. ಆದರೂ ಲಿಂಕನ್ನನು ಕೊನೆಯವರೆಗೂ ಆತನಿಗೆ ಬೆಂಬಲವಾಗಿ ನಿಂತನು. ಅಪಯಶಸ್ಸು ಜನರಲ್ ಗ್ರಾಂಟನಿಗೆ ಎಲ್ಲಿ ಬಂದಿತೆಂಬುದನ್ನು ಮೇಲೆ ಹೇಳಿದೆ. ಲಿಂಕನ್ನನು ಬೆಂಬಲವಾಗಿ ನಿಂತುದೇ ಸರಿಯಾದ ಕೆಲಸವಾಯಿತು. ಅವನು ಇತರ ದಳಪತಿಗಳಲ್ಲಿ ಯಾವ ಯಾವ ಗುಣಗಳನ್ನು ಅಪೇಕ್ಷಿಸಿ ಹುಡುಕುತ್ತಿದ್ದನೋ ಅವೆಲ್ಲವೂ ಜನರಲ್ ಗ್ರಾಂಟನಲ್ಲಿದ್ದುವು. ಆದರೆ ಅವನು ಕೆಲಸಕ್ಕೆ ಬಾರದ ಮನುಷ್ಯನೆಂದು ಮೊದಲು ಹುಟ್ಟಿದ ಭಾವನೆಯು ಮಾತ್ರ ಪ್ರಜೆಗಳ ಮನಸ್ಸಿನಲ್ಲಿ ಸ್ಥಿರವಾಗಿ ನಿಂತಿತು. ಗ್ರಾಂಟನು ಮುಂದೆ ಪ್ರೆಸಿಡೆಂಟನಾದನು; ಯೂರೋಪಿಗೆ ಹೋಗಿ ಸಂಚರಿಸಿ ಬಂದನು; ಸ್ನೇಹಿತರಿಗೆ ಅಚ್ಚುಮೆಚ್ಚಾಗಿದ್ದನು. ಆದರೂ ಆ ಭಾವನೆಯು ಅಳಿಸಿಹೋಗಲಿಲ್ಲ. ಹುಡುಗನಾಗಿದ್ದಾಗ ಗ್ರಾಂಟನು ಬಹಳ ನಾಚಿಕೆಗೊಳ್ಳುತ್ತಿದ್ದನು. ನಡೆನುಡಿಗಳಲ್ಲಿ ನಯವಿರಲಿಲ್ಲ. ದೇಹದಲ್ಲಿ ದಾರ್ಢ್ಯವಿರಲಿಲ್ಲ. ಎರಡಾವೃತ್ತಿ ಸೈನ್ಯಕ್ಕೆ ಸೇರಿದವನು ಎರಡಾವೃತ್ತಿಯೂ ಕೆಲಸವನ್ನು ಬಿಟ್ಟು ಬಂದನು. ಇತರ ಹವ್ಯಾಸಗಳಲ್ಲಿ ಕೈಯಿಟ್ಟು ನೋಡಿದನು. ಫಲವಿರಲಿಲ್ಲ. ಅಷ್ಟರೊಳಗೆ ಅಂತಃಕಲಹವು ಪ್ರಾಪ್ತವಾಯಿತು. ಸೈನಿಕನಾಗಿ ಸೇರಿಕೊಂಡು ಮುಂದಕ್ಕೆ ಬಂದನು. ಅವನ ಮನಸ್ಸು ಬಹಳ ದಯಾರ್ದ್ರವಾದುದು. ಕೋಪವು ಬರುತ್ತಲೇ ಇರಲಿಲ್ಲ. ಪ್ರಾಣಿಗಳಿಗೆ ಹಿಂಸೆಯನ್ನುಂಟುಮಾಡಿದಾಗಲೂ ತನ್ನ ಕೈಕೆಳಗಿನವನು ತನ್ನಾಜ್ಞೆಯನ್ನು ಸರಿಯಾಗಿ ನೆರವೇರಿಸದೆ ತೊಂದರೆಯನ್ನುಂಟುಮಾಡಿದಾಗಲೂ ಅವನ ತಾಳ್ಮೆಯೂ ಪ್ರಸನ್ನತೆಯೂ ನಷ್ಟವಾಗುತ್ತಿದ್ದುವು. ಕೆಲಸವೆಷ್ಟಿದ್ದರೂ ಎಂತಹದಾಗಿದ್ದರೂ ಮನಸ್ಸಿಗೆ ಚಿಂತೆಯನ್ನು ಹಚ್ಚಿಕೊಂಡು ಕಳವಳಪಡುತ್ತಿರಲಿಲ್ಲ. ಕರುಣೆಯು ಅವನ ಮುಖ್ಯ ಗುಣವಾಗಿದ್ದಿತು. ಅತ್ಯಂತ ಕೀಳಾದ ನೌಕರನ ಕ್ಷೇಮವನ್ನಾದರೂ ವಿಚಾರಿಸಿಕೊಳ್ಳುತ್ತಿದ್ದನು. ಅಂಥವನು ಯುದ್ಧದಲ್ಲಿ ತೊಡಗಲು ತಕ್ಕವನಲ್ಲ.

ಆದರೂ ಗ್ರಾಂಟನು ಯುದ್ಧಕಾರ್ಯದಲ್ಲಿ ತೊಡಗಿದನು. ಯುದ್ಧದಲ್ಲಿ ಜಯವನ್ನು ಪಡೆದುಕೊಡುವುದು ಅವನ ಕೆಲಸವಾಯಿತು.

ಸೇನಾಪತಿಯ ಧರ್ಮಗಳು ಗ್ರಾಂಟನಲ್ಲಿ ಸಂಪೂರ್ಣವಾಗಿದ್ದುವು. ಲಿಂಕನ್ನನ ಅಪೇಕ್ಷೆಯು ನೆರವೇರಿತು. ಎಷ್ಟೆಷ್ಟು ನಷ್ಟವಾದರೂ ಲೆಕ್ಕವಿಡದೆ ಯುದ್ಧವನ್ನು ಕೊನೆಗಾಣಿಸಬೇಕೆಂಬುದು ಗ್ರಾಂಟನ ಸಂಕಲ್ಪವಾಗಿದ್ದಿತು. ತನಗುಂಟಾಗುವ ದೇಹಾಪಾಯವನ್ನು ಅವನು ಮುಖ್ಯವಾಗೆಣಿಸುತ್ತಿರಲಿಲ್ಲ. ಯುದ್ಧದಲ್ಲಿ ನಷ್ಟವುಂಟಾದರೂ ಸೋಲುಂಟಾದರೂ, ಸೋತು ಓಡಬೇಕಾಗಿ ಬಂದರೂ ಅವನ ಮನಸ್ಸು ಸ್ಥಿರವಾಗಿರುತ್ತಿದ್ದಿತು—ಕದಲುತ್ತಿರಲಿಲ್ಲ. ಶತ್ರುವು ಹೀಗೆ ಮಾಡುತ್ತಿರಬಹುದೆಂದೂ ಹಾಗೆ ಮಾಡುತ್ತಿರಬಹುದೆಂದೂ ಅವನು ದೃಶ್ಯಗಳನ್ನು ಕಲ್ಪಿಸಿಕೊಂಡು ಕಾಲವನ್ನು ಕಳೆಯುತ್ತಿರಲಿಲ್ಲ. ಪ್ರತಿಯಾಗಿ ತನಗೆ ಶತ್ರುವಿನಲ್ಲಿ ಎಷ್ಟು ಹೆದರಿಕೆಯಿರುವುದೋ ತನ್ನಲ್ಲಿ ಶತ್ರುವಿಗೂ ಅಷ್ಟೇ ಹೆದರಿಕೆಯುಂಟಾಗಿರುವುದೆಂದು ಮನಸ್ಸಿನಲ್ಲಿ ಭಾವಿಸಿ ದೃಢಪಡಿಸಿಕೊಳ್ಳುತ್ತಿದ್ದನು. ಸಮಯದಲ್ಲಿ ಮನಸ್ಸು ಸ್ಥಿರವಾಗಿರಬೇಕು. ನಷ್ಟನಾಗಿದ್ದಪಕ್ಷದಲ್ಲಿ ಸ್ಥೈರ್ಯವು ನಷ್ಟವನ್ನು ಹೆಚ್ಚಾಗಗೊಡುವುದಿಲ್ಲ ; ಪ್ರಯೋಜನವಾಗಿದ್ದಪಕ್ಷದಲ್ಲಿ ಪ್ರಯೋಜನವನ್ನು ದ್ವಿಗುಣಮಾಡುವುದು. ಈ ಗುಣವಿದ್ದುದರಿಂದಲೇ ಮುಂದೆ ಕದನಗಳಲ್ಲಿ ನಷ್ಟವುಂಟಾದರೂ ಕೂಡ ಗ್ರಾಂಟನು ಉಳಿದುಕೊಂಡನು. ಗ್ರಾಂಟನು ಸೈನ್ಯಾಧಿಪತ್ಯವೊಂದೇ ಅಲ್ಲ, ಆಡಳಿತದ ವಿಚಾರಗಳನ್ನೂ ತಿಳಿದವನು. ತನ್ನನ್ನು ಅಧಿಕಾರದಲ್ಲಿ ನೇಮಿಸಿದ ಸರ್ಕಾರದ ಉದ್ದೇಶಗಳೇನೆಂಬುದನ್ನು ಸ್ಪಷ್ಟಪಡಿಸಿಕೊಂಡು ಅವುಗಳನ್ನು ಸಾರ್ಥಕಮಾಡಲು ತೊಡಗಿದನು. ಯುದ್ಧದಲ್ಲಿ ಎರಡು ಪರಿಣಾಮಗಳು ತೋರಿಬಂದುವು—ದಕ್ಷಿಣವು ನಿಶ್ಶೇಷನಾಗಿ ಅಡಗುವುದು, ಅಥವಾ ಉತ್ತರವು—ಸಂಯೋಗವು—ಸಂಪೂರ್ಣವಾಗಿ ಸೋತು ನಷ್ಟನಾಗುವುದು. ಗ್ರಾಂಟನು ವಿಚಾರಮಾಡಿ ನೋಡಿದನು. ಉತ್ತರದಲ್ಲಿ ಉಪಪತ್ತಿಯು ಅಕ್ಷಯವಾಗಿದ್ದಿತು : ಜನರ ಉತ್ಸಾಹವೂ ಅಕ್ಷಯವಾಗಿದ್ದಿತು. ಆದಕಾರಣ ಯುದ್ಧದಲ್ಲಿ ಔದಾಸೀನ್ಯವನ್ನು ತೋರಿಸಿ ಉತ್ತರಕ್ಕೆ ಸೋಲನ್ನು ತರುವುದು ಯಾವಪ್ರಕಾರದಿಂದಲೂ ಧರ್ಮವಾಗಿರಲಿಲ್ಲ. ದಕ್ಷಿಣದಲ್ಲಿ ಸ್ಥಿತಿಯು ಇದಕ್ಕೆ ವ್ಯತ್ಯಸ್ತವಾಗಿದ್ದಿತು. ಇಷ್ಟನ್ನೆಲ್ಲಾ ಯೋಚಿಸುವವನು ಉತ್ತರಕ್ಕೆ ಕೆಡಕನ್ನು ತರಲಾರನು ; ಅಥವಾ ಉಂಟಾಗಗೊಡಿಸನು. ಕೊನೆಯವರೆಗೂ ಗ್ರಾಂಟನು ಜಯಾಪಜಯಗಳ ಪರಿಣಾಮವನ್ನು ಗುಣಿಸಿ ನೋಡಿ ವ್ಯವಹರಿಸಿದನು.

ಜನರಲ್ ಲೀಗೂ '' ಸ್ಟೋನ್‌ವಾಲ್ '' ಜಾಕ್ಸನ್ನನಿಗೂ ಎಂತಹ ಅನ್ಯೋನ್ಯವಿದ್ದಿತೆಂಬುದನ್ನು ಮೇಲೆ ಹೇಳಿದೆ. ಈಗ ಅಂತಹ ಅನ್ಯೋನ್ಯವು ಜನರಲ್ ಗ್ರಾಂಟನಿಗೂ ಆತನ ಕೈಕೆಳಗೆ ಮುಖ್ಯಸ್ಥನಾಗಿದ್ದ ಷೆರ್ಮನ್ನನಿಗೂ ಇದ್ದಿತು. ಷೆರ್ಮನ್ನನು ಯುದ್ಧದ ಕೊನೆಕೊನೆಯಲ್ಲಿ ಬಹಳ ಸಾಹಸಮಾಡಿದನು. ಸಾಹಸಮಾಡಿ ಪ್ರಸಿದ್ಧಿಗೆ ಬಂದನು. ಷೆರ್ಮನ್ನನಲ್ಲಿದ್ದ ಬುದ್ಧಿಯು ತೀಕ್ಷ್ಣವಾದುದು : ವಿಶೇಷವಾದ ಚಟುವಟಿಕೆಯಿದ್ದಿತು. ಪಾದರಸದಂತೆ ಕೆಲಸ ಮಾಡುತ್ತಿದ್ದನು. ಮಕ್ಕಳಿಗೆ ಆವನಂತಹ ಜೊತೆಗಾರನು ಮತ್ತೊಬ್ಬನಿರುತ್ತಿರಲಿಲ್ಲ. ಆದರೆ ಅಷ್ಟು ಪ್ರಸನ್ನನಾದರೂ ಸೋಮಾರಿ

ಗಳಾದ ಕೈಕೆಳಗಿನ ಅಧಿಕಾರಿಗಳ ವಿಷಯದಲ್ಲಿ ಬಹಳ ಕಟುವಾಗಿರುತ್ತಿದ್ದನು. ಮರುಕವನ್ನು ಸ್ವಲ್ಪವೂ ತೋರಿಸುತ್ತಿರಲಿಲ್ಲ. ತನ್ನ ಸಂಪೂರ್ಣವಾದ ವಿಶ್ವಾಸವನ್ನಿಟ್ಟು, ತನಗೆ ನಿದರ್ಶನಸ್ವರೂಪನಾಗಿ ಗ್ರಾಂಟನು ತನ್ನನ್ನು ಮುಂದಕ್ಕೆ ತಂದನೆಂದು ಷರ್ಮನ್ನನು ಹೇಳುತ್ತಿದ್ದನು.

ಮೇಲೆ ಹೇಳಿರುವಂತೆ, ಮೆಂಫಿಸ್‌ಗೂ ಕೋರಿಂತಿಗೂ ನಡುವೆ ಇದ್ದುಕೊಂಡು ಆತ್ಮರಕ್ಷಣೆಯಲ್ಲಿ ಮಾತ್ರ ನಿರತನಾಗಿರಬೇಕೆಂದು ಗ್ರಾಂಟನಿಗೆ ಅಪ್ಪಣೆಯಾಗಿದ್ದಿತು. ಈ ಸಮಯದಲ್ಲಿ ಆ ಸ್ಥಳವು ಉತ್ತರದ ಗಡಿಯ ಪ್ರದೇಶವಾಗಿದ್ದಿತು. ಬ್ಯುಯೆಲ್ಲನು ಚಟ್ಟನೂಗದ ಕಡೆಗೆ ನುಗ್ಗುತ್ತಿದ್ದನು. ಮುಂದೆ, ದಕ್ಷಿಣದ ದಂಡು ಪೂರ್ವದಿಕ್ಕಿನಲ್ಲಿದ್ದ ಕೆಂಟಕಿಯ ಮೇಲೆ ಹೊರಟಿತು. ಹೊರಟು, ಹತ್ತಿರದಲ್ಲಿದ್ದ ಗ್ರಾಂಟನು ಮೇಲೆಬಿದ್ದು ಕೈಮಾಡದಿರುವುದಕ್ಕಾಗಿ ಒಂದೆರಡು ಭಾಗಗಳನ್ನು ಅವನ ಕಡೆಗೆ ಕಳುಹಿಸಿತು. ಗ್ರಾಂಟನು ಅವುಗಳನ್ನೆಲ್ಲಾ ಸೋಲಿಸಿ ಓಡಿಸಿದನು. ಆದರೆ ಶತ್ರುವನ್ನು ಹಿಂಬಾಲಿಸಲು ಅನುಕೂಲವಿರಲಿಲ್ಲ. ಕೆಂಟಕಿಯ ಮೇಲೆ ನಡೆದ ದಂಡು ಬ್ಯುಯೆಲ್ಲನಿಗೆ ಯುದ್ಧವನ್ನು ಕೊಡಲಾರದೆ ಹಿಂದೆ ಬಿದ್ದಿತು. ಪ್ರಯತ್ನವು ನಿಷ್ಫಲವಾಯಿತು. ಉತ್ತರಕ್ಕೆ ಇದು ಅತ್ಯುತ್ತಮವಾದ ಸಮಯ. ಮಿಸಿಸಿಪ್ಪಿ ನದಿಯ ಮಾರ್ಗವನ್ನು ನಿಶ್ಶೇಷವಾಗಿ ಜಯಿಸಿ ನಾವೆಯನ್ನು ಸ್ವಾಧೀನಮಾಡಿಕೊಳ್ಳುವುದು ಈಗ ಗ್ರಾಂಟನಿಗೂ ಹಾಲೆಕ್‌ನಿಗೂ ವಾಷಿಂಗ್ಟನ್ನಿನಲ್ಲಿದ್ದ ಸರ್ಕಾರಕ್ಕೂ ಸಾಧ್ಯವಾಗುತ್ತಿದ್ದಿತು. ಉತ್ತರದ ಪ್ರಜೆಗಳು ನದಿಯ ಮಾರ್ಗವು ನಿರಾಟಂಕವಾಗಬೇಕೆಂದು ಆತುರಪಟ್ಟು ಬೊಬ್ಬೆಯಿಡುತ್ತಿದ್ದರು. ಸದ್ಯದಲ್ಲಿ ಆ ನದಿಯ ಮಾರ್ಗದೊಳಗೆ ವಿಕ್ಸ್‌ಬರ್ಗ್ ನಿಂದ ಪೋರ್ಟ್ ಹಡ್ಸನ್ ವರೆಗೆ ದಕ್ಷಿಣದಲ್ಲಿದ್ದ ನೂರಿಪ್ಪತ್ತು ಮೈಲಿಗಳಷ್ಟು ಭಾಗವು ದಕ್ಷಿಣದವರ ವಶದಲ್ಲಿಯೇ ಉಳಿದಿದ್ದಿತು. ಅಲ್ಲಿ ದುರ್ಗವೊಂದನ್ನು ಹಿಡಿದು ದಕ್ಷಿಣವು ಸೈನ್ಯವನ್ನೂ ಮದ್ದನ್ನೂ ತುಂಬಿ ಬಲಪಡಿಸಿಕೊಂಡು ಕಾವಲಿದ್ದಿತು. ವಿಕ್ಸ್‌ಬರ್ಗ್ ಪಟ್ಟಣವು ಗ್ರಾಂಟನಿದ್ದ ಸ್ಥಳದಿಂದ ನೂರೆಂಭತ್ತು ಮೈಲಿಗಳ ದೂರದಲ್ಲಿದ್ದಿತು. ಆ ದುರ್ಗವು ಬಹಳ ದೃಢವಾದುದು. ಬಹಳ ಅನುಕೂಲವಾದ ಸ್ಥಳದಲ್ಲಿದ್ದಿತು. ನದಿಯು ಅದರ ಎಡಬಲಗಳೆರಡರಲ್ಲಿಯೂ ಸ್ವಲ್ಪಸ್ವಲ್ಪ ವಕ್ರಗತಿಯಿಂದ ಹರಿದು, ಯಾವ ಪಕ್ಕದಿಂದ ತೇಲಿಬಂದರೂ ಹಡಗುಗಳು ಆ ಬಳಿಯಲ್ಲಿ ದುರ್ಗದ ಫಿರಂಗಿಯ ಹೊಡೆತವನ್ನು ತಪ್ಪಿಸಿಕೊಳ್ಳಲಾಗದಂತೆ ಮಾಡಿದ್ದಿತು. ಅದಲ್ಲದೆ ಆ ಸ್ಥಳದಲ್ಲಿ ಬಂಡೆಗಳು ಉನ್ನತವಾಗಿಯೂ ಕಡಿದಾಗಿಯೂ ಬೆಳೆದು, ಕೋಟೆಯು ಅವುಗಳ ಮೇಲೆ ಕಟ್ಟಲ್ಪಟ್ಟಿದ್ದುದರಿಂದ ದುರ್ಗವನ್ನು ಆಕ್ರಮಿಸುವುದು ಅಸಾಧ್ಯವಾಗಿದ್ದಿತು. ದುರ್ಗವು ಭೂಮಿಯ ಕಡೆಯಿಂದಲೂ ಸುರಕ್ಷಿತವಾದುದು. ಆ ಕ್ಷೇತ್ರದಿಂದ ಮೇಲಕ್ಕಿದ್ದ ಭಾಗವೆಲ್ಲವೂ ಉತ್ತರದ ವಶದಲ್ಲಿದ್ದು, ಹಡಗುಗಳು ನದಿಯಲ್ಲಿ ನಿರಾಟಂಕವಾಗಿ ಸಂಚರಿಸುತ್ತಿದ್ದುವು. ಆದರೆ ವಿಕ್ಸ್‌ಬರ್ಗ್‌ನ ಸಮೀಪವನ್ನು ಸೇರಿ ಯಾವ ಕಡೆಯಿಂದ ದುರ್ಗವನ್ನು ಲಗ್ಗೆ ಹತ್ತಬಹುದೋ ಅಂಥ ಸ್ಥಳವನ್ನು ಕ್ಷೇಮದಿಂದ ತಲಪುವುದು ಹೇಗೆಂಬುದು ಗ್ರಾಂಟನಿಗೂ ಸರ್ಕಾರಕ್ಕೂ ದೊಡ್ಡದೊಂದು ಸಮಸ್ಯೆಯಾಗಿದ್ದಿತು.

ಗ್ರಾಂಟನು ನೊವೆಂಬರ್ ತಿಂಗಳಲ್ಲಿ ಕಾರ್ಯನಿರ್ವಾಹವನ್ನಾರಂಭಿಸಿದನು. ತನ್ನಲ್ಲಿದ್ದ ಸೈನ್ಯವನ್ನೆಲ್ಲಾ ತೆಗೆದುಕೊಂಡು, ಮೆಂಫಿಸ್‌ನಿಂದ ಹೊರಡುತ್ತಿದ್ದ ರೈಲು ಹಾದಿಯನ್ನು ಅನುಸರಿಸಿ ದಕ್ಷಿಣಾಭಿಮುಖವಾಗಿ ಹೊರಟನು. ಸ್ವಲ್ಪಕಾಲದ ಮೇಲೆ ಅವನು ಸೈನ್ಯದ ಒಂದು ಭಾಗವನ್ನು ಷೆರ್ಮನ್ನನೊಡನೆ ವಿಕ್ಸ್‌ಬರ್ಗ್‌ಗೆ ವಾಯುವ್ಯ ದಿಕ್ಕಿನಲ್ಲಿ ಸ್ವಲ್ಪದೂರದಲ್ಲಿದ್ದೊಂದು ಸ್ಥಳಕ್ಕೆ ಕಳುಹಿಸಿದನು. ಅಲ್ಲಿ ಹೋಗಿ ಸೈನ್ಯವು ಗುಟ್ಟಿನಿಂದ ಮುಂದೆ ನಡೆದು ದುರ್ಗದಮೇಲೆ ಹಠಾತ್ತಾಗಿ ಎರಗಿ ಆಕ್ರಮಣ ಮಾಡಬೇಕೆಂದು ಗೊತ್ತಾಗಿದ್ದಿತು. ಈ ವೇಳೆಯಲ್ಲಿ ಗ್ರಾಂಟನು ತಾನು ಉತ್ತರ ದಿಕ್ಕಿನಿಂದ ಹೋಗಿ ಶತ್ರುಸೈನ್ಯವನ್ನು ಯುದ್ಧಕ್ಕೆಳೆಯುವುದಾಗಿ ನಿಶ್ಚಯಿಸಿದ್ದನು. ಆದರೆ ಅವನಿಗೂ ಷೆರ್ಮನ್ನನಿಗೂ ನಡುವೆ ಅಂತರವು ಹೆಚ್ಚಾಗಿ ಸಮಾಚಾರವು ಒಬ್ಬರಿಂದೊಬ್ಬರಿಗೆ ತಿಳಿಯುವುದು ಪ್ರಯಾಸವಾಯಿತು. ಸ್ವಲ್ಪದರೊಳಗೆ ಶತ್ರುವಿನ ಕುದುರೆಯ ದಂಡೊಂದು ನುಗ್ಗಿಬಂದು ಅದನ್ನೂ ತಪ್ಪಿಸಿಬಿಟ್ಟಿತು. ಗ್ರಾಂಟನು ಹಿಂದೆ ಬಿದ್ದನು. ಷೆರ್ಮನ್ನನು ವಿಕ್ಸ್‌ಬರ್ಗನ್ನು ತಲಪಿ ನೋಡುವಲ್ಲಿ ಶತ್ರುವು ಅವನ ಆಗಮನವನ್ನು ಮೊದಲೇ ತಿಳಿದು ಸನ್ನದ್ಧವಾಗಿದ್ದಿತು. ಯುದ್ಧವಾಗಿ, ಯುದ್ಧದಲ್ಲಿ ಅವನು ಸೋತುಹೋದನು. ಉಂಟಾದ ಸೋಲುಗಳಲ್ಲಿ ಇದು ಮೊದಲನೆಯದು. ಆದರೆ ಗ್ರಾಂಟನು ಮುಚ್ಚುಮರೆ ಮಾಡಲಿಲ್ಲ. ಸರ್ಕಾರದಲ್ಲಿ ತನ್ನ ಕಷ್ಟನಷ್ಟಗಳನ್ನು ಹೇಳಿಕೊಂಡನು. ಸರ್ಕಾರವು ಭರವಸೆಯನ್ನು ಬಿಡದೆ ತನ್ನಿಂದ ಸಾಧ್ಯವಾದ ಸಹಾಯವೆಲ್ಲವನ್ನೂ ಒದಗಿಸಿತು.

1863ನೆಯ ವರ್ಷದಲ್ಲಿ ಮೊದಲ ಮೂರು ತಿಂಗಳು ಫ್ರೆಡರಿಕ್ಸ್‌ಬರ್ಗ್‌ನ ಬಳಿಯಲ್ಲಿ ಧ್ವಂಸಹೊಂದಿದ ಪೋಟೊಮಕ್ಕಿನ ಸೈನ್ಯವು ಚೇತರಿಸಿಕೊಳ್ಳುತ್ತ ಮುಂದಿನ ಯುದ್ಧಕ್ಕೆ ಅಣಿಮಾಡಿಕೊಳ್ಳುತ್ತಿದ್ದಿತು. ಜನರಲ್ ಬ್ರಾಗನೂ ಜನರಲ್ ರೋಸ್ ಕ್ರಾನಸನೂ ಟೆನ್ನೆಸ್ಸೀಯ ಮಧ್ಯದಲ್ಲಿ ನಿಂತು ಒಬ್ಬರನ್ನೊಬ್ಬರು ಹೊಂಚುತ್ತಿದ್ದರು. ಅಷ್ಟರಲ್ಲಿಯೇ ಇಬ್ಬರೂ ತೃಪ್ತರಾಗಿದ್ದರು. ಗ್ರಾಂಟನು ಕೆಲವು ಪ್ರಯತ್ನಗಳನ್ನು ಮಾಡಿದನು. ಆದರೆ ಪ್ರತಿಯೊಂದೂ ವ್ಯರ್ಥವಾಯಿತು. ವಿಕ್ಸ್‌ಬರ್ಗ್‌ಗೆ ಪಶ್ಚಿಮದಲ್ಲಿ ಮಿಸಿಸಿಪ್ಪಿಯ ವಕ್ರಗತಿಯುಳ್ಳ ಬಾಹುಗಳೆರಡನ್ನೂ ಸಂಬಂಧಿಸಿ ಕಾಲುವೆಯೊಂದನ್ನು ತೆಗೆದು ದುರ್ಗವನ್ನು ಆಕ್ರಮಣಮಾಡಬೇಕೆಂದು ಪ್ರಯತ್ನವು ನಡೆಯಿತು. ಅದು ಸಾಧ್ಯವಾಗಲಿಲ್ಲ. ಆ ಬಳಿಕ ಆ ದುರ್ಗಕ್ಕೆ ಆಗ್ನೇಯದಲ್ಲಿದ್ದೊಂದು ಹಳೆಯ ಕಾಲುವೆಯನ್ನು ಸರಿಪಡಿಸಿ ಆ ಮೂಲಕ ಅಡ್ಮಿರಲ್ ಪೋರ್ಟರನ ಸಹಾಯವನ್ನೂ ಸಮಾಚಾರವನ್ನೂ ತರಿಸಿಕೊಳ್ಳಬೇಕೆಂದು ಹವಣಿಸಿದನು. ಅದನ್ನು ಶತ್ರುಗಳ ಸೈನ್ಯವೊಂದು ನಿರರ್ಥಕಮಾಡಿತು. ಗ್ರಾಂಟನು ಮೂರನೆಯ ಮಾರ್ಗವೊಂದನ್ನು ಹುಡುಕಿದನು. ಆ ಪ್ರಯತ್ನವೂ ಕೈಗೂಡಲಿಲ್ಲ.

ಪ್ರತಿಯೊಂದೂ ಭಗ್ನವಾಯಿತು. ಅವುಗಳಿಗಾಗಿ ಆದ ವೆಚ್ಚವು ಬಹಳವಾಯಿತು. ಉತ್ತರವು ಹುಬ್ಬುಗಂಟಿಕ್ಕಿತು. ಸೈನಿಕರು ಅಸಮಾಧಾನದಿಂದ ಗೊಣಗಿದರು. ಪತ್ರಿಕೆಗಳು, ಗ್ರಾಂಟನು ಎಂದಿನಂತೆ ಕುಡಿತವನ್ನು ಆರಂಭಿಸಿದ್ದುದಾಗಿಯೂ ಅದೇ ಇಷ್ಟೆಲ್ಲಾ ನಷ್ಟಗಳಿಗೆ ನಿಮಿತ್ತವೆಂತಲೂ ದೃಢವಾಕ್ಯದಿಂದ ಹೇಳಿ

ದುವು. ಇತರರು ಇತರವಿಧವಾಗಿ ದೂರಿದರು. ಆದರೆ ಅದು ಶುದ್ಧಾಂಗನಾಗಿ ಸುಳ್ಳು. ಈ ವೇಳೆಯಲ್ಲಿ ಗ್ರಾಂಟನು ಮದ್ಯಸೇವನೆಯನ್ನು ಸಂಪೂರ್ಣವಾಗಿ ತ್ಯಜಿಸಿದ್ದನು. ಅವನನ್ನು ಕೆಲಸದಿಂದ ತೆಗೆಯಬೇಕೆಂದು ಸೆಕ್ರೆಟರಿ ಚೇಸನು ಬಲವಾಗಿ ಆಕ್ಷೇಪಿಸಿ ಬರೆದನು. ಆದರೆ ಲಿಂಕನ್ನನು ಮಿಸಿಸಿಪ್ಪಿಯ ಬಳಿಯಲ್ಲಿ ನಿಜವಾಗಿ ಇದ್ದ ಸ್ಥಿತಿ ಯನ್ನು ತಿಳಿಯಬೇಕೆಂದು ಯೋಚಿಸಿ ವಿಚಾರಿಸುತ್ತ ಕೊನೆಗೆ ಅಧಿಕಾರಿಯೊಬ್ಬ ನನ್ನು ಅಲ್ಲಿಗೆ ಕಳುಹಿಸಿದನು ಅದಕ್ಕೆ ಮೊದಲೂ ಕೂಡ ಅವನು ಗ್ರಾಂಟನ ಪಕ್ಷವನ್ನು ವಹಿಸಿ ನಿಂತು, ಬರುವ ಆಕ್ಷೇಪಣೆಗಳನ್ನೆಲ್ಲಾ ತಿರಸ್ಕಾರದಿಂದ ಕಾಣು ತ್ತಿದ್ದನು. '' ಈ ಸೇನಾಪತಿಯನ್ನು ಕಳುಹಿಸಿಬಿಡುವುದಕ್ಕಾಗುವುದಿಲ್ಲ. ಈತನಿಗೆ ಯುದ್ಧಮಾಡಲು ಮನಸ್ಸಿದೆ'' ಯೆಂದು ಉತ್ತರಹೇಳಿದನು. ಅವನ ಚಿತ್ತ ವೃತ್ತಿಯು ವಿಚಿತ್ರವಾದುದು. ಗ್ರಾಂಟನ ಯೋಚನೆಗಳೊಂದೂ ಅವನಿಗೆ ಸರಿಬಿದ್ದಿ ರಲಿಲ್ಲ. ಆದರೂ ತಾನು ಮುಂದುವರಿದು ಹೇಳಲಿಲ್ಲ. ಇಷ್ಟಬಂದ ದಾರಿಯಲ್ಲಿ ಹೋಗಲು ಅವನನ್ನು ಬಿಟ್ಟು ಲಿಂಕನ್ನನು ಗ್ರಾಂಟನೊಡನೆ '' ನನಗಿಂತಲೂ ನಿಮಗೆ ಹೆಚ್ಚು ಗೊತ್ತಿರುವುದೆಂಬುದೇ ನನ್ನ ಒಟ್ಟು ನಂಬಿಕೆ '' ಯೆಂದನು.

ಮಾರ್ಚಿ ತಿಂಗಳ ಕೊನೆಯಲ್ಲಿ ಗ್ರಾಂಟನು ತನ್ನ ದಂಡೆಲ್ಲವನ್ನೂ ದಕ್ಷಿಣಕ್ಕೆ ತೆಗೆದುಕೊಂಡುಹೋಗಿ ದಕ್ಷಿಣದಿಕ್ಕಿನಿಂದ ವಿಕ್ಸ್‌ಬರ್ಗನ್ನು ಸಮೀಪಿಸಬೇಕೆಂದು ನಿಶ್ಚಯಮಾಡಿದನು. ಅದನ್ನು ನೋಡಿ ಷೆರ್ಮನ್ನನು, ಸೈನ್ಯವು ನದಿಯ ಮೂಲಕ ಆ ದುರ್ಗವನ್ನು ಸಮೀಪಿಸುವ ಯೋಚನೆಯನ್ನೆಲ್ಲಾ ಇನ್ನು ಬಿಟ್ಟುಬಿಡಬೇಕೆಂದೂ, ಮೆಂಫಿಸ್‌ಗೆ ಹಿಂದಿರುಗಿ ಅಲ್ಲಿಂದ ಸಾವಕಾಶವಾಗಿ ಭೂಮಾರ್ಗದಿಂದಲೇ ವಿಕ್ಸ್ ಬರ್ಗ್‌ನ ಬಳಿಗೆ ಬಂದು ಮುತ್ತಿಗೆ ಹಾಕಬೇಕೆಂತಲೂ ಸೂಚಿಸಿದನು. ಗ್ರಾಂಟನು ಮೆಂಫಿಸ್‌ಗೆ ಹಿಂದಿರುಗುವುದನ್ನು ಒಪ್ಪಲಿಲ್ಲ. ವಿಕ್ಸ್‌ಬರ್ಗ್‌ನಿಂದ ದಕ್ಷಿಣಕ್ಕೆ ಮೂವತ್ತು ಮೈಲಿಗಳ ದೂರದಲ್ಲಿ ಶತ್ರುಗಳದಾಗಿ ಮತ್ತೊಂದು ಪ್ರದೇಶವಿದ್ದಿತು. ಅದನ್ನು ಆಕ್ರಮಿಸಲು ಯೋಚಿಸಿ ಗ್ರಾಂಟನು ನಾವೆಯ ಸಹಾಯವನ್ನು ಅಪೇಕ್ಷಿಸಿ ದನು. ಮದ್ದೂ ಗುಂಡೂ ಆಹಾರಪದಾರ್ಥವೂ ನಾವೆಯ ಮೂಲಕ ನದಿಯಲ್ಲಿ ಬರಬೇಕಾಗಿದ್ದಿತು. ಅಡ್ಮಿರಲ್ ಪೋರ್ಟರನು ಅದಕ್ಕೆ ಒಪ್ಪಿ ಸಾಮಾನುಗಳನ್ನು ದೋಣಿಗಳಲ್ಲಿ ತುಂಬಿಕೊಂಡು ಮಿಸಿಸಿಪ್ಪಿಯಲ್ಲಿ ಪ್ರಯಾಣಮಾಡಿದನು. ವಿಕ್ಸ್ ಬರ್ಗ್‌ನ್ನು ದಾಟುವಾಗ ರಾತ್ರಿಯ ವೇಳೆಯಾಗಿದ್ದಿತು. ಹೆಚ್ಚಿನ ನಷ್ಟವೇನೂ ಆಗ ಲಿಲ್ಲ. ಮೇ ತಿಂಗಳ ಮೂರನೆಯ ತೇದಿಯಲ್ಲಿ ಸೈನ್ಯವು ಆ ಪ್ರದೇಶವನ್ನು ಆಕ್ರ ಮಿಸಿ ಅಲ್ಲಿ ಬೇರೂರಿತು. ಆದರೆ ಒಂದು ಸಂಶಯ ಬಂದಿತು. ಲೂಸಿಯಾನದಲ್ಲಿದ್ದ ಜನರಲ್ ಬ್ಯಾಂಕ್ಸನು ಈ ಸಮಯದಲ್ಲಿ ಪೋರ್ಟ್ ಹಡ್ಸನನ್ನು ಮುತ್ತಲು ಹವಣಿಸುತ್ತಿದ್ದನು. ಗ್ರಾಂಟನು ಈಗ ತನ್ನ ಸೈನ್ಯದೊಡನೆ ಅಲ್ಲಿಗೆ ಹೋಗಿ ಆ ದುರ್ಗವನ್ನು ವಶಪಡಿಸಿಕೊಂಡು, ಆ ಬಳಿಕ ಬ್ಯಾಂಕ್ಸನನ್ನೂ ಕರೆದುಕೊಂಡು ಹಿಂದಕ್ಕೆ ಬಂದು ವಿಕ್ಸ್‌ಬರ್ಗ್‌ನ ಮೇಲೆ ಎರಗಬಹುದಾಗಿದ್ದಿತು. ಲಿಂಕನ್ನನಿಗೆ ಹೀಗೆ ತೋರಿತು. ಆದರೆ ಈ ಕೆಲಸವನ್ನು ಬೇಗ ಮಾಡಿ ಮುಗಿಸಲು, ಬ್ಯಾಂಕ್ಸನಿನ್ನೂ ಸಿದ್ಧನಾಗಿರಲಿಲ್ಲ. ಶತ್ರುವು ಸೈನ್ಯವನ್ನು ಕಳುಹಿಸಿ ದುರ್ಗವನ್ನು ಮತ್ತಷ್ಟು ಬಲ

ಪಡಿಸಬಹುದೆಂಬ ಶಂಕೆಯೂ ಇದ್ದಿತು. ಏನಾದರೂ ಆಗಲೆಂದು ಲಿಂಕನ್ನನು ಅಪ್ಪಣೆಯನ್ನು ಕಳುಹಿಸಿದನು. ಅದರಲ್ಲಿ ಹೀಗೆಯೇ ಮಾಡಬೇಕೆಂಬುದನ್ನು ಸಿದ್ಧಾಂತವಾಗಿ ಹೇಳಿರಲಿಲ್ಲ—ಗ್ರಾಂಟನು ತನಗೆ ಸೂಕ್ತವೆಂದು ತೋರಿದ ರೀತಿಯಲ್ಲಿ ಮಾಡಬಹುದೆಂದು ಸರ್ಕಾರವು ಅವಕಾಶವನ್ನು ಕೊಟ್ಟಿದ್ದಿತು. ಆದರೆ ಅದು ಬಳು ವುದಕ್ಕೆ ಮೊದಲೇ ಗ್ರಾಂಟನು ಸೈನ್ಯವನ್ನು ತೆಗೆದುಕೊಂಡು ಉತ್ತರಾಭಿಮುಖವಾಗಿ ಹೊರಟುಬಿಟ್ಟಿದ್ದನು. ಸಮಾಚಾರವು ತಲಪುವುದು ಕಷ್ಟವಾದರೂ, ಸುತ್ತಮುತ್ತಲಲ್ಲಿ ಸಹಾಯವೊದಗುವ ಭರವಸೆಯಿಲ್ಲದಿದ್ದರೂ, ಅವನು ಲಕ್ಷಿಸಲಿಲ್ಲ. ಸೈನ್ಯದಲ್ಲಿ 35,000 ಮಂದಿ ಸೈನಿಕರಿದ್ದರು. ಜನರಲ್ ಪೆಂಬರ್ಟನ್ನನು 20,000 ಮಂದಿಯ ದಕ್ಷಿಣದ ದಂಡಿನೊಡನೆ ವಿಕ್ಸ್‌ಬರ್ಗ್‌ನ ಬಳಿಯಲ್ಲಿ ಕಾವಲಿದ್ದನು. ದುರ್ಗದೊಳಗೆ ಕೆಲವು ಸೈನ್ಯವಿದ್ದು ಸಮಯಬಿದ್ದರೆ ಅವನಿಗೆ ಸಹಾಯಮಾಡಲು ಸಿದ್ಧವಾಗಿದ್ದಿತು. ಅಲ್ಲದೆ, ಜೆಫರ್ಸನ್ ಡೇವಿಸ್ಸನು ಕಳುಹಿಸಿದ ಜಾನ್ಸ್ಟನ್ನನು ಹನ್ನೊಂದುಸಾವಿರ ಭಟರನ್ನು ಕೂಡಿಸಿಟ್ಟುಕೊಂಡು ವಿಕ್ಸ್‌ಬರ್ಗ್‌ಗೆ ನಾಲ್ವತ್ತೈದು ಮೈಲಿಗಳ ದೂರದಲ್ಲಿ ಸಮಯವನ್ನು ನಿರೀಕ್ಷಿಸುತ್ತಿದ್ದನು. ಶತ್ರುವಿನ ಸೈನ್ಯಗಳು ಒಟ್ಟಿಗಿರದಿದ್ದುದರಿಂದ ಗ್ರಾಂಟನಿಗೆ ಅನುಕೂಲವಾಯಿತು. ಮೊದಲು ಜಾನ್ಸ್ಟನ್ನನ ಅಲ್ಪಸೈನ್ಯವನ್ನು ಚದು ರಿಸಿ ಆಮೇಲೆ ಪೆಂಬರ್ಟನ್ನನ ಮೇಲೆ ಅಲ್ಲಲ್ಲಿ ಯುದ್ಧಮಾಡಿದನು. ಪ್ರತಿಯೊಂದು ಕದನದಲ್ಲಿಯೂ ಜಯವುಂಟಾಯಿತು. ಅವುಗಳಲ್ಲಿ ಮೇ ಹದಿನಾರನೆಯ ತೇದಿಯಲ್ಲಿ ಚಾಂಪಿಯನ್ಸ್ ಹಿಲ್ (Champions Hill) ಎಂಬ ಸ್ಥಳದಲ್ಲಿ ನಡೆದ ಹೊಡದಾ ಟವು ಮುಖ್ಯವಾದುದು. ಗ್ರಾಂಟನಿಗೆ ಧೈರ್ಯ ಬಂದಿತು. ಇನ್ನು ಯುದ್ಧದಲ್ಲಿ ಉತ್ತರವು ಗೆಲ್ಲುವ ಭರವಸೆಯಿರುವುದೆಂದು ತಿಳಿದನು. ಆ ಬಳಿಕ ವಿಕ್ಸ್‌ಬರ್ಗ್‌ನ ಮೇಲೆ ಕೈಮಾಡಿದನು. ಸಾಧ್ಯವಾಗಲಿಲ್ಲ. ನಷ್ಟವು ಬಹಳವಾಯಿತು. ಅಷ್ಟು ಹೊತ್ತಿಗೆ ಪೆಂಬರ್ಟನ್ನನು ವಿಕ್ಸ್‌ಬರ್ಗ್‌ಗೆ ಹೋಗಿ ಸೇರಿಕೊಂಡನು. ಗ್ರಾಂಟನು ಕೂಡಲೇ ಅಲ್ಲಿಗೆ ಮುತ್ತಿಗೆ ಹಾಕಿದನು. ಮಿಸಿಸಿಪ್ಪಿಯ ಮೂಲಕ ಸಮಾಚಾರವನ್ನು ನಿರಾತಂಕನಾಗಿ ತರಿಸಿಕೊಳ್ಳಬಹುದಾಯಿತು. ಪೆಂಬರ್ಟನ್ನನಿಗೂ ಜಾನ್ಸ್ಟನ್ನನಿಗೂ ಮಾತಿನಲ್ಲಿ ಒಪ್ಪಿಗೆಯಿರಲಿಲ್ಲ. ವಿಕ್ಸ್‌ಬರ್ಗ್‌ನ ಸಮೀಪದಲ್ಲಿಯೂ ನಾವೆಯು ಮಿಸಿಸಿಪ್ಪಿಯಲ್ಲಿ ನಿರ್ಭಯವಾಗಿ ಸಂಚರಿಸುವುದನ್ನು ನೋಡಿ ಜಾನ್ಸ್ಟನ್ನನು, ಆದಷ್ಟು ಬೇಗ ದುರ್ಗದಿಂದ ಪೆಂಬರ್ಟನ್ನನು ಹೊರಕ್ಕೆ ತಲೆ ತಪ್ಪಿಸಿಕೊಂಡು ಬಂದು ಸೈನ್ಯವನ್ನು ಉಳಿಸಿಕೊಳ್ಳುವುದು ಯುಕ್ತವೆಂದು ಯೋಚಿಸಿದನು. ಮುತ್ತಿಗೆಯು ಬಲವಾಯಿತು. ಸಾಕಾದಷ್ಟು ಸೈನ್ಯವನ್ನು ಕೂಡಿಸಿಕೊಂಡು ಜಾನ್ಸ್ಟನ್ನನು ಗ್ರಾಂಟನ ಮೇಲೆ ಯುದ್ಧಮಾಡಲು ಬರುವಷ್ಟರಲ್ಲಿ ಗ್ರಾಂಟನ ಸೈನ್ಯವು 71,000ಕ್ಕೆ ಹೆಚ್ಚಿತು. ಕೊನೆಗೆ, 1863ನೆಯ ವರುಷದ ಜುಲೈ ನಾಲ್ಕರಲ್ಲಿ ವಿಕ್ಸ್‌ಬರ್ಗ್‌ದುರ್ಗವು ಮುರಿಬೇಡಿತು. ಆಹಾರವಿಲ್ಲದೆ ಅತಿಯಾಗಿ ನೊಂದಿದ್ದ ಶತ್ರುವಿಗೆ ಆಹಾರವನ್ನು ಕೊಡಿಸಿ ಗ್ರಾಂಟನು ದುರ್ಗದಲ್ಲಿದ್ದವರ ಮೇಲೆ ಕಾವಲಿಡಿಸಿ ಕಳುಹಿಸಿದನು. ಪೆಂಬರ್ಟನ್ನನು ತನಗುಂಟಾದ ಸೋಲಿನಿಂದ ಕೋಪಗೊಂಡು ಗ್ರಾಂಟನನ್ನು ಅತ್ಯಂತ ಒರಟುತನ ದಿಂದ ಕಂಡನು. ಅದನ್ನು ನೋಡಿ ಗ್ರಾಂಟನ ಸದ್ಭಾವವು ಹೆಚ್ಚಿತು. ಸೋತವನಿಗೆ

ಮನಸ್ಸು ನೋಯುವಂತಹದೊಂದು ಮಾತನ್ನೂ ಆಡಕೂಡದೆಂದು ತನ್ನ ಕಡೆಯವರಿಗೆ ಕಟುವಾಗಿ ಆಜ್ಞೆಮಾಡಿದ್ದನು. ಜಾರ್ಕ್ಸ್‌ಪಟ್ಟಣದಲ್ಲಿದ್ದ ಜಾನ್ಸ್‌ನನ್ನು ಪೆರ್ಮ್ಸನಿಗೆ ಸೋತು, ಶೇಖರಿಸಿದ್ದ ಯುದ್ಧಸಾಮಗ್ರ್ಯಗಳ ಸಮೇತ ಪಟ್ಟಣವನ್ನು ಬಿಟ್ಟು ಹೊರಟುಹೋದನು. ಜನರಲ್ ಬ್ಯಾಂಕ್ಸ್‌ನಿಂದ ಮುತ್ತಲ್ಪಟ್ಟಿದ್ದ ಪೋರ್ಟ್‌ಹಡ್ಸ್‌ನ ದುರ್ಗಾಧಿಪತಿಯು ವಿಕ್ಸ್‌ಬರ್ಗ್ ದುರ್ಗವು ಶರಣಾಗತವಾಯಿತೆಂಬುದನ್ನು ಕೇಳಿ ಜುಲೈ ಒಂಭತ್ತನೆಯ ತಾರೀಖಿನ ದಿನ ತನ್ನ ದುರ್ಗವನ್ನೂ ಶತ್ರುವಿಗೆ ಒಪ್ಪಿಸಿಬಿಟ್ಟನು. ಮಿಸಿಸಿಪ್ಪಿಯ ಮಾರ್ಗವು ನಿರುಪದ್ರವವಾಯಿತು. ಲಿಂಕನ್ನನ ಸಂತೋಷಕ್ಕೆ ಎಣೆಯಿರಲಿಲ್ಲ.

ಮೂರು ದಿನಗಳಿಗೆ ಮುಂಚೆ—ಜುಲೈ ಒಂದನೆಯ ತಾರೀಖಿನಲ್ಲಿ—ಉತ್ತರಕ್ಕೆ ಮತ್ತೊಂದು ಸ್ಥಳದಲ್ಲಿ ಜಯವು ಲಭಿಸಿತು. ಸುಮಾರು ಒಂದು ತಿಂಗಳಿಂದಲೂ ಪೂರ್ವ ದಿಕ್ಕಿನಲ್ಲಿ ಎರಡು ಕಡೆಯ ಸೈನ್ಯಗಳೂ ಯುದ್ಧಮಾಡದೆ ಸೋಮಾರಿಯಾಗಿ ನಿಂತಿದ್ದುವು. ಸೈನ್ಯವನ್ನು ತೆಗೆದುಕೊಂಡು ಹೋಗಿ ಉತ್ತರದಮೇಲೆ ನುಗ್ಗಬೇಕೆಂದು ಲೀಯ ಮನಸ್ಸಿನಲ್ಲಿದ್ದಿತು. ಜೆಫರ್‌ಸನ್ ಡೇವಿಸ್ಸನು ಮೊದಲು ಅದನ್ನು ಹಾಯಗೊಡಲಿಲ್ಲ. ಆಮೇಲೆ ಒಡಂಬಟ್ಟನು. ಜೂನ್ ತಿಂಗಳಲ್ಲಿ ಹೊರಟು ಲೀಯು ಪೆನ್‌ಸಿಲ್ವೇನಿಯವನ್ನು ಕುರಿತು ನಡೆದನು. ತಾನು ಹೋದಕಡೆಗೆ ಶತ್ರುವು ಬರುವುದರಿಂದ ಹೂಕರನನ್ನು ಸೈನ್ಯದ ಸಹಿತ ವಾಷಿಂಗ್ಟನ್ನಿನಿಂದ ದೂರಕ್ಕೆಳೆಯಬೇಕೆಂಬುದು ಅವನ ಉದ್ದೇಶವಾಗಿದ್ದಿತು. ಲೀಯು ರಪ್ಪನಾಕ್ ನದಿಯನ್ನು ದಾಟಿ ಬಂದನೆಂಬುದನ್ನು ಕೇಳಿ ಹೂಕರನು ಆ ಸಮಯದಲ್ಲಿಯೇ ಹೋಗಿ ರಿಚ್‌ಮಂಡನ್ನು ಸ್ವಾಧೀನಮಾಡಿಕೊಳ್ಳಬೇಕೆಂದು ಅಪೇಕ್ಷಿಸಿದನು. ಲಿಂಕನ್ನನು ಒಪ್ಪಲಿಲ್ಲ. "ನದಿಯ ಮಧ್ಯದಲ್ಲಿ ಸಿಕ್ಕಿಕೊಂಡು, ಬೇಲಿಯನ್ನು ಹಾರಬೇಕೆಂದು ಯತ್ನಿಸಿ ಅದರ ಮುಳ್ಳಿನಲ್ಲಿ ಸಿಕ್ಕಿಬಿದ್ದ ದನದಂತೆ ಯಾವ ಕಡೆಗೂ ಪಾರಾಗಲು ಆಸ್ಪದವಿಲ್ಲದಂತೆ ಮಾಡಿಕೊಳ್ಳುವುದು ಸರಿಯಲ್ಲ" ವೆಂದನು. ಸಮಾಚಾರವು ತಲಪದಂತೆ ಆಟಂಕಪಡಿಸಿ ಶತ್ರುವು ಎರಡು ಕಡೆಯಿಂದಲೂ ಆಕ್ರಮಣಮಾಡಬಹುದು ; ಅಲ್ಲದೆ, ಸಧ್ಯದಲ್ಲಿ ಹೂಕರನ ಲಕ್ಷ್ಯವು ಲೀಯಮೇಲಿರಬೇಕಲ್ಲದೆ ರಿಚ್‌ಮಂಡ್ ನಗರದಲ್ಲಲ್ಲ. ಹೂಕರನು ಅದನ್ನು ಅನುಮೋದಿಸಿ ಮುಂದೆ ವಿವೇಕದಿಂದ ಆಚರಿಸಿದನು. ಫಿಲೆಡೆಲ್ಫಿಯದಿಂದ ಅಥವಾ ಬಾಲ್ಟಿಮೋರಿನಿಂದ ವಾಷಿಂಗ್ಟನ್ನಿನವರೆಗೂ ತನ್ನವರನ್ನು ಕಾವಲಿರಿಸಿ ಲೀಯ ಸನ್ನಾಹಗಳನ್ನೂ ಪ್ರಯಾಣಮಾರ್ಗಗಳನ್ನೂ ತಿಳಿದುಕೊಳ್ಳುತ್ತ ಮೇಲೆ ಬೀಳಲು ಸಮಯವನ್ನು ಕಾದನು. ಈ ನಡುವೆ ಹಾಲೆಕ್‌ನು ತಾನು ಮೇಲ್ಪಟ್ಟ ಅಧಿಕಾರಿಯೆಂಬ ಗರ್ವದಿಂದ ವಿವೇಕವಿಲ್ಲದ ಕೆಲವು ಆಜ್ಞೆಗಳನ್ನು ಕಳುಹಿಸಿದನು. ಹೂಕರನಿಗೆ ಕೋಪ ಬಂದಿತು. ಲಿಂಕನ್ನನು ಅವನನ್ನು ಸಮಾಧಾನಪಡಿಸಿ ಬಹಳ ಕಷ್ಟದಿಂದ ಬುದ್ಧಿಹೇಳಿದನು. ಆದರೂ ಹೂಕರನು ಜೂನ್ ಇಪ್ಪತ್ತೆಂಟನೆಯ ತಾರೀಖಿನ ದಿನ ರಾಜೀನಾಮೆಯನ್ನು ಬರೆದು ಕಳುಹಿಸಿದನು. ಲಿಂಕನ್ನನು ಅದನ್ನು ಅಂಗೀಕರಿಸಿ ಜಾರ್ಜ್ ಮೀಡ್ ಎಂಬಾತನನ್ನು ಆಧಿಪತ್ಯದಲ್ಲಿ ನಿಲ್ಲಿಸಿದನು. ದೊಡ್ಡದೊಂದು ಯುದ್ಧವು ಒದಗಲು ಬಹಳ ಕಾಲವಿರಲಿಲ್ಲ. ಉತ್ತರವು ಉತ್ಕಂಠಿತವಾಗಿದ್ದಿತು. ಕೆಲವರು ಮೆಕ್‌ಕ್ಲೆಲ್ಲನ್ನ

ನನ್ನು ಕರೆಯಿಸಬೇಕೆಂದು ಸೂಚಿಸಿದರು. ಅವನು ಎಷ್ಟರವುಟ್ಟಿಗೆ ಅರ್ಕನೆಂಬುದು ಲಿಂಕನ್ನನಿಗೆ ಚೆನ್ನಾಗಿಯೂ ಗೊತ್ತಿದ್ದಿತು. ಕರೆಯಿಸಿ ತೊಂದರೆಯನ್ನುಂಟುಮಾಡಿ ಕೊಳ್ಳಲಿಲ್ಲ.

ಲೀಗೆ ತೊಂದರೆಗಿಟ್ಟಿತು. ತನ್ನ ಕುದುರೆಯೆಲ್ಲವನ್ನೂ ಲೂಟಿಗಾಗಿ ಹ್ಯಾರಿಸ್ ಬರ್ಗ್ನ ಕಡೆಗೆ ಕಳುಹಿಸಿಬಿಟ್ಟದ್ದುದರಿಂದ ಶತ್ರುವಿನ ಸುಳಿವನ್ನು ತಿಳಿಯಲು ಮಾರ್ಗವಿರಲಿಲ್ಲ. ಅವನು ಪೂರ್ವದಿಕ್ಕಿಗೆ ತಿರುಗಿದರೆ ಕೂಡಲೇ ತನಗೆ ತಿಳಿಸಬೇಕೆಂಬ ಕಟ್ಟಪ್ಪಣೆಯಿಂದ ಜನರಲ್ ಮೀಡನು ತನ್ನ ಸೈನ್ಯದಲ್ಲಿ ಒಂದು ಭಾಗವನ್ನು ಕಳುಹಿಸಿ ತಾನು ಕ್ರಮವಾಗಿ ಒತ್ತಿಕೊಳ್ಳುತ್ತಿದ್ದನು. ರಕ್ಷಣೆಗೆ ಸಲುವಾಗಿ ಮಾತ್ರ ಯುದ್ಧಮಾಡುವುದು ಎರಡು ಕಡೆಯ ದಳಪತಿಗಳಿಗೂ ಇಷ್ಟವಾಗಿದ್ದಿತು. ಆದರೆ ಜುಲೈ ಒಂದನೆಯ ತಾರೀಖಿನ ದಿನ ಅಕಸ್ಮಾತ್ತಾಗಿ ಎರಡು ಕಡೆಯ ಮುಂಗಾವಲಿನ ದಂಡುಗಳೂ ಸಂಧಿಸಿದವು. ಹೊಡೆದಾಟವು ಬರುತ ಬರುತ ದೊಡ್ಡದಾಯಿತು. ಯುದ್ಧವು ಯಾವ ಕಡೆಗೆ ಬೆಂಬಲವು ಬೇಗ ಬರುವುದೋ ಆ ಪಕ್ಷವು ಜಯಿಸು ವಂತಹ ಸ್ಥಿತಿಗೆ ಬಂದಿತು. ಮೊದಲ ದಿವಸ ಲೀಗೆ ಸ್ಪಷ್ಟವಾದ ಜಯವುಂಟಾಗಿ ಉತ್ತರದ ಸೈನ್ಯವು ಗೆಟ್ಟಿಸ್ ಬರ್ಗ್ನ ಬಳಿಯಲ್ಲಿದ್ದ ಗುಡ್ಡವನ್ನು ಹತ್ತಿಕೊಂಡಿತು. ಆದರೆ ಮಾರನೆಯ ಬೆಳಗಿನ ವೇಳೆಗೆ ಮೀಡನ ದಂಡೆಲ್ಲವೂ ಅಲ್ಲಿಗೆ ಬಂದು ತಲಪಿತು. ಲೀಯು ಮೇಲೆರಗಿದನು. ಹಿಂದಿನ ಯುದ್ಧಗಳಲ್ಲಿ ದಕ್ಷಿಣದ ಸೈನ್ಯವು ಪೊದೆಗಳಲ್ಲಿ ಅಡಗಿ ನಿಂತು ಶತ್ರುವಿಗೆ ಬಹಳ ತೊಂದರೆಯನ್ನುಂಟುಮಾಡುತ್ತಿದ್ದಿತು. ಆದರೆ ಈಗ ಅದಕ್ಕೆ ಮಾರ್ಗವಿರಲಿಲ್ಲ. ಸೈನಿಕರು ಹೊರಗೆ ಕಾಣಿಸಿಕೊಂಡು ಒಟ್ಟಾಗಿ ನಡೆದರು. ಉತ್ತರವು ಫಿರಂಗಿಗಳನ್ನು ಉಪಯೋಗಿಸಿ ಗುಂಡಿನ ಮಳೆಯನ್ನು ಕರೆಯಿತು. ದಕ್ಷಿಣದಕಡೆ ವಿಶೇಷವಾಗಿ ನಷ್ಟವಾಯಿತು. ಆ ಸೈನಿಕರು ಗುಡ್ಡವನ್ನು ಹತ್ತಲಾಗಲಿಲ್ಲ. ಮಾರನೆಯ ದಿನದವರೆಗೆ ಲೀಯು ತಡೆದು ನೋಡಿದನು. ಆದರೂ ನಿರ್ವಾಹವಿಲ್ಲದೆ ಹಿಂದಕ್ಕೆ ಓಡಿಹೋಗಬೇಕಾಯಿತು. ಸಂಪೂರ್ಣವಾದ ಜಯವು ದೊರೆತಿದ್ದ ಪಕ್ಷದಲ್ಲಿ ಮಾತ್ರವೇ ಅವನು ದಂಡಯಾತ್ರೆಯಲ್ಲಿ ಮುಂದಕ್ಕೆ ನುಗ್ಗುವುದು ಸುಲಭವಾಗುತ್ತಿದ್ದಿತು.

ಈ ಹೊಡೆದಾಟದಿಂದ ಆದಾಯವೇನೂ ಆಗಲಿಲ್ಲ; ಆದರೆ ಉತ್ತರಕ್ಕಿದ್ದ ದೊಡ್ಡ ಹೆದರಿಕೆಯು ತಪ್ಪಿತು. ಸುದ್ದಿ ತಿಳಿದಕೂಡಲೇ ಲಿಂಕನ್ನನು ಧನ್ಯವಾದಗಳನ್ನು ಕಳುಹಿಸಿ, ಶತ್ರುವನ್ನು ಬೆನ್ನಟ್ಟಬೇಕೆಂದು ಮೀಡನನ್ನು ಪ್ರಾರ್ಥಿಸಿದನು. ಮೀಡನು ಹಾಗೆ ಮಾಡಲಿಲ್ಲ. ಇತರ ಸೇನಾಪತಿಗಳನ್ನು ಮಂತ್ರಾಲೋಚನೆಗೆ ಕರೆದು, ಲೀಯು ತಾನೇ ಮೊದಲು ಕೈಮಾಡುವನೆಂದೂ ಆಬಳಿಕ ತಾವು ಯುದ್ಧವನ್ನಾರಂಭಿ ಸಬೇಕೆಂದೂ ನಿಶ್ಚಯಮಾಡಿದನು. ಹಾಗೆ ಮಂತ್ರಾಲೋಚನೆ ಮಾಡಿದುದೇ ತಪ್ಪೆಂದು ಲಿಂಕನ್ನನು ಆಕ್ಷೇಪಿಸಿದನು. ಆ ಸಮಯದಲ್ಲಿ ಮೀಡನು ''ಆ ದುಷ್ಟನನ್ನು ನಮ್ಮ ಭೂಮಿಯಲ್ಲಿರದಂತೆ ಓಡಿಸಿಬಿಡಬೇಕು'' ಎಂದನು. ಅದನ್ನು ಕೇಳಿ ಲಿಂಕನ್ನ ನಿಗೆ ಬಹಳ ವ್ಯಸನವಾಯಿತು. ''ನಮ್ಮ ಸೇನಾಪತಿಗಳು ಆ ಭಾವನೆಯನ್ನು ಎಂದಿಗೂ ಬಿಡುವುದಿಲ್ಲವೇನು? ಈ ರಾಜ್ಯವೆಷ್ಟೂ ನಮ್ಮದೇ'' ಎಂದು ತಿದ್ದಿದನು. ಈ ಅಲ್ಪವಿಚಾ

ರವನ್ನೂ ತಿಳಿಯದಿದ್ದವರಿಗೆ ಶಾಸನಕ್ರಮವು ಎಂದಿಗೂ ತಿಳಿಯುವುದಿಲ್ಲ. ಲೀಯು ಪೋಟೊಮಕ್‌ನ್ನು ಮತ್ತೆ ದಾಟಿ ಹಿಂದಿರುಗಿದನು—ಜನರಲ್ ಮೀಡನು, ತನ್ನ ಕಾರ್ಯದಿಂದ ಪ್ರೆಸಿಡೆಂಟನಿಗೆ ಅಸಮಾಧಾನವಾಯಿತೆಂದು ಭಾವಿಸಿ ರಾಜೀನಾಮೆಯನ್ನು ಕೊಡುವುದಾಗಿ ಹೇಳಿದನು. ಲಿಂಕನ್ನನು ಅದನ್ನು ಅಂಗೀಕರಿಸಲಿಲ್ಲ. ಬೆನ್ನಟ್ಟಬಹುದಾಗಿತ್ತೆಂದು ಹೇಳಿದೆನೇ ವಿನಾ ಬೇರೆಯಲ್ಲ; ನೀವು ಯುದ್ಧವನ್ನು ಗೆದ್ದುಕೊಟ್ಟಿರುವಿರಿ; ಅದಕ್ಕಾಗಿ ಬಹಳ ಕೃತಜ್ಞನಾಗಿದ್ದೇನೆ—ಎಂದು ಸಮಾಧಾನಪಡಿಸಿದನು. ಲೀಯು ರಪ್ಪನಾಕ್ ನದಿಯನ್ನೂ ಆಮೇಲೆ ರೆಪಿಡೆ ನದಿಯನ್ನೂ ದಾಟಿದನು. ಜನರಲ್ ಮೀಡನು ಅಲ್ಲಿಯವರೆಗೂ ಅವನನ್ನು ಅನುಸರಿಸಿದನು. ಅಲ್ಲಿ ತನ್ನ ಸೈನ್ಯವು ಕಷ್ಟದಲ್ಲಿ ಸಿಕ್ಕುವುದಾಗಿ ತೋರಿತು. ಮೀಡನು ಹಿಂದಕ್ಕೆ ಬಂದುಬಿಟ್ಟನು. ಅಷ್ಟು ಹೊತ್ತಿಗೆ ಚಳಿಗಾಲವು ಬಂದಿತು. ಎರಡು ಕಡೆಯ ದಂಡುಗಳೂ ಆಯುಧಗಳನ್ನು ಕೆಳಗಿಟ್ಟು ವಿಶ್ರಾಂತಿಯನ್ನರಸಿದುವು.

1863ನೆಯ ವರುಷದ ಶರತ್ಕಾಲದಲ್ಲಿ ಉತ್ತರವು ಮತ್ತೊಂದು ಸ್ಥಳದಲ್ಲಿ ಜಯವನ್ನು ಪಡೆಯಿತು. ವಿಕ್ಸ್‌ಬರ್ಗ್ ದುರ್ಗವು ಹಸ್ತಗತವಾದ ಸುದ್ದಿಯು ಟೆನ್ನೆಸ್ಸೀಯಲ್ಲಿದ್ದ ರೋಸ್‌ಕ್ರಾನಸನಿಗೆ ತಿಳಿಯಿತು. ಅವನು ಮುಂದೆ ನುಗ್ಗಲು ಸಿದ್ಧಮಾಡಿಕೊಂಡನು. ಉಪಾಯದಿಂದ ಸೈನ್ಯವನ್ನು ನಡೆಯಿಸಿ ಬೆಟ್ಟಗುಡ್ಡಗಳನ್ನೂ ಹಳ್ಳತಿಟ್ಟುಗಳನ್ನೂ ದಾಟಿ ಚಟ್ಟನೂಗವನ್ನು ಸಮೀಪಿಸಿದನು. ಅಲ್ಲಿದ್ದ ಬ್ರಾಗನ ದಂಡಿನ ಒಂದು ಪಕ್ಕದಮೇಲೆ ಬಿದ್ದನು. ಕೊನೆಗೆ ಸೆಪ್ಟೆಂಬರ್‌ನಲ್ಲಿ ಬ್ರಾಗನನ್ನು ರೋಸ್‌ಕ್ರಾನಸನು ಆ ಪಟ್ಟಣದಿಂದ ಹೊರಡಿಸಿದನು. ಬ್ರಾಗನು ಹಿಂಜರಿದನು. ಹಿಂಜರಿಯುತ್ತ ತನ್ನ ಸೈನ್ಯದ ನಡೆವಳಿಯ ವಿಚಾರದಲ್ಲಿಯೂ ಸ್ಥಿತಿಯ ವಿಚಾರದಲ್ಲಿಯೂ ಸುಳ್ಳು ಸುಳ್ಳು ಸುದ್ದಿಯನ್ನು ಹುಟ್ಟಿಸಿ ರೋಸ್‌ಕ್ರಾನಸನ ಕಿವಿಗೆ ಬೀಳುವಂತೆ ಮಾಡಿದನು. ಅವನು ಅದನ್ನು ನಂಬಿ ಹಿಂಬಾಲಿಸಿದನು. ಹೆಚ್ಚು ಎಚ್ಚರಿಕೆಯನ್ನಿಡಲಿಲ್ಲ. ಇಷ್ಟುಹೊತ್ತಿಗೆ ವಿಕ್ಸ್‌ಬರ್ಗ್‌ನ ಬಳಿಯಲ್ಲಿದ್ದ ಉತ್ತರದ ಸೈನ್ಯವೆಲ್ಲವೂ ಒತ್ತಾಸೆಗಾಗಿ ರೋಸ್‌ಕ್ರಾನಸನ ಬಳಿಗೆ ಬರಬೇಕಾಗಿದ್ದಿತು. ಆದರೆ ಹಾಲೆಕ್‌ನು ಹಾಗೆ ಯೋಚಿಸಲಿಲ್ಲ. ವಿಕ್ಸ್‌ಬರ್ಗ್‌ನ ಬಳಿಯಲ್ಲಿ ಕೆಲಸವು ತೀರಿದಮೇಲೆ ದಂಡನ್ನು ತಂಡತಂಡವಾಗಿ ಭಾಗಮಾಡಿ ಪಶ್ಚಿಮಕ್ಕೆ ಕಳುಹಿಸಿದನು. ಓಹಿಯೋವಿನಲ್ಲಿ ಬರ್ನ್‌ಸೈಡನ ಬಳಿಯಿಂದ ಬಂದಿದ್ದ ಭಾಗವು ಮತ್ತೆ ಅವನಲ್ಲಿಗೆ ಹೋಗಿ ಸೇರಿಕೊಂಡಿತು. ಬರ್ನ್‌ಸೈಡನು ಪೂರ್ವದ ಟೆನ್ನೆಸ್ಸೀಗೆ ಬಂದು, ಬಹಳ ಕಾಲದಿಂದಲೂ ಯೋಚನೆಯಲ್ಲಿದ್ದಂತೆ, ಸಂಯೋಗದ ಜನಗಳಿಗೆ ಬಿಡುಗಡೆಯನ್ನುಂಟುಮಾಡಿದನು. ಅವನನ್ನು ಅಲ್ಲಿಂದ ಹೊರಡಿಸುವುದಕ್ಕೋಸ್ಕರ ಶತ್ರುವಿನ ಕಡೆಯಿಂದ ಸಣ್ಣದೊಂದು ದಂಡು ಬಂದಿತು. ನಾಕ್ಸ್‌ವಿಲ್ಲಿನ ಬಳಿಯಲ್ಲಿ ಎರಡಕ್ಕೂ ಯುದ್ಧವು ನಡೆದು ದಕ್ಷಿಣಕ್ಕೆ ಸೋಲಾಯಿತು. ಕೊನೆಗೆ, ಇತರ ತಂಡಗಳು ಬಂದು ರೋಸ್‌ಕ್ರಾನಸನನ್ನು ಸೇರಿಕೊಳ್ಳುವಂತೆ ಮೇಲಿನಿಂದ ಅಪ್ಪಣೆ ಬಂದಿತು. ಆದರೆ, ಅವು ಬಂದು ತಲಪುವುದರೊಳಗೆ ಯುದ್ಧವು ನಡೆದು ಅವನು ನಷ್ಟಹೊಂದಿದನು. ಉಂಟಾದ ನಷ್ಟವನ್ನು ಸರಿಪಡಿಸಿಕೊಳ್ಳುವುದಕ್ಕೋಸ್ಕರ ದಕ್ಷಿಣದ ಸರ್ಕಾರವು ಇದ್ದ ಸೈನಿಕರೆಲ್ಲರನ್ನೂ ಜೊತೆ

ಮಾಡಿ ಬ್ರಾಗನ ಬಳಿಗೆ ಕಳುಹಿಸಿತು. ಬ್ರಾಗನು 71,000 ಮಂದಿ ಸೈನಿಕರನ್ನು ಕಟ್ಟಿಕೊಂಡು ತಿರುಗಿಬಿದ್ದನು. ರೋಸ್‌ಕ್ರ್ರಾಸನ ಬಳಿಯಲ್ಲಿ 57,000 ಮಂದಿಯಿದ್ದರು. ಅವರೂ ಒಟ್ಟಾಗಿರಲಿಲ್ಲ. ಬೆನ್ನಂಟಿಬರುತ್ತ ಶತ್ರುವಿನ ಸುಳಿವನ್ನು ತಿಳಿಯುವುದಕ್ಕಾಗಿ ಸೇನಾಪತಿಯು ತನ್ನ ಸೈನ್ಯವನ್ನು ಎಡಬಲಗಳಲ್ಲಿ ವಿಸ್ತಾರಮಾಡಿ ದೂರ ದೂರದಲ್ಲಿ ನಡೆಯಿಸುತ್ತಿದ್ದನು. ಎರಡು ಸೈನ್ಯಗಳೂ ಅರಿವಿಲ್ಲದೆ ಒಂದನ್ನೊಂದು ಸಂಧಿಸಿದುವು. ಸೆಪ್ಟೆಂಬರ್ ಹತ್ತೊಂಭತ್ತು ಇಪ್ಪತ್ತು ತಾರೀಖುಗಳಲ್ಲಿ ಕದನವು ನಡೆದು ಎರಡು ಕಡೆಯಲ್ಲಿಯೂ ನಷ್ಟವು ಅತ್ಯಂತವಾಯಿತು. ಎರಡನೆಯ ದಿನ ಬ್ರಾಗನ ಸೈನ್ಯವು ಉತ್ತರದ ಸೈನ್ಯದೊಳಕ್ಕೆ ನುಗ್ಗಿ ಅಲ್ಲೋಲಕಲ್ಲೋಲ ಮಾಡಿತು. ಆಗ ಮಾತ್ರ ಟಾಮುಸ್ಸನು ಸೈನ್ಯದೊಡನೆ ಯುದ್ಧವನ್ನು ಕೊಟ್ಟು ಶತ್ರುವನ್ನು ಅತಿಯಾಗಿ ಬೆನ್ನಟ್ಟದಂತೆ ತಡೆಯದಿದ್ದರೆ ಉತ್ತರದ ಸೈನ್ಯವು ಹಿಂಜರಿದು ಓಡುತ್ತ ಓಡುತ್ತ ಹಿಂದಿನಿಂದ ಏಟು ತಿಂದು ಧ್ವಂಸವಾಗುತ್ತಿದ್ದಿತು. ರೋಸ್‌ಕ್ರ್ರಾಸನು ಚಟ್ಟನೂಗಕ್ಕೆ ಹೋಗಿ ಸೇರಿಕೊಂಡನು. ಆದರೆ ಅಲ್ಲಿ, ಶತ್ರುವು ಸುತ್ತಲೂ ಮುತ್ತಿ ತೊಂದರೆಮಾಡಬಹುದೆಂಬ ಭಯವಿದ್ದಿತು. ವರ್ಜಿನಿಯದಲ್ಲಿದ್ದ ಮೀಡನು ತತ್‌ಕ್ಷಣವೇ ಒಂದು ಭಾಗವನ್ನು ಹೂಕರನ ಕೈಕೆಳಗೆ ಅಲ್ಲಿಗೆ ಕಳುಹಿಸಿದನು. ಅಷ್ಟರೊಳಗೆ ರೋಸ್ ಕ್ರ್ರಾಸನು ಯಾವುದೋ ಒಂದು ವಿಷಯದಲ್ಲಿ ಅಸಾಮರ್ಥ್ಯವನ್ನು ತೋರಿಸಲಾಗಿ, ನಿವೃತ್ತನಾಗಿ, ಟಾಮುಸ್ಸನು ಅವನ ಅಧಿಕಾರವನ್ನು ವಹಿಸಿದನು. ಗ್ರಾಂಟನು ಸರ್ಕಾರದ ಅಪ್ಪಣೆಯಂತೆ ಅಲ್ಲಿಗೆ ಬಂದನು. ಉತ್ತರದ ಸೈನ್ಯವು ಬಲ ಹೊಂದಿತು. ನೊವೆಂಬರ್ 25ನೆಯ ತಾರೀಖಿನಲ್ಲಿ ದೊಡ್ಡ ಯುದ್ಧವು ನಡೆಯಿತು. ಗ್ರಾಂಟನ ಬಳಿಯಲ್ಲಿ 60,000 ಮಂದಿಯಿದ್ದರು. ಎದುರು ಕಡೆಯಲ್ಲಿ 33,000 ಮಂದಿ ಮಾತ್ರವೇ ಇದ್ದರು. ಯುದ್ಧದಲ್ಲಿ ಉತ್ತರದ ಸೈನ್ಯದ ತಂಡಗಳು ಶ್ಲಾಘ್ಯವಾದ ರೀತಿಯಲ್ಲಿ ಸಾಹಸಮಾಡಿದುವು. ಹೂಕರನು ಸುಮ್ಮನೆ ಕುಳಿತಿರಲಿಲ್ಲ. ಷೆರ್ಮನ್ನನು ಒಂದು ಪಕ್ಕದಿಂದಲೂ ಅವನು ಮತ್ತೊಂದರಿಂದಲೂ ಆಕ್ರಮಣಮಾಡಿ ಶತ್ರುವನ್ನು ಒತ್ತಿಸುತ್ತ ಬಂದರು. ಆದರೆ ಮುಂಭಾಗದಲ್ಲಿ ಶತ್ರುವಿಗೆ ಬಲವಾದ ರಕ್ಷಣೆಯಿದ್ದಿತು. ಮುಂಭಾಗದಲ್ಲಿ ನುಗ್ಗಿ ಶತ್ರುವಿನ ಮೇಲೆ ಕೈಮಾಡುವುದು ಅಸಾಧ್ಯವೆಂದು ಗ್ರಾಂಟನು ಭಾವಿಸಿದ್ದನು. ಹಾಗಿದ್ದರೂ ಕೂಡ ಟಾಮುಸ್ಸನ ಕೈಕೆಳಗಿದ್ದ ಭಾಗವು ಸಾಹಸಮಾಡಿ ಕಾರ್ಯವನ್ನು ಸಾಧಿಸಿಬಿಟ್ಟಿತು. ಆ ಸೈನಿಕರು ಯುದ್ಧಕ್ಕೆರಗಲು ಅಪ್ಪಣೆ ಬರುವುದೆಂದು ಕಾದು ಜುಗುಪ್ಸೆಹೊಂದಿದರು. ಹೊಂದಿ, ಅಪ್ಪಣೆಯನ್ನು ಕಾಯದೆಯೇ ಮುಂದೆ ನುಗ್ಗಿ ಮುಂಭಾಗದಿಂದ ಲಗ್ಗೆ ಹತ್ತಿದರು. ದಕ್ಷಿಣದ ಸೈನ್ಯವು ಓಡಿತು. ಗ್ರಾಂಟನು ತತ್‌ಕ್ಷಣವೇ ಹಿಂಬಾಲಿಸಿದನು. ಸೈನ್ಯವು ಚದರಿ ದಿಕ್ಕು ದಿಕ್ಕಿಗೆ ಓಡಿತು. ಒಟ್ಟಿನಲ್ಲಿ ಆ ವರುಷದಲ್ಲಿ ಇಷ್ಟು ವಿಷಯಗಳು ನಡೆದುವು: ದಕ್ಷಿಣವು ಉತ್ತರದಮೇಲೆ ದಂಡಯಾತ್ರೆ ಹೊರಟು ನಿಷ್ಫಲಹೊಂದಿತು: ದಕ್ಷಿಣದ ಪಕ್ಷದಲ್ಲಿ ಸೇರಿದ್ದ ಸಂಸ್ಥಾನಗಳ ಸಂಖ್ಯೆಯು ದಿನದಿನಕ್ಕೆ ಕಡಿಮೆಯಾಗಿ, ತೀರದ ರಾಜ್ಯಗಳು, ಅಲಬಾಮ, ಮಿಸಿಸಿಪ್ಪಿ ಸಂಸ್ಥಾನದಲ್ಲಿ ಒಂದು ಭಾಗ, ಇಷ್ಟುಮಾತ್ರ ಉಳಿದುವು.

ಯುದ್ಧಕಾಲದಲ್ಲಿ ಲಿಂಕನ್ನನಿಗೆ ಕೆಲಸವೇನಿದ್ದಿತೆಂಬುದು ಈಗ ತಿಳಿದಿರಬಹುದು. ನಿರ್ವಾಹಶಾಲಿಗಳೆಂದು ತೋರಿಬಂದವರನ್ನು ಸೈನ್ಯಾಧಿಪತ್ಯದಲ್ಲಿ ನೇಮಿಸುವುದೂ ನಿರ್ವಾಹಸಾಧ್ಯವೆಂದು ತೋರಿದ ರೀತಿಯನ್ನು ಯೋಚಿಸಿ ಅವರು ಅನುಸರಿಸುವಂತೆ ಅಪ್ಪಣೆಮಾಡುವುದೂ, ಯುದ್ಧನಿರ್ವಾಹವು ಸಾಧ್ಯವಾಗುವಂತೆ ಸಭೆಯ ಒತ್ತಾಸೆಯನ್ನು ಹೊಂದಿಸುವುದೂ ಅವನ ಮುಖ್ಯವಾದ ಕೆಲಸವಾಗಿದ್ದುವು. ಅವನ ಮಾರ್ಗವು ಕೆಲವುವೇಳೆ ತಪ್ಪದಿರುತ್ತಿರಲಿಲ್ಲ. ಆದರೆ ಆ ತಪ್ಪಿನಿಂದ ಹೆಚ್ಚಿನ ಕುಂದಕವಿರುತ್ತಿರಲಿಲ್ಲ. ಆಲೋಚನೆಯ ಸಭೆಯಲ್ಲಿ ಅವನ ಮಾತೇ ಮುಂದಾಗಿರುತ್ತಿದ್ದಿತು. ಆದರೆ ಅವನ ಸಲಹೆಗೆ ಇತರರ ಒಪ್ಪಿಗೆಯೂ ಇರುತ್ತಿದ್ದಿತು. ಯುದ್ಧದಲ್ಲಿ ಸೇನಾಪತಿಗಳು ಸಾಹಸವನ್ನೂ ವಿವೇಕವನ್ನೂ ಉಪಯೋಗಿಸಬೇಕೆಂಬುದು ಅವನ ಅಪೇಕ್ಷೆ; ಒಂದಾವೃತ್ತಿ ಮಾಡಿದ ಅಪ್ಪಣೆಯನ್ನು, ಬದಲಾವಣೆಯು ಅತ್ಯವಶ್ಯಕವಾಗಿ ತೋರಿದಾಗ ಮಾತ್ರ ಬದಲಾಯಿಸುತ್ತಿದ್ದನು. ಅಧಿಕಾರಿಗಳಲ್ಲಿ ಜಗಳವುಂಟಾಗದಂತೆ ಅವನು ಹಗಲೂ ಇರುಳೂ ನೋಡಿಕೊಳ್ಳುತ್ತಿದ್ದನು. ಹೂಕರನಿಗೂ ಹಾಲೆಕ್‌ನಿಗೂ ವಾಗ್ವಾದವೆದ್ದಾಗ ಲಿಂಕನ್ನನು ಅವುಗಳಿಗೆಲ್ಲಾ ಈಗ ಸಮಯವಿಲ್ಲವೆಂದು ಹೇಳಿಕಳುಹಿಸಿ ಪರಸ್ಪರ ಸೌಹಾರ್ದವುಂಟಾಗಲು ಪ್ರಯತ್ನಮಾಡಿದನು. ಗೆಟ್ಟಿಸ್‌ಬರ್ಗ್ ಯುದ್ಧದಲ್ಲಿ ಮಡಿದವರಿಗೆ ಸಮಾಧಿಯು ಏರ್ಪಟ್ಟಿತು. ಅಲ್ಲಿ ಅವರ ಗುಣಗಳನ್ನು ವರ್ಣಿಸಿ ಎವರೆಟ್ ಎಂಬ ಪ್ರಸಿದ್ಧವಾಗ್ಮಿಯು ಭಾಷಣಮಾಡಿದನು. ಕೊನೆಯಲ್ಲಿ ಕೆಲವು ಮಾತುಗಳನ್ನು ಹೇಳಲು ಲಿಂಕನ್ನನಿಗೆ ಸರದಿ ಬಂದಿತು. ಅವನ ಭಾಷಣವು ದೊಡ್ಡದಾಗಿರಲಿಲ್ಲ. ಆದರೂ ಅವನಾಡಿದ ಮಾತುಗಳಲ್ಲಿ "ಪ್ರತಿಯೊಂದಕ್ಕೂ ಲಕ್ಷ ವರಹಗಳ ಬೆಲೆಯನ್ನು ಕಟ್ಟ" ಬಹುದಾಗಿದ್ದಿತು.

"Four-score and seven years ago our fathers brought forth on this continent a new nation conceived in liberty and dedicated to the proposition that all men are created equal. Now we are engaged in a great civil war, testing whether that nation or any nation so conceived and so dedicated, can long endure. We are met on a great battle-field of that war. We have come to dedicate a portion of that field as a final resting place for those who here gave their lives that that nation might live. It is altogether fitting and proper that we should do this. But, in a larger sense, we cannot dedicate—we cannot consecrate—we cannot hallow—this ground. The brave men, living and dead, who struggled here have consecrated it far above our poor power to add or to detract. The world will little note nor long remember what we say here, but it can never forget what they did here. It is for us, the living, rather to be dedi-

cated here to the unfinished work which they who fought here have thus far so nobly advanced. It is rather for us to be here dedicated to the great task remaining before us—that from these honoured dead we take increased devotion to that cause for which they gave the last full measure of devotion ; that we here highly resolve that these dead shall not have died in vain ; that this nation, under God, shall have a new birth of freedom ; and that government of the people, by the people, for the people, shall not perish from this earth."

---

## ೨ ನೆಯ ಅಧ್ಯಾಯ

---

### ಸೈನ್ಯಕ್ಕೆ ಸೇರಲು ಬಲಾತ್ಕಾರ—ಆಡಳಿತದ ವಿಚಾರ.

ಮೊನ್ನೆ ನಡೆದ ಯುದ್ಧವನ್ನೂ ಅದರ ಪ್ರಯತ್ನಗಳನ್ನೂ ಪರಿಣಾಮಗಳನ್ನೂ ನೋಡಿದರೆ ಅಮೆರಿಕದಲ್ಲಿ ನಡೆದುದು ಸಾಮಾನ್ಯವೆನ್ನಿಸುವುದು. ಆದರೆ ಅದರಲ್ಲಿ ಧನವ್ಯಯವೂ ಪ್ರಾಣವ್ಯಯವೂ ಆದುದು ಬಹಳ ಹೆಚ್ಚು. ಕದನಗಳು ಲೆಕ್ಕವಿಲ್ಲದಷ್ಟು ನಡೆದುವು. ಅವುಗಳಲ್ಲಿ ಪ್ರಾಣನಷ್ಟವು ಸೈನ್ಯದ ನಾಲ್ಕುಪಾಲುಗಳಲ್ಲಿ ಒಂದರಷ್ಟಾಗುತ್ತಿದ್ದಿತು. ಕೊನೆಕೊನೆಯಲ್ಲಂತೂ ದಕ್ಷಿಣದ ಸೈನ್ಯಕ್ಕೆ ತನಗಿಂತ ಎಷ್ಟೋ ಹೆಚ್ಚಿನ ಸಂಖ್ಯೆಯುಳ್ಳ ಉತ್ತರದ ಸೈನ್ಯದೊಡನೆ ಹೊಡೆದಾಟವು ಪ್ರಾಪ್ತನಾಗುತ್ತಿದ್ದಿತು. ಆದರ ನಷ್ಟವು ಈರೀತಿಯಾದರೆ ಉತ್ತರದ ನಷ್ಟವು ಮತ್ತೊಂದು ರೀತಿಯನ್ನು ಹೊಂದುತ್ತಿದ್ದಿತು. ದಂಡಿಗೆ ತಾನಿರುವ ಪ್ರದೇಶದ ವಿಷಯವಾಗಿ ತಿಳುವಳಿಕೆಯು ಸಾಲದಿದ್ದುದರಿಂದ ತಪ್ಪುದಾರಿಯಲ್ಲಿ ಹೋಗಿ ಏಟನ್ನು ತಿನ್ನುತ್ತಿದ್ದಿತು. ಆದರೆ ಒಟ್ಟಿನಲ್ಲಿ ದಕ್ಷಿಣದ ಪ್ರಜಾಸಂಖ್ಯೆಯನ್ನೂ ಆದ ನಷ್ಟವನ್ನೂ ಹೋಲಿಸಿ ನೋಡಲಾಗಿ, ನಷ್ಟವು ಉತ್ತರಕ್ಕಾದ ನಷ್ಟಕ್ಕೆ ದ್ವಿಗುಣವಾಗುತ್ತಿದ್ದಿತು.

ಎರಡು ಕಡೆಯಲ್ಲಿಯೂ ಬಲಾತ್ಕಾರವನ್ನುಪಯೋಗಿಸದೆ ದಂಡನ್ನು ಒದಗಿಸುವುದು ಸಾಧ್ಯವಾಗಲಿಲ್ಲ. ಬಲಾತ್ಕಾರದ ಅವಶ್ಯಕತೆಯು ದಕ್ಷಿಣದಲ್ಲಿ ಬೇಗಲೇ ಪತ್ತೆಯಾಯಿತು. ಪತ್ತೆಯಾಗಿ ಅಲ್ಲಿನ ಸರ್ಕಾರವು ದೊರೆತ ಪ್ರತಿಯೊಬ್ಬ ಕಟ್ಟಾಳನ್ನೂ ಉಪಯೋಗಿಸಿಕೊಂಡಿತು. ಉತ್ತರದಲ್ಲಿ ತಲೆಹೋಗುವಂತಹ ಈ ಅವಶ್ಯಕತೆಯು

ಕಂಡುಬರಲಿಲ್ಲ; ಜನರು ಅಷ್ಟು ಪ್ರಯತ್ನವನ್ನೂ ಮಾಡಬೇಕಾಗಿರಲಿಲ್ಲ; ಅಷ್ಟು ಜೀವವನ್ನೂ ತೆರಬೇಕಾಗಲಿಲ್ಲ. ಒಂದು ಸಮಯದಲ್ಲಿ, ಸೈನ್ಯಕ್ಕೆ ಜನರು ಸಾಕೆಂಬ ಯೋಚನೆಯಿಂದ ಹೊಸಬರನ್ನು ಸೇರಿಸುವ ಪ್ರಯತ್ನವನ್ನೂ ನಿಲ್ಲಿಸಿದರು. ಆದರೆ, ಜನರು ತಾವಾಗಿ ಬಂದು ಸೇರಿಕೊಳ್ಳುವುದು ಕಡಿಮೆಯಾಗಲಾಗಿ ಯುದ್ಧದ ಮಧ್ಯದಲ್ಲಿ ಬಲಾತ್ಕಾರವನ್ನು ಚಲಾವಣೆಗೆ ತರಬೇಕಾಯಿತು. ಅದರ ಸಹಾಯದಿಂದ ಯುದ್ಧದ ಕೊನೆಗಾಲದಲ್ಲಿ ಉತ್ತರದ ದಂಡಿನೊಳಗೆ 9,80,000 ಮಂದಿ ಬಿಳಿಯ ಜನರಿದ್ದರು. ದೇಶಕ್ಕೆ ವಿಪತ್ತು ಒದಗಿರುವಾಗ ದೇಶಾಭಿಮಾನವನ್ನು ಹೊಂದು ವವರು ಒಬ್ಬಿಬ್ಬರಲ್ಲ; ತಮ್ಮ ಸರ್ವಸ್ವವನ್ನು ನೀಗಿಕೊಂಡಾದರೂ ದೇಶವನ್ನು ಉಳಿಸಬೇಕೆಂದು ಪ್ರಜೆಗಳು ಆತುರಗೊಳ್ಳುವರು. ಹಾಗಿರುವಲ್ಲಿ ಉತ್ತರದಲ್ಲಿ ಬಲಾತ್ಕಾರವನ್ನು ಏಕೆ ಉಪಯೋಗಿಸಬೇಕಾಯಿತೆನ್ನಬಹುದು. ಉತ್ತರದಲ್ಲಿ ಹಾಗಿರಲಿಲ್ಲ. ಪಂಗಡಗಳೂ ಜನಾಂಗಭೇದಭಾವಗಳೂ ಇತರ ಕಾರಣಗಳೂ ಹೆಚ್ಚಿ ದೇಶಸೇವೆಯ ಭಾವನೆಯು ಕೆಲವರ ಮನಸ್ಸಿನಲ್ಲಿ ಚೆನ್ನಾಗಿ ಅಂಟಿರಲಿಲ್ಲ. ಆದರೆ ಅಂಥವರು ಅತ್ಯಲ್ಪಮಂದಿ.

ಯುದ್ಧಪ್ರಾರಂಭದಲ್ಲಿ ದೇಶವಿದ್ದ ಸ್ಥಿತಿಯನ್ನೂ ಯುದ್ಧವು ಯಾವ ವಿಧವಾಗಿ ಪ್ರಾರಂಭವಾಯಿತೆಂಬುದನ್ನೂ ವಿಚಾರಮಾಡಿ ನೋಡಿದರೆ, ಸೈನ್ಯವನ್ನು ಕೂಡಿಸಿ ಸನ್ನಾಹಮಾಡುವುದರಲ್ಲಿ ದಕ್ಷಿಣವೇ ಹೆಚ್ಚಿನ ಚಟುವಟಿಕೆಯನ್ನು ತೋರಿಸಿತೆಂಬುದು ತಿಳಿದುಬರುವುದು. ಸಮ್‌ಟರ್ ದುರ್ಗದ ಮೇಲೆ ದಕ್ಷಿಣವು ಫಿರಂಗಿಯನ್ನು ಇನ್ನೂ ಎತ್ತಿಕಟ್ಟಿರಲಿಲ್ಲ. ಆಗಲೇ ಜೆಫರ್‌ಸ್ ಡೇವಿಸ್ಸನು ಪ್ರಯತ್ನಮಾಡಿ ಆಗ ಉತ್ತರದ ಅಧೀನದಲ್ಲಿದ್ದ ಸೈನ್ಯಕ್ಕೆ ಎರಡರಷ್ಟು ಸೈನ್ಯವನ್ನು ದಕ್ಷಿಣದಲ್ಲಿ ಕೂಡಿಸಿದನು. ಮೂರರಷ್ಟನ್ನು ಕೂಡಿಸುವುದಕ್ಕೂ ಅವನಿಗೆ ಅಧಿಕಾರವಿದ್ದಿತು. ಕೆಲವು ಸಂಸ್ಥಾನಗಳು ಮೊದಲುಮೊದಲು ಸರ್ಕಾರವು ಹಾಗೆ ಮಾಡಕೂಡದೆಂದುವು. ಆದರೆ ಕೂಡಲೇ ಸುಮ್ಮನಾಗಿ ತಮ್ಮ ಸರ್ಕಾರಕ್ಕೆ ರಕ್ಷಣೆಯ ಪ್ರಯತ್ನದಲ್ಲಿ ಸಂಪೂರ್ಣವಾದ ಸ್ವಾತಂತ್ರ್ಯವುಂಟೆಂದು ಒಪ್ಪಿಕೊಂಡುವು.

ಪ್ರಜೆಗಳು ತಾವಾಗಿಯೇ ಇಷ್ಟಪಟ್ಟು ಸೈನ್ಯಕ್ಕೆ ಸೇರಿಕೊಳ್ಳುವಂತಹ ಉತ್ಸಾಹವು ದಕ್ಷಿಣದಲ್ಲಿ ಇದ್ದಿತೋ ಇಲ್ಲವೋ ಹೇಳುವುದು ಕಷ್ಟ. ಆದರೆ ಬಲಾತ್ಕಾರದಿಂದ ಸೇರಿಸಲು 1862ರಲ್ಲಿಯೇ ಅಲ್ಲಿನ ಪ್ರೆಸಿಡೆಂಟನಿಗೆ ಅಧಿಕಾರ ಬಂದಿತು. ಆ ಸಂಬಂಧದಲ್ಲಿ ಒಂದು ನಿಬಂಧನೆಯೇರ್ಪಟ್ಟಿತು. ಹದಿನೆಂಟು ವರುಷಗಳಿಂದ ಮೂವತ್ತೈದು ವರುಷಗಳೊಳಗೆ ವಯಸ್ಸುಳ್ಳ ಯಾವನನ್ನಾದರೂ ಬಿಳಿಯ ಮನುಷ್ಯನನ್ನು ಸೈನ್ಯಕ್ಕೆ ತೆಗೆದುಕೊಳ್ಳಬಹುದಾಯಿತು. ಕೆಲವು ಅನಿವಾರ್ಯವಾದ ಕಾರಣಗಳಿದ್ದರೆ ಆ ಮನುಷ್ಯನನ್ನು ಬಿಟ್ಟುಬಿಡಬಹುದೆಂದಿದ್ದ ಅವಕಾಶವು ಕೆಲವು ಕಾಲದ ಮೇಲೆ ತಪ್ಪಿಹೋಯಿತು. ಸೆಪ್ಟೆಂಬರ್‌ನಲ್ಲಿ ವಯಸ್ಸು ಹದಿನೆಂಟು—ನಾಲ್ವತ್ತೈದಕ್ಕೆ ಬದಲಾಯಿಸಲ್ಪಟ್ಟಿತು. ಆದರೆ 1864ರಲ್ಲಿ ಹದಿನೇಳು—ಐವತ್ತಕ್ಕೆ ನಿಂತಿತು. ಈ ಬಲಾತ್ಕಾರವನ್ನು ಸಹಿಸಲಾರದೆ ಜನಗಳು ವಿಶೇಷವಾಗಿ ಗೊಣಗಿದರು. ನಿಬಂಧನೆಯು ಧರ್ಮಸಮ್ಮತವಾದುದಲ್ಲವೆಂದು ಕೆಲವರು ಭಾವಿಸಿದರು. ಈ ಕಾರಣಗಳು ಸೈನಿ

ಕರನ್ನು ಜೊತೆಗೊಳಿಸುವ ಕಾರ್ಯದಲ್ಲಿ ತೊಂದರೆಯನ್ನು ತಂದುವು. ಆದರೂ ದಕ್ಷಿಣದ ಸರ್ಕಾರವು ನಿರ್ದಾಕ್ಷಿಣ್ಯವಾಗಿ ಬಲಾತ್ಕಾರವನ್ನುಪಯೋಗಿಸಿತು. ಸರ್ಕಾರವು ತಮ್ಮಲ್ಲಿಯೂ ಬಲಾತ್ಕಾರವನ್ನು ತರುವುದೆಂಬುದನ್ನು ಇನ್ನೂ ಅರಿಯದಿದ್ದ ಉತ್ತರದ ಪ್ರಜೆಗಳು ಈ ಸುದ್ದಿಯನ್ನು ಕೇಳಿ ಅತ್ಯಂತ ಕ್ರೂರವಾದ ಕರ್ಮವೆಂದು ನಿಂದಿಸಿ, ದಕ್ಷಿಣದ ಸಂಸ್ಥಾನಗಳು ಸಂಯೋಗವನ್ನು ಬಿಟ್ಟುದೂ ಇಂತಹ ಕಾರಣದ ದೆಸೆಯಿಂದಲೇ ಎಂದು ಭಾವಿಸಿದರು. 1864ರಲ್ಲಿ ಬಲಾತ್ಕಾರದ ಸಹಾಯದಿಂದಲೂ ಬೇಕಾದಷ್ಟು ಸೈನ್ಯವನ್ನು ಸೇರಿಸಲಾಗಲಿಲ್ಲ. ನಿರ್ವಾಹವಿಲ್ಲದೆ ಸೇರಿದವರು ಸ್ವಲ್ಪ ಕಾಲದೊಳಗಾಗಿ ಸೈನ್ಯವನ್ನು ಬಿಟ್ಟು ಹೊರಟುಹೋದರು. ಅವರಿಗೆ ಬಲಾತ್ಕಾರವು ಅಸಹ್ಯವಾದುದರಿಂದ ಹಾಗೆ ಮಾಡಲಿಲ್ಲ. ದಕ್ಷಿಣದಕಡೆ ನಷ್ಟವು ವಿಶೇಷವಾಗಿ, ಯುದ್ಧದಲ್ಲಿ ಜಯದಾಸೆಯಿಲ್ಲವೆಂಬ ಭಾವನೆಯು ದೃಢವಾಗುತ್ತ ಬಂದುದು ಕಾರಣವಾಯಿತು. ಅಂತ್ಯದಲ್ಲಿ ಬಲಾತ್ಕಾರದಿಂದ ಎಳ್ಳಷ್ಟು ಪ್ರಯೋಜನವೂ ದೊರೆಯಲಿಲ್ಲ. ಆದರೆ, ಅಲ್ಲಿಯವರೆಗೂ ಜನರು ಸೈನ್ಯವನ್ನು ಸೇರಿ ಯುದ್ಧಮಾಡಲು ಕಾರಣವೇನೆನ್ನಬಹುದು. ದಕ್ಷಿಣದ ಜನರು ಬಲಾತ್ಕಾರಕ್ಕೆ ಒಳಪಟ್ಟು ಸೈನಿಕರಾಗಲಿಲ್ಲ ; ಜೆಫರ್‌ಸ‌ಡೇವಿಸ್ಸನ ನಿರಂಕುಶಪ್ರಭುತ್ವಕ್ಕೆ ಹೆದರಿ ಆಯುಧವನ್ನು ಗ್ರಹಣಮಾಡಲಿಲ್ಲ ; ಯುದ್ಧಮಾಡಿ ಯುದ್ಧದಲ್ಲಿ ಗೆಲ್ಲುವೆವೆಂಬ ಭರವಸೆಯಿದ್ದಿತು. ಅದುವರೆಗೂ ದಕ್ಷಿಣದವನು ಶಸ್ತ್ರವನ್ನು ಹಿಡಿದು ನಿಂತನು. ಆದರೆ ಕೊನೆಕೊನೆಯಲ್ಲಿ ಆ ಭರವಸೆಯು ನೊಂದಿಹೋಯಿತು. ಚಳಿಯ ದೆಸೆಯಿಂದ ಆರಿಹೋಗಿ ಬೂದಿಯಾಗುತ್ತಿರುವ ಕೆಂಡವನ್ನು ಎಷ್ಟು ಊದಿದರೂ ಏನುಮಾಡಿದರೂ ಉಜ್ವಲಮಾಡಿ ಉಬ್ಬಿಸಲಾಗುವುದಿಲ್ಲ, ದಕ್ಷಿಣದ ಪ್ರಜೆಯು ನಿರಾಶನಾದನು.

ಉತ್ತರಭಾಗದಲ್ಲಿ ಪ್ರಜೆಗಳ ಸಂಖ್ಯೆಯು ಎರಡರಷ್ಟಿದ್ದಿತು. ಆದಕಾರಣ ಸೈನ್ಯಕ್ಕೆ ತಾವಾಗಿಯೇ ಬಂದು ಸೇರುವವರು ಬಹಳಮಂದಿಯಿದ್ದರು. ಯುದ್ಧದ ತರುಣದಲ್ಲಿಯೇ ಬಲಾತ್ಕಾರವನ್ನು ಉಪಯೋಗಿಸಲು ಅವಶ್ಯಕತೆಯುಂಟಾಗಲಿಲ್ಲ. ಆದರೆ ಅಷ್ಟರಲ್ಲಿ ಸರ್ಕಾರವು ಒಂದು ಅವಿವೇಕದ ಕೆಲಸವನ್ನು ಮಾಡಿತು. ಅದರಿಂದ, ನುಗ್ಗಿಬರುತ್ತಲಿದ್ದ ಪ್ರವಾಹಕ್ಕೆ ತಡೆಯನ್ನು ಕಟ್ಟಿ ಕೆಡಿಸಿದಂತಾಯಿತು. ಸಾಕಾದಷ್ಟು ಸೈನ್ಯವೇರ್ಪಟ್ಟಿರುವುದೆಂದು ಭಾವಿಸಿ ಸೈನ್ಯಕ್ಕಾಗಿ ಜನಗಳನ್ನು ಸೇರಿಸುತ್ತಿದ್ದ ಇಲಾಖೆಯು ತಾತ್ಕಾಲಿಕವಾಗಿ ಮುಚ್ಚಲ್ಪಟ್ಟಿತು. ಇದಕ್ಕೆ ಸ್ಟಾಂಟನ್ನನು ಕಾರಣನೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಅವನು ಹೀಗೆ ಮಾಡಲು ಒಂದು ಕಾರಣವೂ ಇದ್ದಿತು. ಸೈನ್ಯಕ್ಕೆ ಸೇರಲಿಷ್ಟವುಳ್ಳವರು ನುಗ್ಗಿನುಗ್ಗಿ ಬಂದರು. ಸದ್ಯದಲ್ಲಿ ಸೇರಿದ್ದವರನ್ನು ವಿಂಗಡಿಸಿ ಅವರಿಗೆ ಆಯುಧಗಳನ್ನೂ ಇತರ ಪದಾರ್ಥಗಳನ್ನೂ ಒದಗಿಸಿ ತರಪೇತುಮಾಡಲು ಇನ್ನೂ ಅವಕಾಶವಿರಲಿಲ್ಲ. ಹೀಗಿರುವಲ್ಲಿ ಹೊಸಹೊಸದಾಗಿ ಜನಗಳನ್ನು ಸೇರಿಸಿಕೊಳ್ಳುತ್ತಲೇ ಇದ್ದರೆ ಸೇರಿದವರು ಸೈನಿಕರಾಗುವುದು ಯಾವಾಗ ? ಎಂದು ಸ್ಟಾಂಟನ್ನನು ಯೋಚಿಸಿದನು. ಮೆಕ್‌ಕ್ಲೆಲ್ಲನ್ನನು ಸೈನ್ಯವು ಬೇಕು ಸೈನ್ಯವು ಬೇಕೆಂದು ದಿನಕ್ಕೆ ಮೂವತ್ತು ಬಾರಿ ತಂತಿಯನ್ನು ಕಳುಹಿಸುತ್ತಿದ್ದನು. ಅವನಿಗೆ ದೊಡ್ಡದೊಂದು ಸೈನ್ಯವನ್ನು ಒದಗಿಸಿಕೊಟ್ಟಾಯಿತು.

ಆದರೆ ಮುಂದೆ ನುಗ್ಗಿ ಯುದ್ಧವನ್ನು ಮಾಡದೆ ಯಾರ್ಕ್ ಟೌನಿನ ಬಳಿಯಲ್ಲಿ ಕಾಲೂರಿ ನಿಂತು ಕಾಲವನ್ನು ಕಳೆದನು. ಇದೇ ಸಮಯದಲ್ಲಿ ದಕ್ಷಿಣವು ಬಲಾತ್ಕಾರದ ನಿಬಂಧನೆಯನ್ನು ರಚಿಸಿಕೊಂಡು ಸೈನಿಕರನ್ನು ಸೇರಿಸುತ್ತಲಿದ್ದಿತು. ಉತ್ತರದ ದಂಡು ಮಾತ್ರ ತಟಸ್ಥವಾಗಿದ್ದಿತು. ಆದರೆ ದಂಡಿಗಾಗಿ ಆಗುತ್ತಿದ್ದ ವೆಚ್ಚವು ವಿಶೇಷ ವಾಯಿತು. ಇತ್ತಕಡೆ ಹಾಲೆಕ್‌ನು ಒಂದೇಪೆಟ್ಟಿಗೆ ನುಗ್ಗಿ ದಕ್ಷಿಣದ ಕೆಲವು ಭೂಮಿಯನ್ನು ಆಕ್ರಮಿಸಿ ದುರ್ಬಲಮಾಡುವುದಕ್ಕೆ ಬದಲಾಗಿ ಜೂಗರಿಸುತ್ತ ಮುಂದೆ ಹೋಗುತ್ತಿದ್ದನು. ಅವನ ತಾಮಸವು ಸೈನಿಕರಿಗೂ ಜುಗುಪ್ಸೆಯನ್ನುಂಟು ಮಾಡುತ್ತಿದ್ದಿತು. ಕಡೆಗೂ ಮೆಕ್‌ಕ್ಲೆಲ್ಲನ್ನನು ಏನನ್ನೂ ಮಾಡಲಿಲ್ಲ. ಸೈನ್ಯವೂ ಸನ್ನಾಹವೂ ಸಾಲದೆಂದು ಮಾತ್ರ ಉತ್ತರ ಹೇಳುತ್ತಿದ್ದನು. ಜುಲೈ ತಿಂಗಳಲ್ಲಿ ಅವನು ಮಾಡಿದ ಪ್ರಯತ್ನಗಳು ವ್ಯರ್ಥವಾದುವು. ಕುತ್ತವನ್ನು ಹೇಳುವುದು ಹೆಚ್ಚಾ ಯಿತು. ಅದನ್ನು ಕೇಳಲಾರದೆ ಸರ್ಕಾರವು ಮತ್ತೆ ಇಲಾಖೆಯನ್ನೇರ್ಪಡಿಸಿತು. ಆಗಲೂ ಕೂಡ ಜನಗಳು ಉತ್ಸಾಹಭರಿತರಾಗಿ ಬಂದು ಸೇರುತ್ತಿದ್ದರು. ಪ್ರಯೋ ಜನವು ಮಾತ್ರ ಸ್ವಲ್ಪವೂ ಇರಲಿಲ್ಲ. ಬುಲ್‌ರನ್ನಿನ ಎರಡನೆಯ ಕದನದಲ್ಲಿ ಸೋಲಾಯಿತು ; ಆಂಟಿಯಟಮ್ ಯುದ್ಧದಲ್ಲಿ ಸೋಲೂ ಅಲ್ಲ, ಗೆಲುವೂ ಅಲ್ಲ ವಾಯಿತು ; ಫ್ರೆಡರಿಕ್ಸ್‌ಬರ್ಗ್‌ನಲ್ಲಿ ಸೋಲು ; ಇವಿಷ್ಟರಜತೆಗೆ ರೋಸ್‌ಕ್ರ್ಯಾಸ್ ಮತ್ತು ಬ್ಯುಯೆಲ್ಲರ ನಿರ್ವಾಹಗಳು ಬಹಳ ಕಾಲದವರೆಗೆ ನಡೆದರೂ ಕೊನೆಯಲ್ಲಿ ನಿರಾಶೆಯನ್ನೇ ತಂದುವು. ಜನರ ಉತ್ಸಾಹವು ಉಕ್ಕುತ್ತಲೇ ಇದ್ದಿತು; ದಕ್ಷಿಣವು ಸೈನ್ಯವನ್ನು ನುಗ್ಗಿಸಿ ಉತ್ತರದ ಸೀಮೆಗಳನ್ನು ಲೂಟಿಮಾಡಿಸುವುದೆಂಬುದು ತಿಳಿದ ಕೂಡಲೇ ಸೈನ್ಯಕ್ಕೆ ಸೇರಿಕೊಳ್ಳಲು ಅವರು ತಂಡತಂಡವಾಗಿ ನುಗ್ಗುತ್ತಿದ್ದರು. ಆದರೆ, ಹೀಗೆ ಸೋಲುಗಳೇ ಆಗುತ್ತಿದ್ದಲ್ಲಿ ದಕ್ಷಿಣದ ಕೊಬ್ಬನ್ನು ಅಡಗಿಸುವುದು ಯಾವಾಗ ? ಹೇಗೆ ? ಕಡೆಕಡೆಗೆ ಉತ್ಸಾಹವು ತಗ್ಗಿತು. ಲಿಂಕನ್ನನು ಅದನ್ನು ನೋಡಿ ಕೊರಗಿದನು. ಆದರೆ ಅದು ವಿಚಿತ್ರವಾಗಿ ಕಾಣಲಾರದು.

ಬಲಾತ್ಕಾರದ ನಿಬಂಧನೆಯನ್ನು ಮಾಡುವುದಕ್ಕೆ ಮುಂಚೆ ಸರ್ಕಾರವು ಒತ್ತಾಯಮಾಡಿ ನೋಡಿತು. ಜನರನ್ನು ಸೇರಿಸುವುದು ಸಾಧ್ಯವಾಗಲಿಲ್ಲ. ಮಾರನೆಯ ವರುಷ (1863) ನಿಬಂಧನೆಯನ್ನು ನಿರ್ಮಿಸಿ, ಪ್ರಾಯಸಮರ್ಥರಾದ ಜನರನ್ನು ಹಿಡಿದು ಸೈನ್ಯಕ್ಕೆ ಸೇರಿಸಲು ಸಂಘವನ್ನೇರ್ಪಡಿಸಿತು. ಆ ಸಂಘದ ಮುಖ್ಯಸ್ಥನು ದೇಶವನ್ನು ಡಿಸ್ಟ್ರಿಕ್ಟುಗಳಾಗಿ ಭಾಗಮಾಡಿ ಪ್ರತಿಯೊಂದು ಡಿಸ್ಟ್ರಿಕ್ಟಿನಲ್ಲಿಯೂ ಸಂಘದ ಶಾಖೆಯನ್ನು ಕಲ್ಪಿಸಿದನು. ಈ ಡಿಸ್ಟ್ರಿಕ್ಟಿನಲ್ಲಿ ಇಷ್ಟು ಜನರು ಒದಗಬೇಕೆಂಬುದು ಅವನಿಂದ ವಿಧಿಸಲ್ಪಟ್ಟಿತು. ತಾವಾಗಿ ಬಂದು ಸೇರುವವರಿದ್ದರೆ ಅಂಥವರನ್ನೂ ಕರೆದುಕೊಳ್ಳಬಹುದೆಂದು ಅವನು ಶಾಖೆಗಳಿಗೆ ಅಪ್ಪಣೆಮಾಡಿದನು. ಆ ಜನರೇ ಹೆಚ್ಚಾಗಿ ದೊರೆತಲ್ಲಿ ಬಲಾತ್ಕಾರವನ್ನು ಉಪಯೋಗಿಸಬೇಕಾದುದಿರಲಿಲ್ಲ. ಸರ್ಕಾರವು ಜನರಿಗೆ ಇನ್ನೂ ಒಂದು ಅವಕಾಶವನ್ನು ಕೊಟ್ಟಿತು. ಸೈನ್ಯಕ್ಕೆ ಸೇರಿ ನಿಂತು ಹೊಡೆ ದಾಡಲು ಇಷ್ಟಪಡದಿದ್ದವರು ಮುನ್ನೂರು ಡಾಲರುಗಳನ್ನು ಕೊಟ್ಟಪಕ್ಷದಲ್ಲಿ ಸ್ವೇಚ್ಛೆಯಿಂದ ಹೋಗಬಹುದಾಯಿತು. ವ್ಯಾಪಾರಗಾರರೂ ಇತರ ಕೆಲಸಗಾರರೂ

ಹಾಗೆ ಮಾಡಿದರು. ಈ ಉಪಾಯದಿಂದ ಬಂದ ಆದಾಯವು ಇಲಾಖೆಯ ವೆಚ್ಚಕ್ಕೆ ವಿನಿಯುಕ್ತವಾಯಿತು.

ಬಲಾತ್ಕಾರದಿಂದ ಸೇರುವ ವಿಚಾರವನ್ನೂ ಸ್ವೇಚ್ಛೆಯಿಂದ ಸೇರುವ ವಿಚಾರವನ್ನೂ ಹೋಲಿಸಿ ನೋಡಿ ಪ್ರಜೆಗಳು ಎರಡನೆಯದನ್ನೇ ಅನುಮೋದಿಸಿದರು. ಅದು ಲಾಭಕರವಾದುದು. ಸ್ವೇಚ್ಛೆಯಿಂದ ಸೇರಿಬಂದವರಿಗೆ ಸರ್ಕಾರದಿಂದ ಸಂಭಾವನೆಯು ದೊರೆಯುತ್ತಿದ್ದಿತು. ಡಿಸ್ಟ್ರಿಕ್ಟುಗಳಲ್ಲಿ ಯಾವುದು ಸ್ವೇಚ್ಛೆಯಿಂದ ಬಂದವರನ್ನು ಹೆಚ್ಚಾಗಿ ಸೇರಿಸಿ ಕಳುಹಿಸಬಲ್ಲದೆಂದು ಸ್ಪರ್ಧೆ ಹತ್ತಿತು. ಆ ಸೈನಿಕರಿಗೆಲ್ಲಾ ಬಹುಮಾನವು ಸಿಕ್ಕುತ್ತಿದ್ದಿತು! ಆದರೆ ದ್ರವ್ಯದ ಆಸೆಯು ಹುಟ್ಟಿದರೆ ಸುಳ್ಳೂ ಮೋಸವೂ ಹುಟ್ಟಿ ಹೆಚ್ಚುವುವು. ಸತ್ಯಸಂಧತೆಯು ಕ್ಷಯಿಸುವುದು. ಜನರು ಬಹುಮಾನದ ಆಸೆಗೆ ಬೇಗಬೇಗ ಬಂದು ಸೇರಿಕೊಳ್ಳುವುದು; ಸೇರಿಕೊಂಡು ಬಹುಮಾನವು ದೊರೆತಮೇಲೆ ಸೈನ್ಯವನ್ನು ತ್ಯಜಿಸಿ ಹೋಗಿ ಮತ್ತೆ ಹೊಸದಾಗಿ ಸೇರಿಕೊಳ್ಳುವುದು; ಆಗ ಬಹುಮಾನವು ಮತ್ತೆ ದೊರೆಯುವುದು. ಹೀಗೆ ನಿಲುಗಡೆಯಿಲ್ಲದಂತೆ ಸೇರಿಕೊಂಡು ನಿಲುಗಡೆಯಿಲ್ಲದಂತೆ ಬಹುಮಾನವನ್ನು ಪಡೆಯಬಹುದು — ಕೆಲವರು ತುಂಟರು ಹೀಗೆ ಮಾಡಿದರು. ಸೇರಿದವರ ಸಂಖ್ಯೆಯೂ ಅವರಿಗೆ ಬಹುಮಾನವಾಗಿ ಕೊಟ್ಟ ದ್ರವ್ಯದ ಸಂಖ್ಯೆಯೂ ಏರಿತು. ಆದರೆ ಸೈನ್ಯದಲ್ಲಿ ಅನೇಕಮಂದಿಯನ್ನು ಮಾತ್ರ ಕಾಣಲಿಲ್ಲ. ಅಂಥವರು ತಲೆತಪ್ಪಿಸಿಕೊಳ್ಳಲು ಕಾರಣವೂ ಗೊತ್ತಾಗಲಿಲ್ಲ. ಇತರ ನ್ಯೂನತೆಗಳೂ ಇದ್ದುವು. ಬಲಾತ್ಕಾರವನ್ನು ಚಲಾವಣೆಗೆ ತರಲು ಇದೇ ಮೊದಲು; ಈ ಮಾರ್ಗವು ಇನ್ನೂ ಹೊಸದು. ಆದಕಾರಣ ಈ ವಿಷಯದಲ್ಲಿ ಸರ್ಕಾರಕ್ಕೆ ತಿಳುವಳಿಕೆಯು ಕಡಿಮೆಯಾಗಿದ್ದಿತು. ಸಾವಕಾಶವಾಗಿ ಮಾಡಲು ಕಾಲವಿರಲಿಲ್ಲ. ಅಲ್ಲದೆ, ಆ ಕೆಲಸವು ಸರಿಯಾಗಿ ನಡೆಯದಂತೆ ಡೆಮೊಕ್ರೆಟರೂ ದಕ್ಷಿಣದಲ್ಲಿ ಅಭಿಮಾನವುಳ್ಳ ಜನರೂ ಅಡ್ಡಿಯನ್ನು ತರುತ್ತಿದ್ದರು. ಆದರೆ ಒಟ್ಟಿನಲ್ಲಿ ದೇಶವು ಬಲಾತ್ಕಾರವು ಅವಶ್ಯಕವಾದುದೆಂದೇ ನಂಬಿ ಸರ್ಕಾರದ ಅಪ್ಪಣೆಗಳನ್ನು ನಡೆಯಿಸಿತು. ಪ್ರಜೆಗಳಿಗೆ ಅಷ್ಟು ಒತ್ತಿ ಹೇಳಬೇಕಾದುದೇ ಇರಲಿಲ್ಲ. ಮುಂದೆ ಯುದ್ಧದಲ್ಲಿ ತಪ್ಪದಂತೆ ಜಯವಾಗಲಾಗಿ ಸೈನ್ಯಕ್ಕೆ ಸೇರಿಕೊಳ್ಳುವವರ ಉತ್ಸಾಹವು ಹೆಚ್ಚಿತು. ಉತ್ತರವು ದಕ್ಷಿಣಕ್ಕಾದಂತೆ ಸೈನಿಕರ ವಿಷಯದಲ್ಲಿ ರಿಕ್ತವಾಗಿ ಕಷ್ಟಪಡಲಿಲ್ಲ.

ಬಲಾತ್ಕಾರವು ನ್ಯಾಯವಾದುದೇ ಎಂದು ಕೆಲವರು ಪ್ರಶ್ನೆಹಾಕಿದರು. ಲಿಂಕನ್ನನ ಅಭಿಪ್ರಾಯವು ಯುಕ್ತವಾಗಿದ್ದಿತು. ಶಾಸನಕ್ರಮದಲ್ಲಿ ಆ ಸಂಬಂಧದಲ್ಲಿ ಹೇಳಿದ್ದ ಮಾತಿಗೆ ಅರ್ಥವನ್ನು ಈ ವಿಧವಾಗಿಯೂ ಮಾಡಬಹುದಾಗಿದ್ದಿತು. ಯುದ್ಧಕಾಲದಲ್ಲಿ ಕಾಂಗ್ರೆಸ್ ಸಭೆಯು ಸೈನ್ಯವನ್ನು ಒದಗಿಸಿ ಸಹಾಯಮಾಡಬೇಕೆಂಬ ಷರತ್ತಿಗೆ ಅನುಸಾರವಾಗಿ ಸಮಯೋಚಿತವಾಗಿ ಬಲಾತ್ಕರಿಸುವುದಕ್ಕೆ ಅವಕಾಶವು ಸರ್ಕಾರಕ್ಕೆ ದೊರೆಯುತ್ತಿದ್ದಿತು. ಈ ಮಾರ್ಗವು ಪ್ರಪಂಚದಲ್ಲಿಯಾಗಲೀ ಅಮೆರಿಕದಲ್ಲೇ ಆಗಲಿ ಹೊಸದಲ್ಲವೆಂದು ಲಿಂಕನ್ನನು ವಾದಿಸಿದನು. ಡೆಮೊಕ್ರೆಟರು ಹೇಳಿದಂತೆ ಬಲಾತ್ಕಾರದ ದೆಸೆಯಿಂದ ತೊಂದರೆಯಾಗುವುದಾದರೆ ಪ್ರಜೆಗಳ ಎದುರಿಗೆ ಓದಿಹೇಳ

ಬೇಕೆಂದು ಅವನು ಒಂದು ಪ್ರಬಂಧವನ್ನು ಬರೆದಿಟ್ಟನು. ಅದರಲ್ಲಿ ಹೀಗೆ ಕಾಣಿಸಿದ್ದನು : ಯುದ್ಧಾರಂಭದಲ್ಲಿಯೂ ಆರಂಭವಾದಮೇಲೂ ದೇಹಶಕ್ತಿಯುಳ್ಳವರನೇಕರು ಸೈನ್ಯವನ್ನು ಸೇರಲು ಅಪೇಕ್ಷೆಪಟ್ಟದ್ದಾರೆ. ಆ ಅಪೇಕ್ಷೆಗೆ ಅನೇಕ ಕಾರಣಗಳಿರುವುವು. ದೇಶಾಭಿಮಾನ, ಆಡಳಿತಗಳ ವಿಷಯದಲ್ಲಿರತಕ್ಕ ಪಕ್ಷಪಾತ, ಮನಸ್ಸಿನ ಆಕಾಂಕ್ಷೆ, ಧೈರ್ಯ, ಸಾಹಸದ ಕೆಲಸಗಳನ್ನು ಮಾಡುವ ಇಚ್ಛೆ—ಇವು ಕಾರಣಗಳಲ್ಲಿ ಮುಖ್ಯವಾದವುಗಳು. ಆದರೆ ಜನರು ಈ ಕಾರಣಗಳಿಗೋಸ್ಕರ ತಾವೇ ಬಂದು ಸೇರಿ ದೊಡ್ಡದೊಂದು ಸೈನ್ಯವು ಒದಗುವವರೆಗೂ ಕುಳಿತಿರಲಾಗುವುದಿಲ್ಲ. ಅರೆನಾಸಿ ನಡೆದಿರುವ ಕೆಲಸವು ಜನಗಳ ಅಪೇಕ್ಷೆಯನ್ನು ನಿರೀಕ್ಷಿಸುತ್ತ ಕಾಲಹರಣಮಾಡಿದರೆ ವ್ಯರ್ಥವಾಗುವುದು. ಮಾಡಿದ ದೇಹಶ್ರಮವೂ ಧನವ್ಯಯವೂ ನಿರರ್ಥಕವಾಗುವುವು. ಈಗ ಜನಸಹಾಯವು ಅತ್ಯವಶ್ಯಕವಾದುದು. ಬಲಾತ್ಕಾರವನ್ನಾದರೂ ಮಾಡಿ ಅದನ್ನು ಪಡೆಯಬೇಕಾಗಿದೆ. ಆದುದರಿಂದಲೇ ಆ ನಿಬಂಧನೆಯನ್ನು ಪ್ರಚಾರಕ್ಕೆ ತಂದಿದ್ದೇವೆ. ಸೈನಿಕರಾಗಲೊಲ್ಲದವರಿಗೆ ಇದು ಅಸಹ್ಯವಾದುದು ; ಸಹಜವೇ. ಆದರೆ ಅದರಿಂದ, ಪ್ರಜೆಗಳಿಗೆ ದೇಶಾಭಿಮಾನವು ಸಾಲದೆಂದು ಅರ್ಥವಾಗದು. ಬೇಡವಾದುದನ್ನು ಬೇಕೆನ್ನುವಂತೆ ಮಾಡಲು ಪ್ರಯತ್ನಿಸಿದರೆ ಅಂತಹ ಪ್ರಯತ್ನವು ಎಂದಿಗೂ ನ್ಯಾಯವಾಗಲಾರದು. ನಮಗೆ ಇಷ್ಟವಿಲ್ಲದಿರುವುದನ್ನು ಬೇಡವೆಂದು ತಿರಸ್ಕರಿಸಿ, ತಿರಸ್ಕರಿಸಲು ಕಾರಣಗಳನ್ನು ಕಲ್ಪಿಸುವುದಕ್ಕೆ ನಮಗೂ ಬರುತ್ತದೆ.'' ಕಾರಣಗಳಿಗೆಲ್ಲಾ ಉತ್ತರವನ್ನು ಹೇಳಿದ ಬಳಿಕ '' ಈಗ ತೊಂದರೆಯು ಎಲ್ಲಿತಾನೇ ಇದೆ ? ನಮ್ಮ ರಾಜ್ಯದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವುದಕ್ಕಾಗಿ ನಮ್ಮ ತಂದೆಗಳಿಗೂ ತಾತಂದಿರಿಗೂ ಯಾವ ಸಾಧನಗಳು ದೊರೆತುವೋ ಅವುಗಳನ್ನು ನಾವು ಅಸಹ್ಯವೆಂದು ಹೇಳಿ ತಿರಸ್ಕರಿಸಬಹುದೆ ? ನಾವು ಅವರಿಗೆ ಕಡಿಮೆಯೆ ? ನಮ್ಮಲ್ಲಿ ಪೌರುಷವು ಅಸ್ತವಾಗಿ ಹೋಯಿತೆ ? ತೆರಿಗೆಯ ಸಂಬಂಧದಲ್ಲಿ ನಿಬಂಧನೆಯಿದೆ. ಜನರು ತಮತಮಗೆ ಗೊತ್ತಾಗಿರುವಷ್ಟು ತೆರಿಗೆಯನ್ನು ಕೊಡಬೇಕೆಂದು ಅದು ವಿಧಿಸುವುದು. ಆದರೆ ಹಾಗೆ ಕೊಡಲು ಮನಸ್ಸಿರುವುದಿಲ್ಲ. ಆದಕಾರಣ, ನಿಬಂಧನೆಯನ್ನು ಚಲಾವಣೆಗೆ ತರಬೇಕಾದರೆ ಬಲಾತ್ಕಾರಮಾಡಬೇಕಾಗುವುದೆಂಬ ಯೋಚನೆಯಿಂದ ತೆರಿಗೆಯನ್ನು ವಸೂಲುಮಾಡದಿರಲಾದೀತೆ ? '' ಎಂದು ವರ್ಣಿಸಲ್ಪಟ್ಟದ್ದಿತು. ಹೀಗೆ ತಿಳಿಯಹೇಳಿದರೂ ಜನಗಳು ಕೇಳದಿದ್ದರೆ, ಸರ್ವಪ್ರಯತ್ನದಿಂದಲೂ ನಿಬಂಧನೆಯನ್ನು ಚಲಾವಣೆಗೆ ತಂದು, ಅನುವರ್ತಿಸುವಂತೆ ಮಾಡುವುದು ತನ್ನ ಸಂಕಲ್ಪವೆಂದು ಅವನು ಕೊನೆಯಲ್ಲಿ ಹೇಳಿದ್ದನು. ಯಾವುದಾದರೂ ವಿಷಯವು ಆಲೋಚನೆಗೆ ಬಂದರೆ ಲಿಂಕನ್ನನು ಹೀಗೆ ಕಾಗದದ ಮೇಲೆ ಗುರುತು ಹಚ್ಚಿ ತನ್ನ ಅಭಿಪ್ರಾಯಗಳನ್ನು ವರ್ಣಿಸುತ್ತಿದ್ದನು. ಆದಾದ ಬಳಿಕ ಆ ಪ್ರಬಂಧಗಳನ್ನು ಪ್ರಕಟಮಾಡುವುದರ ಯುಕ್ತಾಯುಕ್ತತೆಯ ಯೋಚನೆಯುಂಟಾಗುತ್ತಿದ್ದಿತು. ಈ ಪ್ರಬಂಧವು ಅವನ ಜೀವಿತಕಾಲದಲ್ಲಿ ಪ್ರಕಟವಾಗಲಿಲ್ಲ. ಪ್ರಜೆಗಳಿಗೆ ಈ ವಿಧವಾದ ಪ್ರಾರ್ಥನೆಯು ಬೇಕಿಲ್ಲವೆಂದು ತಿಳಿದು ಲಿಂಕನ್ನನು ಅದನ್ನು ಮರೆಮಾಡಿದನು.

ಡೆಮೊಕ್ರೆಟ್ ಪಕ್ಷವು ಆಡಳಿತದಲ್ಲಿ ಅಡಚಣೆಗಳನ್ನು ತರಲು ಪ್ರಯತ್ನಿಸಿತು. 1862 ರಿಂದೀಚೆಗೆ ಅದು ಬಲದಲ್ಲಿ ಹೆಚ್ಚುತ್ತ ಬಂದಿದ್ದಿತು. ಸದ್ಯದಲ್ಲಿ ಯುದ್ಧವು ಸರಿಯಾಗಿ ನಡೆಯುತ್ತಿಲ್ಲವೆಂಬುದನ್ನು ಆಧಾರವಾಗಿ ಹಿಡಿದು ಆ ಪಕ್ಷದ ಜನರು ಪ್ರಜೆಗಳಿಗೆ ಬೋಧನೆಯನ್ನು ಮಾಡಲಾರಂಭಿಸಿದರು. 1863ರಲ್ಲಿ ಹುಟ್ಟಿದ ಬಿಡುಗಡೆಯ ಪ್ರಕಟನೆಯ ದೆಸೆಯಿಂದ ಆಕ್ಷೇಪಿಸಲು ಮತ್ತೊಂದು ಕಾರಣವು ದೊರೆಯಿತು. ತಮ್ಮ ಪೂರ್ವದ ಆಚಾರಗಳನ್ನು ಎಷ್ಟು ಕಷ್ಟವಾದರೂ ಬಿಡಬಾರದೆಂಬ ಭಾವನೆಯುಳ್ಳ ಕೆಲವು ಪ್ರಜೆಗಳು ಈ ಸಮಯದಲ್ಲಿ, ಶಾಸನಪದ್ಧತಿಯು ಸ್ವಾತಂತ್ರ್ಯವನ್ನು ಕೊಟ್ಟಿರುವಾಗ ದೇಶವನ್ನು ರಕ್ಷಿಸಲು ಆಯುಧವನ್ನು ಹಿಡಿಯಬೇಕೆಂದು ಪ್ರಜೆಗಳನ್ನು ಬಲಾತ್ಕರಿಸುವುದೂ ಶತ್ರುವಿನ ಗುಲಾಮರಿಗೆಲ್ಲಾ ಬಿಡುಗಡೆಯನ್ನುಂಟುಮಾಡಿ ಸ್ವಾತಂತ್ರ್ಯವನ್ನು ಕೊಡುವುದೂ ಸರ್ಕಾರವು ಮಾಡುತ್ತಿರುವ ಎರಡು ಅಪರಾಧಗಳೆಂದು ಎಣಿಸಿದರು. ಡೆಮೊಕ್ರೆಟರಲ್ಲಿ ಎಲ್ಲರೂ ಹೀಗೆ ಭಾವಿಸಲಿಲ್ಲ. ಅನೇಕರು ಸಂಯೋಗವನ್ನು ಉದ್ಧಾರಮಾಡಬೇಕೆಂದು ಪವಿತ್ರವಾದ ಭಾವನೆಯುಳ್ಳವರಾಗಿದ್ದರು. ಆದರೆ ಅವರಿಗೆ ಅಧಿಕಾರಮಾಡಬೇಕೆಂಬ ಆಸೆಯು ಬಲವಾಗಿದ್ದಿತು. ಈಗಿರುವ ಸರ್ಕಾರದಲ್ಲಿ ನಡೆವಳಿಯಲ್ಲಿ ಯಾವುದಾದರೊಂದು ಹುಳುಕನ್ನು ಹಿಡಿದು ಅದರ ಮೂಲಕ ಜನಗಳ ಮನಸ್ಸನ್ನು ಮಾರ್ಪಡಿಸಿ ತಮ್ಮ ಉದ್ದೇಶವನ್ನು ಸಾರ್ಥಕಮಾಡಿಕೊಳ್ಳಲು ಅವರು ಹೊಂಚುತ್ತಿದ್ದರು. ಯುದ್ಧವು ಸರಿಯಾಗಿ ನಡೆಯದೆ ಸರ್ಕಾರಕ್ಕೆ ಸೋಲೂ ನಷ್ಟವೂ ಉಂಟಾದುದು ಅವರಿಗೆ ಅವಕಾಶವನ್ನು ಕಲ್ಪಿಸಿ ಕೊಟ್ಟಂತಾಯಿತು. ಶತ್ರುಗಳ ದೆಸೆಯಿಂದಾಗುವ ಹಾನಿಗಿಂತಲೂ ಬಲಹೀನವಾದ ಸರ್ಕಾರದಿಂದ ದೇಶಕ್ಕೆ ಹೆಚ್ಚಿನ ಹಾನಿಯುಂಟೆಂದು ಅವರು ಆಕ್ಷೇಪಿಸಿದರು.

ಎಡವದಿದ್ದರೆ ಯಾವ ಕಷ್ಟವೂ ಇರದು. ಆದರೆ ನಡೆಯುವಾಗ ಎಡವದಿರುವುದಿಲ್ಲ.

ಮಾರ್ಷಿಯಲ್ ಲಾದ ವಿಷಯದಲ್ಲಿಯೂ ಅವರಿಂದ ಅಪಾರವಾದ ಆಕ್ಷೇಪಣೆಯು ಬಂದಿತು. ಒಂದು ದೇಶದಲ್ಲಿ ದಂಗೆಯಾಗಲೀ ಅಂತಃಕಲಹವಾಗಲೀ ಸಂಭವಿಸಿದರೆ ಪ್ರಜೆಗಳ ಕ್ಷೇಮವು ವಿಪತ್ತಿನಲ್ಲಿ ಬೀಳುವುದು. ಇತರ ಕಾಲಗಳ ಕಾನೂನುಗಳೂ ರಕ್ಷಣೆಗಳೂ ದೇಶಕ್ಷೋಭೆಯ ಕಾಲದಲ್ಲಿ ಶಕ್ತಿಗುಂದುವುವು. ಆದಕಾರಣ ಹೊಸಬಗೆಯ ಕಾನೂನನ್ನು ರಚಿಸಬೇಕಾಗುವುದು. ಇತರ ಕಾಲದಲ್ಲಿ ಜನಗಳು ಅದನ್ನು ದ್ವೇಷಿಸಿಯಾರು. ಅದು ಅಪ್ರಕೃತವಾಗುವುದು. ಆದರೆ ರಾಜ್ಯದ ಎಲ್ಲಾ ಭಾಗಗಳಲ್ಲಿಯೂ ಚಲಾವಣೆಗೇಕೆ ಬರಬೇಕು, ದಂಗೆ ಅಥವಾ ಕ್ಷೋಭೆಯೊದಗಿದ ಭಾಗದಲ್ಲಿ ಮಾತ್ರ ಇದ್ದರೆ ಸಾಲದೆ ? ಹಾಗಾಗದು. ಬೆಂಕಿಯುರಿಯುತ್ತಿದ್ದರೆ ಶಾಖವು ಎಲ್ಲಾ ಕಡೆಗೂ ಹರಡುವುದು ; ಮೈಯಲ್ಲಿ ಒಂದು ಕಡೆ ಹುಣ್ಣಿದ್ದರೆ ಮೈಯೆಲ್ಲವೂ ಝುರ್ಝುರಿತವಾಗುವುದು. ಮೊದಲುಮೊದಲು ಲಿಂಕನ್ನನ ಸರ್ಕಾರವನ್ನು ಕ್ಷೀಣಗತಿಗೆ ತರಲು ವಾಷಿಂಗ್ಟನ್ನಿನಲ್ಲಿ ಬಹಳ ಪಿತೂರಿಗಳು ನಡೆದುವು. ಅವುಗಳ ಸುಳಿವು ಗೊತ್ತಾಗುತ್ತಿದ್ದಿತು. ಆದರೆ ಬಯಲಿಗೆ ತರಲಾಗುತ್ತಿರಲಿಲ್ಲ. ಲಿಂಕನ್ನನು ಬಲು ಎಚ್ಚರಿಕೆಯಿಂದಿರಬೇಕಾಗುತ್ತಿದ್ದಿತು. ಶತ್ರುಪಕ್ಷದವನೊಬ್ಬನು ಒಂದು ಸ್ಥಳದಲ್ಲಿದ್ದು

ಕೊಂಡು ಜನರು ಸೈನ್ಯಕ್ಕೆ ಸೇರದಂತೆ ಪರೋಕ್ಷವಾಗಿ ಪ್ರಯತ್ನಿಸುತ್ತ ಒಳಸಂಚು ಮಾಡುತ್ತಿದ್ದರೆ ಏನು ಮಾಡಬೇಕು ? ಸೈನ್ಯಕ್ಕೆ ಸೇರಿದವರ ಮೇಲೆ ಅಲ್ಲಿನ ಪ್ರಜೆಗಳು ಬಿದ್ದು ತೊಂದರೆ ಮಾಡಿದರೆ ಹೇಗೆ ಆಚರಿಸಬೇಕು ? ಆ ಸ್ಥಳದ ಪೋಲೀಸ್ ಇಲಾಖೆಯನ್ನೂ ನ್ಯಾಯಾಧಿಪತಿಯನ್ನೂ ನಂಬುವಹಾಗಿಲ್ಲದಿದ್ದರೆ ಮುಂದಿನ ಗತಿಯೇನು ? ಎಂಬ ಸಂಶಯಗಳು ಒಂದೊಂದಾಗಿ ಹುಟ್ಟುತ್ತಿದ್ದುವು. ಸಿವರ್ಡನೂ ಸ್ಟ್ಯಾಂಟನ್ನನೂ ತಮ್ಮ ಮನಸ್ಸಿಗೆ ತೋರಿದಂತೆ ಮಾತನಾಡಿ ಪರಿಹಾರವನ್ನು ಹೇಳುತ್ತಿದ್ದರು. ಲಿಂಕನ್ನನು ಮಾತ್ರ ಹಾಗೆ ಮಾಡಲಿಲ್ಲ. ತಲೆಹೋಗುವಂತಹ ಈ ಸಮಯದಲ್ಲಿ ಅತ್ಯಂತ ಧೈರ್ಯದಿಂದ ಆಚರಿಸುತ್ತಿದ್ದರೆ ಕೆಲಸವು ಸಾಗದೆಂದು ತಿಳಿದು ಸರ್ಕಾರದ ಕಡೆಯವರಾಗಿ ಶ್ರಮಪಡುತ್ತಿರುವ ಜನಗಳನ್ನು ತಿದ್ದುವುದಕ್ಕೆ ಬದಲಾಗಿ ಅವರಿಗೆ ಬೆಂಬಲವಾಗಿ ನಿಲ್ಲುತ್ತಿದ್ದನು.

ಪ್ರೆಸಿಡೆಂಟನು ರಾಜ್ಯದಲ್ಲಿ ಅಗ್ರಸೇನಾಧಿಪತಿಯಾದವನು ; ಆದಕಾರಣ ದೇಶವು ಕ್ಷೋಭೆಹೊಂದಿದ ಕಾಲದಲ್ಲಿ ಪ್ರಜೆಗಳ ಜೀವವೂ ಸ್ವಾತಂತ್ರ್ಯವೂ ಅವನ ಅಧೀನದಲ್ಲಿದ್ದುವು ; ವಿಧೇಯರಾದವರಿಗೂ ಈ ನಿರ್ಬಂಧವು ತಪ್ಪುತ್ತಿರಲಿಲ್ಲ ; ಸೇನಾಪತಿಯಾದವನು ಶತ್ರುವಿನ ರಾಜ್ಯವನ್ನು ಗೆದ್ದು ಸ್ವಾಧೀನಮಾಡಿಕೊಂಡರೆ ಅಲ್ಲಿನ ಪ್ರಜೆಗಳೂ ಸರ್ವಸ್ವವೂ ಅವನ ಸ್ವಾಧೀನವಾಗುವುವು ; ಈಗ ಅದರಂತೆಯೇ ಎಂದು ಲಿಂಕನ್ನನು ಹೇಳಿದನು. ನ್ಯಾಯಸ್ಥಾನವಾಗಲೀ ಮತ್ತಾವ ಪಂಚಾಯತಿಯಾಗಲಿ ಅವನು ಮಾಡಿದುದನ್ನು ಅಳಿಸುವಹಾಗಿಲ್ಲ. ಈ ಸೇನಾಪತಿಯ ಅಧಿಕಾರವು ರಾಜ್ಯದ ಒಂದು ಭಾಗದಲ್ಲಿ ಮಾತ್ರವಲ್ಲ, ಶತ್ರುವಿನ ಸಂಸರ್ಗವು ಹರಡಿರುವ ಸ್ಥಳದಲ್ಲೆಲ್ಲಾ ಅಂದರೆ, ರಾಜ್ಯದಲ್ಲಿ ಎಲ್ಲೆಲ್ಲಿಯೂ ವ್ಯಾಪಿಸುವುದು. ಪೂರ್ವಿಕರ ಶಾಸನಪದ್ಧತಿಯ ಪ್ರಕಾರ ಈ ಅಧಿಕಾರಕ್ಕೆ ಆಸ್ಪದವಿರುವುದೆಂದು ಲಿಂಕನ್ನನು ತರ್ಕಹೇಳಿದನು. ಅವನ ಆಚರಣೆಯು ನ್ಯಾಯಸಮ್ಮತವಾದುದಲ್ಲ. ಆದರೆ ಯುಕ್ತವಾದುದು, ಅವಶ್ಯಕವಾದುದು. ಸ್ವಾರ್ಥವು ಉದ್ದೇಶವಲ್ಲ ; ದೇಶಕ್ಕೆ ಹಿತವನ್ನು ಮಾಡಬೇಕೆಂಬುದು ಅವನ ಉದ್ದೇಶ. ತಾನು ಹಿಂದೆ ಅಧಿಕಾರವನ್ನು ವಹಿಸುವ ಕಾಲದಲ್ಲಿ ಮಾಡಿದ್ದ ಕೆಲವು ಪ್ರಮಾಣಗಳಿಗೆ ಇದು ವಿರುದ್ಧವೆಂದು ಒಬ್ಬಿಬ್ಬರು ಹೇಳಬಹುದು. ಶಾಸನಪದ್ಧತಿಗೆ ಈ ವಿಚಾರದಲ್ಲಿ ಲಿಂಕನ್ನನು ಒಂದು ಅರ್ಥವನ್ನು ಕಲ್ಪಿಸಿದನು. ಅದನ್ನು ಬದಲಾಯಿಸದಂತೆ ನಡೆಸಿಕೊಂಡು ಬರಬೇಕೆಂಬುದು ಅಭಿಪ್ರಾಯವಲ್ಲ. ಅನುಕೂಲ್ಯಗಳನ್ನೂ ಕಾಲದ ಸ್ಥಿತಿಯನ್ನೂ ಆಲೋಚಿಸಿ ಅನುಸರಿಸುವುದು ಅವಶ್ಯಕವಾದುದು. ಅದನ್ನು ಕಲ್ಪಿಸುವುದರ ಚರಮೋದ್ದೇಶವನ್ನು ಸ್ಮರಿಸಿಕೊಂಡು ನಡೆದರೆ ಸಾಕಾಗಿದ್ದಿತು.

ಈ ಅಗ್ರಸೇನಾಪತಿತ್ವದ ದೆಸೆಯಿಂದ ಯಾರ ನಡತೆಯು ಸರಿಯಾಗಿ ಕಾಣದೆ ಮನುಷ್ಯನು ಶತ್ರುವಿನ ಶ್ರೇಯಸ್ಸಿಗಾಗಿ ಕೆಲಸ ಮಾಡುತ್ತಿರುವನೆಂದು ಗುಮಾನಿ ಬರುವುದೋ ಅಂಥವನನ್ನು ಹಿಡಿಯಿಸಿ ಸೆರೆಯಲ್ಲಿಡಲು ಅವಕಾಶವುಂಟಾಯಿತು. ಈ ಅಧಿಕಾರವನ್ನು ಸ್ವಲ್ಪ ಮುಂಚಿತನಾಗಿ ಪ್ರಯೋಗಿಸಿ ಜನರಲ್ ಲೀಯನ್ನೂ ಜೋಸೆಫ್ ಜಾನ್ಸ್ಟನ್ನನನ್ನೂ ಸೆರೆ ಹಿಡಿಯಲಿಲ್ಲವೆಂದು ಲಿಂಕನ್ನನು ಕೊರಗಿದನು.

ಆದರೆ 1862ನೆಯ ವರುಷದ ಕೊನೆಯಲ್ಲಿ ಪ್ರಜೆಗಳು ಅಸಮಾಧಾನಗೊಂಡರು. ನಿಜವಾಗಿ ಸದ್ಗುಣವುಳ್ಳವರಾಗಿ ಸಂಯೋಗದ ಶ್ರೇಯಸ್ಸನ್ನು ಕೋರುತ್ತಿದ್ದವರೂ ಕೂಡ ಗುಮಾನಿಯ ಮೇಲೆ ಸೆರೆಮನೆಗೆ ತಳ್ಳಲ್ಪಟ್ಟಿದ್ದರು. ಅಂಥವರು ನಿರಪರಾಧಿಗಳಾದುದರಿಂದ ಪ್ರಜೆಗಳು ಅದನ್ನು ಸಹಿಸಲಿಲ್ಲ. ಸರ್ಕಾರವು ಆಕೂಡಲೇ ನಿಜಸ್ಥಿತಿಯನ್ನು ವಿಚಾರಿಸಿ ಅವರೆಲ್ಲರಿಗೂ ಬಿಡುಗಡೆ ಮಾಡಿತು. 1863ರಲ್ಲಿ ಕಾಂಗ್ರೆಸ್ ಸಭೆಯು ಚರ್ಚೆಮಾಡಿ, ರಾಜ್ಯವೆಲ್ಲವೂ ಮಾರ್ಷಿಯಲ್ ಲಾಕ್ಕೆ ಒಳಪಟ್ಟಿರುವುದೆಂದು ನಿರ್ಣಯಮಾಡಿತು. ಸೈನ್ಯಕ್ಕೆ ಸೇರದಂತೆಯೂ ಸೇರಿದ ಮೇಲೆ ಬಿಟ್ಟುಬಿಡುವಂತೆಯೂ ದುರ್ಬೋಧನೆಯನ್ನು ಮಾಡುತ್ತಿದ್ದವರ ಸೊಲ್ಲು ಅಡಗಿಹೋಯಿತು. ಅಂಥವರು ಸಿಕ್ಕಿಬಿದ್ದರೆ ಆ ಪ್ರದೇಶದಲ್ಲಿದ್ದ ಸೈನ್ಯದ ಅಧಿಕಾರಿಯು ತನಿಖೆಮಾಡಿ ಕಠಿಣವಾದ ಶಿಕ್ಷೆಯನ್ನು ವಿಧಿಸುತ್ತಿದ್ದನು. ಈ ಮೊಕದ್ದಮೆಯನ್ನು ಸಾಮಾನ್ಯವಾದ ನ್ಯಾಯಸ್ಥಾನಗಳಲ್ಲಿ ಹಿಡಿಯುತ್ತಲೇ ಇರಲಿಲ್ಲ ; ಅವರನ್ನು ತಪ್ಪುಮಾಡಿದರೆಂದು ಸಾಧಿಸುವುದಕ್ಕೂ ಆಗುತ್ತಿರಲಿಲ್ಲ. 'ಮಾರ್ಷಿಯಲ್ ಲಾ' ವನ್ನು ಪ್ರಚಾರಕ್ಕೆ ತರಲು ಲಿಂಕನ್ನನಿಗೆ ಬಲಾತ್ಕಾರದ ಕಾನೂನು ವ್ಯರ್ಥವಾಗಬಾರದೆಂಬುದೇ ಉದ್ದೇಶವಾಗಿದ್ದಿತು. ಅದರ ಪ್ರಕಾರ ಪಿತೂರಿಗಳನ್ನು ನಡೆಯಿಸುತ್ತಿದ್ದವರಿಗೆ ರಾಜ್ಯದಲ್ಲಿರಲು ಸ್ಥಳವು ಸಂಕುಚಿತವಾಯಿತು. ಅವರೆಲ್ಲರೂ ಕೆನಡಾ ರಾಜ್ಯಕ್ಕೆ ಹೋಗಿ ಗುಪ್ತಸಂಘಗಳನ್ನೂ ಗೂಢಚಾರರ ಜಾಲಗಳನ್ನೂ ಏರ್ಪಡಿಸಿಕೊಂಡು ಒಳಸಂಚನ್ನು ನಡೆಯಿಸುತ್ತಿದ್ದರು. ಲಿಂಕನ್ನನು ಆ ಪ್ರವರ್ತನೆಗಳನ್ನು ಬಹಳ ಅಸಡ್ಡೆಯಿಂದ ಕಂಡನು. ಅವನ ಕಾನೂನುಗಳೂ ಇತರ ವಿಧಾನಗಳೂ ಅತಿ ಕ್ರೂರವಾದವುಗಳೆಂದೂ ರಕ್ತಶೋಷಣೆಯು ಪ್ರೆಸಿಡೆಂಟನಿಗೆ ಪ್ರಿಯವಾದುದೆಂದೂ ಡೆಮೊಕ್ರೆಟರು ಲಿಂಕನ್ನನ ಮೇಲೆ ದೂರನ್ನು ತಂದು 'King Abraham I' ಎಂದು ಹೆಸರಿಟ್ಟು ಹಾಸ್ಯಮಾಡಿದರು. ಲಿಂಕನ್ನನಿಗೆ ರಕ್ತಶೋಷಣೆಯಲ್ಲಿ ಎಷ್ಟು ಪ್ರೀತಿಯಿದ್ದಿತೆಂಬುದು ಎಲ್ಲರಿಗೂ ಗೊತ್ತಿದ್ದಿತು. ಆದಕಾರಣ ಜನಗಳು ಅವನ ಶಾಸನಗಳು ಕಠಿನವಾದವುಗಳೆಂದು ತಿಳಿದರೂ ಕೂಡ ಅವನನ್ನು ಕ್ರೂರಕರ್ಮವುಳ್ಳವನೆಂದು ದೂರಲಿಲ್ಲ. ನ್ಯಾಯಸ್ಥಾನಗಳು ಈಗ ಶಕ್ತಿಯ ಕೈ ಮೇಲಾಗಿರುವುದೆಂದೂ, ಸೇನಾಪತಿಯಾಗಿ ಸೈನ್ಯದ ಬೆಂಬಲದಿಂದ ದರ್ಪಮಾಡುತ್ತಿರುವಾತನ ಗೊಡವೆಗೆ ಹೋಗಿ ಆಟಂಕಪಡಿಸಲಾರೆವೆಂದೂ ಹೇಳಿಬಿಟ್ಟುವು. 'ಮಾರ್ಷಿಯಲ್ ಲಾ'ದ ಪ್ರಕಾರ ವಿಧಿಸುತ್ತಿದ್ದ ಶಿಕ್ಷೆಯು ನ್ಯಾಯವಾದುದೇ ಎಂಬುದನ್ನು ಯಾವ ನ್ಯಾಯಸ್ಥಾನವೂ ಪರ್ಯಾಲೋಚಿಸಲಿಲ್ಲ.

ತನ್ನ ಶಾಸನಗಳು ಎಷ್ಟರಮಟ್ಟಿಗೆ ಚಲಾವಣೆಯಲ್ಲಿರುವುವೆಂಬುದನ್ನು ವಿಚಾರಿಸಿಕೊಳ್ಳುತ್ತಿರಲು ಲಿಂಕನ್ನನಿಗೆ ಬೇಕಿರಲಿಲ್ಲ. ಇತರ ವಿಚಾರಗಳಲ್ಲಿ ಮಗ್ನನಾಗಿ ಅವನಿಗೆ ಈ ಅಲ್ಪವಿಷಯಗಳಿಗೆ ವ್ಯವಧಾನವಿರಲಿಲ್ಲ. ಮಂತ್ರಿಗಳಿಗೂ ದಳಪತಿಗಳಿಗೂ ಈ ಸಂಬಂಧದಲ್ಲಿ ಸಂಪೂರ್ಣವಾದ ಸ್ವಾತಂತ್ರ್ಯವನ್ನು ಕೊಟ್ಟನು. ಅವರ ಆಚರಣೆಗಳಿಗೆ ಅಡಚಣೆಯನ್ನುಂಟುಮಾಡಲಿಲ್ಲ. ವಿಷಯವು ತನ್ನ ವರೆಗೆ ಬರುವಂತೆ ಇಟ್ಟುಕೊಳ್ಳಲೇ ಇಲ್ಲ. ಹೆಚ್ಚು ಅನ್ಯಾಯವು ನಡೆಯದಿದ್ದರೆ ಅವನಿಗೆ ಸಾಕಾಗಿ

ದ್ದಿತು. ಅವನು ಮಾಡುತ್ತಿರುವುದು ಬಹಳ ಅನ್ಯಾಯವೆಂದು ಕೆಲವರು ಭಾವಿಸಿದರು. ಆದರೆ ಸ್ಥಿತಿಯು ಹಾಗಿದ್ದಿತು. ದಕ್ಷಿಣದಲ್ಲಿ ಪಕ್ಷಪಾತವುಳ್ಳವರು ಉತ್ತರ ಭಾಗದಲ್ಲಿ ಅನೇಕ ಮಂದಿಯಿದ್ದರು. ಗುಪ್ತಸಂಘಗಳಿಗೆ ಸೇರಿದವರು ಲಕ್ಷೋಪಲಕ್ಷ ಜನರಿದ್ದಾರೆಂದು ಡೆಮೊಕ್ರೆಟರ ಕಡೆಯವನೊಬ್ಬನು ದಂಭದ ಮಾತನ್ನಾಡಿದನು. ಗುಮಾನಿಗೊಳಗಾಗಿ ಸೆರೆಮನೆಯನ್ನು ಸೇರಿದ್ದವರು ಸಾವಿರಾರು ಮಂದಿ. ನಿರಪರಾಧಿಗಳಾದವರೂ ಸೇರಿದ್ದರು. ಆದರೆ ಆ ಜನಗಳು ಹೆಚ್ಚಾಗಿರಲಿಲ್ಲ. ಸರ್ಕಾರವೂ ಕೂಡ ಆದಷ್ಟು ದೂರ ನ್ಯಾಯವಾಗಿಯೇ ಹೋಗುತ್ತಿದ್ದಿತು. ತಪ್ಪಾದ ಅಥವಾ ವಿರುದ್ಧವಾದ ಅಭಿಪ್ರಾಯಗಳುಳ್ಳವರಿಗೆ ತೊಂದರೆಯನ್ನುಂಟುಮಾಡಲಿಲ್ಲ. ದ್ರೋಹಕರವಾದ ಕೆಲಸಗಳನ್ನು ಮಾಡುತ್ತಿದ್ದವರು ಶಿಕ್ಷೆಗೆ ಗುರಿಯಾದರು. ಶಿಕ್ಷೆಯು ಸಾಮಾನ್ಯವಾಗಿ, ನಡೆದುಹೋದ ಕೆಲಸಕ್ಕಾಗಿ ಆಗುತ್ತಿರಲಿಲ್ಲ. ನಡೆಯುವುದರಲ್ಲಿದ್ದ ಅಥವಾ ಸದ್ಯದಲ್ಲಿ ನಡೆಯುತ್ತಲಿದ್ದ ಕೆಲಸಗಳಿಗಾಗಿ. '' ಈ ವಿಪತ್ತಿನ ಕಾಲದಲ್ಲಿ ಮೌನವನ್ನು ವಹಿಸಿ ಇರುತ್ತಿದ್ದವರನ್ನೂ ಸಂದಿಗ್ಧವಾಗಿ ಮಾತನಾಡುತ್ತಿದ್ದವರನ್ನೂ ಒಳ್ಳೆಯವರೆಂದು ನಂಬುವುದು ಕಷ್ಟ '' ವೆಂದು ಲಿಂಕನ್ನನು ಹೇಳಿದನು. ದಂಗೆಕೋರರಿಗೆ ಅನುಕೂಲಮಾಡುವಂತಹ ಮಾತನ್ನೂ ಕಾರ್ಯವನ್ನೂ ಅಡಗಿಸಲು ಅವನು ಸಂಕಲ್ಪಿಸಿದ್ದನು. ಆ ಸಂಕಲ್ಪವನ್ನು ನಿರ್ದಾಕ್ಷಿಣ್ಯವಾಗಿಯೂ ನ್ಯಾಯಾನ್ಯಾಯವೆಂಬ ವಿಮರ್ಶೆಯಿಲ್ಲದೆಯೂ ನೆರವೇರಿಸುತ್ತಿದ್ದನು. ಅದನ್ನು ನೋಡಿ ದ್ವೇಷಿಗಳು ಅವನನ್ನು ಕ್ರೂರಕರ್ಮಿಯೆಂದು ಕರೆದರು.

ಆಡಳಿತದಲ್ಲಿ ವಿರೋಧಿಗಳಾಗಿದ್ದವರು ಡೆಮೊಕ್ರೆಟರು. ಅವರಲ್ಲಿ ನ್ಯೂಯಾರ್ಕಿನಲ್ಲಿ ಗೌರ್ನರಾಗಿದ್ದವನೂ ಕಾಂಗ್ರೆಸ್ ಸಭೆಯಲ್ಲಿ ಒಹಿಯೋವಿನ ಪ್ರತಿನಿಧಿಯಾಗಿದ್ದವನೂ ಮುಖಂಡರು. ಡೆಮೊಕ್ರೆಟರಲ್ಲಿ ಎರಡು ಭಾಗಗಳಿದ್ದುವು. ಒಂದು ಭಾಗದವರು ಯುದ್ಧವನ್ನು ತತ್‌ಕ್ಷಣವೇ—ಒಂದು ದಿನವೂ, ಒಂದು ಗಂಟೆಯೂ ತಡಮಾಡದೆ—ನಿಲ್ಲಿಸಿಬಿಡಬೇಕೆಂದು ಅಪೇಕ್ಷಿಸಿದರು. ಕಾರಣವೇನು ? ಯುದ್ಧದ ಉದ್ದೇಶವು ಸಂಯೋಗದಿಂದ ದಾಸ್ಯಕ್ಕೆ ತಿರುಗಿತು. ಇಲ್ಲದಿದ್ದರೆ ಗುಲಾಮರಿಗೆಲ್ಲಾ ಬಿಡುಗಡೆಯೆಂದು ಪ್ರಕಟನೆಯೇಕೆ ಹುಟ್ಟುತ್ತಿದ್ದಿತು ? '' ಪ್ರಜೆಗಳ ಪ್ರಭುತ್ವವು ತಪ್ಪಿ ನಿರಂಕುಶಪ್ರಭುತ್ವವು ತಲೆಹಾಕುತ್ತಿದೆ. ಯುದ್ಧವು ಈಗಲೇ ನಿಂತುಹೋಗಿ ಸಂಧಿಯಾಗಲಿ ; ಸಂಸ್ಥಾನಗಳು ಸಂಯುಕ್ತವಾಗಿಯೇ ನಿಲ್ಲಬೇಕು. ಇತರರು ಮಧ್ಯಸ್ಥಿಕೆಮಾಡಲಿ.'' ಕಾಂಗ್ರೆಸ್‌ನ ಸಭಿಕನು ಹೀಗೆ ಹೇಳಿದನು. ಈ ವಿಷಯವನ್ನು ಕುರಿತ ಒಹಿಯೋವಿನಲ್ಲಿ ಉಪನ್ಯಾಸವನ್ನೂ ಮಾಡಿದನು. ಆ ಕಾಲದಲ್ಲಿ ಬರ್ನ್‌ಸೈಡನು ಅಲ್ಲಿ ಸೈನ್ಯಾಧಿಪತಿಯಾಗಿದ್ದನು. ಅವನು ಉಪನ್ಯಾಸವನ್ನು ಕೇಳಿದನು. ಸಭಿಕನ ಮಾತಿನಲ್ಲಿ ದೇಶಪ್ರೀತಿಯು ಸ್ವಲ್ಪವೂ ಇರಲಿಲ್ಲ. ಸರ್ಕಾರವು ಯುದ್ಧವನ್ನು ಮಾಡಬೇಕೆಂದು ಅಪೇಕ್ಷಿಸುತ್ತಿರಲಾಗಿ ಈತನು ಯುದ್ಧವು ಕೂಡದೆನ್ನುವನು, ಎನ್ನುತ್ತ ಬರ್ನ್‌ಸೈಡನು ಆ ದಿನವೇ ರಾತ್ರಿಯವೇಳೆಯಲ್ಲಿ ಸಭಿಕನನ್ನು ಸೆರೆಹಿಡಿದು ಕಳುಹಿಸಿದನು. ಡೆಮೊಕ್ರೆಟರು ಏಕಕಂಠದಿಂದ ಆಕ್ಷೇಪಿಸಿದರು. ಲಿಂಕನ್ನನು ಬರ್ನ್‌ಸೈಡನ ಕಾರ್ಯಕ್ಕಾಗಿ ಬಹಳ ನೊಂದುಕೊಂಡನು. ಆದರೂ ಡೆಮೊ

ಕ್ರೆಟರಿಗೆ, "ಸೈನ್ಯಾಧಿಪತಿಯ ಉದ್ದೇಶವು ಸಾಧುವಾದುದು, ಸಭಿಕನು ದುರ್ಬೋಧನೆಗೆ ತೊಡಗಿ ಜನಗಳ ಮನಸ್ಸನ್ನು ಕೆಡಿಸುತ್ತಿದ್ದನು. ಆದಕಾರಣ ಆತನನ್ನು ಸೆರೆಯಲ್ಲಿಡಬೇಕಾಯಿತು—ನಿರ್ವಾಹವಿಲ್ಲ" ಎಂದು ಉತ್ತರಹೇಳಿದನು. ಮುಂದೆ ಹೀಗಾಗಲು ದಾರಿಯನ್ನು ಕೊಡಲಿಲ್ಲ. ಸ್ವಲ್ಪಕಾಲದೊಳಗೆ ಸಭಿಕನಿಗೆ ಬಿಡುಗಡೆಯಾಯಿತು. ಆದರೆ ಪ್ರೆಸಿಡೆಂಟನು ಒಂದು ಯುಕ್ತಿಯನ್ನು ಮಾಡಿದನು. ಸಭಿಕನನ್ನು ದಕ್ಷಿಣಭಾಗಕ್ಕೆ ಕಳುಹಿಸಿ, ಯುದ್ಧಕಾಲದಲ್ಲಿ ಸೆರೆಗೆ ಸಿಕ್ಕಿದ್ದ ನಿಮ್ಮ ಕಡೆಯ ಮನುಷ್ಯನೆಂದು ಪ್ರಕಟಮಾಡಿ ದಕ್ಷಿಣದವರ ವಶದಲ್ಲಿ ಬಿಡಿಸಿದನು. ಅವನು ಮತ್ತೆ ಒಹಿಯೋವಿಗೆ ಬರಲು ಅನುಮತಿಯಾಗಬೇಕೆಂದು ಡೆಮೊಕ್ರೆಟರು ಪ್ರಾರ್ಥಿಸಲಾಗಿ ಪ್ರೆಸಿಡೆಂಟನು, ಯುದ್ಧದಲ್ಲಿ ಒತ್ತಾಸೆಮಾಡಿ, ಸೈನ್ಯದ ಶಿಕ್ಷಣವು ಹೆಚ್ಚಿ ಸನ್ನದ್ಧವಾಗುವಂತೆ ಮಾಡುವುದಾಗಿ ಅವರಲ್ಲಿ ಮುಖಂಡರಾದವರು ಕಾಗದವನ್ನು ಬರೆದುಕೊಟ್ಟರೆ ಅನುಮತಿಯನ್ನು ಕೊಡುವುದಾಗಿ ಹೇಳಿದನು. ಅನುಮತಿಯನ್ನು ಕೊಡದೆ ಜಾರಿಕೊಳ್ಳಲು ಮಾಡಿದ ಉಪಾಯವೆಂದು ಡೆಮೊಕ್ರೆಟರು ಭಾವಿಸಿದರು. ಸಭಿಕನು ಕೆನಡಾ ರಾಜ್ಯಕ್ಕೆ ಹೋಗಿ ಅಲ್ಲಿ ಪಿತೂರಿಯನ್ನಾರಂಭಿಸಿದನು. ಆದರೆ ಮಾರನೆಯ ವರುಷ ಅವನು ಹಿಂದಿರುಗಿದನು. ಸರ್ಕಾರವು ಅವನಿಗೆ ಏನು ತೊಂದರೆಯನ್ನೂ ಮಾಡಲಿಲ್ಲ. ಏನನ್ನೂ ಮಾಡಕೂಡದೆಂದು ಒಹಿಯೋವಿನ ಸಂಘಗಳವರು ಲಿಂಕನ್ನನಲ್ಲಿ ಮೊರೆಯಿಟ್ಟರು. ಉತ್ತರವಾಗಿ ಲಿಂಕನ್ನನು, "ಸೈನಿಕನೊಬ್ಬನು ಸೈನ್ಯವನ್ನು ಬಿಟ್ಟು ಹೊರಟುಹೋದರೆ ಅವನನ್ನು ಹಿಡಿಯಿಸಿ, 'ಮಾರ್ಷಿಯಲ್ ಲಾ' ದ ಪ್ರಕಾರ ಗುಂಡಿನಿಂದ ಹೊಡೆದು ಕೊಲ್ಲಬೇಕು ; ಸೈನ್ಯವನ್ನು ಬಿಟ್ಟು ಹೊರಟುಹೋಗೆಂದು ದುರ್ಬೋಧನೆಯನ್ನು ಮಾಡುವ ದುಷ್ಟನಿಗೆ ಮಾತ್ರ ಕೂದಲೆಳೆಯನ್ನೂ ನೋಯಿಸಕೂಡದಲ್ಲವೆ ?" ಎಂದು ಬರೆದನು. ತ್ಯಜಿಸಿ ಓಡಿಹೋಗುತ್ತಿದ್ದವರಿಗೆ ಶಿಕ್ಷೆಯನ್ನು ವಿಧಿಸಿ ವಿಧಿಸಿ ಅವನ ಮನಸ್ಸು ನೊಂದಿದ್ದಿತು. ಆದರೆ ಶಿಕ್ಷೆಯನ್ನು ವಿಧಿಸದೆಯೂ ಇರುವುದಕ್ಕಾಗುತ್ತಿರಲಿಲ್ಲ.

ನ್ಯೂಯಾರ್ಕಿನ ಗೌರ್ನರನು ಅಷ್ಟು ವಿರೋಧಿಯಲ್ಲ. ಯುದ್ಧವನ್ನು ನಿಲ್ಲಿಸಬೇಕೆಂಬುದು ಅವನ ಅಭಿಪ್ರಾಯವಲ್ಲ. ಪ್ರತಿಯಾಗಿ, "ಸರ್ಕಾರವು ನ್ಯಾಯಮಾರ್ಗನ್ನವಲಂಬಿಸಿ ನಡೆದರೆ ಯುದ್ಧವು ಜಯಪ್ರದವಾಗುವುದು. ಶಾಸನಕ್ರಮವು ಊರ್ಜಿತನಾಗಿ ಜನಗಳು ಒಗ್ಗಟ್ಟಿನಿಂದ ನಿಲ್ಲುವರು. ಗುಲಾಮರನ್ನು ಬಿಡುಗಡೆಮಾಡುವುದರಿಂದ ಅವರು ಒಗ್ಗಟ್ಟಾಗರು," ಎಂದು ಹೇಳಿದನು. ಸಂಯೋಗದ ರಕ್ಷಣೆಗಾಗಿ ಯುದ್ಧಕ್ಕೆ ತೊಡಗಿ, ಈಗ ದಾಸ್ಯವನ್ನು ಮುಖ್ಯೋದ್ದೇಶವನ್ನಾಗಿ ಮಾಡಿಕೊಳ್ಳುತ್ತಿರುವ ಸರ್ಕಾರದ ಆಚರಣೆಯು ಅವನಿಗೆ ಸಮ್ಮತನಾಗಿರಲಿಲ್ಲ. ಗೌರ್ನರನು ನ್ಯಾಯವಾದಿಯಾದವನು ; ದೇಶವಾತ್ಸಲ್ಯವುಳ್ಳವನೆಂದು ಕಾರ್ಯಗಳಿಂದ ತಿಳಿಯಬರುತ್ತಿದ್ದಿತು. ಅದನ್ನು ತಿಳಿದೇ ಲಿಂಕನ್ನನು, ಅವನು ಡೆಮೊಕ್ರೆಟನಾದವರೂ ಲೆಕ್ಕವಿಡದೆ, ಗೌರ್ನರನ ಅಧಿಕಾರವನ್ನು ಅವನಿಗೆ ವಹಿಸಿದನು. ಜುಲೈ ತಿಂಗಳಲ್ಲಿ ಬಲಾತ್ಕಾರದ ಕಾನೂನು ನ್ಯೂಯರ್ಕ್ ನಗರದಲ್ಲಿಯೂ ಪ್ರಚಾರಕ್ಕೆ ಬಂದಿತು. ದೇಶಾಂತರಗಳಿಂದ ಬಂದು ಅಲ್ಲಿ ವಾಸವಾಗಿದ್ದ ಕೆಲವು ಜನರು ಒಟ್ಟಾಗಿ ನಿಂತು

ಆದರ ಪ್ರಚಾರಕ್ಕೆ ಅಡ್ಡಿಮಾಡಿದರು. ರಿಪಬ್ಲಿಕನರ ಮನೆಗಳಿಗೆಲ್ಲಾ ಬೆಂಕಿಹಚ್ಚಿ ಬೂದಿಮಾಡಿದರು ; ಬೆಂಕಿಯನ್ನು ಆರಿಸುವುದಕ್ಕೋಸ್ಕರ ಬಂದವರನ್ನು ಅಡ್ಡಕಟ್ಟಿ, ಆರಿಸದಂತೆ ತಡೆದರು ; ಎದುರಿಗೆ ಸಿಕ್ಕಿದ ನೀಗ್ರೋಗಳನ್ನೆಲ್ಲಾ ಹೊಡೆದು ಬಡಿದು ಹಿಂಸೆಮಾಡಿದರು. ಏಟು ತಿಂದ ಕೆಲವು ನೀಗ್ರೋಗಳಿಗೆ ಪ್ರಾಣವೇ ಹೋಯಿತು. ನೀಗ್ರೋಗಳಿಗೋಸ್ಕರ ಕಟ್ಟಲ್ಪಟ್ಟದ್ದ ಮನೆಗಳೆಲ್ಲವೂ ಅವರಿಂದ ಸುಡಲ್ಪಟ್ಟುವು. ಹೀಗೆ ಅವರ ಲೂಟಿಯು ನಾಲ್ಕು ದಿನಗಳವರೆಗೆ ನಡೆಯಿತು. ಅಷ್ಟು ಹೊತ್ತಿಗೆ ಸೈನ್ಯವು ಬಂದು ಗದ್ದಲವನ್ನು ಅಡಗಿಸಿತು. ಜನರನ್ನು ಸೈನ್ಯಕ್ಕೆ ಸೇರಿಸುವ ಕೆಲಸವು ನಿರ್ವಿಘ್ನವಾಯಿತು. ಗೌರ್ನರನು ಲೂಟಿಯ ಕಾಲದಲ್ಲಿ ಊರಿನೊಳಕ್ಕೆ ಬಂದು, ಒಳ್ಳೆಯ ಮಾತಿನಿಂದ ಲೂಟಿಗಾರರನ್ನು ಪ್ರಾರ್ಥಿಸಿದನು ; ಅವರನ್ನು ಹೀಗೆ ರೇಗಿಸಿದಂತಹ ಅವಿವೇಕವನ್ನು ತಪ್ಪಿಸಿ ಅನುಕೂಲಮಾಡುವುದಾಗಿ ಮಾತುಕೊಟ್ಟನು. ಬಲಾತ್ಕಾರದ ಕಾನೂನು ನ್ಯಾಯವಾದುದಲ್ಲವೆಂದು ಆತನು ಅರ್ಜಿಹಾಕಿ ಕೊನೆಯವರೆಗೂ ದೂರಿದನು. ನ್ಯಾಯಸ್ಥಾನವು 'ಮಂಜೂರು' ಮಾಡುವ ವರೆಗೂ ಅದು ಚಲಾವಣೆಗೆ ಬರಕೂಡದೆಂದು ಅವನ ಅಭಿಪ್ರಾಯವಿದ್ದಿತು. ಅವನು ಲಿಂಕನ್ನನನ್ನು ಪ್ರಾರ್ಥಿಸಿದನು. ಪ್ರೆಸಿಡೆಂಟನು, ಈ ವಿಚಾರದಲ್ಲಿ ನ್ಯಾಯ ಸ್ಥಾನದ ನಿರ್ಣಯವನ್ನು ತಿಳಿಯುವುದಾಗಿ ಹೇಳಿ ಸಮಾಧಾನಮಾಡಿದನು. ಆದರೆ ಅದುವರೆಗೆ ಕಾನೂನನ್ನು ಚಲಾವಣೆಯಲ್ಲಿಡಕೂಡದೆಂಬ ಅಂಶವನ್ನು ಮಾತ್ರ ಸಲ್ಲಿಸಲಿಲ್ಲ. ಬಿಡುಗಡೆಯ ಪ್ರಕಟನೆಯ ದೆಸೆಯಿಂದ ವಿರೋಧವೆದ್ದಿತು. ಆದರೆ ಸರ್ಕಾರವು ಪ್ಯೆ ಕೊಡವಿಕೊಂಡೆದ್ದು ಚಟುವಟಿಕೆಯಿಂದ ಕೆಲಸವನ್ನು ಮಾಡಲಾ ರಂಭಿಸಿತು. ಮಾಡದಿದ್ದರೆ ಯತ್ನವಿರಲಿಲ್ಲ. ಯುದ್ಧದ ಸ್ಥಿತಿಯು ಬದಲಾಯಿಸಿತು. ಸರ್ಕಾರದ ನಡೆವಳಿಯಲ್ಲಿ ಹುಳುಕನ್ನು ಹುಡುಕಿ ಬೊಬ್ಬೆಮಾಡಲು ಡೆಮೊಕ್ರೆಟರಿಗೆ ಅವಕಾಶವು ತಪ್ಪಿತು. 1863ನೆಯ ವರುಷದ ಕೊನೆಯಲ್ಲಿ ಯುದ್ಧವು ಜಯಪ್ರದ ವಾಗಿಯೇ ಸಾಗುತ್ತಿದ್ದಿತು. "ಸಂಯೋಗದ ಜನಗಳು" ಇಲ್ಲಿನ್ನಾಯದಲ್ಲಿ ಆಗಸ್ಟ್ ತಿಂಗಳಲ್ಲಿ ದೊಡ್ಡದೊಂದು ಸಂಮೇಳನವನ್ನು ನಡೆಯಿಸಿದರು. ಅಲ್ಲಿಗೆ ಹೋಗಿ ಮಾತ ನಾಡಬೇಕೆಂದು ಲಿಂಕನ್ನನಿಗೆ ಅಪೇಕ್ಷೆಯಾಯಿತು. ಆದರೂ ತಡೆದನು. ತಡೆದು, ಒಂದು ಕಾಗದವನ್ನು ಬರೆದನು. ಜನರು ಮಾತನಾಡುತ್ತಿದ್ದ ಸಂಧಿಯ ವಿಚಾರವು ಎಷ್ಟು ಅಸಂಗತವಾದುದೆಂಬುದು ಸ್ಪಷ್ಟವಾಗಿ ಹೇಳಲ್ಪಟ್ಟದ್ದಿತು. ಸಂಧಿಯನ್ನು ಮಾಡಿಕೊಳ್ಳಬೇಕೆಂಬ ಸೂಚನೆಯು ದಕ್ಷಿಣದಲ್ಲಾಗಲೀ ದಕ್ಷಿಣದ ದಂಡಿನಲ್ಲಾಗಲೀ ಇರಲಿಲ್ಲ. ಇಷ್ಟರೆ ಜನಗಳ ತಿಳುವಳಿಕೆಗೆ ಬರುತ್ತಿದ್ದಿತು. ಸಂಯೋಗದ ಜನಗಳಲ್ಲಿ ಯೂ ಕೆಲವರು ಗುಲಾಮರಿಗೆ ಬಿಡುಗಡೆಯಾದುದನ್ನು ಅನುಮೋದಿಸಿರಲಿಲ್ಲ. ತನ್ನ ವ್ಯವಹಾರವು ಹೇಗೆ ನ್ಯಾಯವಾದುದೆಂಬುದನ್ನು ಲಿಂಕನ್ನನು ಸಾಧಿಸಿದ್ದನು. ಬಿಡುಗಡೆಯನ್ನುಂಟುಮಾಡಿದುದರಿಂದ ಸಂಯೋಗಕ್ಕೆ ಒಂದು ಸಹಾಯವುಂಟಾ ಯಿತು. ನೀಗ್ರೋಗಳು ಸಾವಿರಾರು ಮಂದಿ ಸೈನ್ಯದಲ್ಲಿಯೂ ಇತರ ಸ್ಥಳಗಳಲ್ಲಿಯೂ ಕೆಲಸಮಾಡುತ್ತಿರುವರು. ಕೊಟ್ಟ ಮಾತಿಗೆ ತಪ್ಪಕೂಡದು.

ವರುಷವು ಮುಗಿಯುತ್ತ ಬಂದಿತು. ಸ್ಥಿತಿಯು ಸುಮುಖವಾಯಿತು.

ಜನರ ಮುಖವು ಪ್ರಫುಲ್ಲತೆಯನ್ನು ತಾಳಿತು ; ಮನಸ್ಸೂ ಪ್ರಫುಲ್ಲತೆಯನ್ನು ತಾಳಿತು. ಪ್ರೆಸಿಡೆಂಟನು ಹೋಗುತ್ತಿದ್ದ ಹಾದಿಯೇ ಒಟ್ಟಿನಲ್ಲಿ ಯುಕ್ತವಾದುದೆಂದು ಎಲ್ಲರಿಗೂ ಸ್ಪಷ್ಟವಾಯಿತು. ಪ್ರಜೆಗಳು ಪ್ರೆಸಿಡೆಂಟನನ್ನು ಎಂದಿಗಿಂತ ಹೆಚ್ಚಾಗಿ ಪ್ರೀತಿಸಿದರು.

---

# ೩ನೆಯ ಅಧ್ಯಾಯ

## ಯುದ್ಧ—1864ರಲ್ಲಿ

ಯುದ್ಧದ ಕೊನೆಗಾಲವು ಬಂದಿತು. ಈ ಸಮಯದಲ್ಲಿ ಜೆಫರ್ಸ್ನ ಡೇವಿಸ್ಸನು ದಕ್ಷಿಣದಲ್ಲಿ ಅಲ್ಲಲ್ಲಿ ಚದರಿದ್ದ ಸೈನ್ಯವನ್ನೆಲ್ಲಾ ಒಟ್ಟುಗೂಡಿಸಿ ಉತ್ತರದ ಮೇಲೆ ನುಗ್ಗಿಸಿದ್ದರೆ ಪರಿಣಾಮವು ಮತ್ತೊಂದು ವಿಧವಾಗುತ್ತಿದ್ದಿತೆಂದು ಯುದ್ಧ ಕಾರ್ಯನಿರ್ವಾಹದಲ್ಲಿ ತಿಳುವಳಿಕೆಯುಳ್ಳವರು ಅಭಿಪ್ರಾಯಪಡುತ್ತಾರೆ. ಗೆಟ್ಟಿಸ್ ಬರ್ಗ್ ಕದನವು ನಡೆಯುತ್ತಿದ್ದಾಗ ಅವನು ಚಾರ್ಲ್ಸ್ಟನ್ ದುರ್ಗದಲ್ಲಿದ್ದ ಸೈನ್ಯವನ್ನು ಅಲ್ಲಿಗೆ ಕಳುಹಿಸಿದ್ದರೆ ಲೀಯ ಒತ್ತಾಸೆಗೆ 20,000 ಮಂದಿಯ ದಂಡು ಒದಗಿ ದಕ್ಷಿಣಕ್ಕೆ ಜಯವುಂಟಾಗುತ್ತಿದ್ದಿತು. 1863ರಲ್ಲಿ ಉತ್ತರವು ಭೂಮಾರ್ಗವಾಗಿಯೂ ಜಲಮಾರ್ಗವಾಗಿಯೂ ಸೈನ್ಯವನ್ನು ಚಾರ್ಲ್ಸ್ಟನ್ನಿನ ಮೇಲೆ ಕಳುಹಿಸಿತು. ಪ್ರತ್ಯಕ್ಷವಾದ ಲಾಭವೇನೂ ಆಗಲಿಲ್ಲ. ಆದರೂ, ದುರ್ಗದೊಳಗಿದ್ದ ಸೈನ್ಯವು ಹೊರಬಿದ್ದು ದಕ್ಷಿಣದ ಸೈನ್ಯವಾವುದರೊಡನೆಯೂ ಸೇರಿಕೊಳ್ಳದಂತೆ ಅಡ್ಡಿಯಾಯಿತು. ಆ ವರುಷವು ಕಳೆದು ಮಾರನೆಯದು ಪ್ರಾರಂಭವಾದರೂ ಅಲ್ಲಿದ್ದ ಶತ್ರುವಿನ ದಂಡು ಕದಲಿರಲಿಲ್ಲ. ಕದಲಿಸಲು ಡೇವಿಸ್ಸನಿಗೂ ಮನಸ್ಸಿರಲಿಲ್ಲ. ಜನರಲ್ ಲಾಂಗ್ಸ್ಟ್ರೀಟನು ಟೆನ್ನೆಸ್ಸೀಯ ಆಗ್ನೇಯದಲ್ಲಿ ಸೈನ್ಯದೊಡನೆ ಕುಳಿತಿದ್ದನು. ಅವನಿಗೆ ಉಪಯುಕ್ತವಾದೊಂದು ಕೆಲಸವನ್ನು ನೇಮಿಸುವುದಾಗಿ ಬಹಳ ದಿನಗಳಿಂದ ವಾರ್ತೆಯಿದ್ದಿತು ; ಆದರೆ, ಯಾವ ಕೆಲಸವೂ ಬಂದಿರಲಿಲ್ಲ. 1864ನೆಯ ವರುಷವು ಪ್ರಾರಂಭಿಸಿತು. ಲೀಯು ಸೈನ್ಯದೊಡನೆ ರೆಪಿಡ್ಸ ನದಿಯ ದಕ್ಷಿಣದಲ್ಲಿದ್ದನು. ಬ್ರಾಗನು ಆಧಿಪತ್ಯದಿಂದ ನಿವೃತ್ತನಾಗಿ ಅವನ ಸ್ಥಳಕ್ಕೆ ಜೋಸೆಫ್ ಜಾನ್ಸ್ಟನ್ನನು ಬಂದಿದ್ದನು. ಆ ಸೈನ್ಯವು ಡಾಲ್ಟನ್ (Dalton) ಎಂಬ ಸ್ಥಳದಲ್ಲಿ ಡೇವಿಸ್ಸನ ಆಜ್ಞೆಗಳನ್ನು ನಿರೀಕ್ಷಿಸುತ್ತಲಿದ್ದಿತು. ರಾಜ್ಯದ ಸ್ಥಿತಿಯನ್ನು ನೋಡಿದರೆ, ದಕ್ಷಿಣದ ಸೊಕ್ಕನ್ನು ಮುರಿಯಲು ಇನ್ನೂ ಹೆಚ್ಚು ಕಾಲವು ಬೇಕೆಂದು ತೋರುತ್ತಿದ್ದಿತು. ಈ ಹೊತ್ತಿನಲ್ಲಿ ದಕ್ಷಿಣವು ದೊಡ್ಡದೊಂದು ದಂಡನ್ನು ಜೊತೆಮಾಡಿ

ಕೊಂಡು ನುಗ್ಗಿದ್ದರೆ ಉತ್ತರದ ಕೈಗೆ ಬಂದಿದ್ದ ಜಯದ ತುತ್ತನ್ನು ಕಿತ್ತುಕೊಳ್ಳ ಬಹುದಾಗಿದ್ದಿತು. ಲೀಯೂ ಲಾಂಗ್‌ಸ್ಟ್ರೀಟನೂ ಅದನ್ನು ಯೋಚಿಸಿದರು. ಜೆಫರ್ಸನ್ ಡೇವಿಸ್ಸನು ಮಾತ್ರ, ಉತ್ತರದ ಸೈನ್ಯವು ಬಹಳ ದೂರ ದಕ್ಷಿಣದೊಳಗೆ ನಡೆದು ಬಂದರೆ ಸಿಂಹದ ಗುಹೆಯೊಳಕ್ಕೆ ನಡೆದಂತಾಗುವುದೆಂತಲೂ ಹೊಂಚು ತ್ತಿರುವ ದಕ್ಷಿಣದ ದಂಡುಗಳು ಎಲ್ಲಾ ಕಡೆಯಿಂದಲೂ ಅದನ್ನು ಮುತ್ತಿ ನಾಶಮಾಡುವುವೆಂದೂ ಹೇಳಿದನು. ಅಲ್ಲದೆ ಜಯಾರ್ಥಿಯಾಗಿ ಹೊರಟ ಉತ್ತರವು ಹೆಜ್ಜೆಹೆಜ್ಜೆಗೂ ಸೋತು ಬಳಲಿಬೀಳುವುದೆಂದೂ ಅವನು ಭಾವಿಸಿದನು. ನಿಜವಾಗಿ ಉತ್ತರವು ಅಂತಹ ಸ್ಥಿತಿಯಲ್ಲಿಯೇ ಇದ್ದಿತು. ಅಂತು, ಡೇವಿಸ್ಸನು ಯಾವ ಕೆಲಸ ವನ್ನೂ ಮಾಡಲಿಲ್ಲ. ಲಿಂಕನ್ನನು ಮಂತ್ರಿಗಳ ಮಾತನ್ನೂ ಸೈನ್ಯಾಧಿಪತಿಗಳ ಮಾತನ್ನೂ ಕೆಲವು ವೇಳೆ ಕೇಳುತ್ತ ಅವರ ಯೋಚನೆಯೇ ನಡೆಯಲು ಬಿಡುತ್ತಿ ದ್ದನು ; ಆದರೆ ಡೇವಿಸ್ಸನು ಯಾರ ಮಾತನ್ನೂ ಕೇಳುತ್ತಿರಲಿಲ್ಲ—ಆ ಅಪೇಕ್ಷೆಯೇ ಇರಲಿಲ್ಲ. ಜೋಸೆಫ್ ಜಾನ್ಸ್ಟನ್ನನೊಡನೆ ಮೊದಲಿಂದ ಕೊನೆಯವರೆಗೂ ಜಗಳವಾ ಡಿದನು ; ಬೋರ್‌ಗಾರ್ಡನೊಡನೆ ಆಗಾಗ ಜಗಳವಾಗುತ್ತಲೇ ಇದ್ದಿತು. ಬ್ರಾಗನು ಈಗ ಬೇಕಾದವನಾಗಿ ಯುದ್ಧಕಾರ್ಯಗಳಲ್ಲಿ ಮಂತ್ರಿಯಾದನು. ಲೀಗೆ ಸ್ವಾತಂತ್ರ್ಯ ವಾಗಲೀ ಉತ್ತೇಜನವಾಗಲೀ ಸ್ವಲ್ಪವೂ ಇರಲಿಲ್ಲ.

ಚಟ್ಟನೂಗದಿಂದ ಹೊರಟು ದಕ್ಷಿಣದೊಳಕ್ಕೆ ನುಗ್ಗಬೇಕೆಂದು ಉತ್ತರವು ಯೋಚಿಸುತ್ತಿದ್ದಿತು. ಆಕಾಲದಲ್ಲಿ ಸೈನ್ಯವನ್ನು ಭೂಮಿಯ ಮೇಲೂ ನೀರಿನ ಮೇಲೂ ಕಳುಹಿಸಿ ಅಲಬಾಮದಲ್ಲಿರುವ ಮೊಬೈಲ್ (Mobile) ಎಂಬ ಸ್ಥಳವನ್ನು ವಶಪಡಿಸಿಕೊಳ್ಳಬೇಕೆಂದು ಗ್ರಾಂಟನೂ ನೌಕಾಧ್ಯಕ್ಷನೂ ಯೋಚಿಸಿದರು. ಆದರೆ ಇತರ ವಿಷಯಗಳನ್ನು ಆಲೋಚಿಸುತ್ತಿದ್ದ ಸರ್ಕಾರವು ಅವರ ಸಲಹೆಯನ್ನು ನಡೆಯಿಸಲಿಲ್ಲ. ಪ್ರತಿಯಾಗಿ ಜನರಲ್ ಬ್ಯಾಂಕ್ಸನನ್ನು ಲೂಸಿಯಾನದಿಂದ ಟೆಕ್ಸಾ ಸಿಗೆ ಕಳುಹಿಸಿತು. ದಳಪತಿಯು ಮೇ ತಿಂಗಳವರೆಗೂ ಸಾಹಸಮಾಡಿದನು. ರೆಡ್ ರಿವರ್ (Red River) ಎಂಬ ನದಿಯ ಕಡೆಗೆ ಅವನು ಕಳುಹಿಸಿದ್ದ ದಂಡು ಶತ್ರುವಿನೊಡನೆ ಹೊಡೆದಾಡಿ ಸಂಪೂರ್ಣವಾಗಿ ಸೋತುಹೊಯಿತು. ದಕ್ಷಿಣದ ಸೈನ್ಯವು ಮುಂದೆ ಪ್ರಯತ್ನಮಾಡಲಿಲ್ಲ. ಮಾಡಿದ್ದರೆ ಬ್ಯಾಂಕ್ಸನ ಸೈನ್ಯದ ಜೊತೆಗೆ ಬಂದಿದ್ದ ನಾವೆಯು ಕೈಸೆರೆ ಸಿಕ್ಕಿ ಮಿಸಿಸಿಪ್ಪಿಯ ಜಲಮಾರ್ಗವು ಪರಾಧೀನವಾಗು ತ್ತಿದ್ದಿತು. ಈ ಪ್ರಮೇಯದಲ್ಲಿ ಉತ್ತರವು ಬಹಳ ನಷ್ಟ ಹೊಂದಿತು.

ಚಟ್ಟನೂಗದಿಂದ ಹೊರಟು ಜಾನ್ಸ್ಟನ್ನನ ಮೇಲೆ ನಡೆಯುವುದಕ್ಕೆ ಮೊದಲು ಮಿಸಿಸಿಪ್ಪಿಯಲ್ಲಿ ನಿರಾಟಂಕವಾಗಿ ಕುಳಿತಿದ್ದ ದಕ್ಷಿಣದ ಸೈನ್ಯಕ್ಕೆ ಶಾಸ್ತಿ ಯನ್ನು ಮಾಡುವುದು ಅವಶ್ಯಕವಾಗಿದ್ದಿತು. ಗ್ರಾಂಟನು ರೈಲು ರಸ್ತೆಯನ್ನು ಹಾಳುಮಾಡಿ ಆ ದಕ್ಷಿಣದ ದಂಡು ಪೂರ್ವಾಭಿಮುಖವಾಗಿ ನಡೆಯಲಾಗದಂತೆ ಮಾಡಲು ನಿಶ್ಚಯಿಸಿದನು. ಅವನ ಬಳಿಯಲ್ಲಿದ್ದ ಟಾಮಸ್ಸನು ಸ್ವಲ್ಪ ಸೈನ್ಯದೊಡನೆ ಚಟ್ಟನೂಗದಲ್ಲಿ ನಿಂತನು ; ಷೆರ್ಮನ್ನನು, ಮಿಸಿಸಿಪ್ಪಿಯ ದಕ್ಷಿಣದಲ್ಲಿ ಮುಖ್ಯಸ್ಥಳ ವಾದ ಮೆರಿಡಿಯನ್ನಿಗೆ ಕಳುಹಿಸಲ್ಪಟ್ಟನು. ಸೈನ್ಯದೊಡನೆ ಹೊರಟು ಫೆಬ್ರವರಿ

ತಿಂಗಳಲ್ಲಿ ಅವನು ಆ ಸ್ಥಳವನ್ನು ತಲಪಿದನು. ದಾರಿಯಲ್ಲಿ ತೊಂದರೆಯೇನೂ ಉಂಟಾಗಲಿಲ್ಲ. ಗ್ರಾಂಟನ ಉದ್ದೇಶವನ್ನು ಸಾಧಿಸಿದುದಾಯಿತು.

ಮಾರ್ಚಿ ತಿಂಗಳಲ್ಲಿ ಲಿಂಕನ್ನನು ಗ್ರಾಂಟನಿಗೆ ಲೆಫ್ಟಿನೆಂಟ್ ಜನರಲ್ ಎಂಬ ಅಧಿಕಾರವನ್ನು ಕೊಟ್ಟನು. ವಾಷಿಂಗ್ಟನ್ನನ ಕಾಲದಿಂದೀಚೆಗೆ ಆ ಅಧಿಕಾರವನ್ನು ಯಾರೂ ಪಡೆದಿರಲಿಲ್ಲ. ಅದು ಪ್ರೆಸಿಡೆಂಟ್ ಪದವಿಗೆ ಎಡಗೈಯಾದುದು. ಉತ್ತರದ ಸೈನ್ಯಗಳೆಲ್ಲವೂ ಈಗ ಅವನ ಅಧಿಕಾರಕ್ಕೆ ಒಳಪಟ್ಟುವು. ಅಧಿಕಾರದ ಖಿಲ್ಲತ್ತುಗಳನ್ನು ಸ್ವೀಕರಿಸುವುದಕ್ಕಾಗಿ ಗ್ರಾಂಟನು ವಾಷಿಂಗ್ಟನ್ನಿಗೆ ಬಂದನು. ಬರುವಾಗ ಷೆರ್ಮನ್ನನಿಗೆ ತನ್ನ ಆಲೋಚನೆಗಳನ್ನೆಲ್ಲಾ ತಿಳಿಸಿ ಕಾಗದಗಳನ್ನು ಬರೆದಿದ್ದನು. ಸದ್ಯದಲ್ಲಿ ತಾನು ಪಶ್ಚಿಮಭಾಗಕ್ಕೆ ಹೋಗಬೇಕೆಂಬುದು ಅವನ ತಾತ್ಪರ್ಯವಾಗಿದ್ದಿತು. ಪಶ್ಚಿಮಕ್ಕೆ ತಾನು ಹೋಗಬೇಕೆಂದು ಷೆರ್ಮನ್ನನ ಮನಸ್ಸಿನಲ್ಲಿದ್ದಿತು. ಆದರೂ ಅವನು ಗ್ರಾಂಟನ ಕಾಗದವನ್ನು ನೋಡಿ ಆತನೇ ಹೋಗಲೆಂದು ಸುಮ್ಮನಾದನು. ಷೆರ್ಮನ್ನನಿಗೆ ಒಂದು ಹೆದರಿಕೆಯಿದ್ದಿತು. ಗ್ರಾಂಟನಿಗೆ ಯಾರು ಏನು ಕೆಡಕುಮಾಡುವರೋ, ಆತನು ಎಲ್ಲಿ ಜುಗುಪ್ಸೆ ಹೊಂದಿ ಕೆಲಸವನ್ನು ಬಿಟ್ಟು ಹೊರಟು ಹೋಗುವನೋ ಎಂದು ಬಹಳ ಹೆದರುತ್ತಿದ್ದನು. ರಾಜನೀತಿಯನ್ನು ತಿಳಿದವರೆನ್ನಿಸಿಕೊಂಡವರು ನಿಜವಾಗಿ ಗ್ರಾಂಟನಲ್ಲಿ ತಪ್ಪನ್ನೆಣಿಸಿದರು. ಆದರೆ ಆತನು ಕೋಪ ಹೊಂದಲಿಲ್ಲ. ಗ್ರಾಂಟನು ಮನಸ್ಸನ್ನು ಬದಲಾಯಿಸಿ, ಪಶ್ಚಿಮದಲ್ಲಿ ಮಾಡಬೇಕಾಗಿದ್ದುದನ್ನು ಷೆರ್ಮನ್ನನಿಗೆ ವಹಿಸಿದನು. ತಾನು ಪೂರ್ವಭಾಗದಲ್ಲಿ ಮಾಡಬೇಕಾಗಿದ್ದ ಕೆಲಸಗಳನ್ನು ಮಾಡಲು ನಿಶ್ಚಯಿಸಿದನು. ಆಬಳಿಕ ಪಶ್ಚಿಮದಲ್ಲಿ ಷೆರ್ಮನ್ನನಿದ್ದ ತಾವಿಗೆ ಹೋಗಿ ಕಾರ್ಯಕ್ರಮವನ್ನು ಪರ್ಯಾಲೋಚಿಸಿ ಗೊತ್ತುಮಾಡಿಕೊಂಡು ಬಂದನು. ಷೆರ್ಮನ್ನನು ತನ್ನ 1,00,000 ಮಂದಿಯುಳ್ಳ ಸೈನ್ಯವನ್ನು ತೆಗೆದುಕೊಂಡು ಜಾನ್‌ಸ್ಟನ್ನನನ್ನು ಹಿಂಬಾಲಿಸಬೇಕು ; ಜಾನ್‌ಸ್ಟನ್ನನು ಎಲ್ಲಿಗೆ ಹೋದರೂ ಬಿಡಕೂಡದು. ಹೀಗೆ ಮಾಡಿ ಅವನ 60,000 ಸೈನಿಕರ ಸೈನ್ಯವನ್ನು ನಾಶಮಾಡಬೇಕು. ಗ್ರಾಂಟನ ಸೈನ್ಯದಲ್ಲಿ 1,20,000 ಮಂದಿ ಯೋಧರಿದ್ದರು. ಅವರೊಡನೆ ಹೊರಟು ಗ್ರಾಂಟನು ಲೀಯನ್ನು ಹಿಂಬಾಲಿಸಿ ಅವಶ್ಯಕವಾದ ಕಡೆಗಳಲ್ಲಿ ಯುದ್ಧಮಾಡುತ್ತ ಅವನ 60,000 ಸೈನಿಕರನ್ನು ನಾಶಮಾಡಬೇಕು. ಈ ಉಪಾಯದಲ್ಲಿ ಅದ್ಭುತವಾದುದೇನೂ ಇಲ್ಲ. ಆದರೆ ಅದನ್ನು ಸಾಧಿಸುವುದರಲ್ಲಿ ತೊಂದರೆಯೂ ನಷ್ಟವೂ ಹೆಚ್ಚು. ಗ್ರಾಂಟನೂ ಷೆರ್ಮನ್ನನೂ ತೊಂದರೆಯ ಅಥವಾ ನಷ್ಟದ ಯೋಚನೆಯನ್ನು ಮೂಲೆಗೊತ್ತರಿಸಿದರು. ಇದುವರೆಗೂ ಒಂದು ಸಲವೂ ಗ್ರಾಂಟನು ಪ್ರೆಸಿಡೆಂಟನನ್ನು ಭೇಟಿಮಾಡಿ ಅವನೊಡನೆ ಮಾತನಾಡಿರಲಿಲ್ಲ. ಆದಕಾರಣ ಮಾತನಾಡಿ ಬರಲು ಹೋದಾಗ ಸ್ವಲ್ಪ ಎಚ್ಚರಿಕೆಯಿಂದಿದ್ದನು. ಲಿಂಕನ್ನನು ಒಳ್ಳೆಯವನೆಂದು ಒಪ್ಪಿಕೊಳ್ಳಬಹುದು ; ಆದರೆ ಅವನು ಇತರರು ತನ್ನ ಅಡಿಯಾಳಂತೆ ಕೆಲಸಮಾಡಬೇಕೆಂದು ಅಪೇಕ್ಷಿಸುವುದಾದರೆ ಅದಕ್ಕೆ ದಾರಿಯನ್ನು ಕೊಡಕೂಡದು—ಹೀಗೆಂದು ಗ್ರಾಂಟನು ಪೂರ್ವಭಾವಿಯಾಗಿ ನಿಶ್ಚಯಮಾಡಿದ್ದನು. ಸ್ಟಾಂಟನ್ನನು, ಪ್ರೆಸಿಡೆಂಟನು ಗುಟ್ಟುಗುಮಾನಿಗಳನ್ನರಿಯದೆ ಮುಖ್ಯವಿಷಯಗಳನ್ನೂ ಕೂಡ ಬಂದವರಿಗೆಲ್ಲಾ

ತೀಸಿ ಎಲ್ಲರೊಡನೆಯೂ ಚರ್ಚಿಸುವನಾದುದರಿಂದ ಮುಖ್ಯವಿಷಯವಾವುದನ್ನೂ ಮಾತನಾಡಬೇಡವೆಂದು ಅವನಿಗೆ ಸೂಚಿಸಿದನು. ಅದು ನ್ಯಾಯವಾದುದಲ್ಲ. ಬರುವ ಜನರನ್ನು ಮೇಲೆ ಹತ್ತಿಸಿಕೊಳ್ಳದಂತೆ ಅವರವರ ಯೋಗ್ಯತೆಗನುಸಾರವಾಗಿ ದೂರದಲ್ಲಿಡುವುದು ಅವನ ಸ್ವಭಾವ. ಲಿಂಕನ್ನನ ಸ್ವಭಾವವು ಅಂತಹದಲ್ಲ. ಬಂದ ವರನ್ನು ಆದರಿಸಿ ಇಂಥವರು ಅಂಥವರೆಂದು ಭೇದವೆಣಿಸಿ ಮುಚ್ಚುಮರೆಯ ಮಾತನ್ನಾಡುತ್ತಿರಲಿಲ್ಲ. ಅವನ ಸರಳತೆಯನ್ನು ನೋಡಿ ಬಂದವರಿಗೆ ಆಶ್ಚರ್ಯವಾ ಗುತ್ತಿದ್ದಿತು. ಆದರೆ ಈ ವಿಧವಾದ ನಡತೆಯನ್ನು ತೋರಿಸಲು ಲಿಂಕನ್ನನಿಗೆ ಗೂಢವಾದ ಒಂದು ಉದ್ದೇಶವು ಇದ್ದೇ ಇದ್ದಿತು. ದರ್ಶನಾಪೇಕ್ಷೆಯಿಂದ ಬಂದು ಮಾತ ನಾಡುವವರೆಲ್ಲರಿಂದಲೂ ಏನಾದರೊಂದು ವಿಷಯವನ್ನು ತಿಳಿದುಕೊಳ್ಳುತ್ತಿದ್ದನು. ಪ್ರಸ್ತಾಪತ್ವೇನ ಮನುಷ್ಯನೊಬ್ಬನ ಗುಣವನ್ನೂ ಪಂಗಡಗಳ ಚಿತ್ತವೃತ್ತಿಯನ್ನೂ ಪ್ರಜೆಗಳ ಅಭಿಮತವನ್ನೂ ಗೊತ್ತುಮಾಡಿಕೊಂಡು, ಆ ತಿಳುವಳಿಕೆಯನ್ನು ಉಪ ಯೋಗಮಾಡಿಕೊಳ್ಳುತ್ತಿದ್ದನು. ಆದರೆ ಬೇಕಾದಾಗ ಗುಟ್ಟನ್ನು ಹೊರಕ್ಕೆ ಬಿಟ್ಟು ಕೊಡದಿರುವುದಕ್ಕೂ ಅವನಿಗೆ ತಿಳಿಯುತ್ತಿದ್ದಿತು. ನೋಡಿದವರಿಗೆ ಪ್ರೆಸಿಡೆಂಟನು ಉದಾಸೀನನೆಂದೂ ತಿಳುವಳಿಕೆ ಸಾಲದವನೆಂದೂ ಕಾಣಬಹುದು. ಆದರೆ ಪ್ರೆಸಿ ಡೆಂಟನು ಉದಾಸೀನನಾಗಿರುತ್ತಿರಲಿಲ್ಲ; ತಿಳುವಳಿಕೆ ಸಾಲದವನಲ್ಲ. ಅದು ಹೇಗಾ ದರೂ ಇರಲಿ. ಗ್ರಾಂಟನು ವಾಷಿಂಗ್ಟನ್ನನ್ನು ಬಿಟ್ಟು ಸೈನ್ಯವಿದ್ದ ತಾವಿಗೆ ಹೋದನು. ಪ್ರೆಸಿಡೆಂಟನಿಗೂ ಅವನಿಗೂ ವಿಶ್ವಾಸವು ಬೆಳೆಯಿತು. ಒಬ್ಬರ ಮಾತಿನಲ್ಲಿ ಇನ್ನೊಬ್ಬರಿಗೆ ನಂಬಿಕೆಯು ಹುಟ್ಟಿತು. ಅದು ಮುಂದೆ ಕದಲಲಿಲ್ಲ. ಗ್ರಾಂಟನು ತನಗೆ ತೋರಿದಂತೆ ಮಾಡಬಹುದೆಂದೂ ತಾನು ಅಡ್ಡಿಮಾಡುವುದಿಲ್ಲವೆಂದೂ ಪ್ರೆಸಿ ಡೆಂಟನು ಹೇಳಿದನು. ಅವನು ಗ್ರಾಂಟನಿಗೆ ಬರೆದ ಕಾಗದದಲ್ಲಿ ವಿಷಯವು ಈರೀತಿ ಯಾಗಿದ್ದಿತು:—"ಮುಂದೆ ಕೆಲವು ಕಾಲದವರೆಗೂ ನಿಮ್ಮನ್ನು ನೋಡಲಾಗುವುದಿಲ್ಲ. ಆದುದರಿಂದ ಪತ್ರದ ಮೂಲಕ ನನ್ನ ಮನಸ್ಸನ್ನು ತಿಳಿಸುತ್ತೇನೆ. ನೀವು ಇದು ವರೆಗೆ ಮಾಡಿರುವುದು ಬಹಳ ತೃಪ್ತಿಕರವಾಗಿರುವುದು. ನಿಮ್ಮ ವ್ಯೂಹದ ವಿವರಗ ಳೆಲ್ಲಾ ನನಗೆ ಗೊತ್ತಿಲ್ಲ; ನನಗೆ ಅವಶ್ಯಕವೂ ಅಲ್ಲ, ನೀವು ಎಚ್ಚರಿಕೆಯುಳ್ಳವರು; ಆತ್ಮಾವಲಂಬನೆಯು ನಿಮ್ಮಲ್ಲಿ ಸಂಪೂರ್ಣವಾಗಿರುವುದು. ಆದಕಾರಣ ಯಾವ ವಿಧ ದಲ್ಲಿಯೂ ನಿಮ್ಮ ಗೊಡವೆಗೆ ಬರುವುದಿಲ್ಲ. ಆದರೆ ಹೆಚ್ಚಿನ ನಷ್ಟಗಳಾಗಲೀ ನಮ್ಮ ಕಡೆ ಯ ಸೈನಿಕರು ಹೆಚ್ಚುಹೆಚ್ಚಾಗಿ ಶತ್ರುಗಳ ಕೈಗೆ ಬೀಳುವುದಾಗಲೀ ಸಂಭವಿಸವೆಂದು ನಾನು ಹಾರೈಸುವೆನು. ನನಗಿಂತಲೂ ಹೆಚ್ಚಾಗಿ ನೀವು ಅದನ್ನು ನೋಡಿಕೊಳ್ಳದೆ ಇರುವುದಿಲ್ಲ, ನನ್ನಿಂದ ಆಗಬೇಕಾದ ಸಹಾಯವಾವುದಾದರೂ ಇದ್ದರೆ ಒಡನೆಯೇ ತಿಳಿಸಿರಿ—ತಿಳಿಸದಿರಕೂಡದು. ನಮ್ಮ ಸೈನ್ಯವು ಧೈರ್ಯವುಳ್ಳದು; ನಮ್ಮ ವ್ರತವು ಸಾಧುವಾದುದು. ದೇವರು ನಿಮಗೆ ಅನುಕೂಲವನ್ನುಂಟುಮಾಡಲಿ" ಗ್ರಾಂಟನು ಉತ್ತರ ಬರೆದನು. "ನಾನು ಸೈನ್ಯಕ್ಕೆ ಸೇರಿದಂದಿನಿಂದ ಇದುವರೆಗೆ ಯಾವುದೊಂದು ವಿಷಯದಲ್ಲಿಯೂ ಅತೃಪ್ತಿ ಹೊಂದಿ ದೂರಲಿಲ್ಲ. ಕರ್ತವ್ಯವೆಂದು ತೋರಿದುದನ್ನು ನಿರಾಲಸವಾಗಿ ಮಾಡುವ ಸಮಯದಲ್ಲಿ ಸರ್ಕಾರವಾಗಲೀ ಯುದ್ಧದ ಮಂತ್ರಿಯಾಗಲೀ

ನನಗೆ ಅಡಚಣೆಯನ್ನುಂಟುಮಾಡಿದರೆಂದು ಬಾಯಿಂದಲಾಗಲೀ ಮನಸ್ಸಿನಲ್ಲಿ ಯಾಗಲೀ ಆಕ್ಷೇಪಿಸಿ ಅಸಮಾಧಾನ ಹೊಂದಲಿಲ್ಲ. ನನಗೆ ಉತ್ತರದ ಸೈನ್ಯದ ಮೇಲೆ ಆಧಿಪತ್ಯವನ್ನು ವಹಿಸಿರುವಿರಿ. ಮಾಡತಕ್ಕ ಕೆಲಸವು ಬಹಳವಾಗಿರುವುದು ; ಯುದ್ಧ ದಲ್ಲಿ ಗೆಲ್ಲದಿದ್ದರೆ ಬೇರೊಂದು ಗತಿಯಿಲ್ಲ. ಅದಕ್ಕಾಗಿ ನಾನು ಯಾವುಯಾವುದನ್ನು ಎಷ್ಟೆಷ್ಟು ಬೇಕೆಂದು ಕೇಳಿದೆನೋ ಅದೆಲ್ಲವನ್ನೂ ಸರ್ಕಾರವು ಅನುಮಾನಮಾಡದೆ ಉತ್ಸಾಹದಿಂದ ಹೊಂದಿಸಿಕೊಟ್ಟಿರುವುದು. ಇಷ್ಟೇಕೆ ಎಂಬ ಪ್ರಶ್ನೆಯು ಇದುವರೆಗೂ ಹುಟ್ಟಿಲ್ಲ. ನನ್ನ ಕಾರ್ಯದಲ್ಲಿ ಜಯವು ನನ್ನ ನಿರೀಕ್ಷಣೆಗೂ ಅಪೇಕ್ಷೆಗೂ ಕಡಿಮೆ ಯಾದರೆ ತಪ್ಪು ನನ್ನದು—ನಿಮ್ಮದಲ್ಲ.'' ಈ ಕಾಲಕ್ಕೆ ಲಿಂಕನ್ನನು ಯುದ್ಧಕಾರ್ಯ ಗಳಲ್ಲಿ ಪ್ರವೇಶಿಸುತ್ತಲೇ ಇರಲಿಲ್ಲ.

ಗ್ರಾಂಟನು ಪೋಟೊಮಕ್‌ಗೆ ಹೊಗಿ ಅಲ್ಲಿದ್ದ ಮಿಾಡನನ್ನು ಜೊತೆಗೆ ಕರೆದು ಕೊಂಡನು. ಲೀಯು ಎಲ್ಲೆಲ್ಲಿ ಹೋದರೆ ಅಲ್ಲಲ್ಲಿ ಅವನೂ ಹೋಗಬೇಕೆಂದು ಅವನ ಯೋಚನೆಯಿದ್ದಿತು. ಅದಕ್ಕೆ ಲಿಂಕನ್ನನೂ ಒಡಂಬಟ್ಟನು. ಲೀಯು ನಿರ್ವಾಹವಿಲ್ಲದೆ ಯಾಗಲೀ ಅಥವಾ ಸ್ವಂತ ಅಪೇಕ್ಷೆಯಿಂದಲಾಗಲೀ ರಿಚ್‌ಮಂಡಿಗೆ ಹೋಗಿ ಅಡಗಿ ಕೊಂಡರೆ ರಿಚ್‌ಮಂಡಿಗೆ ಹೋಗಿ ಮುತ್ತಿಗೆ ಹಾಕಬೇಕು, ಇಲ್ಲದಿದ್ದರೆ ಕೂಡದು ಎಂದು ಗ್ರಾಂಟನು ದೃಢಮಾಡಿದನು. ಆದರೆ ಲೀಯನ್ನು ಅಡಗಿಕೊಳ್ಳಲು ಬಿಡದೆ ಯುದ್ಧಮಾಡುವಂತೆ ಮಾಡಬಹುದೆಂಬ ನಂಬಿಕೆಯೂ ಇದ್ದಿತು. ಅಂತಹ ಯುದ್ಧದಲ್ಲಿ ತನಗೆ ಲೀಯ ಎರಡರಷ್ಟು ನಷ್ಟವಾದರೂ ಕೊರತೆಯಿರಲಿಲ್ಲ. ಸರಿಪಡಿಸಿಕೊಳ್ಳಬಹು ದಾಗಿದ್ದಿತು. ಲೀಗೆ ಆದ ನಷ್ಟವನ್ನು ಮಾತ್ರ ಹೇಗೂ ಸರಿಪಡಿಸಲಾಗುತ್ತಿರಲಿಲ್ಲ. ಗ್ರಾಂಟನು ಹೀಗೆ ಯೋಚಿಸಿದನು. ಆದರೆ ಅವನ ಯೋಚನೆಗಳಲ್ಲಿ ಮುಕ್ಕಾಲು ಪಾಲು ಭಗ್ನವಾಯಿತು. ತಿಳುವಳಿಕೆಯಲ್ಲಿಯೂ ಯುಕ್ತಿಯಲ್ಲಿಯೂ ಲೀಯು ಗ್ರಾಂಟನಿ ಗಿಂತ ಎಷ್ಟೋ ಮೇಲಿದ್ದನು. ಆಭಾಗದಲ್ಲಿ ಪ್ರತಿಯೊಂದು ಅಂಗುಲದಷ್ಟು ಭೂಮಿ ಯೂ ಅವನಿಗೆ ಪರಿಚಿತವಾದುದು. ನಡೆದ ಕೆಲವು ಕದನಗಳಲ್ಲಿ ಗ್ರಾಂಟನಿಗೇ ಅನಾ ನುಕೂಲಗಳುಂಟಾಗುತ್ತಿದ್ದುವು. '' ಬೇಸಿಗೆಯೆಲ್ಲಾ ಇದರಲ್ಲಿಯೇ ಕಳೆದರೂ ಚಿಂತೆ ಯಿಲ್ಲ—ನಾನು ಈ ಕೆಲಸವನ್ನು ಪೂರ್ತಿಯಾಗಿ ಮಾಡಿಯೇ ಮಾಡುವೆನು ಎಂದು ಗ್ರಾಂಟನು ಬರೆದನು. ಆದರೆ, ಬೇಸಿಗೆಯೂ ಶರತ್ಕಾಲವೂ ಚಳಿಗಾಲವೂ ವಸಂತದಲ್ಲಿ ಸ್ವಲ್ಪಕಾಲವೂ ಈ ಕೆಲಸದಲ್ಲಿಯೇ ಕಳೆದುಹೋಯಿತು. ಗ್ರಾಂಟನು ರೆಪಿರ್ಡ ನದಿ ಯನ್ನು ದಾಟಿ ಮುಂದೆ ಹೋದನು. ಆಪ್ರದೇಶವು ಕುರುಚುಗಿಡದ ಕಾಡಿನಿಂದ ಅಡಕವಾಗಿದ್ದಿತು. ಗ್ರಾಂಟನು ಈಕಾಡಿನಿಂದ ಸುರಕ್ಷಿತವಾಗಿ ಪಾರಾಗಬೇಕೆಂದೂ ಎಡಗಡೆಗೆ ತಿರುಗಿ ಬೇಗಬೇಗ ನಡೆದು ಲೀಯ ಒಂದು ಪಕ್ಕಕ್ಕೆ ಬರಬೇಕೆಂದೂ ಯೋಚಿಸಿದನು. ಆದರೆ ಲೀಯು ದಾರಿಯಲ್ಲಿ ಅಡ್ಡಲಾಗಿ ನಿಂತು ಕಾದಿದ್ದನು. ಮೇ ತಿಂಗಳ ಐದು, ಆರು ತಾರೀಖುಗಳಲ್ಲಿ ದೊಡ್ಡ ಕದನವು ನಡೆಯಿತು. ಪರಿಣಾಮ ವನ್ನು ಹೀಗೆಂದು ಹೇಳುವಹಾಗಿರಲಿಲ್ಲ. ಗ್ರಾಂಟನ ಕಡೆ 17,660 ಮಂದಿಯೂ ಲೀಯ ಕಡೆ 10,000 ಮಂದಿಯೂ ಮಡಿದರು. ಬಳಿಕ ಗ್ರಾಂಟನು ಮೊದಲು ತಿರುಗಿದ ಹಾಗೆ ತಿರುಗಿ ನುಗ್ಗಲು ಹವಣಿಸಿದನು. ಮತ್ತೆ ಲೀಯು ಅಡ್ಡಲಾಗಿ ನಿಂತನು. ಇಲ್ಲಿ

ಮೇ ಎಂಟರಿಂದ ಹನ್ನೆರಡರವರೆಗೆ ಯುದ್ಧವು ನಡೆಯಿತು. ನಷ್ಟವು ಹಿಂದಿನಷ್ಟೇ ಆಯಿತು. ಆದರೂ ಗ್ರಾಂಟನು ಹೆದರದೆ ಎಡಭಾಗಕ್ಕೆ ತಿರುಗಿ ನಡೆದನು. ಲೀಯು ಹಿಂಜರಿದು ಭದ್ರವಾದೊಂದು ಸ್ಥಳಕ್ಕೆ ಹೋಗಿ ಸೇರಿಕೊಂಡನು. ಗ್ರಾಂಟನು ಅಲ್ಲಿಗೂ ಹೋಗಿ ಆಕ್ರಮಣಮಾಡಿದನು. ಆದರೆ ಅಷ್ಟರಲ್ಲಿ ಬಿಟ್ಟುಬಿಟ್ಟನು. ಇಬ್ಬರೂ ಮುಂದುಮುಂದಕ್ಕೆ ನಡೆದರು. ಗ್ರಾಂಟನು ಆತಿಂಗಳ ಕೊನೆಯ ವೇಳೆಗೆ ಕೋಲ್ಡ್ ಹಾರ್ಬರ್ (Cold Harbour) ಎಂಬಲ್ಲಿಗೆ ಬಂದನು. ಅಲ್ಲಿಗೂ ರಿಚ್‌ಮಂಡಿಗೂ ಹತ್ತು ಮೈಲಿಗಳ ಅಂತರವಿದ್ದಿತು. ಈ ನಡುವೆ ಅವನು ಜನರಲ್ ಬಟ್ಲರ್ ಎಂಬಾತನನ್ನು ಕಳುಹಿಸಿ ಜೇಮ್ಸ್ ನದಿಯ ಮಾರ್ಗವಾಗಿ ಹೋಗಿ ರಿಚ್‌ಮಂಡಿಗೆ ಸ್ವಲ್ಪ ದೂರದಲ್ಲಿ ಭೂಮಿಯನ್ನು ಹತ್ತಿ ಕಾದಿರುವಂತೆ ಹೇಳಿದನು. ರಿಚ್‌ಮಂಡಿನಲ್ಲಿಯೂ ಅದಕ್ಕೆ ಸೇರಿದ ಪೀಟರ್ಸ್‌ಬರ್ಗ್ ದುರ್ಗದಲ್ಲಿಯೂ ಅತ್ಯಲ್ಪವಾದ ಸೈನ್ಯವಿದ್ದಿತು. ಬಟ್ಲರನು ಬಾಯಿ ಬಡುಕನು. ತಾನು ಮಾಡಬೇಕೆಂದಿರುವುದನ್ನೂ ತನ್ನ ಸಾಹಸವನ್ನೂ ಎಲ್ಲರೆದುರಿಗೆ ಕೊಚ್ಚಿಕೊಂಡನು. ಪೀಟರ್ಸ್‌ಬರ್ಗನ್ನು ಸ್ವಾಧೀನ ಮಾಡಿಕೊಳ್ಳಲು ಅದಕ್ಕಿಂತ ಉತ್ತಮವಾದ ಸಮಯವು ಸಿಕ್ಕುತ್ತಿರಲಿಲ್ಲ. ಆದರೂ ಹೋದ ಕೆಲಸವು ನಿಷ್ಫಲವಾಯಿತು. ಪ್ರಯೋಜನವು ಸ್ವಲ್ಪವೂ ಇರಲಿಲ್ಲ. ಗ್ರಾಂಟನೂ ಕೂಡ ತನ್ನ ಪ್ರಯತ್ನದಲ್ಲಿ ನಿಷ್ಫಲಹೊಂದಿದನು. ಕಂದಕಗಳನ್ನು ತೋಡಿಕೊಂಡು ಸುರಕ್ಷಿತನಾದ ಲೀಯನ್ನು ಸೋಲಿಸಲಾಗಲಿಲ್ಲ. ಅವನ ಕಡೆ 14,000 ಮಂದಿ ನಷ್ಟವಾದರು. ಲೀಯ ಕಡೆಯಲ್ಲಿ 1,700 ಮಂದಿ ಮಾತ್ರ! ಗ್ರಾಂಟನು ತಾನು ಆ ಯುದ್ಧವನ್ನು ಮಾಡಬಾರದಾಗಿದ್ದಿತೆಂದು ಕೊರಗಿದನು. ಇನ್ನು ಮುಂದೆ ಸುರಕ್ಷಿತವಾದ ಪ್ರದೇಶಗಳಲ್ಲಿ ನಿಲ್ಲುವ ಲೀಯೊಡನೆ ಯುದ್ಧಮಾಡಿ ಗೆಲ್ಲುವ ಯೋಚನೆಯನ್ನು ಬಿಟ್ಟು ಅವನು ಒಮ್ಮಿಂದೊಮ್ಮೆಗೆ ಜೇಮ್ಸ್ ನದಿಯನ್ನು ದಾಟಿ ಸಿಟಿ ಪಾಯಿಂಟ್ ಎಂಬಲ್ಲಿಗೆ ಹೋಗಿ ನಿಂತನು. ಲೀಯು ರಿಚ್‌ಮಂಡನ್ನೂ ಇಪ್ಪತ್ತೆರಡು ಮೈಲಿಗಳ ದೂರದಲ್ಲಿರುವ ಪೀಟರ್ಸ್‌ಬರ್ಗನ್ನೂ ಏಕಕಾಲದಲ್ಲಿ ರಕ್ಷಿಸಿಕೊಳ್ಳಬೇಕಾಯಿತು. ಈ ಸಮಯದಲ್ಲಿ ಅವನು ವಾಷಿಂಗ್ಟನ್ನಿನ ಕಡೆಗೆ ಹೊರಟಿದ್ದರೆ ಗ್ರಾಂಟನು ಹಿಂದಿನಿಂದ ಬಂದು ಬಲವಾದ ಏಟನ್ನು ಹಾಕುತ್ತಿದ್ದನು. ಹಾಗೆಯೇ ಆಗಲೆಂದು ಗ್ರಾಂಟನು ಹಾರೈಸಿದನು. ಆದರೆ ಹಾಗೆ ಆಗಲಿಲ್ಲ. ಜುಲೈ ಮೂವತ್ತನೆಯ ತಾರೀಖಿನ ದಿನ ಗ್ರಾಂಟನು ಪೀಟರ್ಸ್‌ಬರ್ಗನ್ನು ಆಕ್ರಮಿಸಲು ನುಗ್ಗಿದನು. ಅದಕ್ಕೆ ಪೂರ್ವಭಾವಿಯಾಗಿ, ದೊಡ್ಡದೊಂದು ಸಿಡಿಮದ್ದಿನ ಗುಂಡನ್ನು ಹಾಕಿ ದುರ್ಗದ ಗೋಡೆಯನ್ನು ಪುಡಿಯೆಬ್ಬಿಸಿದ್ದನು. ಈ ಸಮಯದಲ್ಲಿ ಬರ್ನ್‌ಸೈಡನೂ ಅವನ ಹುದ್ದೇದಾರರೂ ಅವಿವೇಕದ ಕೆಲಸವನ್ನು ಮಾಡಿ ಸೋಲನ್ನು ತಂದರು. ಹೀಗೆ ಸೋಲಿನ ಮೇಲೆ ಸೋಲೂ ನಿರಾಶೆಯ ಮೇಲೆ ನಿರಾಶೆಯೂ ಒದಗುತ್ತಿದ್ದಿತು. ಆದರೂ ಗ್ರಾಂಟನ ಯೋಚನೆಯು ಬದಲಾಯಿಸಲಿಲ್ಲ. ಮುಂದೆ ಸಾಗುತ್ತಿದ್ದಿತು. ದಕ್ಷಿಣದಲ್ಲಿ ಸೈನ್ಯವು ಹುಟ್ಟುತ್ತಿರಲಿಲ್ಲ. ಈಗಿರುವ ಸೈನ್ಯಗಳು ನಾಶವಾದರೆ. ದಕ್ಷಿಣದ ಕೈ ಕಟ್ಟಿಹೋಗಿ ಅದು ಮರುಮಾತನಾಡದೆ ಬಂದು ಪಾದಾಕ್ರಾಂತವಾಗುತ್ತಿದ್ದಿತು. ಆದಕಾರಣ ಹೊಡೆದಾಟವು ನಡೆದ ಹಾಗೆಲ್ಲಾ ಅಲ್ಲಿಯ ಸೈನ್ಯವು ಕಡಿಮೆಯಾಗಿ

ದುರ್ಬಲವಾಗುತ್ತಿದ್ದಿತು. ಆದರೆ ಗ್ರಾಂಟನು ಅಷ್ಟೊಂದು ನಷ್ಟಪಟ್ಟುಕೊಂಡು ಆಕೆಲಸವನ್ನು ಮಾಡಬೇಕಾಗಿರಲಿಲ್ಲ. ಪ್ರಕೃತದಲ್ಲಿ ಸೈನ್ಯದ ಉತ್ಸಾಹವೆಲ್ಲಾ ಉಡುಗಿ ಹೋಗಿದ್ದಿತು. ಸೈನ್ಯದ ಅಧಿಕಾರಿಗಳು ಅವನಲ್ಲಿ ನಂಬಿಕೆಯನ್ನು ಕಡಿಮೆಮಾಡಿದರು. ಗ್ರಾಂಟನ ಸ್ಥೈರ್ಯವು ಮಾತ್ರ ಕಡಿಮೆಯಾಗಿರಲಿಲ್ಲ. ಇಂತಹ ಹೆಚ್ಚಿನ ನಷ್ಟಗಳು ಮುಂದೆ ಆಗಕೂಡದೆಂದು ಒಳ್ಳೆಯ ಮಾತುಗಳಿಂದ ಸೂಚಿಸಿದರೂ ಲಿಂಕನ್ನನಿಗೆ ಅವನಲ್ಲಿದ್ದ ಭರವಸೆಯು ಕಡಿಮೆಯಾಗಿರಲಿಲ್ಲ.

ಹೀಗಿರುವಲ್ಲಿ ಜುಲೈ ತಿಂಗಳಲ್ಲಿ ಮತ್ತೊಂದು ಸಂಘಟನೆಯೊದಗಿತು. ಗ್ರಾಂಟನ ಕಾರ್ಯಕ್ರಮದ ಪ್ರಕಾರ ಜೂನ್ ತಿಂಗಳಲ್ಲಿ ಪದಚಲನಮಾಡಿ ಹೋಗುತ್ತಿದ್ದ ಜನರಲ್ ಸಿಜೆಲ್ ಎಂಬಾತನು ತನ್ನ ಅಜಾಗರೂಕತೆಯ ದೆಸೆಯಿಂದ ಉತ್ತರಕ್ಕೆ ಸೋಲನ್ನು ತಂದನು. ಅವನನ್ನು ತಡೆಯುವುದಕ್ಕಾಗಿ ಲೀಯು ಕಳುಹಿಸಿದ ಪಡೆಯು ಅವನದನ್ನು ಸಂಧಿಸಿ ಸೋಲಿಸಿತು. ಅಲ್ಲದೆ ಸಿಜೆಲ್‌ನಿಗೆ ಬದಲಾಗಿ ಬಂದ ಮತ್ತೊಬ್ಬ ದಳಪತಿಯನ್ನೂ ಸೋಲಿಸಿತು. ಆಬಳಿಕ ಅಲ್ಲಿಂದ ಸ್ವಲ್ಪ ಮುಂದೆ ದಾರಿಯಲ್ಲಿ ಸಿಕ್ಕಿದ ಮತ್ತೊಂದು ಉತ್ತರದ ಸೈನ್ಯವನ್ನು ಸದೆಬಡಿದು ಜುಲೈ 11ನೇ ತಾರೀಖು ವಾಷಿಂಗ್ಟನ್ನಿನ ಮುಂದೆ ಬಂದು ನಿಂತಿತು. ರಾಜಧಾನಿಗೆ ಹೋಗಿ ಉತ್ತರದ ಜನಗಳ ಕೈಕಾಲುಕೆಡಿಸಬೇಕೆಂಬುದು ಮಾತ್ರವೇ ಅದರ ಉದ್ದೇಶವಾಗಿದ್ದಿತು. ವಾಷಿಂಗ್ಟನ್ನಿನಲ್ಲಿ ಹೆಚ್ಚು ದಂಡಿರಲಿಲ್ಲ. ಶತ್ರುವು ಅಲ್ಲಿಯವರೆಗೆ ಬಂದಿದ್ದುದನ್ನು ಕೇಳಿ ಗ್ರಾಂಟನು ಒಡನೆಯೇ ಸೈನ್ಯದ ಒಂದು ಭಾಗವನ್ನು ರಾಜಧಾನಿಗೆ ಕಳುಹಿಸಿದನು. ಶತ್ರುಸೈನ್ಯವು ಅಲ್ಲಿಯ ದುರ್ಗಗಳಲ್ಲಿ ಒಂದನ್ನು ಮುತ್ತಿದರೂ ಬಹುಕಾಲದವರೆಗೆ ಆ ಸುತ್ತುಮುತ್ತಿನಲ್ಲಿ ನಿಲ್ಲಲಿಲ್ಲ. ಮುತ್ತಿಗೆಯನ್ನೆತ್ತಿ ಹಿಂದಕ್ಕೆ ಓಡಿಹೋಯಿತು. ಇನ್ನು ಮುಂದೆ ಷೆನಾಂಡೋನಾ ಬಯಲು ದಕ್ಷಿಣದಿಂದ ಹೊರಟು ವಾಷಿಂಗ್ಟನ್ನಿಗೆ ಬರಬೇಕೆಂದು ಹವಣಿಸುವ ಶತ್ರುದಳಕ್ಕೆ ಅವಕಾಶವನ್ನು ಕೊಡದಂತೆ ಮಾಡಬೇಕೆಂದು ಗ್ರಾಂಟನು ನಿಶ್ಚಯಿಸಿದನು.

ಅವನು ರೆಪಿಡ್ಜ್ ನದಿಯನ್ನು ದಾಟಿದ ದಿನವೇ ಷೆರ್ಮನ್ನನು ಚಟ್ಟನೂಗದಿಂದ ಹೊರಟನು. ಜೋಸೆಫ್ ಜಾನ್ಸ್ಟನ್ನನು ಕಂದಕಗಳನ್ನು ತೋಡಿ ರಕ್ಷಣೆಮಾಡಿಕೊಂಡು ಅವನ ಮಾರ್ಗದಲ್ಲಿ ನಿಂತು ಆಟಂಕಪಡಿಸಿದನು. ಷೆರ್ಮನ್ನನು ಜಾಗರೂಕನಾದವನು. ಪ್ರಾಯಶಃ ದೇಶಭಾಗವೂ ಅನುಕೂಲವಾಗಿದ್ದಿತು. ಪ್ರತಿಯೊಂದು ರಕ್ಷಣೆಯ ಸ್ಥಳದಿಂದಲೂ ಜಾನ್ಸ್ಟನ್ನನನ್ನು ಹೊರಡಿಸಿ ಅಟ್ಟಿಕೊಂಡು ಹೋಗುತ್ತ ಅವನು ಅಟ್ಲಾಂಟದ ವರೆಗೂ ನುಗ್ಗಿದನು. ಅಟ್ಲಾಂಟವು ಪ್ರಸಿದ್ಧವಾದುದು. ಜಾರ್ಜಿಯ ಸಂಸ್ಥಾನದಲ್ಲಿ ಮುಖ್ಯವಾದ ಪಟ್ಟಣ. ಚಟ್ಟನೂಗಕ್ಕೆ ಅದು ನೂರಿಪ್ಪತ್ತು ಮೈಲಿಗಳ ದೂರದಲ್ಲಿರುವುದು. ಷೆರ್ಮನ್ನನು ನಡುವೆ ಒಂದುತಡವೆ ಮಾತ್ರ ಜಾನ್ಸ್ಟನ್ನನ ದಂಡಿನ ಮೇಲೆರಗಿ ಯುದ್ಧಮಾಡಿದನು. ಆದರೆ ಹೆಚ್ಚಿನ ಲಾಭವಾಗಲಿಲ್ಲ. ರಕ್ಷಣೋಪಾಯವನ್ನು ಕಲ್ಪಿಸಿಕೊಂಡು ಯುದ್ಧಮಾಡುವುದರಲ್ಲಿ ಜಾನ್ಸ್ಟನ್ನನು ಚತುರನು. ಅವನಿಗೆ ಸರಿಗೈಯಾದವರು ಯಾರೂ ಇರಲಿಲ್ಲ. ವಿಧವಿಧವಾದ ಹಂಚಿಕೆಗಳನ್ನು ಮಾಡಿ ಅವನು ಷೆರ್ಮನ್ನನ ಪ್ರಯಾಣಕ್ಕೆ ತೊಂದರೆಮಾಡಿ

ದನು. ಅವನ ಕೆಲಸವನ್ನು ನೋಡಿ ಜೆಫರ್ಸನ್ ಡೇವಿಸ್ಸನಿಗೆ ಕೋಪಬಂದಿತು. ಜಾನ್ಸ್ಟನ್ನನ ಸ್ಥಾನಕ್ಕೆ ಜನರಲ್ ಹುಡ್ ಎಂಬಾತನನ್ನು ಕಳುಹಿಸಿದನು. ಆತನು ಜಾನ್ಸ್ಟನ್ನನಷ್ಟು ಜಾಣನಲ್ಲ. ಷೆರ್ಮನ್ನನೊಡನೆ ಕೆಲವು ತಡವೆ ಯುದ್ಧಮಾಡಿ 34,000 ಮಂದಿ ಸೈನಿಕರನ್ನು ಕಳೆದುಕೊಂಡನು. ಷೆರ್ಮನ್ನನು ಬಹಳ ಯುಕ್ತಿಯಿಂದ ನಿರ್ವಹಿಸಿದನು. ಸೆಪ್ಟೆಂಬರ್ ಎರಡನೆಯ ತಾರೀಖಿನಲ್ಲಿ ಅಟ್ಲಾಂಟವು ಅವನ ಅಧೀನ ವಾಯಿತು.

ಈ ನಡುವೆ ನೌಕಾಧ್ಯಕ್ಷನು ಬಹಳ ಸಾಹಸದ ಕಾರ್ಯವನ್ನು ಮಾಡಿದ್ದನು. ಆಗಸ್ಟ್ ತಿಂಗಳಲ್ಲಿ ನಾವೆಯನ್ನು ತೆಗೆದುಕೊಂಡು ಹೊರಟು ಮೊಬೈಲ್ ನದಿಯ ಮುಖಕ್ಕೆ ಬಂದನು. ಅಲ್ಲಿ ದಕ್ಷಿಣದ ನಾವೆಗೂ ಅವನದಕ್ಕೂ ಯುದ್ಧವಾಯಿತು. ಕೊನೆಗೆ ಶತ್ರುವು ಸೋತುಹೋಯಿತು. ಮೊಬೈಲ್ ನಗರದ ಬಂದರೂ ಬಂದರಿನ ಲ್ಲಿದ್ದ ಕೋಟೆಗಳೂ ಕೈಸೇರಿದುವು. ಆದರೆ ಊರು ಮಾತ್ರ ದಕ್ಷಿಣದ ವಶದಲ್ಲಿಯೇ ಉಳಿಯಿತು. ಅದೂ ಕೈಸೇರಿದ್ದರೆ ಅವನು ಮುಂದೆ ಹೋಗಿ ಷೆರ್ಮನ್ನನೊಡನೆ ಸೇರಿಕೊಳ್ಳಬಹುದಾಗಿದ್ದಿತು.

ವಾಷಿಂಗ್ಟನ್ನಿಗೆ ಹತ್ತಿರದಲ್ಲಿ ಮತ್ತೊಂದು ಪ್ರಸಂಗವು ನಡೆಯುತ್ತಿದ್ದಿತು. ಸ್ವಲ್ಪದೂರದ ವರೆಗೆ ಒಡಿದ ದಕ್ಷಿಣದ ದಂಡು ಹಿಂದಿರುಗಿ ದಂಡೆತ್ತಿ ಬಂದಿತು. ಈಗ ಅದರ ಅಧಿಪತಿಯು ಪೆನ್ಸಿಲ್ವೇನಿಯವನ್ನು ಹೊಕ್ಕನು. ಸೈನ್ಯವನ್ನು ಕಳುಹಿಸಿ ಅವನ ಅವಾಂತರವನ್ನು ಅಡಗಿಸಲು ಗ್ರಾಂಟನು ಹತ್ತಿರದಲ್ಲಿರಲಿಲ್ಲ. ಈ ವೇಳೆಯಲ್ಲಿ ಹಾಲೆಕ್ಸನು, ಕಷ್ಟದ ವೇಳೆಯಲ್ಲಿ ಮಾಡುತ್ತಿದ್ದಂತೆ, ತಟಸ್ಥನಾಗಿಬಿಟ್ಟನು. ಇನ್ನಷ್ಟು ಸೈನ್ಯವಾಗಬೇಕೆಂದು ಲಿಂಕನ್ನನು ರಾಜ್ಯದಲ್ಲಿ ಪ್ರಕಟಪಡಿಸಿದನು. ಆದರೆ ಯುದ್ಧ ನಿರ್ವಾಹದಲ್ಲಿ ಬೆರೆಯಲು ಇಷ್ಟವಿರಲಿಲ್ಲ. ಅವನಿಗೆ ಕೆಲಸವು ಬಹಳವಾಗಿದ್ದಿತು. ಮನಸ್ಸಿನಲ್ಲಿ ಕಳವಳವು ಅತ್ಯಂತವಾಗಿದ್ದಿತು. ಕಾರ್ಯಗೌರವದ ದೆಸೆಯಿಂದ ಅವನ ಶಕ್ತಿಯು ಉಡುಗುತ್ತಿರುವುದೆಂದು ಸ್ನೇಹಿತರು ತಿಳಿದರು. ಆದರೆ ಲಿಂಕನ್ನನಲ್ಲಿ ಅಂತಹದೇನೂ ಇರಲಿಲ್ಲ. ತಾನು ಯಾವ ಪ್ರಕಾರದಿಂದಲೂ ಯುದ್ಧಕಾರ್ಯದಲ್ಲಿ ಕೈಹಾಕುವುದಿಲ್ಲವೆಂದೂ ಸೇನಾಪತಿಗಳಿಗೇ ಎಲ್ಲವೂ ತಿಳಿಯುವುದೆಂದೂ ಅವನು ಹೇಳಿ ಸುಮ್ಮನಿದ್ದನು. ಗ್ರಾಂಟನು ಷೆರಿಡನ್ನನನ್ನು ಕೆಲವು ಕಾಲದ ಮಟ್ಟಿಗೆ ಷೆನಾಂಡೋವ ಬಯಲಿನಲ್ಲಿರುವಂತೆ ಕಳುಹಿಸಿ, ಅಲ್ಲಿರುವ ಉತ್ತರದ ದಂಡುಗಳೆಲ್ಲವೂ ಅವನ ಮೇಲುವಿಚಾರಣೆಯಲ್ಲಿರುವಂತೆಯೂ, ದಕ್ಷಿಣದೊಳಕ್ಕೆ ನುಗ್ಗುವುದಕ್ಕಾಗಲೀ ಅಥವಾ ಕೊನೆಯುವರೆಗೂ ಶತ್ರುವನ್ನು ಬೆನ್ನಂಟಿ ಹೊರಡುವುದಕ್ಕಾಗಲೀ ಸಿದ್ಧವಾಗಿ ರುವಂತೆಯೂ ಷೆರಿಡನ್ನನಿಗೆ ಅಪ್ಪಣೆಮಾಡಬೇಕೆಂದು ಪ್ರೆಸಿಡೆಂಟನಲ್ಲಿ ತನ್ನ ಅಭಿ ಮತವನ್ನು ಸೂಚಿಸಿದನು. ಲಿಂಕನ್ನನು ಗ್ರಾಂಟನಿಗೆ ಹೀಗೆ ತಂತಿಯನ್ನು ಕಳುಹಿಸಿದನು: ''ನೀವು ಹೇಳುವ ಏರ್ಪಾಡು ಅತ್ಯಂತವಾಗಿ ಯುಕ್ತವಾದುದು. ಆದರೆ ಷೆರಿಡನ್ನನನ್ನು ಕಳುಹಿಸಿದಂದಿನಿಂದ ಈಚೆಗೆ, ನೀವು ಹೇಳಿದಹಾಗೆ ದಕ್ಷಿಣವನ್ನು ಪ್ರವೇಶಿಸಬೇಕೆಂ ದಾಗಲೀ ಅಥವಾ, ಗೆಲುವು ಇಲ್ಲದಿದ್ದರೆ ಸಾವು ಎಂಬುದು ಸಿದ್ಧಾಂತವಾಗುವವರೆಗೆ ಶತ್ರು ಸೈನ್ಯವನ್ನು ಬೆನ್ನಂಟಬೇಕೆಂದಾಗಲೀ ನಮ್ಮ ಮಂತ್ರಿಗಳಲ್ಲಿ ಯಾರಿಂದಲಾದರೂ ಸಲಹೆ

ಯು ನಿಮ್ಮಲ್ಲಿಗೆ ಬಂದಿರುವುದೇ, ನೋಡಿರಿ. ನಾನು ಮತ್ತೆಮತ್ತೆ ಹೇಳಿಯೇನು, ನೀವು ಎಲ್ಲವನ್ನೂ ನೋಡಿಕೊಳ್ಳುತ್ತ ಅವರು ಕೆಲಸಮಾಡುವಂತೆ ಒತ್ತಾಯಮಾಡದಿದ್ದರೆ ಅಂತಹ ಕಾರ್ಯಗಳನ್ನು ಯಾರೂ ನೆರವೇರಿಸರು; ಪ್ರಯತ್ನವನ್ನೂ ಮಾಡುವುದಿಲ್ಲ.'' ಗ್ರಾಂಟನು ಕೂಡಲೇ ಹೊರಟು ಹಂಟರನಿದ್ದ ತಾವಿಗೆ ಬಂದು ಅವನಿಗೆ ಬದಲಾಗಿ ಷೆರಿಡನ್ನನನ್ನು ನೇಮಿಸಿದನು. ಷೆರಿಡನ್ನನು ಬಹಳ ಯುಕ್ತಿಯಿಂದ ನಿರ್ವಹಿಸಿದನು. ಸೀಡರ್‌ಕ್ರೀಕ್‌ಎಂಬ ಸ್ಥಳದಲ್ಲಿ ಅಕ್ಟೋಬರ್ ಹತ್ತೊಂಬತ್ತನೆಯ ತಾರೀಖಿನ ದಿನ ಯುದ್ಧವಾಯಿತು. ದಕ್ಷಿಣದ ದಳಪತಿಯು ಸಂಪೂರ್ಣವಾಗಿ ಸೋತುಹೋದನು. ಷೆನಾಂಡೋವ ಬಯಲಿನಲ್ಲಿ ಉತ್ತರದ ಅಧಿಕಾರವು ಅಪ್ರತಿಹತವಾಯಿತು. ಚಳಿಗಾಲವು ಬಂದು ಯುದ್ಧದ ಕೆಲಸಗಳನ್ನು ನಿಲ್ಲಿಸುವುದರೊಳಗಾಗಿ ಆ ಭಾಗವನ್ನು ಷೆರಿಡನ್ನನು ಬೆಂಗಾಡಿಗೆ ಸಮಮಾಡಿದನು. ಬಹಳಕಾಲದಿಂದ ರಿಚ್‌ಮಂಡ್ ಪಟ್ಟಣವು ಆಹಾರಪದಾರ್ಥಗಳಿಗಾಗಿ ಅದರ ಮೇಲೆ ನಿರ್ಭರವಾಗಿದ್ದಿತು. ಈಗ ತಪ್ಪಿಹೋಯಿತು. ಮುಂದೆ ಉತ್ತರದ ಮೇಲೆ ದಂಡೆತ್ತಿ ಹೊರಡಲು ಬರುವ ದಕ್ಷಿಣದ ಸೈನ್ಯವಾವುದಾದರೂ ಇದ್ದರೆ ಅದಕ್ಕೂ ಅಲ್ಲಿನ ಆಸರೆಯು ತಪ್ಪಿಹೋಯಿತು.

ನೊವೆಂಬರಿನಲ್ಲಿ ಷೆರ್ಮನ್ನನು ಒಂದು ಕೆಲಸಮಾಡಬೇಕೆಂದು ಯೋಚಿಸಿದನು. ಮನಸ್ಸಿನಲ್ಲಿ ಅದರ ಸಾಧಕಬಾಧಕಗಳನ್ನೆಲ್ಲಾ ಗುಣಿಸಿಕೊಂಡುದಾಯಿತು. ಬಳಿಕ ಅದನ್ನು ಗ್ರಾಂಟನಿಗೆ ತಿಳಿಸಿದನು. ಗ್ರಾಂಟನು ಅರ್ಧಮನಸ್ಸಿನಿಂದ ಅನುಮತಿಯನ್ನು ಕೊಟ್ಟನು. ವಿಷಯವು ಲಿಂಕನ್ನನಿಗೂ ತಿಳಿಯಿತು. ತಾನು ಮನಸ್ಸಿನಲ್ಲಿ ನಿಶ್ಚಯಿಸಿದ್ದಂತೆ ಅದರ ಗೊಡವೆಗೆ ಹೋಗಲಿಲ್ಲ. ಆದರೂ ಷೆರ್ಮನ್ನನು ಕೈಗೊಳ್ಳುವ ಕಾರ್ಯವು ಹೇಗೆ ಕೊನೆಗೊಳ್ಳುವುದೋ ಎಂದು ಕಳವಳವುಂಟಾಯಿತು. ಷೆರ್ಮನ್ನನು ಅಟ್ಲಾಂಟವನ್ನು ವಶಮಾಡಿಕೊಂಡನಷ್ಟೆ. ಬಳಿಕ ಅಲ್ಲಿನ ಪ್ರಜೆಗಳೆಲ್ಲರನ್ನೂ ಕ್ಷೇಮವಾದ ಸ್ಥಳಗಳಿಗೆ ಕಳುಹಿಸಿದನು. ಅವನ ಸೈನ್ಯಕ್ಕೆ ಸ್ವಲ್ಪಕಾಲದವರೆಗೆ ವಿಶ್ರಾಂತಿಯು ದೊರೆಯಿತು. ಆದರೆ ಶತ್ರುವಿನ ಭೂಮಿಯಲ್ಲಿ ಅವನು ಬಹಳದೂರ ಬಂದಿದ್ದನು. ಆಭಾಗವೆಲ್ಲಾ ಜೆಫರ್‌ಸನ್ ಡೇವಿಸ್ಸನ ಸ್ವಂತವಿಚಾರಣೆಯಲ್ಲಿದ್ದಿತು. ಆದಕಾರಣ ವಿಪತ್ತುಗಳಿಗೆ ಕಡಿಮೆಯಿರಲಿಲ್ಲ. ಹುಡ್‌ನು ಆಗಾಗ ಷೆರ್ಮನ್ನನಿರುವ ಸ್ಥಳಕ್ಕೆ ಸಮಾಚಾರವು ಬರದಂತೆ ಅಡ್ಡಿಮಾಡಿ ತೊಂದರೆಯನ್ನುಂಟುಮಾಡುತ್ತಿದ್ದನು. ಈಗ ಬೋರ್‌ಗಾರ್ಡನು ಹುಡ್‌ನಿಗಿಂತ ಮೇಲ್ಪಟ್ಟವನಾಗಿ ಕೆಲಸವನು ನಿರ್ವಹಿಸುತ್ತಿದ್ದನು.

ದಕ್ಷಿಣವು ಆದಷ್ಟು ಸೈನ್ಯವನ್ನು ಕೂಡಿಸುತ್ತಿದ್ದಿತು. ಟೆನ್ನೆಸ್ಸೀಯ ಮೇಲೆ ದಂಡೆತ್ತಿಹೋಗಿ ಉತ್ತರದ ಸೈನ್ಯವನ್ನು ಆಕಡೆಗೆಳೆಯಬೇಕೆಂಬುದು ಹುಡ್‌ನ ಮನೋಗತವೆಂದು ಷೆರ್ಮನನ್ನಿಗೆ ತಿಳಿಯಿತು. ಷೆರ್ಮನ್ನನು ಟಾಮಸ್ಸನ ಕೈಕೆಳಗೆ ಸಾಕಾದಷ್ಟು ಸೈನ್ಯವನ್ನು ಟೆನ್ನೆಸ್ಸೀಗೆ ಕಳುಹಿಸಿ ರಕ್ಷಿಸಲು ನಿಶ್ಚಯಿಸಿ, ತಾನು ಪೂರ್ವದ ಸಮುದ್ರತೀರದ ಕಡೆಗೆ ತೆರಳಬೇಕೆಂದು ಏರ್ಪಾಡುಮಾಡಿಕೊಂಡನು. ಶತ್ರುಗಳ ತೊಂದರೆಯನ್ನೂ ಸೈನ್ಯದಲ್ಲಿ ನಷ್ಟವನ್ನೂ ತಪ್ಪಿಸಿಕೊಳ್ಳುವುದಕ್ಕೋಸ್ಕರ, ತಾನು ಎಲ್ಲಿರುವನೋ ಆಭಾಗದ ಜನಗಳಿಂದ ಆಹಾರಪದಾರ್ಥಗಳನ್ನು ವಸೂಲುಮಾಡಿ

ಕೊಳ್ಳಬೇಕೆಂದೂ ನಿಶ್ಚಯಿಸಿದನು. ಟಾಮುಸ್ಸನ ಸೈನ್ಯವು ನಾಷ್‌ವಿಲ್ಲನ್ನು ತಲಪಿ ಅಲ್ಲಿನ ಕೋಟೆಯೊಳಗಿದ್ದುಕೊಂಡು ನಿರೀಕ್ಷಣೆ ಮಾಡುತ್ತಲಿದ್ದಿತು. ಜನರಲ್ ಹುಡ್‌ನು ಬೋರ್ಗಾರ್ಡನ ಅಪ್ಪಣೆಯನ್ನನುಸರಿಸಿ ಆ ಬಳಿಗೆ ಹೋದನು. ನಾಷ್‌ವಿಲ್ಲಿಗೆ ಇತರ ಕಡೆಯಿಂದ ಉತ್ತರದ ಸೈನ್ಯವು ಸಹಾಯಕ್ಕಾಗಿ ಬರುತ್ತಲಿದ್ದಿತು. ಅದು ಕ್ಷೇಮದಿಂದ ತಲಪುವುದಾಕ್ಕಾಗಿಯೂ, ತಲಪಿ ಒಟ್ಟು ಸೈನ್ಯವು ಸಿದ್ಧವಾಗಲು ಅವಕಾಶವನ್ನು ಪಡೆಯುವುದಕ್ಕಾಗಿಯೂ ಟಾಮುಸ್ಸನು ಜನರಲ್ ಷೋಫೀಲ್ಡ್ ಎಂಬಾತನನ್ನು ಸ್ವಲ್ಪ ಸೈನ್ಯದೊಡನೆ ಹುಡ್‌ನಿಗೆದುರಾಗಿ ಕಳುಹಿಸಿದನು. ಹುಡ್‌ನೂ ಷೋಫೀಲ್ಡನೂ ಫ್ರಾಂಕ್ಲಿನ್ ಎಂಬ ಸ್ಥಳದಲ್ಲಿ ಸಂಧಿಸಿ ಯುದ್ಧಮಾಡಿದರು. ದಕ್ಷಿಣವು ಬಹಳ ಪೆಟ್ಟು ತಿಂದಿತು. ಷೋಫೀಲ್ಡನು ಸಾವಕಾಶವಾಗಿ ಹಿಂದೆ ಬೀಳುತ್ತ ಟಾಮುಸ್ಸನನ್ನು ಸೇರಿಕೊಳ್ಳುತ್ತಿದ್ದನು. ಹುಡ್‌ನು ತನ್ನ ಸೈನ್ಯದೊಡನೆ ಅವನನ್ನು ಅಟ್ಟಿಸಿಕೊಂಡು ಹೋದನು. ಸೈನ್ಯವು ಸಣ್ಣದು—44,000ಮಂದಿ ಮಾತ್ರ. ಆದರೆ ಸೈನಿಕರು ಹಳಬರು— ಯುದ್ಧದಲ್ಲಿ ಅನುಭವವುಳ್ಳವರು. ಗ್ರಾಂಟನೂ ವಾಷಿಂಗ್ಟನ್ನಿನ ಸರ್ಕಾರವೂ ಶತ್ರುವು ಹಿಂದುಗಡೆಯಲ್ಲಿ ಇಷ್ಟು ದೂರದವರೆಗೂ ಬರಲು ಟಾಮುಸ್ಸನು ಅವಕಾಶವನ್ನು ಕೊಟ್ಟುದು ಅವಿವೇಕವೆಂದು ಭಾವಿಸಿ ಚಿಂತಾಗ್ರಸ್ತರಾಗಿದ್ದರು. ಟಾಮುಸ್ಸನಲ್ಲಿ ಷೆರ್ಮನ್ನನಿಗಿದ್ದಷ್ಟು ನಂಬಿಕೆಯು ಗ್ರಾಂಟನಿಗಿರಲಿಲ್ಲ. ತತ್‌ಕ್ಷಣವೇ ಸೈನ್ಯವನ್ನು ಬಿಟ್ಟು ಶತ್ರುವನ್ನು ಸದೆಬಡಿಯಬೇಕೆಂದು ಗ್ರಾಂಟನು ಮೇಲಿಂದ ಮೇಲೆ ಹೇಳಿಕಳುಹಿಸಿದನು. ಆದರೆ ಟಾಮುಸ್ಸನ ಯೋಚನೆಯು ಬೇರೆಯಾಗಿದ್ದಿತು. ಅವನು ಗ್ರಾಂಟನ ಮಾತನ್ನು ಲಕ್ಷ್ಯಕ್ಕೆ ತರದೆ ತನ್ನ ಕಾಲವನ್ನು ನಿರೀಕ್ಷಿಸುತ್ತಿದ್ದನು. ದಿನಗಳು ಕಳೆದುವು. ಮಂಜಿನಗಡ್ಡೆಗಳು ಸುರಿದು ಹೆಪ್ಪುಗಟ್ಟಿದುವು. ಸೈನ್ಯವನ್ನು ಮುಂದಕ್ಕೆ ನಡೆಯಿಸುವುದು ಸಾಧ್ಯವಿರಲಿಲ್ಲ. ಗ್ರಾಂಟನ ಸಹನೆಯು ಕೊನೆಗೊಂಡಿತು. ಟಾಮುಸ್ಸನಿಗೆ ಪ್ರತಿಯಾಗಿ ಲೋಗನ್ ಎಂಬಾತನನ್ನು ಕಳುಹಿಸಿದನು. ಆದರೂ ಅವನ ಭಯವು ದೂರವಾಗಲಿಲ್ಲ. ತಾನೇ ಹೊರಟನು. ಅಷ್ಟರಲ್ಲಿ ಡಿಸೆಂಬರ್ 15—16ನೆಯ ತಾರೀಖುಗಳಲ್ಲಿ ಯುದ್ಧವು ನಡೆಯಿತೆಂದು ಸಮಾಚಾರ ಬಂದಿತು. ಟಾಮುಸ್ಸ್ನನು ಹುಡ್‌ನ ಮೇಲೆ ಬಿದ್ದು ಪೂರ್ತಿಯಾಗಿ ಸೋಲಿಸಿ ಓಡಿಸಿದನು. ಓಡುತ್ತಿರುವ ಶತ್ರುವನ್ನು ಬೆನ್ನಟ್ಟಿಹೋಗಿ 13,000 ಮಂದಿಯನ್ನು ಕೈಸೆರೆಹಿಡಿದನು.

ಉತ್ತರದ ಸೈನ್ಯವು ದಕ್ಷಿಣದ ರೈಲುರಸ್ತೆಗಳನ್ನೆಲ್ಲಾ ಹಾಳುಮಾಡಿತು. ಸೈನಿಕರು ಕಬ್ಬಿಣದ ಕಂಬಿಗಳನ್ನು ಬೆಂಕಿಯಲ್ಲಿ ಕಾಸಿ ಬಗ್ಗಿಸಿ ಗಂಟುಗಂಟಾಗಿ ಮಾಡಿಬಿಟ್ಟರು. ಜಾರ್ಜಿಯದಲ್ಲಿ ಉದ್ದಕ್ಕೂ ಲೂಟಿಮಾಡಿ ಆ ಫಲವತ್ತಾದ ರಾಜ್ಯವನ್ನು ಬೆಂಗಾಡುಮಾಡಿದರು. ಈ ಕೆಲಸಕ್ಕಾಗಿ ಸೈನ್ಯದಲ್ಲಿ ಕೆಲವು ಪಂಗಡಗಳು ವಿಂಗಡಿಸಲ್ಪಟ್ಟಿದ್ದುವು. ಆದರೆ ಮನೆಗಳಿಗೆ ನುಗ್ಗಿ ಖಂಡಿತವಾಗಿಯೂ ಪ್ರಜೆಗಳಿಗೆ ತೊಂದರೆಮಾಡಕೂಡದೆಂದು ಷೆರ್ಮನ್ನನು ಕಟ್ಟುಮಾಡಿದನು. ಎಷ್ಟು ಕಟ್ಟುಮಾಡಿದರೂ ಇಂತಹ ಸಮಯದಲ್ಲಿ ಅತ್ಯಾಚಾರವು ನಡೆಯದಿರದು. ಆದರೆ ಒಂದು ಮನೆಯಲ್ಲಿ ಪಿಯಾನೊವೆಂಬ ವಾದ್ಯವನ್ನು ಒಡೆದು ಹಾಕುವುದೂ ಮತ್ತೊಂದರಲ್ಲಿ ಸಾರಾಯಿನ ಬುಡ್ಡಿ

ಗಳನ್ನು ಎತ್ತಿಕೊಂಡು ಹೋಗುವುದೂ ಇಂತಹ ಸಮಯದಲ್ಲಿ ಅತ್ಯಾಚಾರವಲ್ಲ. ಇನ್ನು ಯುದ್ಧವು ಕೊನೆಗೊಳ್ಳಲು ಬಹಳಕಾಲವು ಬೇಕಿರಲಿಲ್ಲ. ಷೆರ್ಮನ್ನನು ಸಮುದ್ರ ತೀರದಲ್ಲಿರುವ ಸವನ್ನವೆಂಬ ಪಟ್ಟಣವನ್ನು ಹಿಡಿದನು. ಫಿರಂಗಿಗಳೂ ಇತರ ವಸ್ತುಗಳೂ ಕೈಸೇರಿದುವು. ಅವನು ಉತ್ತರದಿಕ್ಕಿಗೆ ತಿರುಗಿ ಹಿಂದಕ್ಕೆ ಬರಲು ಅಣಿ ಮಾಡಿಕೊಂಡನು. ಲಿಂಕನ್ನನ ಧನ್ಯವಾದಗಳಿಗೂ ಸಂತೋಷಕ್ಕೂ ಮಿತಿಯಿರಲಿಲ್ಲ.

ಗ್ರಾಂಟನು ಈ ಕಾಲದಲ್ಲಿ ರಿಚ್‌ಮಂಡ್—ಪೀಟರ್ಸ್‌ಬರ್ಗ್ ದುರ್ಗವನ್ನು ಆಕ್ರಮಿಸಲು ಪ್ರಯತ್ನಮಾಡುತ್ತಿದ್ದನು. ಆದರೆ ಅದನ್ನು ಸುತ್ತುವರಿದು ಮುತ್ತಿಗೆ ಹಾಕಲು ಅನುಕೂಲವಿರಲಿಲ್ಲ—ಕೋಟೆಯು ಬಹಳ ವಿಸ್ತೃತವಾದುದು. ಮೊದಲು ಅವನು, ದಕ್ಷಿಣದ ಕಡೆಯಿಂದ ಬಂದು ಪೀಟರ್ಸ್‌ಬರ್ಗ್‌ನಲ್ಲಿ ಒಟ್ಟಿಗೆ ಸೇರುತ್ತಿದ್ದ ಮೂರು ರೈಲುರಸ್ತೆಗಳನ್ನು ಸ್ವಾಧೀನಮಾಡಿಕೊಳ್ಳಲು ಯತ್ನಿಸಿದನು. ಸ್ವಾಧೀನ ನಾದರೆ ಆ ದಿಕ್ಕಿನಿಂದ ಶತ್ರುವಿಗೆ ಸಹಾಯವು ಬರುವುದು ತಪ್ಪಿಹೋಗುತ್ತಿದ್ದಿತು. ಆದರೆ ರೈಲುರಸ್ತೆಗಳಲ್ಲಿ ಮುಖ್ಯನಾದುದು ದುರ್ಲಭವಾಯಿತು. ಅವನು ಕಂದಕಗಳನ್ನು ತೋಡಿಕೊಂಡು ಅವುಗಳಲ್ಲಿ ಮರೆಮಾಡಿಕೊಳ್ಳುತ್ತ ಕ್ರಮವಾಗಿ ಮುಂದೆ ಹರಿದು ದಕ್ಷಿಣದ ದಿಕ್ಕಿನಿಂದ ಪೀಟರ್ಸ್‌ಬರ್ಗಿನ ಕೋಟೆಯನ್ನು ಸಮೀಪಿಸಿದನು. ಅವನು ಒತ್ತಿದಹಾಗೆ ಲೀಯೂ ಒತ್ತುತ್ತ ಹೋಗಬೇಕಾಗುತ್ತಿದ್ದಿತು. ಕಾಲಕ್ರಮದಲ್ಲಿ ಎರಡು ದಂಡುಗಳೂ ಯುದ್ಧಕ್ಕೆರಗಿ ಪರಿಣಾಮವು ನಿಶ್ಚಿತವಾಗುವುದು.

ದಕ್ಷಿಣದಲ್ಲಿ ನಿರಾಶೆಯು ದಿನದಿನಕ್ಕೆ ಹರಡಿತು. ರಿಚ್‌ಮಂಡಿನಲ್ಲಿ ಆಹಾರ ಪದಾರ್ಥಗಳು ಕಡಿಮೆಯಾದುವು. ಸೈನ್ಯಕ್ಕೆ ಜನರು ಸೇರುವುದು ಶುದ್ಧಾಂಗವಾಗಿ ನಿಂತುಹೋಯಿತು. ಬಿಟ್ಟು ಹೋಗುವವರ ಸಂಖ್ಯೆಯು ಹೆಚ್ಚಿತು. ಆದುರ್ಗವು ಬಹಳಕಾಲದವರೆಗೆ ಬಿಟ್ಟುಕೊಡದೆ ಹೆಣಗಿತು. ದಕ್ಷಿಣವು ಕ್ರೂರಕರ್ಮಕ್ಕಾರಂಭಿಸಿತು. ಉತ್ತರದವರಾಗಿ ಸೆರೆಸಿಕ್ಕಿದ್ದವರು ಚಿತ್ರಚಿತ್ರವಾದ ಹಿಂಸೆಯನ್ನು ಅನುಭವಿಸಿದರು. ಹಿಂಸೆಗಳ ವೈಧವಿಧ್ಯವನ್ನು ವರ್ಣಿಸುವುದಕ್ಕಾಗುವುದಿಲ್ಲ. ಅವುಗಳನ್ನು ಅನುಭವಿಸಿಯೂ ಸಾಯದೆ ಜೀವದಿಂದುಳಿದು ಬಂದವರು ಉತ್ತರದ ಪ್ರಜೆಗಳಲ್ಲಿ ತಮ್ಮ ಗೋಳನ್ನೆಲ್ಲಾ ಹೇಳಿಕೊಂಡರು. ಉತ್ತರವು ವೈಮರೆಯುವಷ್ಟು ರೇಗಿತು. ಆದರೆ ದಕ್ಷಿಣದ ಪ್ರಜೆಗಳಲ್ಲಿ ತಪ್ಪಿರಲಿಲ್ಲ. ಇದಿಷ್ಟು ಹಿಂಸೆಗೂ ಕಾರಣರಾದವರು ಕೆಲವು ಮಂದಿ ಸೈನ್ಯದ ಹುದ್ದೇದಾರರು. ಜೆಫರ್‌ಸನ್ ಡೇವಿಸ್ಸನಿಗೆ ಈ ವಿಷಯವು ಗೊತ್ತಿಲ್ಲದಿರಬಹುದು ; ಆದರೆ ಅವನೂ ಆ ಜಾತಿಗೆ ಸೇರಿದವನೆಂಬುದು ನಿಸ್ಸಂಶಯವಾದುದು.

ಒಂದು ಪ್ರಯತ್ನದಲ್ಲಿ ಉದ್ದಕ್ಕೂ ಅಭಿಭವವೇ ಉಂಟಾಗುತ್ತ ಹೋದರೆ ಮನಸ್ಸು ಕಲ್ಲಿನಂತೆ ನೀರಸವಾಗುವುದು. ವಿವೇಚನೆಯೂ ಕೂಡ ಒಂದೊಂದು ವೇಳೆ ಮಲಿನವಾಗುವುದು. ಹೀಗಿರುವಲ್ಲಿ, ಶತ್ರುಗಳು ಸೆರೆಸಿಕ್ಕಿರುವ ಶತ್ರುಗಳನ್ನು ಹಿಂಸಿಸುವುದು ಹೊಸದಲ್ಲ. ಮೊದಲಿಂದ ಕೊನೆಯವರೆಗೂ ಸೋಲೇ ಫಲಿತಾಂಶವಾಗುತ್ತಿರಲಾಗಿ. ಈ ವಿಧದಲ್ಲಿಯಾದರೂ ಹಗೆತನವನ್ನು ತೀರಿಸಿಕೊಳ್ಳದಿರುವುದು ಹೇಗೆ?

ದಕ್ಷಿಣವು ಹೀಗೆ ಯೋಚಿಸಿತು.

# ೪ನೆಯ ಅಧ್ಯಾಯ

## 1864ನೆಯ ಇಸವಿಯ ಚುನಾವಣೆಯಲ್ಲಿ.

ಆಡಳಿತವು ದಿನದಿನಕ್ಕೆ ಕಷ್ಟವಾಗುತ್ತಿದ್ದಿತು. ದಕ್ಷಿಣಭಾಗವನ್ನು ಸೇರಿ ಯುದ್ಧಕ್ಕೆ ತೊಡಗಿದ್ದ ಸಂಸ್ಥಾನಗಳು ಈಗ ಉತ್ತರದ ಸೈನ್ಯದ ಅಧೀನದಲ್ಲಿದ್ದುವು. ಅವುಗಳಲ್ಲಿ ಶಾಸನಕ್ರಮವನ್ನೇರ್ಪಡಿಸುವುದು ದೊಡ್ಡ ಸಮಸ್ಯೆಯಾಗಿದ್ದಿತು. ಯುದ್ಧವು ಸ್ವಲ್ಪಕಾಲದೊಳಗಾಗಿ ಮುಗಿಯುವುದೆಂದು ಎಲ್ಲರೂ ಊಹಿಸಿದರು. ಆದಕಾರಣ ಸಂಧಿಯ ಪ್ರಸ್ತಾಪವು ಅತ್ಯವಶ್ಯಕವಾಗಿದ್ದಿತು. ಜೊತೆಗೆ, ನೊವೆಂಬರ್ ತಿಂಗಳಲ್ಲಿ ಪ್ರೆಸಿಡೆಂಟನನ್ನು ಚುನಾಯಿಸುವ ಕೆಲಸವು ಒದಗುವುದು. ಜಯವು ಲಭ್ಯವಾಗುವುದರಲ್ಲಿದ್ದಿತು ; ಆದರೆ ಜಯಶಾಲಿಗಳು ಈ ವೇಳೆಯಲ್ಲಿ ಮನಸೋತು ದಕ್ಷಿಣವು ಕೇಳುವುದನ್ನೆಲ್ಲಾ ಸಲ್ಲಿಸುವರೇ ಅಥವಾ ಬೇರೊಂದು ವಿಧವಾಗಿ ಆಚರಿಸುವರೇ ಎಂಬುದು ಎಲ್ಲರ ಬಾಯಲ್ಲಿಯೂ ಇದ್ದಿತು.

ಯುದ್ಧದ ಪರಿಣಾಮವೆಂತಾಗುವುದು ?

ದಕ್ಷಿಣದಲ್ಲಿ ತಿದ್ದುಪಾಟನ್ನು ಮಾಡಿ ಉದ್ಧಾರಮಾಡುವ ಕೆಲಸವು ಲಿಂಕನ್ನನ ಹಣೆಯಲ್ಲಿ ಬರೆದಿರಲಿಲ್ಲ. ಆದರೆ ಅವನು ಆ ವಿಚಾರವನ್ನು ಚೆನ್ನಾಗಿ ಯೋಚಿಸಿ ಸರಿಯಾದ ಮಾರ್ಗದಲ್ಲಿ ಪ್ರಾರಂಭಮಾಡಿದ್ದನು. ಪಶ್ಚಿಮ ವರ್ಜಿನಿಯವು ವರ್ಜಿನಿಯದ ಒಟ್ಟು ರಾಜ್ಯದಿಂದ ಪ್ರತ್ಯೇಕವಾಗಿ ಹೊಸದೊಂದು ಸಂಸ್ಥಾನವೆನ್ನಿಸಿಕೊಂಡಿತು. ಆದರೆ, ಉತ್ತರದ ಅಧಿಕಾರವು ಸ್ಥಾಪಿಸಲ್ಪಡದಿರುವ ಪ್ರದೇಶದಲ್ಲಿಯೂ, ಸಂಸ್ಥಾನದ ಒಂದು ಭಾಗವು ಮಾತ್ರ ಸ್ವಾಧೀನವಾಗಿರುವೆಡೆಯಲ್ಲಿಯೂ, ಅಥವಾ ಪ್ರಜೆಗಳಲ್ಲಿ ಹೆಚ್ಚುಮಂದಿ ದಕ್ಷಿಣದಲ್ಲಿ ಅಭಿಮಾನವನ್ನು ತೋರಿಸಿದ ಕಡೆಯಲ್ಲಿಯೂ ಸ್ಥಿತಿಯು ಸುಗಮವಾಗಿರಲಿಲ್ಲ. ಆಯಾ ಪ್ರದೇಶಗಳನ್ನು ನೆಮ್ಮದಿಯಿಂದ ಇಟ್ಟಿರುವುದಕ್ಕಾಗಿ ಸೈನ್ಯದ ಅಧಿಕಾರಿಗಳು ಗೌರ್ನರಾಗಿ ನೇಮಿಸಲ್ಪಟ್ಟು ಆಡಳಿತವನ್ನು ನಡೆಯಿಸುತ್ತಿದ್ದರು. ಕೆಲವು ಸ್ಥಳಗಳಲ್ಲಿ ಲಿಂಕನ್ನನು ಪ್ರಜೆಗಳೇ ಸ್ವಂತವಾಗಿ ಪರ್ಯಾಲೋಚಿಸಿ ತಮಗೆ ತೋರಿದ ರೀತಿಯಲ್ಲಿ ಸರ್ಕಾರವನ್ನೇರ್ಪಡಿಸಿಕೊಳ್ಳಬಹುದೆಂದು ಅವಕಾಶವನ್ನು ಕೊಟ್ಟನು. ಅವರಿಗೆ ಸಂಯೋಗದಲ್ಲಿ ಪಕ್ಷಪಾತವಿದ್ದರೆ ಸಾಕಾಗಿದ್ದಿತು. ಆದರೆ ಸೈನ್ಯದ ಗೌರ್ನರುಗಳು ಇರುವುದು ಮಾತ್ರ ತಪ್ಪಲಿಲ್ಲ. ಒಂದೊಂದುವೇಳೆ ಗೌರ್ನರಿಗೂ ಅಲ್ಲಿನ ಸರ್ಕಾರಕ್ಕೂ ಮಾತು ಸರಿಬೀಳುತ್ತಿರಲಿಲ್ಲ. ಇಂತಹ ವಿವಾದಗಳನ್ನೆಲ್ಲಾ ಅವನು ಬಹಳ ಕಷ್ಟದಿಂದ ಬಗೆಹರಿಸುತ್ತಿದ್ದನು. ಕಾಂಗ್ರೆಸ್‌ನಲ್ಲಿಯೂ ತೊಂದರೆಗಳು ಕಾಣಿಸಿಕೊಂಡುವು. ದಕ್ಷಿಣದ ಸಂಸ್ಥಾನಗಳಿಂದ ಬರುವ ಪ್ರತಿನಿಧಿಗಳನ್ನು ಸಭೆಗೆ ಸೇರಿಸಬೇಕೇ ಬೇಡವೇ ಎಂಬುದು ಮುಖ್ಯವಾಯಿತು. ದಾಸ್ಯದ ವಿಚಾರವೂ ತಲೆಯೆತ್ತಿತು. ಪ್ರಜೆಗಳೇ ಪ್ರಯತ್ನಮಾಡಿ ದಾಸ್ಯವನ್ನು ಕಾಲಕ್ರಮದಲ್ಲಿ ಅಡಗಿಸುವ

ರೆಂದು ಲಿಂಕನ್ನನು ಮೊದಲಿಂದಲೂ ಎಣಿಸಿದ್ದನು. ನೀಗ್ರೋಗಳಲ್ಲಿ ವಿದ್ಯಾವಂತ ರಾದವರು ಚೀಟಿ ಹಾಕುವುದಕ್ಕೆ ಅವಕಾಶವನ್ನು ಪಡೆಯಬೇಕೆಂದು ಅವನಿಗೆ ಇಷ್ಟವಿದ್ದಿತು. ಆದರೆ ಅದು ಸಾಗಲಿಲ್ಲ. ದಾಸ್ಯದ ವಿಚಾರವು ಹಾಗಿರಲಿ, ಹಿಂದಿನ ವರುಷಗಳಲ್ಲಿ ಆಯುಧವನ್ನು ಹಿಡಿದು ರಾಜ್ಯದ ಮೇಲೂ ಸರ್ಕಾರದ ಮೇಲೂ ದಂಗೆಯೆದ್ದು ಯುದ್ಧಕ್ಕೆ ಹೊರಟಂಥವರನ್ನು ಸಭೆಗೂ ಆಡಳಿತಕ್ಕೂ ಸೇರಿಸುವುದು ಹೇಗೆ, ಯಾವ ಯಾವ ಷರತ್ತುಗಳ ಮೇಲೆ ? ಎಂಬುದು ಚರ್ಚೆಗಿಟ್ಟಿತು. ಆದರೆ, ಕಾಲವನ್ನು ತಳ್ಳಿ ಮಾತನ್ನು ವೆಚ್ಚಮಾಡದರೀತಿಯಲ್ಲಿ, ದಕ್ಷಿಣದ ಸಂಸ್ಥಾನ ಗಳಲ್ಲಿ ಪ್ರಜೆಗಳು ಇಷ್ಟಪಡುವಂತಹ ಸರ್ಕಾರಗಳನ್ನೇರ್ಪಡಿಸಬೇಕೆಂದು ಲಿಂಕ ನ್ನನ ಮನಸ್ಸಿನಲ್ಲಿದ್ದಿತು. "ಆದಷ್ಟುಮಟ್ಟಿಗೆ ಪ್ರಜೆಗಳು ಚುನಾವಣೆಯ ಕಾಲ ಗಳಲ್ಲಿ ತಮ್ಮ ಇಷ್ಟವನ್ನು ತಿಳಿಸಲು ಅನುಕೂಲಮಾಡಿಕೊಡು ; ನಿನ್ನ ಪ್ರಯತ್ನ ಗಳು ನ್ಯಾಯಮಾರ್ಗವನ್ನು ಬಿಟ್ಟುಹೋಗದಿರಲಿ. ಎಷ್ಟುಕಷ್ಟವಾದರೂ ಲಕ್ಷಿಸದೆ ಪ್ರಜೆಗಳಲ್ಲಿ ಹೆಚ್ಚುಮಂದಿಯ ಇಷ್ಟವನ್ನು ಸಲ್ಲಿಸು" ಎಂದು ಅವನು ಗೌರ್ನರ ನೊಬ್ಬನಿಗೆ ಬರೆದನು. ಕಾಂಗ್ರೆಸ್ಸಿಗೆ ದಕ್ಷಿಣದಿಂದ ಪ್ರತಿನಿಧಿಗಳನ್ನು ಚುನಾ ಯಿಸಿ ಕಳುಹಿಸುವ ಕಾಲಗಳಲ್ಲಿ ಒಂದು ಅಸಂಗತವು ನಡೆಯುವುದೆಂದು ಅವನಿಗೆ ಹೆದರಿಕೆಯಿದ್ದಿತು. ಅವನ ಮರಣಾನಂತರ ಆ ಭಯವು ಯಥಾರ್ಥವಾಯಿತು. "ಚುನಾವಣೆಯ ಸಮಯಕ್ಕೆ ಸರಿಯಾಗಿ ಉತ್ತರದವರು ನುಗ್ಗಿ, ಚುನಾವಣೆಯ ಚೀಟಿಗಳನ್ನು ಹಾಕಲು ಬಂದವರಿಗೆಲ್ಲಾ ಮೋರೆಯ ಎದುರಿಗೆ ಸನೀನುಗಳನ್ನು ಹಿಡಿದು ತಮ್ಮವರಿಗೇ ಚೀಟಿಹಾಕುವಂತೆ ಬಲಾತ್ಕರಿಸುವುದು ಅತ್ಯಂತ ಹೀನವಾ ದುದು." ಕೆಲವು ಕಾಲದವರೆಗೆ ಲಿಂಕನ್ನನೂ ಕಾಂಗ್ರೆಸ್ ಸಭೆಯೂ ಐಕಮತ್ಯ ದಿಂದ ಕೆಲಸವನ್ನು ನಡೆಯಿಸಿದರು. ಆದರೆ 1864ರಲ್ಲಿ ವೈಷಮ್ಯವು ಬಂದಿತು. ದಕ್ಷಿಣದ ಸಂಸ್ಥಾನಗಳ ಆಡಳಿತವನ್ನು ವ್ಯವಸ್ಥೆಪಡಿಸುವುದರಲ್ಲಿ ಲಿಂಕನ್ನನು ಒಂದು ಬಗೆಯಾಗಿ ಯೋಚಿಸಿದನು. ಸಭೆಯಲ್ಲಿ ಮುಖಂಡರಾಗಿದ್ದ ಸೆನೇಟರ್ ವೇಡನೂ ಹೆನ್ರಿ ವಿಂಟರ್ ಡೇವಿಸ್ಸನೂ ಒಂದುಬಗೆಯಾಗಿ ಯೋಚಿಸಿದರು. ಎರಡು ಯೋಚನೆಗಳಿಗೂ ಹೊಂದಿಕೆ ಬರಲಿಲ್ಲ. ಸಭಿಕರ ಮಸೂದೆಯು "ಮಂಜೂರಾತಿ" ಗಾಗಿ ಲಿಂಕನ್ನನಲ್ಲಿಗೆ ಬಂದಿತು. ಲಿಂಕನ್ನನು ರುಜುಹಾಕದೆ ಮಸೂದೆಯನ್ನು ಮೇಜಿನ ಮೇಲೆಯೇ ಬಿಟ್ಟುಬಿಟ್ಟನು. ಸಮ್ಮೇಳನದ ಅವಧಿಯು ಮುಗಿದುಹೋಯಿತು. ಮಸೂದೆಯು ವ್ಯರ್ಥವಾಯಿತು. ಪ್ರೆಸಿಡೆಂಟನು ತನ್ನ ಮಾರ್ಗವನ್ನೇ ಅನುಸರಿಸಿ ಕೆಲಸಮಾಡತೊಡಗಿದನು. ಇಷ್ಟೂನಡೆದುದು ಜುಲೈನಲ್ಲಿ. ನೊವೆಂಬರ್‌ನಲ್ಲಿ ಪ್ರೆಸಿ ಡೆಂಟನನ್ನು ಚುನಾಯಿಸಬೇಕಾಗಿದ್ದಿತು ; ಜನರು ಅವನನ್ನೇ ಮತ್ತೆ ಚುನಾಯಿಸುವ ರೋ ಇಲ್ಲವೋ ತಿಳಿಯದು. ಡೆಮೊಕ್ರೆಟರು ದಿನದಿನಕ್ಕೆ ಗರಿಗೂಡಿಕೊಳ್ಳುತ್ತಿದ್ದರು. ಕೂಲಂಕಷರಾದ ರಿಪಬ್ಲಿಕನರಿಗೆ ಅವನಲ್ಲಿ ವಿಶ್ವಾಸವು ಕಡಿಮೆಯಾಗುತ್ತಿದ್ದಿತು. "ಅವರು ತಮ್ಮ ಇಷ್ಟವನ್ನೇ ಸಾಧಿಸಿ ನಡೆಯಿಸುವುದಾದರೆ ದೇಶಕ್ಕೆ ಕೆಡಕು ಉಂಟಾಗದಿರದು" ಎಂದು ಲಿಂಕನ್ನನು ನುಡಿದನು. ವೇಡನೂ ಡೇವಿಸ್ಸನೂ ಹಗೆ ತನದಿಂದ ಲಿಂಕನ್ನನಿಗೆ ವಿರೋಧವಾಗಿ ಆಯುಧವನ್ನು ಮಸೆಯುತ್ತಿದ್ದರು.

ಆದರೆ ಅವನು ಇನ್ನೂ ಹೇಳಿದನು—" ಏನಾದರೂ ಆಗಲಿ ; ಸತ್ಯಮಾರ್ಗವನ್ನು ಅವಲಂಬಿಸುವುದಕ್ಕೇ ನಾನು ಪ್ರಯತ್ನಪಡುತ್ತಿರಬೇಕು. ಅದಕ್ಕಾಗಿ ಯಾವುದಾದರೊಂದು ತತ್ವವನ್ನು ಎದುರಿಗೆ ಇಟ್ಟುಕೊಂಡು ಕೆಲಸಮಾಡಬೇಕು." ಮಸೂದೆಯು ಪ್ರಕೃತದಲ್ಲಿ ದಕ್ಷಿಣದ ಸಂಸ್ಥಾನಗಳೊಳಗೆ ಸರ್ಕಾರವನ್ನು ಏರ್ಪಡಿಸಲು ನಡೆಯುತ್ತಿದ್ದ ಪ್ರಯತ್ನಗಳನ್ನೆಲ್ಲಾ ಹಾಳುಮಾಡುತ್ತಿದ್ದಿತು. ಬಿಡುಗಡೆಯ ಪ್ರಕಟಣೆಯನ್ನು ತಿದ್ದುವುದಾಗಿ ಹೇಳುತ್ತ ಅದು ಹೊಸದಾಗಿ ಹುಟ್ಟುವ ಈ ಸಂಸ್ಥಾನಗಳಲ್ಲಿ ಪ್ರಾರಂಭದಲ್ಲಿಯೇ ದಾಸ್ಯವನ್ನು ತೊಡೆದುಬಿಡಬೇಕೆಂದು ಅಪೇಕ್ಷಿಸಿತು. ಹೀಗೆ ಮಾಡುವುದು ನ್ಯಾಯನಾಗಿರಲಿಲ್ಲ. ಲಿಂಕನ್ನನು ಅದಕ್ಕೆ ಬದಲು ಶಾಸನಕ್ರಮವನ್ನೇ ಆ ವಿಚಾರದಲ್ಲಿ ತಿದ್ದಿ ಸರಿಮಾಡಬೇಕೆಂದು ಯೋಚಿಸಿದನು. ಹಾಗೆ ಮಾಡಿದರೆ ದಾಸ್ಯವನ್ನು ಅಡಗಿಸುವುದು ನ್ಯಾಯನಾಗುತ್ತಿದ್ದಿತು; ಮುಂದೆ ನೀಗ್ರೋವಿನ ಬಾಧ್ಯತೆಗಳ ಸಂಬಂಧದಲ್ಲಿ ವಿವಾದಗಳು ಹುಟ್ಟಿ ನ್ಯಾಯಸ್ಥಾನಗಳಲ್ಲಿ ತೊಂದರೆಗೆ ಅವಕಾಶವಿರುತ್ತಿರಲಿಲ್ಲ. ತಾನು ಹೀಗೆ ಮೊಂಡತನಮಾಡುವುದರಿಂದ ಪ್ರಜೆಗಳಿಗೆ ತನ್ನಲ್ಲಿ ವಿಶ್ವಾಸವು ಕಡಿಮೆಯಾಗುವುದೆಂಬುದನ್ನು ಅವನು ಗಣನೆಗೆ ತರಲಿಲ್ಲ. " ಯಾವುದು ನ್ಯಾಯವೆಂದು ತೋರುವುದೋ ಅದನ್ನು ಮಾಡುವೆನು ; ಅದನ್ನು ಬಾಯಿಂದ ಆಡುವೆನು. ಈ ವಿಷಯವು ಪ್ರಜೆಗಳಿಗೆ ತಿಳಿದೇ ಇರುವುದು. ನನ್ನನ್ನು ಅನುಸರಿಸಿ ಯಾರೂ ನಡೆಯಬೇಕಾಗಿಲ್ಲ; ನಾನೂ ಯಾರನ್ನೂ ಅನುಸರಿಸುವುದಿಲ್ಲ. ಕೆಲವಂಶಗಳಲ್ಲಿ ನಮ್ಮ ಪಕ್ಷದ ಕೂಲಂಕಷರೂ ಕನ್ಸರ್ವೆಟಿವ್ ಪಂಗಡದವರೂ ನನ್ನ ಅಭಿಪ್ರಾಯವನ್ನು ಒಪ್ಪುತ್ತಾರೆ. ಆದರೆ ಎಲ್ಲಾ ಅಂಶಗಳಲ್ಲಿಯೂ ಒಪ್ಪುತ್ತಿದ್ದರೆ ಚೆನ್ನಾಗಿದ್ದಿತು ; ನಮ್ಮ ಪಕ್ಷವು ದುರ್ಜಯವಾದುದಾಗುತ್ತಿದ್ದಿತು. ಆದರೂ ಅವರು ವ್ಯತ್ಯಸ್ತವಾದುದನ್ನು ಮಾಡುತ್ತಿದ್ದಾರೆ; ಬೇಕಾದುದನ್ನು ಮಾಡಬಹುದು. ನಾನೂ ಕೂಡ ಕರ್ತವ್ಯವೆಂದು ನನಗೆ ತೋರುವುದನ್ನು ಮಾಡುವೆನು. ಮಿಸೌರಿಯಲ್ಲಿ ಅಥವಾ ಮತ್ತೊಂದುಕಡೆ ಅಧಿಕಾರಮಾಡುತ್ತಿರುವವರು ಉತ್ತರವನ್ನು ನನಗೆ ಹೇಳಬೇಕೇ ಹೊರತು ಕೂಲಂಕಷರಿಗಾಗಲೀ ಕನ್‌ಸರ್ವೆಟಿವ್ ಪಕ್ಷದವರಿಗಾಗಲೀ ಅಲ್ಲ. ಎಲ್ಲರು ಹೇಳುವುದಕ್ಕೂ ಕಿವಿಗೊಡುವೆನು. ಆದರೆ ಯಾವುದನ್ನು ಮಾಡಬೇಕೆಂಬುದೂ ಯಾವುದನ್ನು ಬಿಡಬೇಕೆಂಬುದೂ ನನ್ನ ಅಧೀನವಾಗಿರುವುದು " ಎಂದು ವಿವಾದಕಾಲದಲ್ಲಿ ಒಂದು ಪಂಗಡದವರಿಗೆ ಕಾಗದವನ್ನು ಬರೆದನು.

ಇದೇ ಜುಲೈ ತಿಂಗಳಲ್ಲಿ ಜನರಲ್ ಅರ್ಲಿಯು ವಾಷಿಂಗ್ಟನ್ನಿನ ಮುಂದೆ ಬಂದು ನಿಂತನು. ಲಿಂಕನ್ನನು ಆಡಳಿತದ ಯೋಚನೆಗಳನ್ನೆಲ್ಲಾ ಒತ್ತರಿಸಿದನು. ಅವನ ಲಕ್ಷ್ಯವು ನಗರದ ರಕ್ಷಣೆಯ ಕಡೆಗೆ ತಿರುಗಿತು. ಆದರೆ ಅರ್ಲಿಯು ಬೇಗ ಹೊರಟುಹೋದನು. ಸಂಧಿಯ ಪ್ರಸ್ತಾಪವು ತಲೆಯಿಕ್ಕಿತು. ಯುದ್ಧದ ಮೂಲಕ ಒಂದು ಅಂಶವು ಇತ್ಯರ್ಥನಾಗಬೇಕಾಗಿದ್ದಿತು. ಸಂಯೋಗದ ಸಲುವಾಗಿ ಉತ್ತರವೂ ಸ್ವಾತಂತ್ರ್ಯದ ಸಲುವಾಗಿ ದಕ್ಷಿಣವೂ ಯುದ್ಧಮಾಡುತ್ತಿದ್ದುವು. ಯಾವುದು ಸೋತರೂ ಗೆದ್ದಭಾಗದ ಮಾತನ್ನು ಎಲ್ಲಾ ಭಾಗದಲ್ಲಿಯೂ ನಡೆಯಿಸಬೇಕು. ಈ ನಡುವೆ ಇನ್ನೊಂದು ವಿಚಾರವಿದ್ದಿತು. ದಕ್ಷಿಣದ ಸಂಸ್ಥಾನಗಳು

ಸಂಯೋಗವನ್ನು ಸೇರಿಕೊಳ್ಳಲಿ ; ಆದರೆ, ತಮಗೆ ವಿಹಿತವೆಂದು ತೋರಿದಾಗ ಪ್ರತ್ಯೇಕವಾಗಿ ಹೋಗಲು ಅಧಿಕಾರವನ್ನು ಪಡೆಯಬೇಕು, ಎಂದು ಕೆಲವರು ಸೂಚಿಸಿದರು. ಅಳಿಯ ಉಂಡಹಾಗಾಗಬೇಕು, ಕಡ ತೀರಬೇಕು ! ದಕ್ಷಿಣದವರು ಪ್ರಾಯಶಃ ಈ ಷರತ್ತನ್ನು ಒಪ್ಪುತ್ತಿರಲಿಲ್ಲ. ಒಪ್ಪಿದ್ದರೆ, ದಕ್ಷಿಣವನ್ನು ಗೆದ್ದು ಸ್ವಾಧೀನ ದಲ್ಲಿಟ್ಟುಕೊಳ್ಳಲು ತನಗೆ ಸಾಮರ್ಥ್ಯವಿಲ್ಲವೆಂದು ಉತ್ತರವು ಒಪ್ಪಿಕೊಳ್ಳುವುದ ಕ್ಕಿಂತ ಕಡೆಯಾಗುತ್ತಿದ್ದಿತಲ್ಲದೆ, ಸೋತುದಕ್ಕಿಂತ ಹೆಚ್ಚಿನ ನಷ್ಟವುಂಟಾಗುತ್ತಿದ್ದಿತು. ಆಗ ಸಂಯೋಗವೆಲ್ಲಿರುತ್ತಿದ್ದಿತು, ಸೌಹಾರ್ದವೆಲ್ಲಿರುತ್ತಿದ್ದಿತು? ಲಿಂಕನ್ನನು ಈ ಪರಿ ಣಾಮವನ್ನು ಊಹಿಸಿದ್ದನು. ಆದಕಾರಣ ಸ್ಥಿರವಾದ ಆಧಾರದಮೇಲೆ ಸಂಯೋಗ ವನ್ನು ನಿಲ್ಲಿಸಬೇಕೆಂದು ಸಂಕಲ್ಪಿಸಿದ್ದನು. ಬಿಟ್ಟು ಹೋಗುವ ಸೊಲ್ಲೇ ಇರಕೂ ಡದು. ಕೆಲವರು ಜೆಫರ್‌ಸನ್ ಡೇವಿಸ್ಸನನ್ನು ಶಿಕ್ಷಿಸಬೇಕೆಂದರು. ಆದರೂ ಅಂಥವರೇ "ತಮ್ಮ ದೇಶದ ಹಿತಕ್ಕಾಗಿ" ಅವನೊಡನೆ ಸಂಧಿಯ ಪ್ರಸ್ತಾಪವನ್ನು ಮಾಡಲು ಸಿದ್ಧವಾಗಿದ್ದರು. ಲಿಂಕನ್ನನಿಗೆ ಅವನ ಕೂದಲೆಳೆಯನ್ನು ನೋಯಿಸುವುದಕ್ಕೂ ಅಪೇಕ್ಷೆಯಿರಲಿಲ್ಲ ; ಡೇವಿಸ್ಸನು ಸಿಕ್ಕಿದ್ದರೆ ಅವನೊಡನೆ ಮಾತುಕಥೆಗಳನ್ನಾಡಿ ವಿನೋದದಿಂದಿರುತ್ತಿದ್ದನು. ಆದರೆ ಅವನನ್ನು ಸ್ವತಂತ್ರರಾಜ್ಯದ ಪ್ರಭುವೆಂಬ ಭಾವನೆಯಿಂದ ಎಂದಿಗೂ ಕಾಣುತ್ತಿರಲಿಲ್ಲ. ಹಾಗೆ ಕಂಡಿದ್ದರೆ ಮಾಡಿದ ಇಷ್ಟೊಂದು ರಕ್ತಶೋಷಣೆಯೂ ವ್ಯರ್ಥವಾಗುತ್ತಿದ್ದಿತು. ಈ ವಿಚಾರವು ಯುದ್ಧವು ಬೇಗ ಮುಗಿ ಯದಿದ್ದುದರಿಂದಲೂ ನಷ್ಟವಾದುದರಿಂದಲೂ ಬರುತ ಬರುತ ಉತ್ತರದ ಜನಗಳ ಮನಸ್ಸಿಗೆ ಮರೆಯಾಯಿತು. ಯಾವುದಾದರೊಂದು ರೀತಿಯಲ್ಲಿ ಸಂಧಿಪ್ರಸ್ತಾಪವ ನ್ನು ನಡೆಯಿಸಿ ಯುದ್ಧವನ್ನು ಮುಗಿಸಬಹುದೆಂಬ ಭಾವನೆಯು ಅನೇಕರ ಮನಸ್ಸಿ ನಲ್ಲಿ ಅಂಕುರಿಸಿತು. ಲಿಂಕನ್ನನು ದಾರಿಯನ್ನು ಕೊಡುವುದಾದರೆ ದಕ್ಷಿಣವೂ ಉತ್ತರದ ಕೋರಿಕೆಗಳಿಗೆ ಒಡಂಬಡಲು ಸಿದ್ಧವಾಗಿರುವುದೆಂಬ ಮಾತು ಎಲ್ಲೆಲ್ಲಿಯೂ ಹರಡಿತು. ಆದರೆ ಇದು ಕೇವಲ ಭ್ರಮೆ. ಕೊನೆಯುವರೆಗೂ ಜೆಫರ್‌ಸನ್ ಡೇವಿಸ್ಸನು ದಕ್ಷಿಣವು "ಸ್ವಾತಂತ್ರ್ಯವನ್ನು ಪಡೆಯಬೇಕು ಅಥವಾ ತೊಡೆದುಹೋಗಬೇಕು" ಎಂದು ಹೇಳುತ್ತಲಿದ್ದನು. ಸಂಧಿಯ ಮಾತನ್ನು ತನ್ನ ಹತ್ತಿರ ಬರಗೊಡಲಿಲ್ಲ. ಇತರರು ಸಮಾಧಾನಮಾಡಿಕೊಳ್ಳಲೊಪ್ಪುವವರಾಗಿ ದ್ದರೆ ಅವನು ತನ್ನ ವಶದಲ್ಲಿದ್ದ ಸೈನ್ಯದ ಬೆಂಬಲದಿಂದ ಅವರ ಬಾಯನ್ನು ಮುಚ್ಚುತ್ತಿದ್ದನು. ಲಿಂಕನ್ನನು ಜನಗಳಿಗೆ ತಮ್ಮ ತಪ್ಪನ್ನು ಬಾಯಿಂದ ಹೇಳಿ ತೋರಿಸಲಿಲ್ಲ.

ಆದಕಾರಣ ಒಂದು ಉಪಾಯವನ್ನು ಮಾಡಿದನು. ಆದರಿಂದ ಅವನಿಗೂ ಒಟ್ಟಿನಲ್ಲಿ ಸಹಾಯವಾಯಿತು ; ಜನಗಳೂ ನಿಜಸ್ಥಿತಿಯನ್ನು ತಿಳಿದುಕೊಂಡರು. ಯಾರಾದರೂ ಶ್ರದ್ಧಾಸಮನ್ವಿತರಾಗಿ ಲಿಂಕನ್ನನ ಬಳಿಗೆ ಬಂದು ಸಂಧಿಗೆ ದಕ್ಷಿ ಣವು ಒಪ್ಪುವಂತೆ ಮಾಡಬಹುದೆಂದು ಹೇಳಿ ಅವನ ಸಹಾಯವನ್ನು ಬಯಸಿದರೆ, ಅವನು, ದಯವಿಟ್ಟು ಜೆಫರ್‌ಸನ್ ಡೇವಿಸ್ಸನೊಡನೆ ಮಾತನಾಡಿ ನೀವೇ ಆ ಕೆಲಸ ವನ್ನು ಮಾಡಬೇಕೆಂದು ಹೇಳಿ ಕಳುಹಿಸುತ್ತಿದ್ದನು. ಮೊದಲು ಅಂಥವರಿಬ್ಬರು

ದಕ್ಷಿಣಕ್ಕೆ ಹೋಗಿ ಅಲ್ಲಿಯ ಪ್ರೆಸಿಡೆಂಟನೊಡನೆ ಮಾತನಾಡಿ ಬಂದರು. ಆದರೆ ಲಿಂಕನ್ನನಿಗೆ ಮೋರೆಯನ್ನು ತೋರಿಸಲಿಲ್ಲ. ಅವರು ಡೇವಿಸ್ಸನಿಗೆ ಆಸೆಯನ್ನು ಹುಟ್ಟಿಸಲು ಹವಣಿಸಿದರು. ಭಗವಂತನ ಆಜ್ಞೆಯೆಂದು ಉಪದೇಶಿಸಿದರು; ನೀನು ಭೂಮಿಗಿಳಿದಿರುವ ದೈವವೆಂದು ಸ್ತೋತ್ರಮಾಡಿದರು, ಕರುಣೆಯನ್ನು ತೋರೆಂದು ಪ್ರಾರ್ಥಿಸಿದರು. ಯಾವ ಹಂಚಿಕೆಯೂ ಸಾರ್ಥಕವಾಗಲಿಲ್ಲ. ಅವರಿಬ್ಬರೇ ಅಲ್ಲ—ಅನೇಕರು ಪ್ರಯತ್ನಮಾಡಿ ನೋಡಿದರು. ಹೊರೇಸ್ ಗ್ರೀಲಿ ಎಂಬಾತನೂ ಈ ವಿಷಯವನ್ನು ಕುರಿತು ಲಿಂಕನ್ನನಿಗೆ ಬರೆದನು. ಅವನಿಗೂ ಇದೇ ಉತ್ತರವು ಲಭಿಸಿತು. ಉತ್ತರವು ಸಂಧಿಯನ್ನಪೇಕ್ಷಿಸಿ, ದಕ್ಷಿಣಕ್ಕಿಂತ ಹೆಚ್ಚಾಗಿ ಪ್ರಸ್ತಾಪಗಳನ್ನು ನಡೆಯಿಸಿತು—ಲಿಂಕನ್ನನು ಯಾವುದಕ್ಕೂ ಒಡಂಬಡಲಿಲ್ಲ. ಗ್ರೀಲಿಯು ಕೋಪಗೊಂಡು ಪತ್ರಿಕೆಯಲ್ಲಿ ಮನಸ್ಸಿಗೆ ಬಂದಹಾಗೆ ಲಿಂಕನ್ನನನ್ನು ದೂಷಿಸಿದನು. ಆದರೆ ಪ್ರೆಸಿಡೆಂಟನು ಮೌನವಾಗಿದ್ದನು. ಗ್ರೀಲಿಯು ಯುದ್ಧವನ್ನು ಇನ್ನೂ ನಡೆಯಿಸುತ್ತ ರಕ್ತವನ್ನು ಚೆಲ್ಲಿಸಲು ಪ್ರೆಸಿಡೆಂಟನಿಗೆ ಇಷ್ಟವೆಂದನು. ಹೀಗೆ ಬಹಿರಂಗವಾಗಿ ನಿಂದಿಸುವುದರಿಂದ ಜನಗಳಿಗೆ, ಇರುವ ವಿಷಯವು ಗೊತ್ತಾಗದೆ, ಪ್ರೆಸಿಡೆಂಟನಲ್ಲಿ ವಿಶ್ವಾಸವು ಕಡಿಮೆಯಾಗುತ್ತಲಿದ್ದಿತು. ಪ್ರೆಸಿಡೆಂಟನಿಗೂ ಮನಸ್ಸಿನ ನೆಮ್ಮದಿಯು ತಪ್ಪಿತು.

ಮಂತ್ರಿಸಭೆಯಲ್ಲಿ ವಿಶೇಷವು ನಡೆಯುತ್ತಿದ್ದಿತು. ಅಲ್ಲಿ ಎಲ್ಲರ ಮಾತಿಗಿಂತ ಪ್ರೆಸಿಡೆಂಟನ ಮಾತು ಮುಂದಾಗಿದ್ದಿತು. ಆದರೆ ಮಂತ್ರಿಗಳಲ್ಲಿ ಒಬ್ಬನ ಪತನವನ್ನು ಹಾರೈಸಿ ಮತ್ತೊಬ್ಬನು ಮುಸಲತ್ತುಮಾಡುತ್ತಿದ್ದನು. ಲಿಂಕನ್ನನಿಲ್ಲದಿದ್ದರೆ ಅವರು ಒಂದುಗಳಿಗೆಯೂ ಐಕಮತ್ಯದಿಂದ ನಿಲ್ಲುತ್ತಿರಲಿಲ್ಲ. ಅವನ ಪ್ರಭಾವದಿಂದ ಭೇದಬುದ್ಧಿಗಳು ಹೇಗೋ ಒಂದಾಗಿ ನಿಂತು ಕೆಲಸವನ್ನು ನಿರ್ವಹಿಸುತ್ತಿದ್ದುವು. ಸಭೆಯಲ್ಲಿ ಬದಲಾವಣೆಗಳಾದುವು. ಇಬ್ಬರು ಮಂತ್ರಿಗಳು ಕೆಲಸವನ್ನು ಬಿಟ್ಟು ಹೊರಟುಹೋದರು. ಆದರೆ ಅವರಂತೆಯೇ ಶಕ್ತರೂ ಜಾಣರೂ ಆದ ಇತರರು ದೊರೆತದ್ದರಿಂದ ಸರ್ಕಾರಕ್ಕೆ ನಷ್ಟವೇನೂ ಆಗಲಿಲ್ಲ. ಉಳಿದವರೊಳಗೆ ಸ್ಟ್ಯಾಂಟನ್ನನೊಬ್ಬ ಮುಖ್ಯನಾದ ಮಂತ್ರಿ. ಸಾಮಾನ್ಯವಾಗಿ ಎಲ್ಲರೂ ಪ್ರೆಸಿಡೆಂಟನಲ್ಲಿ ಐಕಮತ್ಯದಿಂದಿರುತ್ತಿದ್ದರು. ಆದರೆ ಅವನಿಗೂ ಸ್ಟ್ಯಾಂಟನ್ನನಿಗೂ ಮಾತ್ರ ಸೌಹಾರ್ದವಿರಲಿಲ್ಲ. ಪ್ರೆಸಿಡೆಂಟನು ಕೆಲಸದಲ್ಲಿ ಅವನ ಕೈಯನ್ನು ತಡೆಯದೆ ಸಂಪೂರ್ಣವಾದ ಸ್ವಾತಂತ್ರ್ಯವನ್ನು ಕೊಟ್ಟರೂ ಪ್ರತಿಯಾಗಿ ಆ ಮಂತ್ರಿಯು ಅವನನ್ನು ದ್ವೇಷಿಸುತ್ತಿದ್ದನು. ಅಲ್ಪ ವಿಷಯಗಳಲ್ಲಿ ಎದುರುಬೀಳುತ್ತ ಪ್ರೆಸಿಡೆಂಟನನ್ನು ಎಲ್ಲರೆದುರಿಗೂ ಹೀಯಾಳಿಸುತ್ತಿದ್ದನು. ಆದರೂ ಲಿಂಕನ್ನನು ಅವನ ಗೊಡವೆಗೆ ಹೋಗುತ್ತಿರಲಿಲ್ಲ. ''ನಾನು ಶುದ್ಧ ದಡ್ಡನೆಂದು ಸ್ಟ್ಯಾಂಟನ್ನನು ನಿನ್ನೊಡನೆ ಹೇಳಿದನೇನು? ನಾನು ದಡ್ಡನೇ ಇರಬೇಕೆಂದು ತೋರುತ್ತದೆ. ಏಕೆಂದರೆ, ಅವನು ಹೇಳುವುದು ಪ್ರಾಯಶಃ ಯಾವಾಗಲೂ ಯುಕ್ತವಾದುದು. ಅವನು ಬಾಯಲ್ಲೊಂದನ್ನು ಆಡಿ ಮನಸ್ಸಿನೊಳಗೊಂದನ್ನು ಭಾವಿಸುವುದಿಲ್ಲ.'' ಆದರೆ, ಆಗಾಗ, ತನ್ನ ಮಾತು ನಡೆಯಬೇಕಾಗಿದ್ದ ಪಕ್ಷದಲ್ಲಿ ಸ್ಟ್ಯಾಂಟನ್ನನ

ಬಾಯನ್ನು ಮುಚ್ಚಿಸಿಬಿಡುತ್ತಿದ್ದನು. ಸ್ಟಾಂಟನ್ನನು ಕೆಲವು ವೇಳೆ ತಪ್ಪುಮಾಡುತ್ತಿದ್ದನು. ಕೆಲವು ವೇಳೆ ಅವನ ಮಾರ್ಗವೇ ಸರಿಯಾಗುತ್ತಿದ್ದಿತು. ಆದರೂ ಲಿಂಕನ್ನನು ಅವನನ್ನು ನಿರಾಕರಿಸದೆ ಸಹಾಯಮಾಡುತ್ತ ಬೆಂಬಲವಾಗುತ್ತಿದ್ದನು.

ಚೇಸನ ವಿಷಯದಲ್ಲಿ ಹೀಗಾಗಲಿಲ್ಲ. ಅವನು ಸ್ವಭಾವದಲ್ಲಿ ಒಳ್ಳೆಯವನು. ಆದರೆ ಈಚೀಚೆಗೆ ತನ್ನ ಒಳ್ಳೆಯತನವನ್ನು ತಾನು ಪ್ರೀತಿಸತೊಡಗಿ ಕೆಟ್ಟುಹೋದನು. ಲಿಂಕನ್ನನಿಗೆ ಅವನಲ್ಲಿ ವಿಶೇಷವಾದ ನಂಬಿಕೆಯೂ ಅಭಿಮಾನವೂ ಇದ್ದಿತು. ಪ್ರತಿಯಾಗಿ ಚೇಸನು ಅವನನ್ನು ದ್ವೇಷಿಸಿದನು. ಮನುಷ್ಯನಲ್ಲಿರುವ ದೊಡ್ಡ ಗುಣಗಳನ್ನು ಮರೆತು ಹ್ರಸ್ವತೆಗಳನ್ನು ಮಾತ್ರ ಮುಖ್ಯವೆಂದೆಣಿಸಿ ತಪ್ಪುಗಳನ್ನು ಹುಡುಕುವ ಅಲ್ಪ ಜನರಲ್ಲಿ ಚೇಸನೊಬ್ಬನು. ಅವನ ನಿರ್ವಾಹಸಾಮರ್ಥ್ಯವನ್ನು ನೋಡಿ ಕೆಲವರು ಪರಿವಾರದೇವತೆಗಳಾದರು. ಅವನಿಗೆ 1864 ರಲ್ಲಿ ನಡೆಯುವ ಚುನಾವಣೆಯಲ್ಲಿ ತಾನು ಪ್ರೆಸಿಡೆಂಟನಾಗಬೇಕೆಂಬ ಆಸೆ ಹುಟ್ಟಿತು. ಅದು ಸಂಭವವೇ ಆದುದು. ಈ ನಡುವೆ, ತನಗೆ ಇಷ್ಟಬಂದವರನ್ನು ಕೆಲಸದಲ್ಲಿ ಗೊತ್ತುಮಾಡಲು ಲಿಂಕನ್ನನು ಅವಕಾಶವನ್ನು ಕೊಡದಿರಲಾಗಿ ಚೇಸನು ಪ್ರೆಸಿಡೆಂಟನಲ್ಲಿ ಪಕ್ಷಪಾತವೂ ಭೇದಬುದ್ಧಿಯೂ ಹೆಚ್ಚಾಗಿರುವುವೆಂದು ದೂರಿದನು. ಲಿಂಕನ್ನನು ಅದನ್ನು ಲಕ್ಷ್ಯಕ್ಕೆ ತಂದುಕೊಳ್ಳಲಿಲ್ಲ. ಒಂದಾವೃತ್ತಿ, ಪ್ರೆಸಿಡೆಂಟನಲ್ಲಿ ತನ್ನ ಮಾತು ನಡೆಯದಿರಲಾಗಿ ಚೇಸನು ರಾಜೀನಾಮೆಯನ್ನು ಬರೆದು ಕಳುಹಿಸಿದನು. ಆಮೇಲೆ ಲಿಂಕನ್ನನು ಬಹಳ ಹೇಳಲಾಗಿ ಅದನ್ನು ವಾಪಸು ತೆಗೆದುಕೊಂಡರೂ ಅವನು ಮತ್ತೆ ರಾಜೀನಾಮೆಯನ್ನು ಕಳುಹಿಸಿದನು. ಅವನು ಹೊರಟುಹೋದರೆ ಆಯವ್ಯಯದ ಇಲಾಖೆಯು ಅನಾಯಕವಾಗುವುದೆಂದು ಎಲ್ಲರೂ ಹೇಳಿದರು. ಪ್ರೆಸಿಡೆಂಟನು ಹೀಗೆಂದನು ; '' ಸರ್ಕಾರದ ಆಡಳಿತದಲ್ಲಿ ತಾನಿಲ್ಲದಿದ್ದರೆ ನಿರ್ವಾಹವಿಲ್ಲವೆಂದು ಚೇಸನು ತಿಳಿದಿರಬಹುದು ; ಅವನ ಹಿತೈಷಿಗಳೂ ಹಾಗೆಯೇ ತಿಳಿದಿರಬಹುದು. ಪ್ರೆಸಿಡೆಂಟನಾಗಲು ಅವನು ಯೋಚಿಸಿದ್ದಾನೆ. ಅದು ಸಾಧ್ಯವಾಗುವುದರಲ್ಲಿ ಯಾವ ಸಂಶಯವೂ ಇಲ್ಲವೆಂದು ಅವನು ತಿಳಿದಿರಬಹುದು. ಆದರೆ ಪ್ರಜೆಗಳೇಕೆ ಏಕಕಂಠದಿಂದ ಎದ್ದು ಅವನು ಪ್ರೆಸಿಡೆಂಟನಾಗಬೇಕೆಂದು ಹೇಳುವುದಿಲ್ಲವೋ ತಿಳಿಯದು. ಅವನು ಅರ್ಥಶಾಸ್ತ್ರದಲ್ಲಿ ಗಾಢವಾದ ಅರಿವುಳ್ಳವನು. ದೇಶವಾತ್ಸಲ್ಯವು ವಿಶೇಷವಾಗಿರುವುದು. ...... ಈಚೆಗೆ ಕೋಟಲೆ ಮಾಡತೊಡಗಿದ್ದಾನೆ. ಯಾರಿಗೂ ಸುಖವಿಲ್ಲ. ತಾನೂ ತೊಂದರೆಯನ್ನು ತಂದುಕೊಂಡು ಇತರರಿಗೂ ತೊಂದರೆಯನ್ನುಂಟುಮಾಡಿದ ಹೊರತು ಅವನು ಸಂತೋಷವಾಗಿರುವುದಿಲ್ಲ. ನನಗೆ ಕೋಟಲೆಯನ್ನು ಕೊಡಬೇಕೆಂತಲೋ ಅಥವಾ ನಾನು ಅವನ ಬೆನ್ನು ತಟ್ಟಿ ದಯೆಯಿಟ್ಟು ಇಲ್ಲಿಯೇ ಇರಬೇಕೆಂದು ಪ್ರಾರ್ಥಿಸಬೇಕೆಂತಲೋ ಅವನು ನಿಶ್ಚಯಿಸಿರಬಹುದು. ಹಾಗೆ ಮಾಡುವುದು ಸರಿಯೆಂದು ನನಗೆ ತೋರುವುದಿಲ್ಲ. ನಾನು ಮಾಡುವುದೂ ಇಲ್ಲ. ಅವನು ಕೊಡುತ್ತಿರುವ ರಾಜೀನಾಮೆಯನ್ನು ಅಂಗೀಕರಿಸುವೆನು.'' ಅವನು ಹಾಗೆಯೇ ಅಂಗೀಕರಿಸಿದನು.

ಚೇಸನು ಹೊರಟುಹೋಗಲಾಗಿ ಲಿಂಕನ್ನನಲ್ಲಿ ಪ್ರಜೆಗಳಿಗೆ ಅಸಮಾಧಾನವುಂಟಾಯಿತು. ಚೇಸನಿಗೆ ಬದಲಾಗಿ ಶಕ್ತನಾದ ಮನುಷ್ಯನೇ ದೊರೆತನು. ಅಂದಿನಿಂದ ಚೇಸನು ಲಿಂಕನ್ನನಿಗೆ ಶತ್ರುವಾಗಿ ನಿಂತು ವಿರುದ್ಧಾಚರಣೆಯನ್ನೇ ಹುಡುಕುತ್ತಿದ್ದನು. ಅವನಿಗೆ ಶಾಸ್ತಿಯಾಗಲು ಇನ್ನೂ ಕಾಲವು ಬಂದಿರಲಿಲ್ಲ.

ಪ್ರೆಸಿಡೆಂಟನನ್ನು ಚುನಾಯಿಸುವ ಕೆಲಸವು ವರ್ಷಾರಂಭದಿಂದಲೂ ಜನಗಳ ಮನಸ್ಸಿನಲ್ಲಿ ಜಾಗರಿತವಾಗಿದ್ದಿತು. ಯುದ್ಧವು ಮನಸೊಪ್ಪಿಗೆಯಿಂದ ನಡೆಯುತ್ತಿದ್ದ ಕಾಲದಲ್ಲಿ, ರಿಪಬ್ಲಿಕ್ ಪಂಗಡದವರಲ್ಲಿ ಯಾರು ಪ್ರೆಸಿಡೆಂಟರಾಗಲರ್ಹರಾದವರೆಂದು ಯೋಚನೆಯಿದ್ದಿತು. ಸಾಮಾನ್ಯವಾದ ಗುಣವೂ ನಿರ್ವಾಹಶಕ್ತಿಯೂ ಇರುವ ಮನುಷ್ಯನಾದರೆ ಸಾಲದು; ಅಂಥವನು ಎಲ್ಲಾ ಕಡೆಯಲ್ಲಿಯೂ ದೃಷ್ಟಿಯಿಟ್ಟು ಆಡಳಿತವನ್ನು ನಡೆಯಿಸಲಾರನು. ಆದರೆ 1832 ರಿಂದ ಈಚೆಗೆ ಒಂದಾವೃತ್ತಿ ಪ್ರೆಸಿಡೆಂಟನಾಗಿದ್ದವನನ್ನು ಮತ್ತೆ ನೇಮಿಸುವ ಪದ್ಧತಿಯು ತಪ್ಪಿಹೋಗಿದ್ದಿತು. ಪ್ರಕೃತದಲ್ಲಿ ಲಿಂಕನ್ನನನ್ನು ಮತ್ತೆ ಚುನಾಯಿಸಬಹುದೆಂದರೆ, ಅವನಿಗೂ ಅವನ ಪಂಗಡದಲ್ಲಿ ಅನೇಕರಿಗೂ ಐಕಮತ್ಯವಿರಲಿಲ್ಲ. ಪ್ರಜೆಗಳಲ್ಲಿ ಮುಖಂಡರಾದವರು ಬಹಳವಾಗಿ ಚಿಂತಿಸುತ್ತಿದ್ದರು. ಉತ್ತರದಲ್ಲಿ ಒಗ್ಗಟ್ಟು ಸಡಿಲವಾಗುತ್ತಿದ್ದಿತು. ಡೆಮೊಕ್ರೆಟರು ಇದೇ ಸಮಯವೆಂದರಿತು ಅಧಿಕಾರವನ್ನು ಪಡೆಯುವುದಕ್ಕಾಗಿ ಸರ್ವಸಾಹಸವನ್ನೂ ಮಾಡುತ್ತಿದ್ದರು. ಲಿಂಕನ್ನನೇ ಶ್ರೇಷ್ಠನಾದವನೆಂದು ತೋರಿತು. ಸಾಮಾನ್ಯಪ್ರಜೆಗಳೂ ನಿಸ್ಪೃಹತೆಯಿಂದ ಕೆಲಸಮಾಡುತ್ತಿರುವ ಆತನೇ ತಮಗೆ ಸಾಕೆಂದು ಹೇಳುತ್ತಿದ್ದರು. ಲಿಂಕನ್ನನ ಹಾಗೆ ಇನ್ನು ಕೆಲವರು ಜನರ ದೃಷ್ಟಿಯನ್ನಾಕರ್ಷಿಸಿದರು. ಚೇಸನೂ ಫ್ರೇಮಂಟನೂ ಜನರಲ್ ಬಟ್ಲರನೂ ಪ್ರೆಸಿಡೆಂಟನ ಅಧಿಕಾರವನ್ನು ಬಯಸಿದರು. ಗ್ರಾಂಟನನ್ನು ನೇಮಿಸಬೇಕೆಂದು ಕೆಲವು ಪ್ರಜೆಗಳ ಮನಸ್ಸಿನಲ್ಲಿದ್ದಿತು. ಆದರೆ ಯಾವುದು ಸಾಗಿದರೂ ಆ ಯೋಚನೆಯು ಸಾಗುತ್ತಿರಲಿಲ್ಲ. ಕೈಗೊಂಡಿರುವ ಕೆಲಸದಿಂದ ಗ್ರಾಂಟನನ್ನು ತಪ್ಪಿಸಿ ಪ್ರೆಸಿಡೆಂಟನ ಪದವಿಗೆ ಏರಿಸಲಾಗುತ್ತಿರಲಿಲ್ಲ.

ಅಂತೂ ಯಾರು ಯಾರು ಅರ್ಹರೆಂಬುದನ್ನು ಎಲ್ಲರೂ ಲೆಕ್ಕಹಾಕುತ್ತಿದ್ದರು. ಅವರಿಗೆ ಲಿಂಕನ್ನನ ಅರ್ಹತೆಯು ಗೊತ್ತಿಗೆಗೆ ಬರಲಿಲ್ಲ. ಮೇ ತಿಂಗಳಲ್ಲಿ ಕೆಲವರು ಕೂಲಂಕಷರು ಸಭೆಸೇರಿ ತಮ್ಮ ಪರವಾಗಿ ಫ್ರೇಮಂಟನು ಪ್ರೆಸಿಡೆಂಟನಾಗಲು ಅರ್ಹನಾಗಿರುವನೆಂದು ಗೊತ್ತುಮಾಡಿದರು. ಆ ಪ್ರಯತ್ನದಲ್ಲಿ ಅವರಿಗೆ ಜಯವಾಗುವುದೆಂಬ ನಂಬಿಕೆಯಿರಲಿಲ್ಲ. ಆದರೆ ಪಂಗಡಗಳುಂಟಾಗುವುದರ ದೆಸೆಯಿಂದ ರಿಪಬ್ಲಿಕನರ ಚೀಟಿಗಳು ಕಡಿಮೆ ಬಿದ್ದು ದಿನದಿನಕ್ಕೆ ಪ್ರಬಲರಾಗುತ್ತಿದ್ದ ಡೆಮೊಕ್ರೆಟರಿಗೆ ಅನುಕೂಲವಾಗುತ್ತಿದ್ದಿತು. ಮುಂದೆ ರಿಪಬ್ಲಿಕನರು ಸ್ವಲ್ಪಮಟ್ಟಿಗೆ ಒಂದಾಗಿ ನಿಂತರು. ಬ್ಲೇರನನ್ನು ತೆಗೆದುಹಾಕಿದುದು ಅವರಿಗೆ ಸ್ವಲ್ಪ ಸಂತೋಷವನ್ನುಂಟುಮಾಡಿತು; ಫ್ರೇಮಂಟನು ತನಗೆ ಪ್ರೆಸಿಡೆಂಟನಾಗುವ ಅಪೇಕ್ಷೆಯಿಲ್ಲವೆಂದು ತಿರಸ್ಕರಿಸಿಬಿಟ್ಟನು. ಜೂನ್ ತಿಂಗಳಲ್ಲಿ ರಿಪಬ್ಲಿಕನರು ಬಾಲ್ಟಿಮೋರ್‌ನಲ್ಲಿ ನಡೆಯುತ್ತಿದ್ದ ಸಮ್ಮೇಳನಕ್ಕೆ ತಮ್ಮ ಕಡೆಯಿಂದ ಪ್ರತಿನಿಧಿಗಳನ್ನು ಕಳುಹಿಸಿದರು. ಭೇದ

ಭಾವವು ಹೆಚ್ಚಾಗಿರದೆ ಸಭೆಯಲ್ಲಿ ಕೆಲಸವು ಜರುಗುವಂತೆ ತೋರಿತು. ಗ್ರಾಂಟನು ಲೀಯ ಮೇಲೆ ದಂಡೆತ್ತಿ ಹೊರಟಿದ್ದನು. ಪ್ರಜೆಗಳು ಹರ್ಷಗೊಂಡಿದ್ದರು. ಗ್ರಾಂಟನ ದಂಡಯಾತ್ರೆಯಲ್ಲಿ ಹೆಚ್ಚಿನ ಪ್ರಯೋಜನವು ದೊರೆಯದಿದ್ದರೂ ಅವರಿಗೆ ಕೊರತೆ ಯುಂಟಾಗಲಿಲ್ಲ. ಸಂಮೇಳನದಲ್ಲಿ ಒಂದು ಸಂಸ್ಥಾನದವರು ಗ್ರಾಂಟನನ್ನು ಆರಿಸಿ ದರು. ಆದರೆ ಇತರರು ತತ್ಕ್ಷಣವೇ ಲಿಂಕನ್ನನನ್ನು ಚುನಾಯಿಸಿದರು. ಸಭಿಕರು ದಾಸ್ಯದ ಸಂಬಂಧದಲ್ಲಿ ಲಿಂಕನ್ನನ ಅಭಿಮತವನ್ನೇ ಒಪ್ಪಿ ಅದನ್ನು ನೆರವೇರಿಸಲು ಬದ್ಧರಾದರು. ಲಿಂಕನ್ನನು ಸಂಮೇಳನದ ನಿರ್ಣಯವನ್ನು ಕುರಿತು ಪ್ರತ್ಯುತ್ತರ ವನ್ನು ಕಳುಹಿಸುವಾಗ, ನದಿಯನ್ನು ದಾಟುತ್ತಿರುವಾಗ ನಡುಹೊಳೆಯಲ್ಲಿ ಕುದುರೆ ಯನ್ನು ಬದಲಾಯಿಸಿಕೊಳ್ಳುವುದು ಉಚಿತವಲ್ಲವೆಂದು ಒಬ್ಬ ರೈತನು ಹೇಳಿದುದು ತನಗೆ ಆ ಸಮಯದಲ್ಲಿ ನೆನಪಿಗೆ ಬಂದಿತೆಂದು ಬರೆದನು.

ಡೆಮೊಕ್ರೆಟರು ತಮ್ಮದೂ ಒಂದು ಸಂಮೇಳನವನ್ನು ನಡೆಯಿಸಲು ನಿಶ್ಚ ಯಿಸಿ ಚಿಕಾಗೊವಿನಲ್ಲಿ ಆಗಸ್ಟ್ ತಿಂಗಳಲ್ಲಿ ನಡೆಯಬೇಕೆಂದು ಗೊತ್ತುಮಾಡಿದರು. ಅವರಿಗೆ ಸಮಯವು ಉತ್ಕೃಷ್ಟವಾಗಿದ್ದಿತು. ಯುದ್ಧದಲ್ಲಿ ಅನೇಕ ಪ್ರಯತ್ನಗಳಲ್ಲಿ ಉತ್ತರವು ವಿಫಲಹೊಂದಲಾಗಿ ಜನರಿಗೆ ಕಳವಳವು ಬಹಳವಾಗಿದ್ದಿತು. ಅಲ್ಲಲ್ಲಿ ಜಯವು ಲಭಿಸಿದ್ದರೂ ಅವರಿಗೆ ಹರ್ಷವಿರಲಿಲ್ಲ. ಡೆಮೊಕ್ರೆಟರು ಯಾರನ್ನು ಚುನಾ ಯಿಸುವರೆಂಬುದೂ ಅವರ ಮತವೇನೆಂಬುದೂ ರಿಪಬ್ಲಿಕನರಿಗೆ ಮೊದಲೇ ಗೊತ್ತಿ ದ್ದಿತು ಆದಕಾರಣ ಚುನಾವಣೆಯಲ್ಲಿ ತಮಗೆ ಜಯವಾಗಲಾರದೆಂದು ಅವರು ನಿರಾಶರಾದರು. ಚಿಕಾಗೊ ಸಂಮೇಳನದಲ್ಲಿ ಡೆಮೊಕ್ರೆಟರನೇಕರು ಯುದ್ಧವು ಬೇಡ ವೆಂದು ಮಾತನಾಡಿದರು. ಕೊನೆಯವರೆಗೂ ಹೊಡೆದಾಡಿ ಪೂರೈಸಬೇಕೆಂದು ಕೆಲವರು ಹೇಳಿದರು. ಸಭೆಯ ಅಭಿಪ್ರಾಯವು ಹೀಗೆ ಎರಡು ವಿಧವಾಗಲಾಗಿ, ಎರಡು ಕಡೆಯವರೂ ತಮ್ಮ ಅಭಿಪ್ರಾಯಗಳನ್ನು ವಿಸ್ತರಿಸಿ ಮಾತನಾಡಬೇಕೆಂದು ಗೊತ್ತಾಯಿತು. "ನಾಲ್ಕು ವರ್ಷಗಳಿಂದಲೂ ಯುದ್ಧವು ನಡೆಯಿತು. ಇದುವರೆಗೂ ದಕ್ಷಿಣವನ್ನು ಸಂಯೋಗದಲ್ಲಿ ಸೇರಿಸಿಕೊಳ್ಳಲಾಗಲಿಲ್ಲ. ಆದ್ದರಿಂದ ಯುದ್ಧವನ್ನು ನಿಲ್ಲಿಸಿ ಬೇರೊಂದು ಉಪಾಯದಿಂದ ದಕ್ಷಿಣವನ್ನು ಒಡಂಬಡಿಸುವುದು ಅವಶ್ಯಕ ವಾದುದು. ಶಾಂತನಾದ ಮಾರ್ಗವನ್ನೇ ಅವಲಂಬಿಸಬೇಕು" ಎಂದು ಮೊದಲನೆ ಯವರು ಹೇಳಿದರು. ಸಾಮೋಪಾಯದಿಂದ ದಕ್ಷಿಣವನ್ನು ದಾರಿಗೆ ತರುವುದು ಅಸಾಧ್ಯವಾಯಿತೆಂಬುದು ಅವರ ಸ್ಮರಣೆಗೆ ಬರಲಿಲ್ಲ. ಡೆಮೊಕ್ರೆಟರು ಮೆಕ್‌ಕ್ಲೆಲ್ಲ ನ್ನನನ್ನು ಆರಿಸಿಕೊಂಡರು. ಆತನು ಒಳ್ಳೆಯವನೂ ಅಲ್ಲ, ಕೆಟ್ಟವನೂ ಅಲ್ಲ— ಯಾವುದನ್ನೂ ಮಾಡದ ಸೋಮಾರಿ. ಯುದ್ಧದಲ್ಲಿ ಅವನಿಗೆ ಅಪೇಕ್ಷೆಯಿರಲಿಲ್ಲವಾದ ಕಾರಣ ಜನರು ಅವನ ಚುನಾವಣೆಯನ್ನು ಅಭಿನಂದಿಸುವರೆಂದು ಡೆಮೊಕ್ರೆಟರು ನಿರೀಕ್ಷಿಸಿದರು. ಆದರೆ ಅಷ್ಟರಲ್ಲಿ ಯುದ್ಧದ ಸ್ಥಿತಿಯು ಬದಲಾಯಿಸಿ ಡೆಮೊಕ್ರೆಟರ ಮತ್ತು ಮೆಕ್‌ಕ್ಲೆಲ್ಲನ್ನನ ಯೋಚನೆಗಳು ನಿರರ್ಥಕವಾಗುವಂತೆ ತೋರಿತು. ಇಷ್ಟಾ ದರೂ ರಿಪಬ್ಲಿಕ್ ಪಂಗಡದವರ ಕಳವಳವು ತಪ್ಪಿರಲಿಲ್ಲ.

ಮೆಕ್‌ಕ್ಲೆಲ್ಲನ್ನನೇ ಚುನಾಯಿಸಲ್ಪಟ್ಟು, ಮುಂದಿನ ಮಾರ್ಚಿಯಲ್ಲಿ ಅವನು

ಅಧಿಕಾರವನ್ನು ವಹಿಸಿದ್ದರೂ ಯುದ್ಧವು ಮುಗಿಯದೆ ಉಳಿದಿದ್ದರೂ ಆತನ ಕಾಲದಲ್ಲಿ ದಾಸ್ಯವು ಪ್ರೋತ್ಸಾಹಹೊಂದಿ ಪುನರುಜ್ಜೀವಿತವಾಗುತ್ತಿರಲಿಲ್ಲ. ಅಥವಾ ಉತ್ತರದ ಸೈನ್ಯದಲ್ಲಿ ದುಡಿಯುತ್ತಿದ್ದ 1,50,000 ಮಂದಿ ನೀಗ್ರೋಗಳನ್ನು ಜೀವನೋಪಾಯವನ್ನು ಕಲ್ಪಿಸಿ ಕಾಪಾಡದೆ ಒಡಿಸಿಬಿಡುತ್ತಿರಲಿಲ್ಲ. ಆದರೂ ಲಿಂಕನ್ನನು ಡೆಮೊಕ್ರೆಟರ ತತ್ವಗಳನ್ನು ನೋಡಿ ಹೀಗೆಂದು ಹೆದರಿದನು. ದಾಸ್ಯದ ವಿಷಯದಲ್ಲಿ ಲಿಂಕನ್ನನು ಮಾಡಿದ ಕೆಲವು ಏರ್ಪಾಡುಗಳು ಮೆಕ್‌ಕ್ಲೆಲ್ಲನ್ನನಿಗೆ ಸಮರ್ಪಕವಾಗಿರಲಿಲ್ಲ. ದಕ್ಷಿಣದೊಡನೆ ಆತನು ಸಂಧಿಯ ಪ್ರಸ್ತಾಪವನ್ನೂ ಮಾಡುತ್ತಿದ್ದನೆಂದೂ ತೋರುತ್ತದೆ. ದಕ್ಷಿಣವನ್ನು ತೃಪ್ತಿಪಡಿಸಲೆಳಸಿದರೆ ಇದುವರೆಗೆ ಮಾಡಿದ ಪ್ರಯತ್ನಗಳು ವ್ಯರ್ಥವಾಗುತ್ತಿದ್ದುವು. ಮಾಡಿದ ಏರ್ಪಾಡುಗಳು ನಿಷ್ಪ್ರಯೋಜಕವಾಗುತ್ತಿದ್ದುವು. ಲಿಂಕನ್ನನು ಫಿಲೆಡೆಲ್ಫಿಯದಲ್ಲಿ ಹೀಗೆಂದನು ; ‘‘ ನಾವು ಯುದ್ಧಮಾಡಿದೆವು. ಆದರೆ ಯುದ್ಧವನ್ನು ಪ್ರಾರಂಭಿಸಲಿಲ್ಲ. ಒಂದು ಉದ್ದೇಶವನ್ನು ಮನಸ್ಸಿನೊಳಗಿಟ್ಟುಕೊಂಡು ಶಸ್ತ್ರವನ್ನು ಗ್ರಹಿಸಿದೆವು. ಆ ಉದ್ದೇಶವು ಸಫಲವಾದಾಗ ಯುದ್ಧವು ಮುಗಿಯುವುದು. ಸಫಲವಾದ ಹೊರತು ನಿಲ್ಲಕೂಡದೆಂದು ನಾನು ಭಗವಂತನನ್ನು ಪ್ರಾರ್ಥಿಸುವೆನು.’’ ಮೆಕ್‌ಕ್ಲೆಲ್ಲನ್ನನ ಮತ್ತು ಅವನ ಪಂಗಡದವರ ಅಭಿಪ್ರಾಯವು ಯಾವುದಾದರೂ ಆಗಿರಬಹುದು, ಇದಲ್ಲ. ಮೆಕ್‌ಕ್ಲೆಲ್ಲನ್ನನು ಚುನಾವಣೆಯ ಕಾಲದಲ್ಲಿ ಜಯಶೀಲನಾಗಬಹುದು. ಆದರೆ ಯುದ್ಧದಲ್ಲಾಗಲೀ ಶಾಶ್ವತವಾದ ಶಾಂತಿಯನ್ನು ನೆಲೆಗೊಳಿಸುವುದರಲ್ಲಾಗಲೀ ಜಯಶೀಲನಾಗುತ್ತಿರಲಿಲ್ಲ.

ಎರಡನೆಯಾವೃತ್ತಿ ಚುನಾವಣೆಯಾದಮೇಲೆ ಲಿಂಕನ್ನನು, ಈ ನಾಲ್ಕು ವರುಷಗಳು ಮುಗಿದಕೂಡಲೇ ಪ್ರತ್ಯೇಕವಾಗಿದ್ದುಕೊಂಡು ರಾಜ್ಯದಲ್ಲಿ ಶಾಂತಿಯು ಹರಡಿರುವುದನ್ನು ನೋಡಿ ನೋಡಿ ನಲಿಯುತ್ತ ಸುಖಸಂತೋಷಗಳಿಂದ ಜೀವಿಸಬಹುದೆಂದು ನಿರೀಕ್ಷಿಸಿದನು. ಆಸಮಯದಲ್ಲಿ ಜೀವಿಸುವುದು ಒಂದು ಭಾಗ್ಯವೆಂದು ಭಾವಿಸಿದನು. ದೇಶದಲ್ಲಿ ಲಿಂಕನ್ನನಷ್ಟು ಅನುಭವವುಳ್ಳವರಿರಲಿಲ್ಲ—ಪ್ರೆಸಿಡೆಂಟನಾಗಲು ಅವನಿಗಿಂತ ಶ್ರೇಷ್ಠರಾದವರಿರಲಿಲ್ಲ. ಆದರೂ ಅವನು ನಿರ್ಲಿಪ್ತನಾಗಿದ್ದನು. ತನಗಾಗಿ ಯಾವುದನ್ನೂ ಅಪೇಕ್ಷಿಸಲಿಲ್ಲ. ಆ ನಿಸ್ಪೃಹತೆಯು ಇತರರಿಗೆ ಬರದು. 1864 ನೆಯ ವರುಷದಲ್ಲಿ ಯುದ್ಧವು ಪರ್ಯವಸಾನ ಹೊಂದುತ್ತ ಬಂದಿತು. ಹೊಸದಾಗಿ ಪ್ರೆಸಿಡೆಂಟನನ್ನು ಚುನಾಯಿಸುವುದು ಅದಕ್ಕಿಂತ ಹೆಚ್ಚಿನ ಕೆಲಸವಾಯಿತು. ರಿಪಬ್ಲಿಕನರಲ್ಲಿ ಅವನೇ ಆರಿಸಲ್ಪಡುವನೆಂಬ ವದಂತಿಯಿದ್ದಿತು. ಅವನಹಾಗೆ ಚೇಸನೂ ಗ್ರಾಂಟನೂ ಇದ್ದರು. ಚೇಸನ ವಿಷಯದಲ್ಲಿ ಲಿಂಕನ್ನನು ಏನನ್ನೂ ಹೇಳಲಿಲ್ಲ. ಗ್ರಾಂಟನನ್ನು ಚುನಾಯಿಸಬೇಕೆಂಬುದನ್ನು ಕೇಳಿ ‘‘ ಅವನು ರಿಚ್‌ಮಂಡ್ ನಗರವನ್ನು ಸ್ವಾಧೀನಮಾಡಿಕೊಳ್ಳುವದಾದರೆ ಪ್ರೆಸಿಡೆಂಟನ ಪದವಿಯನ್ನು ಪಡೆಯಲಿ ’’ ಎಂದನು. ಡೆಮೊಕ್ರೆಟರ ಕಡೆಯವನು ಪ್ರೆಸಿಡೆಂಟನಾದರೆ ಸಂಯೋಗಕ್ಕೆ ಕಡೆಗಾಲವು ಯಾವ ವಿಧದಲ್ಲಾದರೂ ಬರುವುದೆಂದು ಅವನಿಗೆ ದೃಢವಾದ ನಂಬಿಕೆಯಿದ್ದಿತು. ಗ್ರಾಂಟನು ತನ್ನ ಪಾಲಿನ ಕೆಲಸವನ್ನು ಮಾಡಿ ಮುಗಿಸಿದರೆ ಪ್ರೆಸಿಡೆಂಟನ ಸ್ಥಾನಕ್ಕೆ ಬರಲು ಲಿಂಕನ್ನನ ಆಕ್ಷೇಪಣೆಯು ಸ್ವಲ್ಪವೂ

ಇರಲಿಲ್ಲ. ಆದರೆ ಆ ಕೆಲಸವು ನೊವೆಂಬರ್ ತಿಂಗಳೊಳಗೆ ಮುಗಿಯುವಂತೆ ತೋರ ಲಿಲ್ಲ. ಲಿಂಕನ್ನನು ಕಳವಳಗೊಂಡನು. ಯುದ್ಧವು ಮುಗಿಯದಿದ್ದಾಗಲೂ ಸರಿ ಯಾಗಿ ನಡೆಯದಿರುವಾಗಲೂ ಗ್ರಾಂಟನಾಗಲೀ ಮೆಕ್‌ಕ್ಲೆಲ್ಲನ್ನನಾಗಲೀ ಪ್ರೆಸಿಡೆಂಟ ನಾದ ಪಕ್ಷದಲ್ಲಿ ಕೆಲಸವೆಲ್ಲವೂ ಕೆಟ್ಟು ರಾಜ್ಯವು ಹೀನಸ್ಥಿತಿಗೆ ಬರುತ್ತಿದ್ದಿತು. ಗ್ರಾಂಟನ ಶ್ರೇಯಸ್ಸನ್ನು ಕೋರುವುದಕ್ಕಾಗಿ ಜೂನ್ ತಿಂಗಳಲ್ಲಿ ಸಭೆಯೊಂದು ನಡೆಯಿತು. ಅಲ್ಲಿಗೆ ಬರಬೇಕೆಂದು ಸಭಿಕರು ಲಿಂಕನ್ನನಿಗೆ ಬರೆದರು. ಆತನು ಉತ್ತರವನ್ನು ಬರೆದನು. '' ನಾನು ಬರುವುದಕ್ಕೆ ಸಾಧ್ಯವಿಲ್ಲ ; ಆದರೂ ಜನರಲ್ ಗ್ರಾಂಟನ ಮತ್ತು ಆತನ ಸೈನ್ಯದ ಹಿತಕ್ಕಾಗಿ ನಡೆಯುವ ಪ್ರಯತ್ನವೆಲ್ಲವನ್ನೂ ನಾನು ಅನುಮೋದಿಸತಕ್ಕವನು. ಆತನಿಗೂ ಆತನ ಸೈನ್ಯಿಕರಿಗೂ ಈಗ ಕಷ್ಟದ ಕಾಲ. ಅದಕಾರಣ, ನೀವು ಸಭೆಯಲ್ಲಿ ಆಡುವ ನಿಮ್ಮ ಮಾತುಗಳಿಂದ ಸೈನಿಕ ರನ್ನೂ ಫಿರಂಗಿಗಳನ್ನೂ ನಿರ್ಮಿಸಿ ಅವನ ಮತ್ತು ಅವನ ಸೈನಿಕರ ಸಹಾಯಕ್ಕಾಗಿ ಕಳುಹಿಸುವಿರೆಂದು ನಂಬುತ್ತೇನೆ.'' ಆಗಸ್ಟ್ ತಿಂಗಳಲ್ಲಿ ಅವನು ಗ್ರಾಂಟನ ಸ್ನೇಹಿತನೊಡನೆ ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಿದನು. ಯುದ್ಧವನ್ನೂ ದೇಶ ವನ್ನೂ ಈ ಸ್ಥಿತಿಯಲ್ಲಿ ಬಿಟ್ಟು ಗ್ರಾಂಟನು ಪ್ರೆಸಿಡೆಂಟನಾಗಲು ಒಡಂಬಡುವುದಿಲ್ಲ. ಬಲಾತ್ಕಾರದಿಂದಲೂ ಜನರ ಆಶಯವು ಕೈಗೂಡದು. ಆದರೂ ಮುಂದಿನ ಯುದ್ಧ ನಿರ್ವಾಹದ ಕ್ರಮವನ್ನು ನಿಶ್ಚಯಿಸುವುದಕ್ಕಾಗಿ ಗ್ರಾಂಟನ ಮನೋಗತವನ್ನು ತಿಳಿದುಕೊಳ್ಳುವುದು ಅಗತ್ಯವಾಗಿದ್ದಿತು. ಲಿಂಕನ್ನನು ಸ್ನೇಹಿತನನ್ನು ಗ್ರಾಂಟನ ಬಳಿಗೆ ಕಳುಹಿಸಿದನು. ಸಮಯವನ್ನು ನೋಡಿ, ಗ್ರಾಂಟನಲ್ಲಿ ಪಕ್ಷಪಾತವುಳ್ಳ ಜನ ಗಳು ಮಾಡುತ್ತಿದ್ದ ಪ್ರಯತ್ನವನ್ನು ವಿಸ್ತರಿಸಿದಮೇಲೆ ಆತನು ಪ್ರೆಸಿಡೆಂಟನಿಗೆ ಹೀಗೆ ಬರೆದನು ; ನಾವು ಸಮಾಧಾನವಾದ ಮನಸ್ಸಿನಿಂದ ಮಾತನಾಡುತ್ತಿದ್ದೆವು. ಈ ವಿಷಯವನ್ನು ತಿಳಿಸಿದೆನು. ಆಕ್ಷಣವೇ ಅವನು ರೇಗಿ, ಹೊಡೆಯುವವನ ಹಾಗೆ ಮಾತನಾಡಿದನು. ಗ್ರಾಂಟನು ಅಷ್ಟು ರೇಗುವನೆಂದು ನಾನು ತಿಳಿದಿರಲಿಲ್ಲ. ತನ್ನ ಕುರ್ಚಿಯ ಕೈಗಳನ್ನು ಮುಷ್ಟಿಯಿಂದ ಗುದ್ದಿ, '' ಅದು ಎಂದಿಗೂ ನಡೆಯದು. ಅವರು ನನ್ನನ್ನು ಬಲಾತ್ಕರಿಸಲಾರರು '' ಎಂದು ಹೇಳಿದನು. '' ನೀನು ಈ ವಿಷಯವನ್ನು ಪ್ರೆಸಿಡೆಂಟನಿಗೆ ತಿಳಿಸಿರುವೆಯಾ ? '' ಎಂದು ನಾನು ಕೇಳಿದೆನು. '' ಇಲ್ಲ ನನ್ನ ಅಭಿಪ್ರಾಯವನ್ನು ಪ್ರೆಸಿಡೆಂಟನಿಗೆ ತಿಳಿಸ ಬೇಕಾಗಿಲ್ಲವೆಂದು ಯೋಚಿಸುತ್ತೇನೆ. ನಮ್ಮ ಮನಸ್ಸಿನ ಸಂಕಲ್ಪವು ಈಡೇರ ಬೇಕಾದರೆ ಸೈನ್ಯವು ಯುದ್ಧಮಾಡಿ ಗೆಲ್ಲುವುದು ಎಷ್ಟು ಮುಖ್ಯವಾದುದೋ ಆತನೇ ಚುನಾಯಿಸಲ್ಪಡುವುದು ಅಷ್ಟು ಮುಖ್ಯವಾದುದು '' ಎಂದನು. '' ದಂಗೆಯನ್ನು ನಿಶ್ಶೇಷವಾಗಿ ಅಡಗಿಸುವವರೆಗೂ, ಆತನನ್ನು ಬೇರೆಯ ಕಡೆಗೆ ಕರೆಯುವಹಾಗಿಲ್ಲವೆಂದು ನಾನು ಮೊದಲೇ ಹೇಳಲಿಲ್ಲವೆ ? '' ಎಂದು ಲಿಂಕ ನ್ನನು ಗ್ರಾಂಟನ ಸ್ನೇಹಿತನೊಡನೆ ಹೇಳಿದನು. ಗ್ರಾಂಟನದೂ ವ್ಯವಸ್ಥೆಯಾ ಯಿತು. ಇನ್ನು ಮೆಕ್‌ಕ್ಲೆಲ್ಲನ್ನನೊಬ್ಬನು ಉಳಿದನು. ಅವನನ್ನು ಚುನಾಯಿಸು ವುದು ಪ್ರಾಯಶಃ ನಿಶ್ಚಯ ; ಆದಕಾರಣ ಅಷ್ಟರೊಳಗೆ ಯುದ್ಧವನ್ನು ಪೂರೈಸಿ

ಬಿಡುವುದು ಅಗತ್ಯವಾಗಿದ್ದಿತು. ನೊವೆಂಬರ್‌ನಲ್ಲಿ ಚುನಾವಣೆಯಾದ ಒಡನೆಯೇ ಮೆಕ್‌ಕ್ಲೆಲ್ಲನ್ನನು ಆಡಳಿತವನ್ನು ವಹಿಸಿಕೊಳ್ಳುವಂತೆ ಯಾವುದಾದರೊಂದು ಉಪಾಯದಿಂದ ಮಾಡುವುದಾಗಿ ವದಂತಿಯಿದ್ದಿತು. ಆದರೆ, ಅದನ್ನು ಕೇಳಿದ ಲಿಂಕನ್ನನು ಮುಂದಿನ ವರುಷವು ಪ್ರಾರಂಭಿಸಿ ನ್ಯಾಯವಾದ ಕಾಲವು (ಮಾರ್ಚಿ ನಾಲ್ಕನೆಯ ತಾರೀಖು) ಬರುವವರೆಗೂ ತಾನು ಕದಲುವುದಿಲ್ಲವೆಂದು ಕೃತನಿಶ್ಚಯನಾಗಿದ್ದನು. ಅಷ್ಟಾದರೂ ಒಂದು ದಿನ ಅವನ ಯೋಚನೆಯು ಬಹಳವಾಯಿತು. ಅವನು ಒಂದು ಕಾಗದದಲ್ಲಿ ತನ್ನ ಮನಸ್ಸಂಕಲ್ಪವನ್ನು ಬರೆದು ಕಾಗದವನ್ನು ಮಡಿಸಿದನು. ಬಳಿಕ ಅದನ್ನು ಮಂತ್ರಿಗಳ ಎದುರಿಗಿಟ್ಟು, ಬರೆದಿರುವುದನ್ನು ಓದದೆಯೇ ಕಾಗದದಲ್ಲಿ ಸಾಕ್ಷಿಗಾಗಿ ರುಜುಹಾಕಬೇಕೆಂದು ಎಲ್ಲರನ್ನೂ ಕೇಳಿದನು. ಅದರೊಳಗೆ ಏನು ಬರೆದಿರುವುದೆಂಬುದನ್ನು ತಿಳಿಯಲು ಯಾರೂ ಅಪೇಕ್ಷಿಸಲಿಲ್ಲ. ಎಲ್ಲರೂ ರುಜುಹಾಕಿದರು. ಲಿಂಕನ್ನನು ಕಾಗದದಮೇಲೆ ಅರಗನ್ನೂ ಮುದ್ರೆಯನ್ನೂ ಒತ್ತಿ ಅದನ್ನು ಒಂದುಕಡೆ ತೆಗೆದಿಟ್ಟನು.

ಈ ಸಮಯದಲ್ಲಿ ಜನಗಳಿಗೆ ಲಿಂಕನ್ನನಲ್ಲಿ ನಂಬಿಕೆಯೆಷ್ಟಿದ್ದಿತೆಂಬುದನ್ನು ಹೇಳುವುದು ಅಸಾಧ್ಯ. ಆದರೆ ಎಲ್ಲರೂ ಅವನನ್ನು ಆರಾಧಿಸುತ್ತಿದ್ದರೆಂದು ಹೇಳುವುದಕ್ಕಾಗುವುದಿಲ್ಲ. ಅವನಿಗೆ ವಿರುದ್ಧವಾಗಿ ಒಳಸಂಚುಗಳು ನಡೆಯುತ್ತಿದ್ದುವು. ಅವನ ಮಹತ್ವವನ್ನು ಅರಿತು ಗೌರವಿಸುತ್ತಿದ್ದವರೂ ಇಲ್ಲದಿರಲಿಲ್ಲ. ಸಾಮಾನ್ಯ ಪ್ರಜೆಗಳಿಗೆ ಅಚ್ಚುಮೆಚ್ಚಾಗಿದ್ದನು. ಸೈನಿಕರು ಅವನನ್ನು ಪ್ರೀತಿಸುತ್ತಿದ್ದರು. ಆದರೆ ಮಂತ್ರಜ್ಞರೆನ್ನಿಸಿಕೊಂಡವರಿಗೆ, ದಾಸ್ಯದ ವಿಷಯದಲ್ಲಿಯೂ ಆಡಳಿತದ ಕೆಲವು ವಿಷಯಗಳಲ್ಲಿಯೂ ಅವನು ನಡೆಯಿಸಿದ ವ್ಯವಹಾರಗಳು ಅರ್ಥವಾಗಲಿಲ್ಲ. ನಾಗರಿಕತೆಯನ್ನು ಕಂಡು ಪ್ರಪಂಚವನ್ನು ತಿಳಿದವರಿಗೆ ಅವನ '' ನಯನೀತಿಗಳನ್ನರಿಯದ ನಡತೆಯು '' ರುಚಿಸಲಿಲ್ಲ. ಕೆಲವರಿಗೆ ಅವರ ಸ್ವಾಭಿಮಾನವೂ ಅವಿದ್ಯತೆಯೂ ಲಿಂಕನ್ನನ ಗುಣಗಳು ಕಾಣದಂತೆ ಆವರಣವನ್ನೆಳೆದುವು. ಒಟ್ಟನಲ್ಲಿ ಲಿಂಕನ್ನನು ಏಕಾಕಿಯಾದವನು. ಏಕಾಕಿಯಾಗಿಯೇ ಜೀವಿಸಿ ಏಕಾಕಿಯಾಗಿಯೇ ಕೆಲಸಮಾಡಿದನು. ಇತರರ ಸದಭಿಪ್ರಾಯವನ್ನೂ ಒಳ್ಳೆಯ ಮಾತುಗಳನ್ನೂ ನಿರೀಕ್ಷಿಸುತ್ತ ಕೂರಲಿಲ್ಲ.

ಲಿಂಕನ್ನನು, ತನ್ನ ಪ್ರಾಣರಕ್ಷಣೆಯು ಮುಖ್ಯವೆಂದು ಇತರರು ಸೂಚಿಸಿದರೂ ಲಕ್ಷಿಸುತ್ತಿರಲಿಲ್ಲ. ಬೀದಿಯಲ್ಲಿ ತಿರುಗುವಾಗ ಅಂಗರಕ್ಷಕರನ್ನು ಹೆಚ್ಚಾಗಿ ಇಟ್ಟುಕೊಳ್ಳುತ್ತಿರಲಿಲ್ಲ. ಸಂಚಾರಕಾಲಗಳಲ್ಲಿ ಸಾಮಾನ್ಯವಾಗಿ ಅವನ ಕಿರಿಯ ಮಗನು ಸಂಗಡಿಗನಾಗಿರುತ್ತಿದ್ದನು. ದಾರಿಯಲ್ಲಿ ಯಾರನ್ನಾದರೂ ಕಂಡರೆ ವಿನಯದಿಂದಲೂ ಮರ್ಯಾದೆಯಿಂದಲೂ ಮಾತನಾಡಿಸುತ್ತಿದ್ದನು. ವಾಲ್ಟ್‌ವ್ಹಿಟ್‌ಮನ್ (Walt Whitman) ಎಂಬ ಕವಿಯು ಈ ಅಂಶವನ್ನು ವಿಸ್ತಾರವಾಗಿ ವರ್ಣಿಸಿದ್ದಾನೆ.

ಸೈನಿಕನು ಕರ್ತವ್ಯದಲ್ಲಿ ಅತ್ಯಂತ ಎಚ್ಚರಿಕೆಯಿಂದಿರಬೇಕು. ಸೈನಿಕನ ಧರ್ಮಗಳು ಅತ್ಯಂತ ಸೂಕ್ಷ್ಮವಾದವುಗಳು. ಉಪೇಕ್ಷೆಮಾಡಿದರೆ ಅತ್ಯಂತ

ಕಠಿನವಾದ ಶಿಕ್ಷೆಯು ಸಿದ್ಧವಾಗುವುದು. ಅಮೆರಿಕದ ಸೈನ್ಯದಲ್ಲಿ ದಂಡನ್ನು ತ್ಯಜಿಸಿ ಹೋದುದಕ್ಕಾಗಲೀ ನಿದ್ದೆಮಾಡುತ್ತಿದ್ದುದಕ್ಕಾಗಲೀ ಅಥವಾ ಪಹರೆಯವರ ಇತರ ಅಜಾಗರೂಕತೆಗಾಗಲೀ ಮರಣದಂಡನೆಯುಂಟಾಗುತ್ತಿದ್ದಿತು. ಅಂತಹ ಸಂಘಟನೆಗಳು ನಿತ್ಯವೂ ಇರುತ್ತಿದ್ದುವು. ಸಾಮಾನ್ಯವಾಗಿ, 'ಮಾರ್ಷಿಯಲ್ ಲಾ' ದ ಪ್ರಕಾರ ಹೊಸದಾಗಿ ಏರ್ಪಾಡಾಗಿದ್ದ ನ್ಯಾಯಸ್ಥಾನವು ಶಿಕ್ಷೆಯನ್ನು ವಿಧಿಸುತ್ತಿದ್ದಿತು. ಕೆಲವು ಕಾಲಗಳಲ್ಲಿ ಅಂತಹ ಸಂಘಟನೆಗಳು ವಾರಕ್ಕೊಂದಾವೃತ್ತಿ ಪ್ರೆಸಿಡೆಂಟನ ವಿಚಾರಣೆಗೆ ಬರುತ್ತಿದ್ದುವು. ಆ ವೇಳೆಯಲ್ಲಿ ಅಪರಾಧಿಯ ತಂದೆ, ತಾಯಿ, ಸ್ನೇಹಿತರು ಅಥವಾ ಇತರರು ಬಂದು ಪ್ರೆಸಿಡೆಂಟನ ಕರುಣೆಯನ್ನು ಬೇಡುತ್ತಿದ್ದರು. ಲಿಂಕನ್ನನು ಅಪರಾಧಿಯನ್ನು ಎಷ್ಟೋ ತಡವೆ ಕ್ಷಮಿಸಿ ಬುದ್ಧಿಹೇಳಿ ಕಳುಹಿಸುತ್ತಿದ್ದನು. ಹಾಗೆ ಮಾಡುವುದು ಯುಕ್ತವಲ್ಲವೆಂದು ಯಾರಾದರೂ ಹೇಳಬಂದರೆ, "ಲೇಖಣಿಯಿಂದ ಒಂದು ಮಾತನ್ನು ಬರೆದರೆ ಆ ಮನುಷ್ಯನ ಜೀವವು ಉಳಿಯುವುದು ; ಹೀಗಿರುವಲ್ಲಿ, ಅವನನ್ನು ಸಾಯಗೊಡುವುದು ಎಷ್ಟುಕಷ್ಟವೆಂಬುದು ನಿನಗೆ ತಿಳಿಯದು" ಎನ್ನುತ್ತಿದ್ದನು. ಜನರಲ್ ಬಟ್ಲರನು ಇದನ್ನು ನೋಡಿ, ನೀನು ಸೈನ್ಯದ ಬಿಗಿಯನ್ನು ಹಾಳುಮಾಡುತ್ತೀಯೆಂದು ಅವನಿಗೆ ಮೇಲಿಂದ ಮೇಲೆ ಬರೆಯುತ್ತಿದ್ದನು. ಆದರೆ ವಿವೇಚನೆಯಿಲ್ಲದೆ ಕರುಣೆಯನ್ನು ತೋರಿಸುವುದಕ್ಕೆ ಲಿಂಕನ್ನನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದುದರಿಂದ ಎಷ್ಟುಪ್ರಯಾಸವಾದರೂ, ಗುರುತರನಾದ ಕೆಲಸಗಳಿದ್ದರೂ ಲೆಕ್ಕವಿಡದೆ ನಿಜಸ್ಥಿತಿಯನ್ನು ವಿಚಾರಿಸಿ, ದಯೆತೋರಿಸಲು ಅವಕಾಶವಿದ್ದರೆ ಅಪರಾಧಿಯನ್ನು ಕ್ಷಮಿಸುತ್ತಿದ್ದನು. ಕಾಂಗ್ರೆಸ್‌ನ ಸಭಿಕನು ಯಾವನಾದರೂ ಸಮರಾತ್ರಿಯಲ್ಲಿ ಅವನು ಮಲಗಿದ್ದ ಸ್ಥಳಕ್ಕೆ ಬಂದು ಅವನನ್ನು ಎಬ್ಬಿಸಿ ಮರೆತುಹೋಗಿದ್ದ ಯಾವುದಾದರೊಂದು ಅಂಶವನ್ನು ಜ್ಞಾಪಿಸಿ ಅವನ ಅಭಿಪ್ರಾಯವನ್ನು ಅಪೇಕ್ಷಿಸಿದರೆ, "ಒಳ್ಳೆಯದು, ಅವನನ್ನು ಗುಂಡಿನ ಬಾಯಿಗೆ ಕಟ್ಟುವುದರಿಂದ ಪ್ರಯೋಜನವೇನೂ ಇರುವಂತೆ ಕಾಣುವುದಿಲ್ಲ" ವೆಂದು ಉತ್ತರವು ದೊರೆಯುತ್ತಿದ್ದಿತು. ಈ ಸಂದರ್ಭದಲ್ಲಿ ಒಂದು ಕಥೆಯನ್ನು ಹೇಳಬೇಕಾಗುವುದು. ವಿಲಿಯಂ ಸ್ಕಾಟನೆಂಬ ಹುಡುಗನು ಒಂದುದಿನ ಬಹಳ ದೂರ ಸೈನ್ಯದೊಡನೆ ನಡೆದು ಒಂದು ಸ್ಥಳಕ್ಕೆ ಬಂದನು. ಆದಿನ ರಾತ್ರಿ ಪಹರೆಯಿರುವುದು ಅವನ ಸರದಿಯಾಯಿತು. ವಿಲಿಯಂ ಸ್ಕಾಟನು, ರೋಗದಿಂದ ನರಳುತ್ತಿದ್ದೊಬ್ಬ ಜೊತೆಯ ಸೈನಿಕನ ಪರವಾಗಿಯೂ ಪಹರೆಯಿರಲು ಒಪ್ಪಿಕೊಂಡನು. ಆದರೆ, ರಾತ್ರಿಯೆಲ್ಲಾ ಎಚ್ಚರವಿರದೆ ನಿದ್ದೆಮಾಡಿಬಿಟ್ಟನು. ಅದು ಪತ್ತೆಯಾಯಿತು. ನ್ಯಾಯಸ್ಥಾನವು ಮರಣದಂಡನೆಯನ್ನು ವಿಧಿಸಿತು. ಆ ಸಮಯಕ್ಕೆ ಸರಿಯಾಗಿ ಪ್ರೆಸಿಡೆಂಟನು ಸೈನ್ಯದ ಪಾಳೆಯಕ್ಕೆ ಬಂದು ಆ ವೃತ್ತಾಂತವನ್ನು ಕೇಳಿದನು. ಒಡನೆಯೇ ಸ್ಕಾಟನಿದ್ದ ತಾವಿಗೆ ಹೋಗಿ ಅವನು ಹುಡುಗನೊಡನೆ ಬಹಳ ಹೊತ್ತು ಮಾತನಾಡಿದನು. ಹುಡುಗನು ತನ್ನ ತಂದೆತಾಯಿಗಳ ಮತ್ತು ಮನೆಯ ವೃತ್ತಾಂತವನ್ನೆಲ್ಲಾ ಹೇಳಿ ತನ್ನೊಡನೆ ತಂದಿದ್ದ ತಾಯಿಯ ತಸ್ವೀರನ್ನು ತೋರಿಸಿದನು. ಲಿಂಕನ್ನನು ಹುಡುಗನ ಹೆಗಲಮೇಲೆ ಕೈಯಿಟ್ಟು ಗದ್ಗದ ಸ್ವರದಿಂದ ಹೀಗೆ ಹೇಳಿದನು "ಹುಡುಗ, ನಿನ್ನನ್ನು

ಗುಂಡಿನಬಾಯಿಗೆ ಕಟ್ಟುವುದಿಲ್ಲ, ಎಚ್ಚರವಾಗಿರಲು ಆಗಲಿಲ್ಲವೆಂದು ಹೇಳುವೆ. ಅದನ್ನು ನಿಜವೆಂತಲೇ ನಂಬುತ್ತೇನೆ. ನಿನ್ನಮಾತಿನಲ್ಲಿ ನಂಬಿಕೆಯನ್ನಿಟ್ಟು ನಿನ್ನನ್ನು ಸೈನ್ಯಕ್ಕೆ ಕಳುಹಿಸುತ್ತಿದ್ದೇನೆ. ಆದರೆ ನಿನ್ನಿಂದ ನಾನು ತೊಂದರೆಗೆ ಒಳಗಾದೆನು..... ಈಗ ನನಗೆ ತಿಳಿಯಬೇಕಾದುದು, ನೀನು ಯಾವ ರೀತಿಯಲ್ಲಿ ನನಗೆ ಪ್ರತಿಫಲವನ್ನು ಕೊಡುತ್ತೀ? '' ಸಾಯುವುದು ನಿಶ್ಚಯವೆಂದು ತಿಳಿದಿದ್ದ ನನಗೆ ಜೀವವುಳಿಯುವುದೆಂಬುದನ್ನು ಕೇಳಿ ಯಾವುದನ್ನು ಯೋಚಿಸುವುದಕ್ಕೂ ತೋರದೆಯಿದೆಯೆಂದು ಸ್ಕಾಟನು ಉತ್ತರ ಹೇಳಿದನು. ಆದರೆ ಕೆಲವು ಕ್ಷಣಗಳಲ್ಲಿ ಮನಸ್ಸನ್ನು ಒಂದು ನೆಲೆಗೆ ತಂದುಕೊಂಡು ಲಿಂಕನ್ನನಿಗೆ ಧನ್ಯವಾದಗಳನ್ನು ಹೇಳಿ, ತನ್ನ ಸಂಬಳವನ್ನೂ, ಮನೆಮಠಗಳನ್ನು ಭೋಗ್ಯಹಾಕಿ ತಂದೆತಾಯಿಗಳು ಒದಗಿಸಿಕೊಡುವುದನ್ನೂ, ಸ್ನೇಹಿತರು ಕೊಡುವುದನ್ನೂ ಸೇರಿಸಿದರೆ ಐನೂರು ಅಥವಾ ಆರುನೂರು ಡಾಲರುಗಳಿಗಿಂತ ಹೆಚ್ಚಾಗಿ ಆಗಲಾರದಾದುದರಿಂದ ಅಷ್ಟನ್ನು ಪ್ರತಿಫಲವಾಗಿ ಕೊಡುವುದಾಗಿ ಹೇಳಿದನು. '' ಆದರೆ ನಾನು ಕೇಳುವುದು ಈ ಅಲ್ಪವಿಷಯವಲ್ಲ '' ಎಂದು ಪ್ರೆಸಿಡೆಂಟನ ಉತ್ತರವು ಹೊರಟಿತು. '' ಅದು ಅತ್ಯಂತ ಘನವಾದುದು. ಅದನ್ನು ನಿನ್ನ ಸ್ನೇಹಿತರಾಗಲೀ ನಿನ್ನ ಸಂಬಳವಾಗಲೀ ನಿಮ್ಮ ಮನೆಮಠಗಳಾಗಲೀ ಕೊಡಲಾರವು. ನಿನ್ನ ಜೊತೆಯ ಸೈನಿಕರಾದರೂ ಕೊಡಲಾರರು. ಈ ಜಗತ್ತಿನಲ್ಲಿ ಒಬ್ಬ ಮನುಷ್ಯನು ಮಾತ್ರ ಅದನ್ನು ಕೊಡಬಲ್ಲನು. ಅವನ ಹೆಸರು ವಿಲಿಯಂ ಸ್ಕಾಟ್ ಎಂಬುದಾಗಿ. ಈದಿನ ಮೊದಲ್ಗೊಂಡು ವಿಲಿಯಂ ಸ್ಕಾಟ್‌ನು ತನ್ನ ಕರ್ತವ್ಯವನ್ನು ನಿರ್ದಾಕ್ಷಿಣ್ಯವಾಗಿ ನೆರವೇರಿಸಿ, ಮೃತ್ಯುವು ಸನ್ನಿಹಿತವಾದರೆ, ಕತ್ತೆತ್ತಿಕೊಂಡು ನಿರ್ಭಯವಾಗಿ ನಿಂತು, '' ನನ್ನ ಮಾತನ್ನು ಉಳಿಸಿಕೊಂಡಿರುವೆನು. ಸೈನಿಕನ ಧರ್ಮಗಳನ್ನು ಪರಿಪಾಲಿಸಿದ್ದೇನೆ '' ಎಂದು ಹೇಳಬಲ್ಲಪಕ್ಷದಲ್ಲಿ ನನ್ನ ಋಣವು ತೀರಿತು ; ಅವನು ಪ್ರತಿಫಲವನ್ನು ಕೊಟ್ಟಂತಾಯಿತು ''. ಹಾಗೆ ಮಾಡುವುದಾಗಿ ವಿಲಿಯಂ ಸ್ಕಾಟನು ಮಾತುಕೊಟ್ಟನು. ಅದಾದ ಕೆಲವು ಕಾಲದೊಳಗೆ ಅವನು ಒಂದು ಹೊಡೆದಾಟದಲ್ಲಿ ಪೂರಾ ಗಾಯಹೊಂದಿ ಮೃತನಾದನು. ಆದರೆ ಅವಸಾನ ಕಾಲದಲ್ಲಿ, ತಾನು ಕರ್ತವ್ಯನಿಷ್ಠೆಯಿಂದಿರಲು ಪ್ರಯತ್ನಿಸುತ್ತಿದ್ದುದಾಗಿಯೂ, ಬದುಕಿದ್ದರೆ ಪ್ರೆಸಿಡೆಂಟನ ಋಣವನ್ನು ಪೂರ್ತಿಯಾಗಿ ತೀರಿಸಬಹುದಾಗಿದ್ದಿತಾಗಿಯೂ, ಪ್ರೆಸಿಡೆಂಟನ ದಯಾರ್ದ್ರವಾದ ಮುಖವನ್ನು ಸ್ಮರಿಸಿಕೊಂಡು, ವೀರಸ್ವರ್ಗವನ್ನು ಪಡೆಯಲು ಅವಕಾಶವನ್ನು ಕಲ್ಪಿಸಿಕೊಟ್ಟುದಕ್ಕಾಗಿ ಧನ್ಯವಾದಗಳನ್ನು ಹೇಳುತ್ತ ಸತ್ತುದಾಗಿಯೂ ಲಿಂಕನ್ನನಿಗೆ ಸಮಾಚಾರವನ್ನು ಹೇಳಿಕಳುಹಿಸಿದನು. ಎಂತಹ ಸಂಘಟನೆ !

ಶ್ರಮವು ಬಹಳವಾಯಿತು. ಕೆಲಸವು ಹೆಚ್ಚು; ಜೊತೆಗೆ ದರ್ಶನವನ್ನಪೇಕ್ಷಿಸಿ ಬರುವವರಿಗೆ ಮಿತಿಯೇ ಇರದಿದ್ದುದರಿಂದ ಲಿಂಕನ್ನನಿಗೆ ವಿಶ್ರಾಂತಿಗೆ ಕಾಲವೇ ಉಳಿಯುತ್ತಿರಲಿಲ್ಲ. ಅವನ ಶಕ್ತಿಯು ಉಡುಗುತ್ತಿರುವುದೆಂದು ಹೆದರಿ ಹತ್ತಿರದಲ್ಲಿರುತ್ತಿದ್ದವರು, ಸ್ವಲ್ಪ ವಿಶ್ರಮಿಸಿಕೊಳ್ಳೆಂದೂ ಬಂದು ಹೋಗುವವರನ್ನು ಕಡಿಮೆ ಮಾಡೆಂದೂ ಹೇಳಿದರು. ಲಿಂಕನ್ನನು ಆ ಸಲಹೆಯನ್ನು ಎಂದೂ ಒಪ್ಪ

ಲಿಲ್ಲ. " ನನ್ನ ಬಳಿಗೆ ಬರಬೇಡಿರೆಂತಲಾಗಲೀ ಬಂದವರಿಗೆ ಮನೆಯಲ್ಲಿಲ್ಲವೆಂತಲಾಗಲೀ ಹೇಳಿ ತಪ್ಪಿಸಿಕೊಳ್ಳುವುದು ಸುಲಭ ; ಆದರೆ, ನಾನು ಅದೇ ಸ್ಥಿತಿಯಲ್ಲಿದ್ದು ಮತ್ತೊಬ್ಬನನ್ನು ನೋಡುವುದಕ್ಕೆ ಹೋಗಿ ಈ ಉತ್ತರವನ್ನು ಪಡೆದರೆ ನನ್ನ ಮನಸ್ಸು ಎಷ್ಟು ನೊಂದುಕೊಳ್ಳುವುದು! ಬರುವವರು ನನ್ನಿಂದ ಏನನ್ನೂ ಅಪೇಕ್ಷಿಸುವುದಿಲ್ಲ ; ಕೊಡುವುದಕ್ಕೂ ನನ್ನಲ್ಲಿ ಏನೂ ಇಲ್ಲ. ಒಂದೆರಡು ಮಾತುಗಳನ್ನಾಡಿ ಅವರಿಗೆ, ಸಂತೋಷವನ್ನುಂಟುಮಾಡುವುದು ಕಷ್ಟವೇ ? " ಎಂದು ಹೇಳಿದನು. ಕೆಲಸವೂ ಶ್ರಮವೂ ಹೆಚ್ಚಿದಹಾಗೆ ಅವನ ಬುದ್ಧಿಶಕ್ತಿಯೂ ಧೈರ್ಯವೂ ದಯೆಯೂ ಹೆಚ್ಚಿದುವು. ಆದರೆ ಅನನ ಮನಸ್ಸು ವಿಷಣ್ಣವಾಗಿಯೇ ಇರುತ್ತಿದ್ದಿತು. ಲಾಯರಾಗಿದ್ದಾಗ ಒಂಟಿಯಾಗಿ ಕುಳಿತು ಚಿಂತಿಸುತ್ತಿದ್ದನೆಂದು ಒಬ್ಬನು ಹೇಳುತ್ತಾನೆ. ಬಾಲ್ಯದಲ್ಲಿ ಹೊಲದಲ್ಲಿದ್ದಾಗ ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಯೋಚಿಸುತ್ತ ಕೂರುತ್ತಿದ್ದನೆಂಬುದೂ ಕೆಲಸವಿಲ್ಲದಿದ್ದಾಗ ಕಾಡಿಗೆ ಹೋಗಿ ಕುಳಿತು ಚಿಂತಿಸುತ್ತಿದ್ದನೆಂಬುದೂ ತಿಳಿದ ವಿಷಯುವೇ. ಅವನಿಗೆ ಪೂರ್ವವಯಃಸ್ಸಿನಲ್ಲಿಯೇ ಮುಖದಲ್ಲಿ ಗೆರೆಗಳು ಕಾಣಿಸಿಕೊಂಡಿದ್ದುವು. ಈಗ ಅವು ಹೆಚ್ಚಾಗಿ ಮುಖವನ್ನು ಇನ್ನೂ ಮುದಿಮಾಡಿಬಿಟ್ಟುವು.

ಉತ್ತರದ ಮೇಲೆ ಕವಿದಿದ್ದ ಮೋಡವು ತಟ್ಟನೆ ಅರುಗಾಯಿತು. ಬೇಸಿಗೆಯೂ ಬೇಸಿಗೆಯಲ್ಲಿ ವ್ಯಾಪ್ತವಾಗಿದ್ದ ನಿರಾಶೆಯೂ ಕಳೆದುಹೋದುವು. ಸೆಪ್ಟೆಂಬರ್ ಎರಡನೆಯ ತಾರೀಖಿನ ದಿನ, " ಅಟ್ಲಾಂಟವು ನಮ್ಮದು ; ನ್ಯಾಯವಾದ ಮಾರ್ಗದಿಂದಲೇ ಅದನ್ನು ಜಯಿಸಿದುದಾಯಿತು " ಎಂದು ಷೆರ್ಮನ್ನನಿಂದ ತಂತಿ ಬಂದಿತು. ಜಾರ್ಜಿಯದ ಮಧ್ಯದಲ್ಲಿ ಇಂತಹ ಸ್ಥಳವು ದೊರೆತುದು ಅಲ್ಪವಿಷಯವಲ್ಲ. ಅದಕ್ಕೆ ಒಂದು ತಿಂಗಳ ಹಿಂದೆ ಅಡ್ಮಿರಲ್ ಫೆರಗಟನು ಜಯವನ್ನು ಸಂಪಾದಿಸಿದ್ದನು. ಜನರು ಷೆನಾಂಡೋವ ಬಯಲಿನಲ್ಲಿ ಷೆರಿಡನ್ನನು ಮಾಡಿದ ಉಪಕಾರವನ್ನೂ ಸ್ಮರಿಸಿಕೊಂಡರು. ಯುದ್ಧದಲ್ಲಿ ನಿರಾಶೆಯುಂಟಾಗಲಿಲ್ಲ. ನಿಷ್ಪ್ರಯೋಜಕವೆಂದು ಡೆಮೊಕ್ರೆಟರು ಕರೆದಿದ್ದ ಯುದ್ಧವು ನಿಷ್ಪ್ರಯೋಜಕವೆಂದಿಗೂ ಅಲ್ಲ. ಇದೇ ಸಮಯದಲ್ಲಿ ಕೆಲವು ಮಂದಿ ಪ್ರಮುಖಜನಗಳು ಲಿಂಕನ್ನನನ್ನು ಸ್ತೋತ್ರಮಾಡಿ ಅವನ ಗುಣಗಳನ್ನೂ ದೇಶಕ್ಕೆ ಅವನಿಂದಾದ ಉಪಕಾರವನ್ನೂ ವರ್ಣಿಸಿ ಅಲ್ಲಲ್ಲಿ ಮಾತನಾಡಿದರು. ಜನರಲ್ ಷುರ್ಸ್ ಎಂಬಾತನು ಸೈನ್ಯದಲ್ಲಿ ತನಗಿದ್ದ ಉದ್ಯೋಗವನ್ನೂ ಬಿಟ್ಟು ಲಿಂಕನ್ನನ ಪರವಾಗಿ ಭಾಷಣಗಳನ್ನು ಮಾಡಲು ಹಿಡಿವನು, ಮತ್ತೆ ಕೆಲಸವು ಸಿಕ್ಕದಿದ್ದರೂ ಅವನು ಲಕ್ಷಿಸಲಿಲ್ಲ. ನೊವೆಂಬರಿನಲ್ಲಿ ಚುನಾವಣೆಯಾಯಿತು. ಬರಬೇಕಾಗಿದ್ದ 233 ಚೀಟಿಗಳಲ್ಲಿ ಲಿಂಕನ್ನನಿಗೆ 212 ಚೀಟಿಗಳು ಬಂದುವು. ಲಿಂಕನ್ನನೇ ಚುನಾಯಿಸಲ್ಪಟ್ಟನು. ಉತ್ತರದ ಸಂಸ್ಥಾನಗಳಲ್ಲಿ ಮೂರು ಮಾತ್ರ ಅವನಿಗೆ ಚೀಟಿಯನ್ನು ಕೊಟ್ಟರಲಿಲ್ಲ. ಲಿಂಕನ್ನನು ಅಲ್ಲಲ್ಲಿ ಕೆಲವು ಭಾಷಣಗಳನ್ನು ಮಾಡಿದನು. ಅವು ವಿಸ್ತೃತವಾಗಿರಲಿಲ್ಲ. ಒಂದರಲ್ಲಿ, ಯುದ್ಧವು ನಡೆಯುತ್ತ ರಾಜ್ಯದಲ್ಲಿ ಅಲ್ಲೋಲಕಲ್ಲೋಲವುಂಟಾಗಿದ್ದರೂ ಜನಗಳು ಎಂದಿನಂತೆ ಚುನಾವಣೆಯ ಕೆಲಸವನ್ನು ಹಚ್ಚಿಕೊಂಡು ಎಂದಿನಂತೆಯೇ ನಡೆಯಿಸುತ್ತಿರು

ವರೆಂದೂ ಇತರ ರಾಜ್ಯಗಳಲ್ಲಿ ಇದು ಪ್ರಾಯಶಃ ನಡೆಯುತ್ತಿರಲಿಲ್ಲವೆಂದೂ, ಪ್ರಜೆಗಳು ಚುನಾವಣೆಯ ಕೆಲಸದಲ್ಲಿ ಹೇಗೆ ಒಟ್ಟಾಗಿ ಸೇರಿದರೋ ಹಾಗೆ ಉಳಿದಿರುವ ಯುದ್ಧವನ್ನು ನಡೆಯಿಸಿ ಪೂರೈಸುವುದರಲ್ಲಿಯೂ ಸೇರಬೇಕೆಂದೂ ಹೇಳಿ ಕೊನೆಯಲ್ಲಿ, ಯುದ್ಧಮಾಡುತ್ತಿರುವ ಸೈನಿಕರಿಗೂ ನಾವಿಕರಿಗೂ ಅವರ ಅಧಿಪತಿಗಳಿಗೂ ಮಂಗಳವನ್ನು ಕೋರಿದನು.

ಮಂತ್ರಿಸಭೆಯಲ್ಲಿ ಅವನು, ಅರಗನ್ನೂ ಮುದ್ರೆಯನ್ನೂ ಹಚ್ಚಿ ಮುಚ್ಚಿಟ್ಟದ್ದ ಕಾಗದವನ್ನು ತಂದು, ಅದರೊಳಗೆ ಬರೆದಿದ್ದುದನ್ನು ಒದದಂತೆಯೇ ಮಂತ್ರಿಗಳು ರುಜುಮಾಡಿದುದನ್ನು ಜ್ಞಾಪಿಸಿದನು. ಆ ಮೇಲೆ ಅದನ್ನೊಡೆದು ಎಲ್ಲರಿಗೂ ಕೇಳುವಂತೆ ಒದಿದನು. '' ಈಗ ಕೆಲವು ದಿವಸಗಳಿಂದ ತೋರುತ್ತಿದ್ದಂತೆ ಈ ದಿನವೂ ಕೂಡ, ನಮ್ಮ ಈ ರಿಪಬ್ಲಿಕ್ ಸರ್ಕಾರವು ಮತ್ತೆ ಆಡಳಿತವನ್ನು ಮಾಡದೆಂದು ತೋರುತ್ತದೆ. ಹಾಗಾದ ಪಕ್ಷದಲ್ಲಿ, ಪ್ರೆಸಿಡೆಂಟನಾಗಿ ಚುನಾಯಿಸಲ್ಪಡುವ ಮನುಷ್ಯನನ್ನು ಒಡಂಬಡಿಸಿ ನಾನು ನೊವೆಂಬರ್ ತಿಂಗಳಿಗೂ ಮುಂದಿನ ಮಾರ್ಚಿಯ ತಿಂಗಳಿಗೂ ನಡುವೆ ಇರುವ ಅವಕಾಶದಲ್ಲಿ ಯುದ್ಧವನ್ನು ಮುಗಿಸಿ ಸಂಯೋಗವನ್ನು ಉದ್ಧರಿಸಬೇಕು. ಪ್ರೆಸಿಡೆಂಟನಾಗುವುದರಲ್ಲಿರುವ ಆತನ ತತ್ವಗಳನ್ನೂ ಅಭಿಪ್ರಾಯಗಳನ್ನೂ ನೋಡಿದರೆ ಆತನು ಮುಂದೆ ಸಂಯೋಗವನ್ನು ಉಳಿಸಲಾರನೆಂದು ತೋರುವುದು.'' ಮೆಕ್‌ಕ್ಲೆಲ್ಲನ್ನನು ಚುನಾಯಿಸಲ್ಪಟ್ಟದ್ದರೆ ತಾನು ಮಾಡಬೇಕೆಂದಿದ್ದುದನ್ನು ಲಿಂಕನ್ನನು ಮಂತ್ರಿಗಳಿಗೆ ವಿವರಿಸಿದನು. ಅವನ ಬಳಿಗೆ ಹೋಗಿ '' ನೀನು ಚುನಾಯಿಸಲ್ಪಟ್ಟಿರುವುದನ್ನು ನೋಡಿದರೆ, ನಿನ್ನ ಬಲವೇ ಹೆಚ್ಚೆಂದೂ ಪ್ರಜೆಗಳಿಗೆ ನನಗಿಂತಲೂ ನಿನ್ನಲ್ಲಿ ಹೆಚ್ಚಿನ ನಂಬಿಕೆಯಿರುವುದೆಂತಲೂ ತಿಳಿದು ಬರುವುದು '' ಎಂದು ಹೇಳುತ್ತಿದ್ದನು ; ಆ ಮೇಲೆ, ಆ ನಂಬಿಕೆಯ ಬಲದಿಂದ ಸೈನ್ಯಕ್ಕೆ ಜನಗಳನ್ನು ಹೊಂದಿಸಿ ಸಂಯೋಗವನ್ನು ಉಳಿಸೆಂದು ಹೇಳುತ್ತಿದ್ದನು. '' ಆ ದಳಪತಿಯು '' ಎಂದು ಸಿವರ್ಡನು ಮಾತನ್ನು ಸೇರಿಸಿದನು. '' ' ಆಗಲಿ, ಆಗಲಿ ' ಎಂದು ಹೇಳುತ್ತಿದ್ದನು. ನೀವು ಮಾರನೆಯ ದಿನ ಮತ್ತೆ ಆ ವಿಷಯವನ್ನು ಕುರಿತು ಪ್ರಸ್ತಾಪಮಾಡಿದರೆ, ' ಆಗಲಿ, ಆಗಲಿ ' ಎಂದು ಆಗಲೂ ಉತ್ತರ ಕೊಡುತ್ತ ಕಾಲವನ್ನು ತಳ್ಳುತ್ತಿದ್ದನು. ಯಾವುದನ್ನೂ ಮಾಡುತ್ತಿರಲಿಲ್ಲ.''

ಪ್ರಜೆಗಳ ಚೀಟಿಯ ಮೇಲೆ ರಾಜ್ಯದ ಪರಿಣಾಮವು ಇಷ್ಟುಮಟ್ಟಿಗೆ ಹಿಂದೆ ಎಂದೂ ಎಲ್ಲಿಯೂ ನಿರ್ಭರವಾಗಿರಲಿಲ್ಲವೆಂದು ಒಬ್ಬಾತನು ಹೇಳಿದನು.

ಚುನಾವಣೆಯಾಗಿ ಫಲಿತಾಂಶವು ತಿಳಿಯುವವರೆಗೂ ಉತ್ತರವು ನಡುಗುತ್ತಿದ್ದಿತು.

---

# ೧ನೆಯ ಅಧ್ಯಾಯ

## ಸಮಾಪ್ತಿ

ಡಿಸೆಂಬರ್ ಆರನೆಯ ತಾರೀಖಿನ ದಿನ ಲಿಂಕನ್ನನು ಕಾಂಗ್ರೆಸ್ ಸಭೆಗೆ ತನ್ನ ವಾರ್ಷಿಕಸಂದೇಶವನ್ನು ಕಳುಹಿಸಿದನು. ಅದರ ಪ್ರಕಾರ, ಸಂಯೋಗವನ್ನು ಉಳಿಸುವ ಮಾರ್ಗವನ್ನು ಕುರಿತು ನಡೆಯುತ್ತಿದ್ದ ಚರ್ಚೆಗಳೂ ಇತರ ಪ್ರಯತ್ನಗಳೂ ಮುಖ್ಯವಲ್ಲ. ಕೊನೆಯಲ್ಲಿ ಸಂಯೋಗವು ಉದ್ಧಾರ ಹೊಂದಬೇಕೇ ಬೇಡವೇ ಎಂಬುದು ಮುಖ್ಯ ವಿಚಾರವಾಗಿ ಆ ವಿಷಯದಲ್ಲಿ ಪ್ರಜೆಗಳ ಅಭಿಪ್ರಾಯವು ಒಂದೇ ವಿಧವಾಗಿದ್ದಿತು. ಯುದ್ಧವು ನಡೆಯಕೂಡದೆಂದು ಡೆಮೊಕ್ರೆಟರು ಆಕ್ಷೇಪಿಸಿದರೂ ಶಾಂತಿಯನ್ನು ಬಯಸಿ ಸಂಯೋಗವನ್ನು ಉಪೇಕ್ಷಿಸಿದನೆಂದು ಯಾರೂ ಲಿಂಕನ್ನನ ಮೇಲೆ ಆಕ್ಷೇಪಣೆಯನ್ನು ತರುವಹಾಗಿರಲಿಲ್ಲ. ಬಳಿಕ ಸಂಯೋಗವನ್ನು ರಾಜ್ಯದಲ್ಲಿ ಬದ್ಧಮೂಲವಾಗಿ ಸ್ಥಾಪಿಸುವ ಮಾರ್ಗವನ್ನು ಕುರಿತು ಹೀಗೆ ತಿಳಿಸಿದನು, "ದಂಗೆಕೋರರ ಮುಖಂಡನೊಡನೆ ಸಂಧಿಯನ್ನು ಪ್ರಸ್ತಾಪಿಸುವುದರಿಂದ ಯಾವ ಅನುಕೂಲವೂ ಉಂಟಾಗುವುದಿಲ್ಲ. ಸಂಯೋಗವನ್ನು ಬಿಟ್ಟು ಹೋಗಬೇಕೆಂಬುದು ಹೊರತು ಆತನು ಮತ್ತೆ ಯಾವ ಮಾತಿಗೂ ಒಪ್ಪುವುದಿಲ್ಲ. ಅದನ್ನು ಮಾತ್ರ ನಾವು ಎಂದಿಗೂ ಸಲ್ಲಿಸಲಾರೆವು. ಪರಿಣಾಮವು ಎಲ್ಲರಿಗೂ ಗೊತ್ತೇ ಇದೆ. ಯುದ್ಧಮಾಡಿ ಸಂಪೂರ್ಣವಾದ ಜಯವನ್ನು ಪಡೆದ ಪಕ್ಷದಲ್ಲಿ ಅದು ನಿಶ್ಚಯಹೊಂದುವುದು. ಸರ್ಕಾರವು ಯುದ್ಧವನ್ನು ನಿಲ್ಲಿಸಲೆಂದು ಹೇಳಬಹುದು. ದಂಗೆಕೋರರು ತಮ್ಮ ಆಯುಧಗಳನ್ನು ಒಂದುಕಡೆಗಿಟ್ಟು ಸರ್ಕಾರಕ್ಕೆ ವಿಧೇಯರಾಗುವುದಾದರೆ ಯುದ್ಧವನ್ನು ನಿಲ್ಲಿಸುವುದು ಖಂಡಿತ." ಜೊತೆಗೆ, ಸಂದೇಹಾಸ್ಪದವಾದ ಅಂಶಗಳು ಹುಟ್ಟದಿರುವುದಕ್ಕೋಸ್ಕರ, ಬಿಡುಗಡೆಯ ಪ್ರಕಟನೆಯ ಪ್ರಕಾರ ಸ್ವಾತಂತ್ರ್ಯವನ್ನು ಹೊಂದಿದ ನೀಗ್ರೋವು, ಮತ್ತೆ ಗುಲಾಮನಾಗಲಾರನೆಂದು ಸೇರಿಸಿದನು. "ನನ್ನ ಅಧಿಕಾರಕಾಲದಲ್ಲಿ ಇದು ನಡೆಯಕೂಡದು; ಪ್ರಜೆಗಳು ಯಾವುದಾದರೊಂದು ವಿಧಾನದಿಂದ, ಸ್ವತಂತ್ರರಾಗಿದ್ದ ನೀಗ್ರೋಗಳೆಲ್ಲರೂ ಮತ್ತೆ ಗುಲಾಮರಾಗಬೇಕೆಂದು ಕಟ್ಟುಮಾಡಿದರೆ, ಆ ಕೆಲಸವನ್ನು ಮಾಡಲು ನಾನು ಕಾರಣನಲ್ಲ, ಮತ್ತೊಬ್ಬನಿರಬಹುದು." ಲಿಂಕನ್ನನು ಕೊನೆಯಲ್ಲಿ ಹೀಗೆ ಹೇಳಲು ಕಾರಣವಿದ್ದಿತು. ದಾಸ್ಯವನ್ನು ತಪ್ಪಿಸಬೇಕೆಂದು ಪೂರ್ವದ ಶಾಸನಕ್ರಮದಲ್ಲಿರಲಿಲ್ಲ. ಈ ಅಂಶವನ್ನು ಹಿಂದೆ ಹೇಳಿದೆ. ಲಿಂಕನ್ನನ ಕಾಲಕ್ಕೆ ಶಾಸನಕ್ರಮದಲ್ಲಿ ಆ ನಿಯಮವಿಲ್ಲದಿರುವುದು ಅಸಭ್ಯವಾಗಿ ತೋರಿತು. ಅದನ್ನು ಸೇರಿಸಲು ಪ್ರಜೆಗಳೂ ಸರ್ಕಾರವೂ ಆತುರಪಡುತ್ತಿದ್ದುವು. ಆದರೆ, ಪ್ರಕೃತದಲ್ಲಿ, ಹೊಸನಿಯಮವನ್ನು ಸೇರಿಸಿ ತಿದ್ದುಪಾಟುಮಾಡಲು ಕೆಲವು ಕಾಲದವರೆಗೆ ಅವಕಾಶವಿರಲಿಲ್ಲ. ಅಷ್ಟರೊಳಗೆ ಜನರು ತಮ್ಮ ಮನಸ್ಸನ್ನು ಬದಲಾಯಿಸಬಹುದು;

ಅಥವಾ ನ್ಯಾಯಸ್ಥಾನಗಳು ದಾಸ್ಯಪದ್ಧತಿಯು ದಕ್ಷಿಣದ ಸಂಸ್ಥಾನಗಳಲ್ಲಿ ಪ್ರಚಾರದಲ್ಲಿರಬಹುದೆಂದು ಅನುಮತಿಯನ್ನು ಕೊಡಬಹುದು. ಇಂತಹ ಅಸಂಗತಗಳು ಬರಬಹುದೆಂದೂಹಿಸಿ ಲಿಂಕನ್ನನು ಹಾಗೆ ಹೇಳಿ ಜನಗಳಿಗೆ ಮೊದಲೇ ಸೂಚನೆಯನ್ನು ಕೊಟ್ಟನು. ಆದರೆ ಅಂತಹ ಭಯಕ್ಕೆ ಆಸ್ಪದವೇನೂ ಇರಲಿಲ್ಲ. ದಾಸ್ಯವು ರಾಜ್ಯವನ್ನು ಬಿಟ್ಟು ತೊಲಗಿತೆಂದು ಜೆಫರ್‌ಸರ್ ಡೇವಿಸ್ಸನೇ ಹೇಳಿದ್ದನು. ನೀಗ್ರೋಗಳಲ್ಲಿ ಕೆಲವರು, ಇತರರ ಕೈಯನ್ನು ಕಾಯದೆ, ತಾವು ಸ್ವತಂತ್ರರೆಂದು ತಾವೇ ಹೇಳಿಕೊಂಡು ಜೀವಿಸುತ್ತಿದ್ದರು. ಇದಲ್ಲದೆ ಡೇವಿಸ್ಸನು ಆ ವಿಚಾರವನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಮುಖ್ಯವಾಗಿ ದಕ್ಷಿಣದವರ ದೃಷ್ಟಿಯೆಲ್ಲಾ ಯುದ್ಧದ ಮೇಲೂ ತಮ್ಮ ಸ್ವಾತಂತ್ರ್ಯದ ಮೇಲೂ ತಿರುಗಿದ್ದಿತು. ಗುಲಾಮರ ವಿಷಯವು ಅವರಿಗೆ ಬೇಕಿರಲಿಲ್ಲ.

ಶಾಸನಕ್ರಮದಲ್ಲಿ ದಾಸ್ಯದ ಸಂಬಂಧದಲ್ಲಿ ತಿದುಪಾಟು ಮಾಡುವುದನ್ನು ಕುರಿತು ಎರಡು ಸಭೆಗಳೊಳಗೂ ಚರ್ಚೆಯು ನಡೆದು ಜನವರಿ ತಿಂಗಳ ಕೊನೆಯಲ್ಲಿ ಸಿದ್ಧಾಂತವಾಯಿತು. ದಾಸ್ಯವನ್ನು ನಿಶ್ಶೇಷವಾಗಿ ತಪ್ಪಿಸಬೇಕೆಂದಿದ್ದ ಆ ಕಟ್ಟಳೆಗೆ ಲಿಂಕನ್ನನು ರುಜುಮಾಡಿದನು. ಆದರೆ ರಾಜ್ಯದ ಸಂಸ್ಥಾನಗಳಲ್ಲಿ ಹೆಚ್ಚಿನ ಭಾಗವು ಅನುಮೋದಿಸುವವರೆಗೂ ಅದು ಚಲಾವಣೆಗೆ ಬರುತ್ತಿರಲಿಲ್ಲ. ಅಷ್ಟಾಗಲು ಇನ್ನೂ ಸ್ವಲ್ಪಕಾಲವು ಹಿಡಿಯುತ್ತಿದ್ದಿತು.

1865ನೆಯ ವರ್ಷವು ಕಾಲಿಟ್ಟಿತು. ಯುದ್ಧವಿನ್ನೂ ಮುಗಿದಿರಲಿಲ್ಲ. ಆದರೆ ಅದರ ಪರಿಣಾಮವೆಂಥದೆಂಬುದು ರಿಚ್‌ಮಂಡ್‌ನಲ್ಲಿದ್ದ ದಕ್ಷಿಣದ ಪ್ರಭೃತಿಗಳಿಗೆ ಸ್ಪಷ್ಟವಾಗುತ್ತ ಬಂದಿತು. ರಿಚ್‌ಮಂಡ್ ನಗರವು ಶತ್ರುಗಳ ಕೈ ಸೇರಬಹುದು. ಲೀಯು ಸೈನ್ಯದೊಡನೆ ತಪ್ಪಿಸಿಕೊಂಡು ಹೋಗಿ ಇನ್ನು ಕೆಲವು ಕಾಲ ಹೆಣಗಬಹುದು. ಆದರೆ ಕೊನೆಯಲ್ಲಿ ಉಳಿಗಾಲವಿರಲಿಲ್ಲ. ಷೆರ್ಮನ್ನನು ದಕ್ಷಿಣದಲ್ಲಿ ಎಲ್ಲಾ ಕಡೆಯಲ್ಲಿಯೂ ಸಂಚರಿಸಿದನು; ಮಾರ್ಗವು ನಿರಾಟಂಕನಾಗಿದ್ದಿತು. ಈಗ ಸಮುದ್ರತೀರವನ್ನು ತಲಪಿದ್ದನು. ಆದರೆ ಅಲ್ಲಿಯೇ ನಿಲ್ಲುತ್ತಿರಲಿಲ್ಲ. ಉತ್ತರಾಭಿಮುಖವಾಗಿ ಹೊರಟು ಸಿಕ್ಕಿದುದನ್ನೆಲ್ಲಾ ಆಹುತಿಗೊಳ್ಳುತ್ತಿದ್ದನು. ದಕ್ಷಿಣ ಭಾಗಕ್ಕೆ ಸೇರಿದ ಬಂದರಾಗಲೀ ಆಯುಧಶಾಲೆ ಅಥವಾ ದುರ್ಗವಾಗಲೀ ರೈಲುರಸ್ತೆಯಾಗಲೀ ಧಾನ್ಯಸಮೃದ್ಧವಾದ ಪ್ರದೇಶನಾಗಲೀ ಒಂದೂ ಉಳಿಯುತ್ತಿರಲಿಲ್ಲ. ಅವನ ದಂಡಯಾತ್ರೆಯ ಸಮಾರಂಭವನ್ನು ನೋಡಿ ದಕ್ಷಿಣದ ಪ್ರಜೆಗಳು ಭೀತರಾದರು. ರಾಜ್ಯದಲ್ಲಿ ನೆಮ್ಮದಿಯುಂಟಾದರೆ ಸಾಕೆಂದು ಹಾರೈಸಿದರು. ರಿಚ್‌ಮಂಡ್‌ನಲ್ಲಿದ್ದ ಸರ್ಕಾರದ ಅಧಿಕಾರಿಗಳೂ ದಕ್ಷಿಣದ ಕಾಂಗ್ರೆಸ್ ಸಭೆಯ ಸಭಿಕರೂ ಆಸೆಯನ್ನು ಬಿಟ್ಟರು. ಸಂಧಿಯ ಪ್ರಸ್ತಾಪವನ್ನು ಮಾಡೆಂದು ಅವರೆಲ್ಲರೂ ಜೆಫರ್‌ಸರ್ ಡೇವಿಸ್ಸನನ್ನು ಹಿಂಸೆಮಾಡಲಾರಂಭಿಸಿದರು. ಆದರೆ ಯಾವ ಪ್ರಯತ್ನವನ್ನು ಮಾಡಿ ಉತ್ತರವು ಹೇಳುವ ಯಾವ ಷರತ್ತುಗಳಿಗೆ ಒಪ್ಪಿದರೆ ಸಂಧಿಯು ಬೆಳೆಯುವುದೆಂಬುದನ್ನು ಅವರು ಯೋಚಿಸಲಿಲ್ಲ. ಅಲ್ಲದೆ, ಜೆಫರ್‌ಸರ್ ಡೇವಿಸ್ಸನಿಗೆ ಪ್ರತಿಯಾಗಿ ಎದ್ದುನಿಂತು ಮಾತನಾಡಲು ಅವರೊಳಗೆ ಯಾರಿಗೂ ಧೈರ್ಯವಿರಲಿಲ್ಲ. ಒಂದು

ಅಂಶದಲ್ಲಿ ಮಾತ್ರ ಡೇವಿಸ್ಸನು ಅವರ ಮಾತನ್ನು ನಡೆಯಿಸಿದನು. ಫೆಬ್ರವರಿ ತಿಂಗಳಲ್ಲಿ ಲೀಯು ಮುಖ್ಯ ಸೇನಾಪತಿಯಾಗಿ ನೇಮಿಸಲ್ಪಟ್ಟನು. ಮುಖ್ಯ ಸೇನಾಪತಿಯಾಗುವುದರಿಂದ ಲೀಗೆ ವ್ಯವಹಾರದಲ್ಲಿ ಸ್ವಾತಂತ್ರ್ಯವುಂಟಾಗುತ್ತಿದ್ದಿತು. ಡೇವಿಸ್ಸನಿಗೂ ನಿರ್ವಾಹವಿರಲಿಲ್ಲ. ಅವನ ಅವಸ್ಥೆ ಎಂತಹದೆಂಬುದನ್ನು ಲಿಂಕನ್ನನು ಸರಿಯಾಗಿ ಊಹಿಸಿ ಹೇಳಿದನು. ದಕ್ಷಿಣದ ಪ್ರಜೆಗಳು ಅವನನ್ನು ಕರೆದು, ತಮ್ಮ ಪ್ರೆಸಿಡೆಂಟನೆಂದು 'ಪಟ್ಟಗಟ್ಟಿ' ಬಿಟ್ಟರು. ದಕ್ಷಿಣದ ಅಪೇಕ್ಷೆಯೇ ತನ್ನ ಅಪೇಕ್ಷೆಯೆಂದು ಅವನು ಸಂಕಲ್ಪಿಸಿದನು. ಈಗ, ಆ ಸಂಕಲ್ಪವನ್ನು ಮಾರುವಹಾಗಿರಲಿಲ್ಲ. ತನ್ನ ಅಧೀನದಲ್ಲಿ ಸೈನ್ಯವಿರುವವರೆಗೆ ಯೋಚನೆಯಿಲ್ಲವೆಂದು ಅವನು ಹೇಳುತ್ತಿದ್ದನು. ಅದು ಅಹಂಕಾರದ ಮಾತೆಂದು ಕೆಲವರು ಹೇಳಿದರು. ಅಂತಹ ಧೈರ್ಯವೆಂದು ಮತ್ತೆ ಕೆಲವರಿಗೆ ಅಭಿಪ್ರಾಯವಿದ್ದಿತು. ಅದು ಹೇಗಾದರೂ ಇರಲಿ, ದಕ್ಷಿಣದ ಪ್ರಯತ್ನವು ವ್ಯರ್ಥವಾದುದೆಂತಲೂ ಜನಗಳ ಮನಸ್ಸಿನಲ್ಲಿ ಉತ್ಸಾಹ ಧೈರ್ಯಗಳು ಉಳಿದಿಲ್ಲವೆಂತಲೂ ಹೇಳಿದರೆ ಅವನು ನಂಬುತ್ತಿರಲಿಲ್ಲ. ಆದರೆ, ಸಂಧಿಯಾಗಬೇಕೆಂದು ತವಕಿಸುತ್ತಿದ್ದವರು ಸಂಧಿಯೆಂದರೆ ಅರ್ಥವೇನೆಂಬುದನ್ನು ತಿಳಿಯಲೆಂದು ಅವನು ತಡಮಾಡುತ್ತಿದ್ದಿರಬಹುದು; ಅಥವಾ ಉತ್ತರದ ಚಿತ್ತವೃತ್ತಿಯನ್ನು ನೋಡಿ ತೀರ ಕೈ ಬಿಡುವಹಾಗಿಲ್ಲವೆಂದು ಊಹಿಸಿರಬಹುದು. ಲಿಂಕನ್ನನು ಮಾತ್ರ, ದಕ್ಷಿಣದವರನ್ನು ದಂಗೆಕೋರರೆಂದೂ ಎಲ್ಲಾ ರೀತಿಯಲ್ಲಿಯೂ ಸಂಯೋಗವು ಅಗತ್ಯವಾದುದೆಂದೂ ಒಪ್ಪಿಕೊಳ್ಳದವರನ್ನು ಸಂಧಿಯ ಮಾತನ್ನೆತ್ತಗೊಡುತ್ತಿರಲಿಲ್ಲ. ಆದರೆ, ದಕ್ಷಿಣದ ಪ್ರಮುಖಜನಗಳೊಡನೆ ಸಂಸರ್ಗವನ್ನಿಟ್ಟುಕೊಳ್ಳದೆಯೂ ಇರಲಿಲ್ಲ. ಅದರಿಂದ, ತನ್ನ ಅಭಿಪ್ರಾಯಗಳನ್ನು ತಿಳಿಸುವುದಕ್ಕೂ ದಕ್ಷಿಣದ ವಿದ್ಯಮಾನಗಳನ್ನು ತಿಳಿಯುವುದಕ್ಕೂ ಅವಕಾಶವಾಗುತ್ತಿದ್ದಿತು.

ಜನವರಿ ತಿಂಗಳಲ್ಲಿ ದಕ್ಷಿಣದಿಂದ ಕೆಲವು ಮಂದಿಗಳು ಬಂದು ಪ್ರೆಸಿಡೆಂಟನನ್ನು ಕಂಡು ಮಾತನಾಡಲಪೇಕ್ಷಿಸಿದರು. ಅವರನ್ನು ನೋಡದೆ ಕಳುಹಿಸಿಬಿಡಲಾಗದೆಂದು ಜನರಲ್ ಗ್ರಾಂಟನು ಅವರ ಪರವಾಗಿ ಪ್ರಾರ್ಥಿಸಿದನು. ಆದರೂ ಈ ಕಾರಣದ ದೆಸೆಯಿಂದ ಯುದ್ಧಕಾರ್ಯದಲ್ಲಿ ಆಲಸನಾಗಿರಕೂಡದೆಂದು ಗ್ರಾಂಟನಿಗೆ ಅಪ್ಪಣೆಮಾಡಿ ಪ್ರೆಸಿಡೆಂಟನು ಸಿವರ್ಡನನ್ನು ಕರೆದುಕೊಂಡು ಅವರಿದ್ದ ಬಂದರಿಗೆ ಬಂದು ಹಡಗಿನಮೇಲೆ ಹೋದನು. ದಕ್ಷಿಣದ ನಿಯೋಗಿಗಳಿಗೂ ಅವನಿಗೂ ಭೇಟಿಯಾಯಿತು. ಕೂಡಲೇ ವ್ಯವಹಾರವಾರಂಭಿಸಿ ಲಿಂಕನ್ನನು ತನ್ನ ಮನಸ್ಸಿನಲ್ಲಿದ್ದುದನ್ನೆಲ್ಲಾ ಹೇಳಿದನು. ದಕ್ಷಿಣವು ಆಯುಧವನ್ನೊಪ್ಪಿಸಿ ಶರಣಾಗತನಾಗುವುದಾದರೆ ದಂಗೆಕೋರರ ವಿಷಯದಲ್ಲಿ ಕನಿಕರವನ್ನು ತೋರಿಸುವುದಾಗಿ ಮಾತನ್ನು ಕೊಟ್ಟನು. ಆದರೆ ಒಬ್ಬರ ಅಭಿಪ್ರಾಯವು ಮತ್ತೊಬ್ಬರಿಗೆ ಸರಿಬೀಳದೆ ದಕ್ಷಿಣದವರು ಬಂದ ಕಾರ್ಯವು ಕೈಗೂಡಲಿಲ್ಲ. ಕೊನೆಯಲ್ಲಿ ಸ್ಟೀವರ್ಸ್ ಎಂಬಾತನು ಹೀಗೆಂದನು. "ಹಾಗಾದರೆ, ನೀವು ನಮ್ಮನ್ನೆಲ್ಲಾ ದಂಗೆಕೋರರೆಂದು ಭಾವಿಸುವಿರಿ. ದ್ರೋಹಾಚರಣೆಗಾಗಿ ನಮ್ಮನ್ನು ಪಾಶಕ್ಕೆ ಹಾಕಬೇಕಾದುದು ಉಳಿದಿದೆ."

"ನೀವು ಸರಿಯಾದುದನ್ನು ಹೇಳಿದಿರಿ."

"ಸರಿ, ನಿಮ್ಮ ಅಭಿಪ್ರಾಯವು ಅಷ್ಟಕ್ಕೆ ಬರುವುದೆಂದು ನಾವು ಮೊದಲೇ ಊಹಿಸಿದೆವು. ಆದರೆ, ನಿಶ್ಚಯವನ್ನು ಹೇಳುತ್ತೇನೆ, ನೀವು ಪ್ರೆಸಿಡೆಂಟರಾಗಿರುವ ಕಾಲದಲ್ಲಿ ನಮ್ಮನ್ನು ಪಾಶಕ್ಕೆ ಹಾಕುವರೆಂಬ ಹೆದರಿಕೆಯೇನೂ ಇಲ್ಲ."

ದಕ್ಷಿಣದ ನಿಯೋಗಿಗಳು ಹಿಂದಿರುಗಿದರು.

ಜಯವಾಗುವುದೆಂಬ ಭರವಸೆಯು ದಕ್ಷಿಣದಲ್ಲಿ ಸ್ವಲ್ಪವೂ ಇರಲಿಲ್ಲ. ಈ ಸಮಯದಲ್ಲಿ ಸ್ನೇಹಭಾವವನ್ನು ತೋರಿಸಿದರೆ ದಕ್ಷಿಣವು ಹೆಚ್ಚಿನ ಪ್ರಸನ್ನತೆಯಿಂದ ಮರೆಹೋಗಬಹುದೆಂದು ಲಿಂಕನ್ನನು ಯೋಚಿಸಿದನು. ದಕ್ಷಿಣದ ಕಷ್ಟವನ್ನೂ ನಷ್ಟವನ್ನೂ ನೆನಸಿಕೊಂಡನು. ನೆನಸಿಕೊಂಡ ಹಾಗೆ ಖೇದವುಂಟಾಯಿತು. ಆದಕಾರಣ ಬಂದರಿನಿಂದ ಹಿಂದಿರುಗಿದ ಮಾರನೆಯ ದಿನ ಪ್ರಕಟನೆಯೊಂದನ್ನು ಹೊರಡಿಸುವ ಯೋಚನೆಮಾಡಿ ವಿಷಯವನ್ನು ಗುರುತು ಹಚ್ಚಿದನು. ಅದರ ಪ್ರಕಾರ ನಾಲ್ವತ್ತು ಕೋಟಿ ಡಾಲರುಗಳು ದಕ್ಷಿಣದ ಸಂಸ್ಥಾನಗಳಿಗೆ ಸಲ್ಲಬೇಕಾಗಿದ್ದಿತು. ಸಂಸ್ಥಾನಗಳು ಗುಲಾಮರಿಗೆ ಸ್ವಾತಂತ್ರ್ಯವುಂಟಾದುದರ ದೆಸೆಯಿಂದ ಹೊಂದಿದ ನಷ್ಟಕ್ಕಾಗಿ ಆ ದ್ರವ್ಯವನ್ನು ಹಂಚಿಕೊಳ್ಳಬೇಕೆಂದು ಏರ್ಪಾಡಿದ್ದಿತು. ದಕ್ಷಿಣದ ಕೊಬ್ಬು ಮುರಿಯಿತೆಂದು ತಿರಸ್ಕಾರದಿಂದ ಕಾಣದೆ ಅದರ ಕಷ್ಟಸುಖಗಳನ್ನು ವಿಚಾರಿಸಿ ಅನುಕೂಲಮಾಡಿದರೆ, ದಕ್ಷಿಣಕ್ಕೂ ಹೆಚ್ಚಿನ ಕೊರಗು ಉಂಟಾಗುತ್ತಿರಲಿಲ್ಲ. ಈ ಪ್ರಯತ್ನದಿಂದ ರಾಜ್ಯದಲ್ಲಿ ನೆಮ್ಮದಿಯು ಶೀಘ್ರವಾಗಿಯೂ ಸ್ಥಿರವಾಗಿಯೂ ನೆಲೆಗೊಳ್ಳುತ್ತಿದ್ದಿತು. ಪರಿಹಾರದ್ರವ್ಯದಲ್ಲಿ ಅರ್ಧವನ್ನು, ಯುದ್ಧವು ಏಪ್ರಿಲ್ ಒಂದನೆಯ ತಾರೀಖಿನೊಳಗೆ ಪೂರೈಸಿದರೆ ತತ್‌ಕ್ಷಣವೇ ಕೊಡಬೇಕೆಂದೂ, ಉಳಿದ ಅರ್ಧವನ್ನು ಶಾಸನಕ್ರಮದ ತಿದ್ದುಪಾಟು ಚಲಾವಣೆಗೆ ಬಂದಮೇಲೆ ಕೊಡಬೇಕೆಂತಲೂ ಲಿಂಕನ್ನನ ಅಭಿಪ್ರಾಯವಿದ್ದಿತು. ಆ ಮಸೂದೆಯನ್ನು ಅವನು ಮಂತ್ರಿಗಳೆದುರಿಗೆ ಓದಿದನು. ಒಬ್ಬನಾದರೂ ಅದಕ್ಕೆ ಒಡಂಬಡಲಿಲ್ಲ. "ನೀವೆಲ್ಲರೂ ನನಗೆ ಪ್ರತಿಕೂಲರಾಗಿರುವಿರಿ," ಎನ್ನುತ್ತ ಲಿಂಕನ್ನನು ಖಿನ್ನನಾದನು. ಬಹಳ ದುಃಖವಾಯಿತು. ಮಸೂದೆಯ ಪತ್ರಗಳನ್ನು ಒಂದು ಕಡೆಗೆ ತೆಗೆದಿಟ್ಟುಬಿಟ್ಟನು.

ಚಳಿಗಾಲವು ಪ್ರಾಪ್ತವಾಗಲಾಗಿ ಉತ್ತರದ ಸೈನ್ಯಗಳು ವಿರಾಮವನ್ನು ಪಡೆದುವು. ಸವನ್ನದಲ್ಲಿದ್ದ ಷೆರ್ಮನ್ನನು ಮುಂದಕ್ಕೆ ಹೊರಡಲು ಸಿದ್ಧಮಾಡಿಕೊಳ್ಳುತ್ತಿದ್ದನು. ಈ ದಂಡಯಾತ್ರೆಯು ಪ್ರಯಾಸಕರವಾದುದು. ನದಿಗಳೂ, ಜೌಗು ಪ್ರದೇಶಗಳೂ ಮಾರ್ಗವನ್ನು ನಿರೋಧಿಸುತ್ತಿದ್ದುವು. ಅಲ್ಲಲ್ಲಿ ಹವವು ಅನಾರೋಗ್ಯವನ್ನುಂಟುಮಾಡುತ್ತಿದ್ದಿತು. ಈ ಕಾಲದಲ್ಲಿ ದಕ್ಷಿಣವು ಸುಮ್ಮನೆ ಕುಳಿತಿರಲಿಲ್ಲ. ಷೆರ್ಮನ್ನನಮೇಲೆ ಹೊರಡಿಸುವುದಕ್ಕಾಗಿ ಸಾಧ್ಯವಾದಷ್ಟು ಸೈನ್ಯವನ್ನೂ ಎಲ್ಲಾ ಭಾಗಗಳಿಂದಲೂ ತಂದು ಅಗಸ್ಟವೆಂಬ ಪ್ರದೇಶದಲ್ಲಿ ಸೇರಿಸಲು ಪ್ರಯತ್ನಿಸುತ್ತಿದ್ದಿತು. ಅದನ್ನು ತಿಳಿದು ಷೆರ್ಮನ್ನನು ಒಂದು ಕಡೆ ಅಗಸ್ಟದ ಮೇಲೆ ದಂಡೆತ್ತಿ ಬಂದು ಕೈಮಾಡುವಂತೆಯೂ ಮತ್ತೊಂದುಕಡೆ ಚಾರ್ಲಸ್ಟನ್ನಿನ ಮೇಲೆ ಕೈಮಾಡುವಂತೆಯೂ ನಟಿಸಿ, ಯಾವುದನ್ನೂ ಮಾಡದೆ ಮಧ್ಯದ ದಾರಿಯಲ್ಲಿ ಹೊರಟು, ಅಸಾಧಾರಣವಾದ ವೇಗದಿಂದ ನಡೆದು ಉತ್ತರದಲ್ಲಿದ್ದ ಕೊಲಂಬಿಯವನ್ನು ತಲಪಿದ್ದನು.

ಅವನ ಸೈನ್ಯವು ಆ ಮಾರ್ಗದಲ್ಲಿ ಅಷ್ಟುಬೇಗ ನಡೆಯುವುದೆಂದು ಯಾರೂ ನೆನಸಿರಲಿಲ್ಲ. ಕೊಲಂಬಿಯವು ದಕ್ಷಿಣ ಕೆರೊಲಿನದಲ್ಲಿ ಮುಖ್ಯವಾದುದು. ಆ ಸಮಾಚಾರವು ತಿಳಿದು ಅಗಷ್ಟದಲ್ಲಿ ಸೈನ್ಯವು ಸೇರುತ್ತಿದ್ದುದು ನಿಂತುಹೋಯಿತು. ದಕ್ಷಿಣದ ಜನಗಳು ಊರೊಳಗಿದ್ದ ಹತ್ತಿಯ ರಾಶಿಗೆ ಬೆಂಕಿಯನ್ನಿಟ್ಟು ನಗರವನ್ನೆಲ್ಲಾ ಸುಟ್ಟು ಪಲಾಯನಮಾಡಿದರು. ಕೊಲಂಬಿಯವು ಉತ್ತರದವರ ಕೈ ಸೇರಿದಮೇಲೆ ಚಾರ್ಲ ಸ್ಟನ್ನಿಗೆ ಮುಳಿ ಬರುವುದರಲ್ಲಿ ಸಂದೇಹವಿರಲಿಲ್ಲ. ರೈಲುರಸ್ತೆಗಳೆಲ್ಲಾ ಹಾಳಾದುವು. ನಿವಾಸಿಗಳು ಅದನ್ನು ತ್ಯಜಿಸಿ ಓಡಿಹೋದರು.

ಅಡ್ಮಿರಲ್ ಪೋರ್ಟರನು ಸಮುದ್ರತೀರದಲ್ಲಿ ಕಾದು, ಷೆರ್ಮನ್ನನಿಗೆ ಒತ್ತಾಸೆ ಮಾಡಲು ಸಿದ್ಧವಾಗಿದ್ದನು. ಟಾಮಸ್ಸನ ಸೈನ್ಯವು ಟೆನ್ನೆಸ್ಸೀಯಲ್ಲಿದ್ದಿತು. ಗ್ರಾಂಟನು ಚಳಿಗಾಲವೆಂದು ಅದಕ್ಕೆ ವಿಶ್ರಾಂತಿಯನ್ನು ಕೊಡಲಿಲ್ಲ. ಅದರೊಳಗೆ ಒಂದು ಭಾಗವು ಷೋಫೀಲ್ಡನೊಡನೆ ವಾಷಿಂಗ್ಟನ್ನಿಗೆ ಬಂದು, ಹಡಗನ್ನು ಹತ್ತಿ, ಉತ್ತರ ಕೆರೊಲಿನದಲ್ಲಿ ವಿಲ್ಮಿಂಗ್‌ಟನ್ನಿಗೆ ಉತ್ತರದಲ್ಲಿದ್ದ ಸ್ಥಳಗಳನ್ನು ರಕ್ಷಿಸಲು ಹೊರಟಿತು. ವಿಲ್ಮಿಂಗ್‌ಟ‌ದುರ್ಗ ಒಂದು ಮಾತ್ರ ದಕ್ಷಿಣದ ಸ್ವಾಧೀನದಲ್ಲಿದ್ದಿತು. ಡಿಸೆಂಬರಿನಲ್ಲಿ ಜನರಲ್ ಬಟ್ಲರನು ಗ್ರಾಂಟನ ಮಾತನ್ನು ಧಿಕ್ಕರಿಸಿ, ಪೋರ್ಟರನೊಡನೆ ಹೋಗಿ ಆ ಕೋಟೆಗೆ ಮುತ್ತಿಗೆಹಾಕಿದ್ದನು. ಆದರೆ ಅದನ್ನು ಗೆದ್ದುಕೊಳ್ಳಲಾಗಲಿಲ್ಲ. ಸೋಲಾಯಿತೆಂದು ಪೋರ್ಟರನು ನಿರಾಶನಾಗಿರಲಿಲ್ಲ. ಈಗ ಅವನು ಮತ್ತೊಬ್ಬ ದಳಪತಿಯ ಸಹಾಯವನ್ನು ಹೊಂದಿ ವಿಲ್ಮಿಂಗ್‌ಟನ್ನಿಗೆ ಅತ್ಯಂತ ಸಮೀಪದಲ್ಲಿದ್ದ ಫಿಷರ್ ಕೋಟೆಯನ್ನು ಹಿಡಿದನು. ದುರ್ಗಕ್ಕೆ ಆಹಾರವು ಬರಲು ದಾರಿಯು ತಪ್ಪಿಹೋಯಿತು. ಫೆಬ್ರವರಿ ಇಪ್ಪತ್ತೆರಡನೆಯ ತಾರೀಖಿನಲ್ಲಿ ಷೋಫೀಲ್ಡನು ಊರನ್ನು ಆಕ್ರಮಿಸಿದನು. ಕೋಟೆಯೂ ವಶವಾಯಿತು. ಉತ್ತರಕ್ಕೆ ಇಲ್ಲಿಯೂ ಬಲವಾದ ನೆಲೆಯೊಂದು ಸಿಕ್ಕಿತು.

ರಿಚ್‌ಮಂಡಿಗೂ ಪೀಟರ್ಸ್‌ಬರ್ಗಿಗೂ ಪೂರ್ವದಲ್ಲಿ ಇಳಿದಿದ್ದ ಗ್ರಾಂಟನು ತನ್ನ ಆಕ್ರಮಣವನ್ನು ವಿಸ್ತರಿಸುತ್ತ ಬಂದನು. ಲೀಯು ತನ್ನ ರಕ್ಷಣೆಯನ್ನು ಹೆಚ್ಚಿಸಿದನು. ದಕ್ಷಿಣದಿಂದ ಬರುತ್ತಿದ್ದ ಮುಖ್ಯವಾದ ರೈಲುಹಾದಿಯು ಅಧೀನವಾಗಿ ನೈಋತ್ಯದ ಕಡೆಯಿಂದ ಪೀಟರ್ಸ್‌ಬರ್ಗಿಗೆ ಸಮಾಚಾರವು ತಲಪದಂತೆ ಮಾಡುವುದು ಸಾಧ್ಯವಾಯಿತು. ರಿಚ್‌ಮಂಡ್ ನಗರವು ಇನ್ನು ಬಹಳಕಾಲ ಪ್ರತಿಭಟಿಸಿ ನಿಲ್ಲುತ್ತಿರಲಿಲ್ಲ. ಲೀಯು ಸೈನ್ಯದೊಡನೆ ಅಲ್ಲಿಂದ ತಪ್ಪಿಸಿಕೊಂಡು ಹೋಗಿ ಯುದ್ಧವನ್ನು ನಡೆಯಿಸಬಲ್ಲನೇ ಎಂಬ ಪ್ರಶ್ನೆಯು ಎಲ್ಲರ ಬಾಯಿಂದಲೂ ಹೊರಟಿತು.

ಲೀಯು ದಕ್ಷಿಣದ ಕಡೆ ಮುಖ್ಯಸೇನಾಪತಿಯಾಗಲಾಗಿ ಯುದ್ಧವು ಸ್ವಲ್ಪ ಕಾಲದವರೆಗೆ ತಳ್ಳಿತು. ಹಿಂದಿನ ಜುಲೈ ತಿಂಗಳಿಂದ ಡೇವಿಸ್ಸನ ತಿರಸ್ಕಾರಕ್ಕೆ ಪಾತ್ರನಾಗಿದ್ದ ಜೋಸೆಫ್ ಜಾನ್ಸ್ಟನ್ನನು ಷೆರ್ಮನ್ನನ ಮೇಲೆ ನಡೆಯಬೇಕಾಗಿದ್ದ ಸೈನ್ಯದಲ್ಲಿ ಅಧಿಪತ್ಯವನ್ನು ವಹಿಸಿದನು. ಷೆರ್ಮನ್ನನು ರಿಚ್‌ಮಂಡಿನ ಸಮೀಪಕ್ಕೆ ಹೋಗಿ ಗ್ರಾಂಟನನ್ನು ಸೇರಿಕೊಳ್ಳದಂತೆ ತಡೆಯುವುದು ಜಾನ್ಸ್ಟನ್ನನ ಕೆಲಸ

ವಾಗಿದ್ದಿತು. ದಕ್ಷಿಣದ ಸೈನ್ಯವು ಒಟ್ಟು 89,000 ವಿದ್ದಿತು. ಆದರೆ ಒಂದೇಕಡೆಯಲ್ಲಿರಲಿಲ್ಲ; ಅಲ್ಲಲ್ಲಿದ್ದಿತು. ಆದಕಾರಣ ಜಾನ್‌ಸ್ಟನ್ನನು ಎಷ್ಟು ಸಾಹಸವಾಡಿದರೂ 33,000 ಕ್ಕಿಂತ ಹೆಚ್ಚಿನ ಸೈನ್ಯವನ್ನು ಸೇರಿಸಲಾಗಲಿಲ್ಲ. ಷೆರ್ಮನ್ನನ ಬಳಿಯಲ್ಲಿ ಉತ್ತರಕೆರೊಲಿನದಲ್ಲಿ ಷೋಫೀಲ್ಡನ ಕೈಕೆಳಗಿದ್ದ ಭಾಗವನ್ನೂ ಸೇರಿಸಿದರೆ 80—90 ಸಾವಿರ ಮಂದಿಯ ಸೈನ್ಯವಾಗುತ್ತಿದ್ದಿತು. ಷೆರ್ಮನ್ನನು ಬೇಗ ಬೇಗ ಸೈನ್ಯವನ್ನು ನಡೆಯಿಸಿ, ತನಗೆದುರಾಗಿ ಸಿದ್ಧವಾಗುತ್ತಿರುವ ಸೈನ್ಯವು ಹೆಚ್ಚಿ ಬಲಪಡದಂತೆ ಮಾಡಬೇಕಾಗಿದ್ದಿತು. ಪ್ರತಿಯಾಗಿ ಜಾನ್‌ಸ್ಟನ್ನನು ತನ್ನ ದಂಡಿನ ಸಹಾಯದಿಂದ, ಷೆರ್ಮನ್ನನು ಷೋಫೀಲ್ಡಿನೊಡನೆ ಸೇರಿಕೊಳ್ಳದಂತೆ ಮಾಡಬೇಕಾಗಿದ್ದಿತು. ಹಾಗೆ ಸೇರಿಕೊಳ್ಳುವುದಕ್ಕೆ ಸ್ವಲ್ಪಮುಂಚೆ ಯುದ್ಧವಾಯಿತು. ಷೆರ್ಮನ್ನನಿಗೆ ಬಹಳ ನಷ್ಟವಾಯಿತು. ಆದರೂ ಕೊನೆಯಲ್ಲಿ ಜಾನ್‌ಸ್ಟನ್ನನು ಹಿಂದಡಿಯಿಟ್ಟು ತಾನಿದ್ದ ಸ್ಥಳದ ಸುತ್ತಲೂ ಕಂದಕಗಳನ್ನು ತೋಡಿ ರಕ್ಷಿಸಿಕೊಂಡನು. ಆಸ್ಥಿತಿಯಲ್ಲಿ ಷೆರ್ಮನ್ನನು ಅವನ ಮೇಲೆ ಬೀಳಲಿಲ್ಲ. ಅಷ್ಟು ಹೊತ್ತಿಗೆ ಷೋಫೀಲ್ಡನು ಬಂದು ಸೇರಿಕೊಂಡನು. ಜಾನ್‌ಸ್ಟನ್ನನು ದೂರಕ್ಕೆ ಹೊರಟುಹೋದನು. ಸಣ್ಣದೊಂದು ಪಟ್ಟಣವೂ ರೈಲುರಸ್ತೆಯೂ ಷೆರ್ಮನ್ನನ ಕೈ ಸೇರಿದುವು. ಪಟ್ಟಣವು ಸೇರಿದುದರಿಂದ ಅವನು, ಅವಶ್ಯಕವೆಂದು ವರ್ತಮಾನವು ಗ್ರಾಂಟನ ಕಡೆಯಿಂದ ಬಂದಕೂಡಲೇ ತನ್ನ ಸೈನ್ಯವನ್ನು ಹಡಗಿನಮೂಲಕ ತಡಮಾಡದೆ ರಿಚ್‌ಮಂಡಿನ ಬಳಿಗೆ ಕಳುಹಿಸಲು ಅನುಕೂಲವಾಯಿತು. ಷೆರ್ಮನ್ನನು ಐವತ್ತು ದಿನಗಳಲ್ಲಿ 425 ಮೈಲಿಗಳನ್ನು ದಾಟಬಂದಿದ್ದನು. ದಾರಿಯಲ್ಲಿ ಭೂಮಿಯೂ ಹವವೂ ಬಹಳ ತೊಂದರೆಯನ್ನು ಕೊಟ್ಟುವು. ಸೈನಿಕರು ಅದನ್ನೆಲ್ಲಾ ಸಹಿಸಿದರು. ಸಹಿಸಿ ಬಹಳ ಯುಕ್ತಿಯಿಂದ ಕೆಲಸಮಾಡಿ ಅನುಕೂಲಮಾಡಿಕೊಂಡು ಬಂದರು. ಅವನು ಹಿಡಿದಿದ್ದ ಸ್ಥಳಕ್ಕೂ ಪೀಟರ್ಸ್‌ಬರ್ಗಿಗೂ ಈಗ ರೈಲುರಸ್ತೆಯ ಪ್ರಯಾಣದಲ್ಲಿ ನೂರನಲವತ್ತು ಮೈಲಿಗಳ ಅಂತರವಿದ್ದಿತು. ಜಾನ್‌ಸ್ಟನ್ನನು ಹಿಂದೆಬಿದ್ದು ಗ್ರೀನ್ಸ್‌ಬರೋ ಎಂಬ ಸ್ಥಳಕ್ಕೆ ಹೊಗಿ ನಿರೀಕ್ಷಿಸಿದನು. ಗ್ರೀನ್ಸ್‌ಬರೋವಿಗೂ ರಿಚ್‌ಮಂಡ್—ಪೀಟರ್ಸ್‌ಬರ್ಗ್‌ಗಳಿಗೂ ರೈಲುರಸ್ತೆಯಿದ್ದಿತು. ಲೀಯು ಆ ಮಾರ್ಗವಾಗಿ ತಪ್ಪಿಸಿಕೊಂಡುಹೋಗಿ ಅವನೊಡನೆ ಸೇರಿಕೊಳ್ಳಬಹುದಾಗಿದ್ದಿತು.

ರಿಚ್‌ಮಂಡನ್ನು ಬಿಟ್ಟು ಹೊರಟುಹೋಗಲು ಲೀಯು ಇದುವರೆಗೆ ಮಾಡಿದ ಆಲೋಚನೆಗಳೆಲ್ಲವೂ ಈಗ ವ್ಯರ್ಥವಾದವು. ರಸ್ತೆಗಳಲ್ಲಿ ಪ್ರಯಾಣವು ಅಸಾಧ್ಯವಾಗಿದ್ದಿತು. ಅವನು ಸಮಯವನ್ನು ನಿರೀಕ್ಷಿಸಿದನು. ಆದರೆ ನಿರೀಕ್ಷಿಸುತ್ತ ಕಾಲವನ್ನು ತಳ್ಳಿದಹಾಗೆ ಹೊರಗೆ ಹೋಗಲು ಮಾರ್ಗಗಳು ಒಂದೊಂದಾಗಿ ಕಡಿಮೆಯಾಗುತ್ತ ಬಂದುವು. ಷೆರಿಡನ್ನನು ಈಗ ಮೇಜರ್ ಜನರಲ್ ಪದವಿಗೆ ಬಂದನು. ಜನರು ಅವನ ಸಾಹಸಗಳನ್ನು ನೋಡಿ ಸಂತೋಷಗೊಂಡಿದ್ದರು. ಅಂಥವರು ಸೇನಾಪತಿಗಳಾಗಿರುವ ತನಕ ತಮಗೆ ಅಪಜಯದ ಭಯವಿಲ್ಲವೆಂದು ಅವರಿಗೆ ಭರವಸೆಯಿದ್ದಿತು. ಗ್ರಾಂಟನು, ಷೆರ್ಮನ್ನನು ತನಗೆ ಬಲಗೈಯಾಗಿರುವಂತೆ ಷೆರಿಡನ್ನನು ಎಡಗೈಯಾಗಿರುವನೆಂದು ಭಾವಿಸಿದ್ದನು. ಷೆರಿಡನ್ನನು ವಿವೇಕಿ; ವಿಮರ್ಶೆಯಿಂದ

ಕೆಲಸಮಾಡುತ್ತಿದ್ದನು. ಹೇಳಿಸಿಕೊಳ್ಳುತ್ತಿರಲಿಲ್ಲ. ತನ್ನ ಯಜಮಾನನ ಕೆಲಸವನ್ನು ತನ್ನ ಕೆಲಸವೆಂದು ಭಾವಿಸಿ ಮಾಡುತ್ತಿದ್ದನು. ಚಳಿಗಾಲವು ಬರಲಾಗಿ ಅವನ ಕುದುರೆಗಳು ಚಳಿಯನ್ನು ತಡೆಯಲಾರದೆ ನರಳಿದುವು. ಆದಕಾರಣ ಷೆರಿಡನ್ನನು ಗೂಡನ್ನು ಹೊಕ್ಕಿಕೊಳ್ಳಬೇಕಾಯಿತು. ಆದರೆ ಫೆಬ್ರವರಿ ಇಪ್ಪತ್ತೇಳನೆಯ ತಾರೀಖಿನ ದಿನ ಹೊರಬಿದ್ದು, 10,000 ಕುದುರೆಗಳೊಡನೆ ಷೆನಾಂಡೋವಾ ಬಯಲಿನಲ್ಲಿ ಹೊರಟನು. ಅರ್ಲಿಯು ಆ ಬಯಲಿನಲ್ಲಿ ಕೆಲಸವಿರಲಿಲ್ಲವಾಗಿ, ತನ್ನ ಕುದುರೆಗಳನ್ನು ಚದುರಿಸಿ ಕಳುಹಿಸಿಬಿಟ್ಟಿದ್ದನು ; ಉಳಿದ ಭಾಗವನ್ನು ಷೆರಿಡನ್ನನು ಈಗ ಚದುರಿಸಿ ಓಡಿಸಿಬಿಟ್ಟನು. ಅರ್ಲಿಯ ಬಳಿಯಲ್ಲಿದ್ದ ಪದಾತಿಯೂ ಮದ್ದುಗುಂಡುಗಳೂ ಸೆರೆ ಸಿಕ್ಕಿದುವು. ಅಲ್ಲಿಂದ ಮುಂದೆ ಅವನು ರಿಚ್‌ಮಂಡಿನಕಡೆ ತಿರುಗಿದನು. ಲೀಗೆ ಒತ್ತಾಸೆಮಾಡಲು ಹತ್ತಿರದಲ್ಲಿದ್ದ ಜಾನ್ಸನ್ನನ ಸೈನ್ಯವೊಂದು ಹೊರತು ಆ ಕ್ಷೇತ್ರದಲ್ಲಿ ಮತ್ತಾವ ದಂಡೂ ಇರಲಿಲ್ಲ. ನೂರಾರು ಮೈಲಿಗಳ ಆಚೆಗಿದ್ದ ಕೆಲವು ದಂಡುಗಳು ತೀರ ಅಲ್ಪವಾದುವುಗಳು ; ನಡುವೆಯಿದ್ದ ರೈಲುರಸ್ತೆಯೂ ಹಾಳಾಗಿದ್ದಿತು ; ಆದಕಾರಣ ಅವು ಸಹಾಯಕ್ಕೆ ಬರುವ ಸಂಭವವಿರಲಿಲ್ಲ. ಹೀಗೆ ಷೆರಿಡನ್ನನ ಮಾರ್ಗವು ನಿರ್ವಿಘ್ನವಾಗಿದ್ದಿತು. ಅವನು ಮುಂದೆ ಹೋಗಿ, ಷೆರ್ಮನ್ನನನ್ನು ತಲಪಬೇಕಾಗಿದ್ದಿತು. ಆದರೆ ಜೇಂಸ್ ನದಿಯಲ್ಲಿ ಪ್ರವಾಹವು ವಿಶೇಷವಾಗಿ, ದಾರಿಯನ್ನು ಕಟ್ಟಿಬಿಟ್ಟಿತು. ಷೆರಿಡನ್ನನು ರಿಚ್‌ಮಂಡನ್ನು ಉತ್ತರದಿಕ್ಕಿನಲ್ಲಿ ಬಳಸಿ ಗ್ರಾಂಟನೊಡನೆ ಸೇರಿಕೊಂಡನು. ಕೊನೆಯ ಪ್ರಯತ್ನವನ್ನು ಮಾಡಬೇಕೆಂದಿದ್ದ ಗ್ರಾಂಟನಿಗೆ ಬಹಳ ಸಹಾಯವಾಯಿತು.

ಮಾರ್ಚಿ ನಾಲ್ಕನೆಯ ತಾರೀಖಿನದಿನ ಲಿಂಕನ್ನನು ಎರಡನೆಯಾವೃತ್ತಿ ಅಧಿಕಾರವನ್ನು ವಹಿಸಿದನು. ಆ ಕಾಲದಲ್ಲಿ ನೀಗ್ರೋ ಸೈನಿಕರು ಅವನ ಅಂಗರಕ್ಷಕರಾಗಿದ್ದರು. ಅತಿಶಯವು ಮತ್ತಾವುದೂ ಇರಲಿಲ್ಲ. ಈ ತಡವೆ ಭರವಸೆಯ ಮಾತನ್ನಾವುದನ್ನೂ ಆಡಲಿಲ್ಲ. ಏಕೆಂದರೆ ಅವನ ಮನಸ್ಸಿನಲ್ಲಿ ಇದ್ದ ಯೋಚನೆಯು ಯುದ್ಧದ ವಿಷಯವಾದುದಲ್ಲ. ಯುದ್ಧವು ಮುಗಿದಮೇಲೆ ಸಮಾಧಾನವನ್ನೂ ಸಮಾಧಾನ ಹೊಂದಿದ ಜನರನ್ನೂ ದಕ್ಷಿಣದಲ್ಲಿ ಹೇಗೆ ಸ್ಥಾಪಿಸಲಾದೀತೆಂದು ಹಗಲೂ ಇರುಳೂ ಚಿಂತಿಸುತ್ತಿದ್ದನು. ದಕ್ಷಿಣದ ದೆಸೆಯಿಂದ ಅಡಚಣೆಗಳೊದಗುತ್ತಿದ್ದಂತೆ ಉತ್ತರದ ದೆಸೆಯಿಂದಲೂ ಒದಗುತ್ತಿದ್ದುವು. ಈ ಸಂದರ್ಭದಲ್ಲಿ ಅವನು ಕೊಟ್ಟಿದ್ದ ಸಲಹೆಗಳಿಂದ ಅವನ ಮಾರ್ಗವೆಂತಹದೆಂಬುದು ಗೊತ್ತಾಗುತ್ತದೆ. ಅವನ ಪ್ರಥಮ ಭಾಷಣದಲ್ಲಿಯೂ ಅದು ತೋರುತ್ತಿದ್ದಿತು. ಈ ತಡವೆ ಭಾಷಣವು ದೊಡ್ಡದಾಗಿರಲಿಲ್ಲ. ಆದರೆ ಅದೂ ಗೆಟ್ಟಿಸ್‌ಬರ್ಗ್ ಯುದ್ಧಕ್ಷೇತ್ರದ ಬಳಿಯಲ್ಲಿ ಮಾಡಿದ ಭಾಷಣವೂ ಅನುಪಮವೆನ್ನಿಸಿಕೊಂಡಿರುವುವು.

ಲಿಂಕನ್ನನು ಮತಧರ್ಮದಲ್ಲಿ ನಿಷ್ಠನಲ್ಲ. ತಾನು ಕ್ರಿಶ್ಚಿಯನರ ಮತಕ್ಕೆ ಸೇರಿದವನಲ್ಲವೆಂತಲೇ ಹೇಳುತ್ತಿದ್ದನು. ಪುರೋಹಿತವರ್ಗದವರ ಮಾತಿನಲ್ಲಿ ನಂಬಿಕೆಯನ್ನಿಟ್ಟಿರಲಿಲ್ಲ. ಬೈಬಲಿನಲ್ಲಿರುವ ಮಾತುಗಳನ್ನು ಹೀಗೂ ಹಾಗೂ ನುಲಿದು ಅವರು ಸಮಯೋಚಿತವಾದ ಅರ್ಥವನ್ನು ಹೊರಡಿಸುವರೆಂದು ಅವನಿಗೆ

ಭಾವನೆಯಿದ್ದಿತು. ಲಿಂಕನ್ನನು ಬೈಬಲನ್ನು ಬಹಳವಾಗಿ ಓದಿ ಮುಂದಟ್ಟುಮಾಡಿಕೊಂಡಿದ್ದನು. ಏಸುಕ್ರಿಸ್ತನ ಗುಣವನ್ನು ಮೆಚ್ಚಿ ಮೇಲುಪಂಕ್ತಿಯನ್ನಾಗಿ ಇಟ್ಟುಕೊಂಡಿದ್ದನು. ಪರಮಾತ್ಮನೊಬ್ಬನಿರುವನೆಂತಲೂ ಆತನು ವಿಶ್ವವನ್ನೂ ವ್ಯಾಪಿಸಿ ಅಧಿಕಾರಮಾಡುವನೆಂತಲೂ ಲಿಂಕನ್ನನು ಭಾವಿಸಿದ್ದನು. ಆ ಪರಮಾತ್ಮನು ತನಗೆ ಜೀವನಕಾಲದಲ್ಲಿ ಒಳ್ಳೆಯದನ್ನೇ ಮಾಡುತ್ತಿದ್ದನು. "ದೇವರೆಂಬಾತನೊಬ್ಬನಿದ್ದಾನೆ. ಆತನು ಅಧರ್ಮವನ್ನೂ ದಾಸ್ಯವನ್ನೂ ದ್ವೇಷಿಸುವನು.....ಈ ಜಗತ್ತಿನಲ್ಲಿ ನನಗೆ ಒಂದು ಸ್ಥಳವನ್ನೂ ಒಂದು ಕೆಲಸವನ್ನೂ ಆತನು ನೇಮಿಸಿರುವಂತೆ ತೋರುತ್ತದೆ; ಅದಕ್ಕೆ ಸಿದ್ಧವಾಗಿದ್ದೇನೆ. ನಾನು ಅಣುಮಾತ್ರದವನು; ಆದರೆ ಸತ್ಯವು ಸರ್ವಾತ್ಮಕವಾದುದು; ನಾನು ಮಾಡುತ್ತಿರುವುದು ನ್ಯಾಯವೆಂಬುದನ್ನು ಬಲ್ಲೆನು; ಏಕೆಂದರೆ, ಸ್ವಾತಂತ್ರ್ಯವು ನ್ಯಾಯವಾದುದು; ಕ್ರಿಸ್ತನು ಅದನ್ನು ಉಪದೇಶಿಸುತ್ತಾನೆ. ಕ್ರಿಸ್ತನು ದೇವರು. ಒಂದು ಸಂಸಾರವು ಒಡೆದು ಹೋದರೆ ಬಳಿಕ ನೆಮ್ಮದಿಯಿಂದ ಬಾಳದೆಂದು ಹಿಂದೆ ಹೇಳಿದ್ದೇನೆ. ಕ್ರಿಸ್ತನೂ ಅದನ್ನೇ ಹೇಳುವನು. ವಿವೇಕವೂ ಅದನ್ನೇ ಹೇಳುವುದು....." ಆದರೂ ಲಿಂಕನ್ನನು ಭಗವಂತನನ್ನು ಧ್ಯಾನಿಸಿ ಸ್ತುತಿಸದಿರುತ್ತಿರಲಿಲ್ಲ.

ಲಿಂಕನ್ನನು ತನ್ನ ಪ್ರಥಮಭಾಷಣದಲ್ಲಿ ಹೀಗೆಂದನು: "ದೇಶದ ಪ್ರಜೆಗಳಿರಾ, ಎರಡನೆಯಾವೃತ್ತಿ ಅಧಿಕಾರವನ್ನು ವಹಿಸುತ್ತಿದ್ದೇನೆ; ಆದರೆ ಈ ತಡವೆ ವಿಸ್ತಾರವಾದ ಭಾಷಣವನ್ನೇನೂ ಮಾಡಬೇಕಾದುದಿಲ್ಲ. ಹಿಂದೆ, ಯಾವ ಮಾರ್ಗವನ್ನು ಅನುಸರಿಸುವುದು ಹಿತಕರನಾದುದೆಂಬುದನ್ನು ವಿವರಿಸಿ ಮಾತನಾಡುವುದು ನ್ಯಾಯವಾಗಿ ತೋರಿತು; ಆದರೆ ಈಗ ಅಂತಹ ಹೊಸವಿಚಾರವಾವುದೂ ಇಲ್ಲ. ಯುದ್ಧವು ನಿಮ್ಮೆಲ್ಲರ ಮನಸ್ಸನ್ನೂ ಆಕರ್ಷಿಸಿರುವುದು; ನಿಮ್ಮೆಲ್ಲರ ಶಕ್ತಿಯನ್ನೂ ಎಳೆದುಕೊಂಡಿರುವುದು. ಯುದ್ಧವೂ ಅದರಲ್ಲಿ ಜಯವೂ ಮುಖ್ಯವಾದವುಗಳು. ಈ ಅಂಶವೂ ಯುದ್ಧದ ಸ್ಥಿತಿಯು ಎಂತಹದೆಂಬ ಅಂಶವೂ ನನಗೆ ಗೊತ್ತಿರುವಂತೆ ಪ್ರಜೆಗಳಿಗೂ ಗೊತ್ತಿದೆ. ಅದು ಎಲ್ಲರಿಗೂ ತೃಪ್ತಿಯನ್ನುಂಟುಮಾಡಿ ಉತ್ಸಾಹವನ್ನು ಹೆಚ್ಚಿಸುತ್ತಿರುವುದೆಂದು ನಂಬುತ್ತೇನೆ. ನಮ್ಮ ಮನಸ್ಸಿನಲ್ಲಿ ಭರವಸೆಯೇನೋ ಹೆಚ್ಚಾಗಿದೆ; ಆದರೆ ಹೀಗೇ ಸರಿಯೆಂದು ಮುನ್ನುಡಿಯನ್ನು ಹೇಳುವುದಕ್ಕಾಗುವುದಿಲ್ಲ.

"ನಾಲ್ಕು ವರುಷಗಳ ಹಿಂದೆ ಇದೇಕಾಲದಲ್ಲಿ, ಅಂತಃಕಲಹವೊಂದು ಸದ್ಯದಲ್ಲಿಯೇ ಒದಗುವುದರಲ್ಲಿದೆಯೆಂದು ಕಳವಳವು ಬಹಳವಾಗಿದ್ದಿತು. ಎಲ್ಲರೂ ಹೆದರಿದರು—ಅದನ್ನು ತಪ್ಪಿಸಲು ಎಲ್ಲರೂ ಪ್ರಯತ್ನಿಸಿದರು. ಇದೇ ಸ್ಥಳದಲ್ಲಿ, ಯುದ್ಧಮಾಡದೆಯೇ ಸಂಯೋಗವನ್ನು ಉಳಿಸಿಕೊಳ್ಳಬಹುದೆಂದು ಪ್ರಥಮಸಂಭಾಷಣೆಯು ನಡೆಯುತ್ತಿರುವ ಕಾಲದಲ್ಲಿ, ದಂಗೆಕೋರರ ಕಡೆಯ ಜನಗಳು ಯುದ್ಧ ಮಾಡದೆಯೇ ಸಂಯೋಗವನ್ನು ನಾಶಮಾಡಲು ಪ್ರಯತ್ನಿಸುತ್ತಿದ್ದರು—ಸಂಯೋಗವನ್ನು ಭೇದಿಸಿ, ಇದ್ದಬದ್ದುದನ್ನು ಹಂಚಿಕೊಂಡು ಪಾಲಾಗಲು ಪ್ರಯತ್ನಗಳು ನಡೆಯುತ್ತಿದ್ದುವು. ಎರಡುಕಡೆಯ ಜನಗಳಿಗೂ ಯುದ್ಧದಲ್ಲಿ ಇಷ್ಟವಿರಲಿಲ್ಲ.

ಆದರೆ. ಒಂದು ಪಕ್ಷವು, ಯುದ್ಧವನ್ನಾದರೂ ಮಾಡಬಹುದು ; ಜನಾಂಗದ ಐಕ ಮತ್ಯವನ್ನುಳಿಸಲಾಗುವುದಿಲ್ಲವೆಂದು ಹೇಳಿತು : ಮತ್ತೊಂದು, ಯುದ್ಧವನ್ನಾದರೂ ಮಾಡಿಯೇನು, ಐಕಮತ್ಯವು ನಾಶವಾಗಗೊಡೆನು, ಎಂದು ಹೇಳುತ್ತಿದ್ದಿತು. ಯುದ್ಧವು ಬಂದೇಬಂದಿತು.

ಪ್ರಜಾಸಮುದಾಯದಲ್ಲಿ ಎಂಟರಲ್ಲೊಂದು ಭಾಗವು ನೀಗ್ರೋಜನವಾಗಿದ್ದಿತು. ಅವರು ಸಾಮಾನ್ಯವಾಗಿ ದಕ್ಷಿಣದ ಸಂಸ್ಥಾನಗಳಲ್ಲಿಯೇ ವಾಸಮಾಡುತ್ತಿದ್ದರು. ಈ ಗುಲಾಮರಿಂದ ಯಜಮಾನರಿಗೆ ಬಹಳ ಪ್ರಯೋಜನವಿದ್ದಿತು. ಪ್ರಯೋಜನವೊಂದನ್ನುಮಾತ್ರ ಲಕ್ಷ್ಯದಲ್ಲಿಟ್ಟುಕೊಂಡು ಅಧರ್ಮವಾದ ಕೆಲಸವನ್ನು ಮಾಡಬೇಡವೆಂದು ಉತ್ತರವು ಹೇಳಿತು. ದಕ್ಷಿಣವಾದರೋ ಆ ಪ್ರಯೋಜನವನ್ನು ತ್ಯಾಗಮಾಡಲಾರದಿದ್ದಿತು. ಅಷ್ಟೇ ಅಲ್ಲ. ಅದರಸಲುವಾಗಿ ದಾಸ್ಯವನ್ನು ಚಿರಸ್ಥಾಯಿಯನ್ನಾಗಿ ಮಾಡಿ ಎಲ್ಲಾ ಕಡೆಯಲ್ಲಿಯೂ ಅದನ್ನು ವಿಸ್ತರಿಸಲೆಳಸಿತು. ಆ ಕಾರಣದಿಂದ ಯುದ್ಧವೊದಗಿ ನಷ್ಟವಾಗುವುದಾದರೂ ಅದು ಹಿಂದೆಗೆಯಲಿಲ್ಲ. ಉತ್ತರವು ಅದಕ್ಕೆ ಎಂದಿಗೂ ಒಡಂಬಡುತ್ತಿರಲಿಲ್ಲ. ಯುದ್ಧವು ಮೊದಲಾಯಿತು......ಆದರೆ ಯುದ್ಧವು ಇಷ್ಟೊಂದು ಪರಿಣಾಮವನ್ನು ಹೊಂದಿ ಇಷ್ಟು ಕಾಲದವರೆಗೆ ನಡೆಯುವುದೆಂದು ಯಾವಭಾಗವೂ ನೆನಸಿರಲಿಲ್ಲ. ಪ್ರಾರಂಭದಲ್ಲಿ ದಾಸ್ಯವು ಒಂದು ವಿಧದಲ್ಲಿ ಕಾರಣವಾಗಿದ್ದಿತು. ಆದರೆ ಸ್ವಲ್ಪಕಾಲದ ಬಳಿಕ ಸಂಯೋಗವು ಮುಖ್ಯವಾದ ಕಾರಣವಾಯಿತು. ಹೀಗೆ ಬದಲಾಯಿಸುವುದೆಂತಲೂ ಉತ್ತರದಕ್ಷಿಣಭಾಗಗಳು ನೆನಸಿರಲಿಲ್ಲ. ವಿಜಯವು ಸುಲಭವೆಂದು ಎರಡು ಕಡೆಯವರೂ ನಂಬಿದರು. ಆದರೆ ವಿಜಯವು ಇದುವರೆಗೂ ಲಭಿಸಿಲ್ಲ. ಇದು ವಿಸ್ಮಯವನ್ನುಂಟುಮಾಡುವುದು ಎರಡು ಕಡೆಯವರೂ ಒಂದೇ ಬೈಬಲನ್ನು ಓದುತ್ತಾರೆ; ಒಂದೇ ದೇವರನ್ನು ಧ್ಯಾನಮಾಡುತ್ತಾರೆ. ಪ್ರತಿಯೊಂದು ಭಾಗವೂ ಮತ್ತೊಂದಕ್ಕಾಗದೆ ತನಗೆ ಮಾತ್ರ ಕ್ಷೇಮವಾಗಬೇಕೆಂದು ಆ ದೈವದ ಅನುಗ್ರಹವನ್ನು ಕೋರಿತು......ಆದರೆ ಎರಡರ ಇಷ್ಟಾರ್ಥವನ್ನೂ ನೆರವೇರಿಸಲಾಗುತ್ತಿರಲಿಲ್ಲ---ಯಾವುದರ ಇಷ್ಟಾರ್ಥವೂ ಪೂರ್ತಿಯಾಗಿ ನೆರವೇರಿಲ್ಲ. ಭಗವಂತನ ಸಂಕಲ್ಪವೇ ಬೇರೆ. ತಪ್ಪುಮಾಡುವವರ ಮೇಲೆ ಕೋಪಗೊಂಡು ಆತನು ದಂಡಿಸುವನು. ಅಮೆರಿಕದಲ್ಲಿರುವ ದಾಸ್ಯಪದ್ಧತಿಯು ತಪ್ಪಾದುದು. ಆದಕಾರಣ ದಂಡರೂಪದಿಂದ ಯುದ್ಧವೆಸಗಿತು. ಆ ಯುದ್ಧವು ಬೇಗ ಮುಗಿದುಹೋಗಲೆಂದು ನಾವು ಹಾರೈಸುವೆವು. ಅದಕ್ಕಾಗಿ ದೇವರನ್ನು ಪ್ರಾರ್ಥಿಸುತ್ತೇವೆ. ಆದರೆ ಅದು ಇನ್ನೂ ನಡೆಯಲೆಂದು ಭಗವಂತನ ಮನಸ್ಸಿನಲ್ಲಿರಬಹುದು. ಆಗಲೂ ಅದು ಸಮ್ಮತವಾದುದು, ನ್ಯಾಯವಾದುದು.

'' ಯಾರ ಮೇಲೂ ನಮಗೆ ಅಸೂಯೆ ಬೇಡ ; ಎಲ್ಲರ ವಿಷಯದಲ್ಲಿಯೂ ಕನಿಕರವಿರಲಿ. ದೃಢವಾದ ಮನಸ್ಸಿನಿಂದ ನಾವು ನ್ಯಾಯಮಾರ್ಗವನ್ನು ಅನುಸರಿಸೋಣ— ನ್ಯಾಯವಾದ ಮಾರ್ಗವನ್ನು ತಿಳಿಯಲು ದೇವರು ನಮಗೆ ಬುದ್ಧಿಯನ್ನು ಕೊಟ್ಟಿದಾನೆ. ನ್ಯಾಯವಾದ ಮಾರ್ಗದಲ್ಲಿ ನಡೆದು ಹಿಡಿದ ಕೆಲಸವನ್ನು

ಮುಗಿಸೋಣ.... ''

ಈ ಭಾಷಣವನ್ನು ಶ್ರೋತೃಗಳು ಹೆಚ್ಚಾಗಿ ಶ್ಲಾಘಿಸಲಿಲ್ಲ. ಭಗವಂತನ ಸಂಕಲ್ಪವೂ ಮನುಷ್ಯನ ಸಂಕಲ್ಪವೂ ವ್ಯತ್ಯಸ್ತವಾಗಿರುವುವೆಂಬ ವಿಷಯವನ್ನು ಅವರು ಒಪ್ಪಲಿಲ್ಲ. ಆದರೆ, ಈ ಸಂದರ್ಭದಲ್ಲಿ ವ್ಯತ್ಯಸ್ತವಾಗಿಲ್ಲವೆಂದು ಹೇಳುವುದಾದರೆ, ಜಗತ್ಕರ್ತನಾದ ದೇವರೇ ಇಲ್ಲವೆಂದಂತಾಗುವುದೆಂದು ಲಿಂಕನ್ನನು ಒಂದು ಕಾಗದದಲ್ಲಿ ಬರೆದನು.

ಮಾರ್ಚಿಯ ತಿಂಗಳು ಬಂದಿತು. ಯುದ್ಧವು ಜಯಪ್ರದವಾಗಿ ಸಮಾಪ್ತಿಯನ್ನು ಹೊಂದುತ್ತಿದ್ದಿತು. ಲಿಂಕನ್ನನ ಸುಖಸಂತೋಷಗಳು ಉದಯಿಸಿದುವು. ಒಂದು ದಿನದ ಮಟ್ಟಿಗೆ ತಾನಿರುವ ತಾವಿಗೆ ಬಂದು ವಿರಾಮದಿಂದ ಕಾಲವನ್ನು ಕಳೆದು ಹೋಗಬೇಕೆಂದು ಗ್ರಾಂಟನು ಅವನನ್ನು ಪ್ರಾರ್ಥಿಸಿದನು. ಲಿಂಕನ್ನನು ಅಲ್ಲಿಗೆ ಹೋದನು. ಆ ವೇಳೆಗೆ ಸರಿಯಾಗಿ ಷೆರಿಡನ್ನನು ಅಲ್ಲಿಗೆ ಬಂದಿದ್ದನಲ್ಲದೆ ಷೆರ್ಮನ್ನನೂ ಅಡ್ಮಿರಲ್ ಪೋರ್ಟರನೂ ಬಂದು ಸೇರಿದರು. ಮಂತ್ರಾಲೋಚನೆಯು ನಡೆಯಿತು. ಲಿಂಕನ್ನನು ತನಗೆ ಏನೂ ತಿಳಿಯದೆಂದೂ ಎಲ್ಲವೂ ಸೈನ್ಯಾಧಿಪತಿಗಳಿಗೆ ಸೇರಿದುದೆಂದೂ ಹೇಳಿದನು. ಆದರೆ ದಕ್ಷಿಣದ ಸೈನ್ಯವನ್ನು ಜಯಿಸುವಾಗ ಮಾತ್ರ ಆದಷ್ಟುಮಟ್ಟಿಗೆ ರಕ್ತಶೋಷಣೆಯನ್ನು ತಪ್ಪಿಸಬೇಕೆಂದು ದಳಪತಿಗಳನ್ನು ಪ್ರಾರ್ಥಿಸಿದನು. ಆಲೋಚನೆಗಳು ಪೂರೈಸಿದಮೇಲೆ ಅವನು ಗ್ರಾಂಟನೊಡನೆಯೂ ಸೈನ್ಯದ ಹುದ್ದೇದಾರರೊಡನೆಯೂ ಕುದುರೆಯ ಸವಾರಿ ಹೊರಟನು. ಉದ್ದಕ್ಕೂ ಸೈನಿಕರು ಸಂತೋಷದಿಂದ ಚೀರಿದರು. ಲಿಂಕನ್ನನ ಉನ್ನತ ಮೂರ್ತಿಯೂ ಉನ್ನತನಾದ ಟೋಪಿಯೂ ಎಷ್ಟುದೂರದಿಂದಲಾದರೂ ಪತ್ತೆಯಾಗುತ್ತಿದ್ದಿತು.

ಸೋತವರ ವಿಷಯದಲ್ಲಿ ಮರುಕವನ್ನೂ ಸ್ನೇಹಭಾವವನ್ನೂ ತೋರಿಸಬೇಕೆಂದು ಅವನು ದಳಪತಿಗಳನ್ನು ಮತ್ತೆ ಮತ್ತೆ ಬೇಡಿದನು. ಆದರೆ ವ್ಯವಹಾರದಲ್ಲಿ ಮಾತ್ರ ಬಹಳ ಕಟ್ಟುನಿಟ್ಟಿರಬೇಕು. ಲೀಯು ಸಂಧಿಯ ಪ್ರಸ್ತಾಪವನ್ನೆತ್ತುವದಾದ ಪಕ್ಷದಲ್ಲಿ ಆಯುಧವನ್ನೊಪ್ಪಿಸಿ ಶರಣಾಗತನಾಗುವುದೊಂದು ಹೊರತು ಮತ್ತೆ ಯಾವ ವಿಧನಾದ ಮಾತಿಗೂ ಗ್ರಾಂಟನು ಆಸ್ಪದಕೊಡಕೂಡದೆಂದು ಲಿಂಕನ್ನನು ನಿಷೇಧಿಸಿದನು. ಪ್ರತಿಭಟಿಸಿದ್ದಕ್ಕಾಗಿ ದಕ್ಷಿಣದವರಿಗೆ ಶಿಕ್ಷೆಯು ಎಂಥದಾಗಬೇಕೆಂಬುದು ಅವನಿಗೆ ಬಲವಾದ ಚಿಂತೆಯನ್ನುಂಟುಮಾಡಿದ್ದಿತು. ಏಕೆಂದರೆ, ಕಾಂಗ್ರೆಸ್‌ನ ನಿಬಂಧನೆಯಪ್ರಕಾರ ದಕ್ಷಿಣದಲ್ಲಿ ಸೈನ್ಯದಲ್ಲಿಯೂ ಸರ್ಕಾರದಲ್ಲಿಯೂ ಅಧಿಕಾರಿಗಳಾಗಿದ್ದವರು ದ್ರೋಹಿಗಳೆಂದು ಎಣಿಸಲ್ಪಡುತ್ತಿದ್ದರು. ಅವರೆಲ್ಲರನ್ನೂ ಶೂಲಕ್ಕೇರಿಸಬೇಕೆಂದು ಉತ್ತರವು ಮಾತನಾಡಿಕೊಳ್ಳುತ್ತಿದ್ದಿತು. ಆದರೆ ಲಿಂಕನ್ನನು ಅಷ್ಟು ಭಯಪಡಬೇಕಾಗಿರಲಿಲ್ಲ. ಜಯವುಂಟಾಗಿ ಯುದ್ಧವು ಕೊನೆಗೊಂಡಮೇಲೆ ಉತ್ತರದ ಅಂತಃಕರಣವು ಬದಲಾಯಿಸಿ ಮೃದುವಾಯಿತು. ಮನುಷ್ಯನೊಬ್ಬನು ಈ ಪ್ರಸಂಗವನ್ನು ಕುರಿತು ಅವನೊಡನೆ ಮಾತನಾಡಲಾಗಿ ಲಿಂಕನ್ನನು, '' What have I to do with you, ye sons of Zeremiah, that ye

should this day be adversaries unto me? Shall there any man be put to death this day in Israel?'' ಎಂಬ ಬೈಬಲಿನ ವಾಕ್ಯವನ್ನು ಉತ್ತರವಾಗಿ ಹೇಳಿದನು. ಅವನು ದಕ್ಷಿಣದವರೆಲ್ಲರಿಗೂ ದಯೆಯನ್ನು ನೀಡುತ್ತಿದ್ದನೆಂಬುದರಲ್ಲಿ ಸಂದೇಹವಿರಲಿಲ್ಲ. ಆದರೆ ಈ ವಿಷಯದಲ್ಲಿ ಚರ್ಚೆಯೂ ಹೀಗೆ ಹಾಗೆ ಮಾಡಬೇಕೆಂಬ ಸಲಹೆಯೂ ಅವನಿಗೆ ಬೇಕಿರಲಿಲ್ಲ. ಜೆಫರ್ಸನ್ ಡೇವಿಸ್ಸನನ್ನೂ ಅವನ ಜೊತೆಯವರನ್ನೂ ಸೆರೆಮನೆಗೆ ತಳ್ಳಬೇಕೆಂದು ತನಗೆ ಸ್ವಲ್ಪವೂ ಇಷ್ಟವಿಲ್ಲವೆಂದು ಅವನು ಗ್ರಾಂಟನೊಡನೆ ಹೇಳಿದನು.

ಲಿಂಕನ್ನನು ಗ್ರಾಂಟನ ಬಳಿಯಲ್ಲಿದ್ದಾಗ ಲೀಯು ನೈಋತ್ಯದಲ್ಲಿದ್ದ ರೈಲುರಸ್ತೆಗಳನ್ನು ಉಪಯೋಗಿಸಲು ಒಂದು ಉಪಾಯದ ಮೂಲಕ ಹವಣಿಸಿದನು. ಅದು ಸಾಗಲಿಲ್ಲ. ಷೆರಿಡನ್ನನು ಲೀಯ ಸೈನ್ಯದ ದಕ್ಷಿಣದಿಕ್ಕಿನಲ್ಲಿ ನಡೆದು ಪೀಟರ್ಸ್‌ಬರ್ಗ್‌ನಿಂದ ಪಶ್ಚಿಮದ ಕಡೆಗೆ ಹೋಗುತ್ತಿದ್ದ ರೈಲುರಸ್ತೆಯನ್ನು ಆಕ್ರಮಿಸಿಕೊಂಡನು. ಯುದ್ಧವು ನಡೆಯಿತು. ಶತ್ರುವು ಒಳಗೆ ನುಗ್ಗದಿರುವುದಕ್ಕಾಗಿ ಲೀಯು ಇತರ ಕಡೆಗಳಲ್ಲಿದ್ದ ಸೈನ್ಯಗಳನ್ನು ತನ್ನಲ್ಲಿಗೆ ಎಳೆದುಕೊಂಡು ನಿರೀಕ್ಷಿಸಿದನು. ಅದನ್ನು ತಿಳಿದು ಗ್ರಾಂಟನು ಪೂರ್ವಭಾಗದಲ್ಲಿ ಆಕ್ರಮಣಮಾಡಿದನು. ಕೋಟೆಯ ಹೊರವಳಯವು ಹಸ್ತಗತವಾಯಿತು. ತತ್‌ಕ್ಷಣವೇ ನಗರವನ್ನುಬಿಟ್ಟು ಹೊರಡಲು ಸಿದ್ಧಮಾಡಿಕೊಳ್ಳಬೇಕೆಂದು ಲೀಯು ಡೇವಿಸ್ಸನಿಗೆ ಹೇಳಿಕಳುಹಿಸಿದನು. ಆ ದಿನ ಭಾನುವಾರ. ಡೇವಿಸ್ಸನು ಚರ್ಚಿನಲ್ಲಿದ್ದನು. ರಾತ್ರಿ ಕಳೆಯುವುದರೊಳಗೆ ಪೀಟರ್ಸ್‌ಬರ್ಗ್ ಕೋಟೆಯು ಶತ್ರುಗಳ ವಶವಾಗುವುದರಲ್ಲಿ ಸಂದೇಹವಿರಲಿಲ್ಲ. ಅದು ಹೋದಮೇಲೆ ರಿಚ್‌ಮಂಡ್‌ನಗರವು ಬಹಳಕಾಲದವರೆಗೆ ಉಳಿಯುತ್ತಿರಲಿಲ್ಲ. ಆ ರಾತ್ರಿ ಡೇವಿಸ್ಸನು ಸಮಸ್ತವಾದ ಆಡಳಿತದ ಸಹಿತ ರಾಜಧಾನಿಯನ್ನು ಬಿಟ್ಟನು. ಮಾರನೆಯ ದಿನ ಲೀಯೂ ಹೊರಬೀಳಲು ಪ್ರಾರಂಭಿಸಿದನು. ಗ್ರಾಂಟನಿಂದ ಲಿಂಕನ್ನನು ಬರಮಾಡಲ್ಪಟ್ಟು ಸಮುದ್ರಮಾರ್ಗವಾಗಿ ಬಂದನು. ಬಂದವನು ನೆಟ್ಟಗೆ ನಗರದೊಳಕ್ಕೆ ಹೋದನು. ಜೊತೆಯಲ್ಲಿ ಅವನ ಕಿರಿಯ ಮಗನೊಬ್ಬನು ಮಾತ್ರ ಇದ್ದನು. ಆ ಧೈರ್ಯವನ್ನು ನೋಡಿ ಹಡಗಿನಲ್ಲಿದ್ದವರಿಗೂ ನಾವೆಯ ಅಧಿಕಾರಿಗಳಿಗೂ ವಿಸ್ಮಯವಾಯಿತು. ಅವನನ್ನು ಕಂಡು ನೀಗ್ರೋಗಳು ಆನಂದದಿಂದ ನಲಿದರು. ನಗರದೊಳಗಿದ್ದ ದಕ್ಷಿಣದ ಪ್ರಜೆಗಳು ದುರದುರನೆ ಅವನಕಡೆ ನೋಡಿದರು. ಆದರೆ ಯಾರಿಂದಲೂ ಏನೂ ತೊಂದರೆಯುಂಟಾಗಲಿಲ್ಲ. ಲಿಂಕನ್ನನು ಉತ್ತರದವರು ಸೆರೆಯಲ್ಲಿದ್ದ ಪ್ರದೇಶವನ್ನೂ ಇತರ ಮುಖ್ಯಸ್ಥಳಗಳನ್ನೂ ನೋಡಿಕೊಂಡು ಬಂದನು. ದಾರಿಯಲ್ಲಿ ಡೇವಿಸ್ಸನ ಸರ್ಕಾರದಲ್ಲಿ ಕಮಿಷನರ್ ಪದವಿಯಲ್ಲಿದ್ದ ಕ್ಯಾಂಬೆಲ್ ಎಂಬಾತನು ಸಿಕ್ಕಿದನು. ಅವನೊಡನೆ ಮಾತು ನಡೆಯಿತು. ಆತನು, ಲೀಯ ಸೈನ್ಯವು ಶೀಘ್ರವಾಗಿ ಶರಣಾಗತವಾಗುವುದನ್ನು ವಿಚಾರಮಾಡುವುದಕ್ಕೋಸ್ಕರ ಒಂದು ಸಭೆಯನ್ನು ಏರ್ಪಡಿಸಲು ಪ್ರೆಸಿಡೆಂಟನ ಅಪ್ಪಣೆಯನ್ನು ಪಡೆದನು. ಆದರೆ ಮುಂದೆ ಆ ಅಪ್ಪಣೆಯು ಸಲ್ಲಲಿಲ್ಲ; ಯಾವ ಕೆಲಸಕ್ಕಾಗಿ ಅದು ಅವಶ್ಯಕವಾಗಿದ್ದಿತೋ ಆ ಕೆಲಸವು ಮೊದಲೇ ನೆರವೇರಿತು.

ಜೆಫರ್ಸನ್ ಡೇವಿಸ್ಸನು ಮಂತ್ರಿಗಳನ್ನೂ ಅಧಿಕಾರಿಗಳನ್ನೂ ಒಡಗೂಡಿ ಜಾನ್ಸ್ಟನ್ನನ ಸೈನ್ಯವಿದ್ದ ಸ್ಥಳವನ್ನು ಕುರಿತು ನಡೆದನು. ಅಲ್ಲಿ ಹೋದಮೇಲೆ ಅವರೂ ಜಾನ್ಸ್ಟನ್ನನೂ ಬೋರ್ಗಾರ್ಡನೂ ಸೇರಿ ಆಲೋಚನೆಯನ್ನು ನಡೆಯಿಸಿದರು. ಪ್ರಕಟನೆಯೊಂದನ್ನು ಹೊರಡಿಸುವುದಾಗಿಯೂ ಅದನ್ನು ತಿಳಿದು ಜನರು ಸೈನ್ಯಕ್ಕೆ ಸೇರುವುದಾಗಿಯೂ ಆ ಸೈನ್ಯವನ್ನು ತೆಗೆದುಕೊಂಡು ಹೋಗಿ ತಾನು ಉತ್ತರವನ್ನು ಸದೆಬಡಿಯುವುದಾಗಿಯೂ ಡೇವಿಸ್ಸನು ಹೇಳಿದನು. ಒಬ್ಬರಾದರೂ ಅದಕ್ಕೆ ಉತ್ತರವನ್ನು ಹೇಳಲಿಲ್ಲ. ಕೊನೆಗೆ ಅವನು ಜಾನ್ಸ್ಟನ್ನನ ಅಭಿಮತವನ್ನು ಕೇಳಿದನು. ಜಾನ್ಸ್ಟನ್ನನು ಇರುವ ಸ್ಥಿತಿಯನ್ನು ವರ್ಣಿಸಿ, ಇನ್ನೂ ಯುದ್ಧಮಾಡಿದರೆ ಮಹಾ ಅಪರಾಧವಾಗುವುದೆಂದನು. ಆಮೇಲೆ ತಾನು ಷೆರ್ಮನ್ನನೊಡನೆ ಸಂಧಿಯನ್ನು ಬೆಳೆಯಿಸಲು ಅನುಮತಿಯನ್ನು ಅಪೇಕ್ಷಿಸಿದನು. ಡೇವಿಸ್ಸನು ಅದಕ್ಕೆ ಆಕ್ಷೇಪಿಸಲಿಲ್ಲ. ಇನ್ನೂ ದಕ್ಷಿಣಕ್ಕೆ ತಲೆತಪ್ಪಿಸಿಕೊಂಡು ಹೊರಟುಹೋದನು.

ಆ ಭಾಗದಲ್ಲಿ ಜೇಮ್ಸ್ ಅಳಿವೆಯನ್ನು ಸೇರುತ್ತಿದ್ದ ನದಿಯೊಂದು ಪೀಟರ್ಸ್‌ಬರ್ಗಿನ ಮಗ್ಗುಲಲ್ಲಿ ಹರಿಯುತ್ತಿದ್ದಿತು. ಅದನ್ನು ದಾಟಿ ಜಾನ್ಸ್ಟನ್ನನ ಸೈನ್ಯವಿರುವ ಬಳಿಗೆ ಹೋಗಿ ಸೇರಿಕೊಳ್ಳಬೇಕೆಂದು ಲೀಯು ಆಲೋಚಿಸಿದ್ದನು. ಆದರೆ ಯುದ್ಧಮಾಡದೆ ಹೊರಬಿದ್ದು ಹೋಗುವುದಕ್ಕಾಗಲಿಲ್ಲ. ಅವನ ಸೈನ್ಯವು ಸಾಹಸವನ್ನೂ ಜಾಣತನವನ್ನೂ ಉಪಯೋಗಿಸಿತು. ಉತ್ತರದ ಸೈನ್ಯವೂ ಸಾಹಸದಲ್ಲಾಗಲೀ ಜಾಣತನದಲ್ಲಾಗಲೀ ಕಡಿಮೆ ಮಾಡಲಿಲ್ಲ. ಲೀಯನ್ನು ಸುತ್ತಲೂ ಆವರಿಸಬೇಕೆಂದು ಅದು ಪ್ರಯತ್ನಿಸಿತು. ಗ್ರಾಂಟನು ಆಯುಧಗಳನ್ನೊಪ್ಪಿಸಿಬಿಡೆಂದೂ ಅದರಿಂದ ಸೈನ್ಯದ ನಷ್ಟವು ಉಳಿಯುವುದೆಂದೂ ಲೀಯನ್ನು ಪ್ರಾರ್ಥಿಸಿದನು. ಲೀಯು ಕಿವಿಗೆ ಹಾಕಿಕೊಳ್ಳಲಿಲ್ಲ. ಒಳ್ಳೆಯ ಮಾತೂ ಪ್ರಾರ್ಥನೆಯೂ ನಿಷ್ಪ್ರಯೋಜಕವಾದುವು. ಉತ್ತರದ ತುರಗಸೈನ್ಯವು ಅವನಿಗಿಂತ ಮುಂದಾಗಿ ಹೋಗಿ, ಅವನು ಉಪಯೋಗಿಸಿಕೊಳ್ಳಬೇಕೆಂದಿದ್ದ ರೈಲುರಸ್ತೆಗಳನ್ನು ಹಾಳುಮಾಡಿತು ; ಕಣಿವೆಯ ದಾರಿಗಳನ್ನೆಲ್ಲಾ ಮುಚ್ಚಿ ಅಡ್ಡಗಟ್ಟಿತು ; ಲೀಯ ಬಳಿಗೆ ಆಹಾರವಸ್ತುಗಳನ್ನು ತುಂಬಿಕೊಂಡು ಬರುತ್ತಿದ್ದ ರೈಲುಗಾಡಿಗಳನ್ನು ತಡೆದು ತಪ್ಪಿಸಿಬಿಟ್ಟಿತು. ಲೀಯ ಸೈನ್ಯವು ಓಡಲಾರಂಭಿಸಿತು. ಹಿಂಭಾಗದಲ್ಲಿ ಅಟ್ಟಿಕೊಂಡು ಬರುತ್ತಿದ್ದ ಗ್ರಾಂಟನ ಸೈನ್ಯವೂ ಓಡಲಾರಂಭಿಸಿ, ಓಡುತ್ತಿದ್ದ ಹಾಗೆಯೇ ಹೊಡೆದಾಟನಾಯಿತು. ಏಪ್ರಿಲ್ ಆರನೆಯ ತಾರೀಖಿನಲ್ಲಿ ಸೇಲರ್ಸ್ ಕ್ರೀಕ್ (Sailor's Creek) ಎಂಬ ಸ್ಥಳದಲ್ಲಿ ಘೋರವಾದ ಯುದ್ಧವು ನಡೆಯಿತು. ಒಂಭತ್ತನೆಯ ತಾರೀಖಿನ ದಿನ ಗ್ರಾಂಟನು ಲೀಯನ್ನು ಪೂರ್ತಿಯಾಗಿ ಆವರಿಸಿಬಿಟ್ಟನು. ತಪ್ಪಿಸಿಕೊಳ್ಳಲು ಯಾವಕಡೆಯಲ್ಲಿಯೂ ದಾರಿಯಿರಲಿಲ್ಲ. ದಳಪತಿಗಳಿಬ್ಬರೂ ತಮ್ಮತಮ್ಮ ಅಧಿಕಾರಿಗಳೊಡನೆ ಸಂಧಿಸಿದರು. ಲೀಯು ಮೀಡನನ್ನು ತನ್ನ ಹಳೆಯ ಸ್ನೇಹಿತನೆಂದು ಮಾತನಾಡಿಸಿ, ಮೀಡನಿಗೆ ವಯಸ್ಸಾಗಿ ಕೂದಲು ನರೆಯಿತೆಂದು ಹೇಳಿದನು. ಮೀಡನು ಗಂಭೀರವಚನದಿಂದ ಕೂದಲು ನರೆಯಲು ವಯಸ್ಸಲ್ಲ, ಲೀಯು ಕಾರಣವೆಂದು ಉತ್ತರಕೊಟ್ಟನು. ಲೀಯು ಶರಣಾಗತನಾಗಲು ಒಪ್ಪುವನೆಂಬುದನ್ನು

ಕೇಳಿ ಗ್ರಾಂಟನಿಗೆ ಮಿತಿಮೀರಿ ಸಂತೋಷವುಂಟಾಯಿತು. ಆದರೆ '' ಇಷ್ಟು ಕಾಲದ ವರೆಗೆ ಧೈರ್ಯದಿಂದ ಯುದ್ಧಮಾಡಿ ಸೋತುಹೋದ ಶತ್ರುವನ್ನು '' ನೋಡಿ ಬಹಳ ನೊಂದುಕೊಂಡನು. ಲೀಯೂ ಗ್ರಾಂಟನೂ ಮಾತನಾಡಲು ಕುಳಿತು ತಮ್ಮ ಹಿಂದಿನ ಚರಿತ್ರೆಯನ್ನೆಲ್ಲಾ ತೆಗೆದರು. ಗ್ರಾಂಟನು ತಾನು ಬಂದ ಕೆಲಸವನ್ನು ಮರೆತುಬಿಟ್ಟನು. ಆಯುಧವನ್ನು ಒಪ್ಪಿಸುವುದಾದರೆ ಷರತ್ತುಗಳು ಏನೇನೆಂದು ಲೀಯು ಕೇಳುವವರೆಗೂ ಅವನಿಗೆ ಜ್ಞಾಪಕವುಂಟಾಗಲಿಲ್ಲ. ಬರೆಯುವುದಕ್ಕೆ ಕುಳಿತನು. ಆದರೆ ಏನನ್ನು ಬರೆಯಬೇಕೆಂಬುದು ಗೊತ್ತಾಗಲಿಲ್ಲ. ಗ್ರಾಂಟನು ಯೋಚಿಸಿದನು. ಯೋಚಿಸುತ್ತಿರುವಾಗ ಅವನ ಕಣ್ಣು ಲೀಯ ಸೊಂಟದಲ್ಲಿದ್ದ ಸುಂದರವಾದ ಕತ್ತಿಯ ಮೇಲೆ ಬಿದ್ದಿತು. ಒಡನೆಯೇ ಅವನು ದಕ್ಷಿಣದ ದಂಡಿನಲ್ಲಿ ಅಧಿಕಾರಿಗಳು ತಮ್ಮ ವಶದಲ್ಲಿ ಕತ್ತಿಯನ್ನೂ ಕುದುರೆಯನ್ನೂ ಇಟ್ಟುಕೊಳ್ಳಬಹುದೆಂದು ಬರೆದನು. ಬರೆದುದನ್ನು ಲೀಯು ಓದಿದನು. ಈ ಅಂಶವೂ ಬಂದಿತು. ಗ್ರಾಂಟನ ದಯಾಳುತೆಯನ್ನು ನೋಡಿ ಕಣ್ಣೀರು ಸುರಿಸಿದನು. ತುರಗಸೈನ್ಯದಲ್ಲಿ ಪ್ರತಿಯೊಬ್ಬನೂ ತನ್ನ ಕುದುರೆಯನ್ನು ತನ್ನ ವಶದಲ್ಲಿಟ್ಟುಕೊಳ್ಳಬಹುದೆಂದು ಗ್ರಾಂಟನ ಅನುಮತಿಯಾಗಿದ್ದಿತು. ಈ ಸೈನಿಕರು ಮನೆಗೆ ಹೋದಮೇಲೆ ಹೊಲವನ್ನು ಳಲು ಕುದುರೆಯು ಅಗತ್ಯವಾದುದರಿಂದ ಅವರ ಕುದುರೆಯನ್ನು ಅವರಿಗೆ ಬಿಟ್ಟಿದ್ದೇನೆಂದು ಹೇಳಿದನು. '' ಜನಗಳು ಈ ಏರ್ಪಾಡುಗಳನ್ನು ನೋಡಿ ಬಹಳ ಮಟ್ಟಿಗೆ ಸಮಾಧಾನಹೊಂದುವರು '' ಎಂದು ಲೀಯು ಉತ್ತರಕೊಟ್ಟನು. ದಕ್ಷಿಣದ ಅಧಿಕಾರಿಗಳು ದ್ರೋಹಿಗಳಿಗೆ ಸಮವಾಗಿದ್ದರೂ ಅವರಿಗೆ ಕ್ಷಮಾಪಣೆಯು ದೊರೆಯಿತು. ಲಿಂಕನ್ನನ ಅಪ್ಪಣೆಯನ್ನು ಈ ಕಾರ್ಯವು ಉಲ್ಲಂಘಿಸುತ್ತಿದ್ದಿತು. ಆದರೂ ಮೇಲಿನಿಂದ ಯಾವ ಆಕ್ಷೇಪಣೆಯೂ ಬರಲಿಲ್ಲ. ಲೀಯು ಕೆಲಸವನ್ನು ಬಿಟ್ಟು ತನ್ನ ಸಂಸ್ಥಾನದೊಳಗಿದ್ದುಬಿಟ್ಟನು. ಗ್ರಾಂಟನು ರಿಚ್‌ಮಂಡ್ ನಗರವನ್ನು ಪ್ರವೇಶಿಸುತ್ತ ಕುಳ್ಳಿರಲಿಲ್ಲ. ಕೆಲಸವೆಲ್ಲಾ ಮುಗಿದುದರಿಂದ ವಿರಾಮಹೊಂದಿ ತನ್ನ ಮಗನನ್ನು ಸ್ಕೂಲಿಗೆ ಸೇರಿಸುವುದಕ್ಕಾಗಿ ಹೊರಟುಹೋದನು.

ಏಪ್ರಿಲ್ ಎಂಟರವರೆಗೂ ಲಿಂಕನ್ನನು ಸಿಟಿ ಪಾಯಿಂಟನಲ್ಲಿಯೇ ಇದ್ದು ಆ ದಿನ ಹಡಗುಹತ್ತಿದನು. ಆ ಪ್ರಯಾಣವು ಅತ್ಯಂತ ಉಲ್ಲಾಸಕರವಾಗಿದ್ದಿತೆಂದು ಅಲ್ಲಿದ್ದವರು ಹೇಳುವರು. ಲಿಂಕನ್ನನು ಹಡಗಿನ ಜನರನ್ನೆಲ್ಲಾ ತನ್ನ ಸುತ್ತಲೂ ಕೂರಿಸಿಕೊಂಡು, ತಂದೆಯಾಗಿ ವೃದ್ಧನಾದವನು ಹೆಂಡತಿಮಕ್ಕಳನ್ನೂ ಬಂಧುಬಳಗಗಳನ್ನೂ ಸೇರಿಸಿ ಮಾತನಾಡುತ್ತ ಕೂರುವ ಹಾಗೆ, ಮಾತುಕಥೆಗಳಲ್ಲಿಯೂ ಕೂತಿದ್ದವರಿಗೆ ಪುಸ್ತಕಗಳಿಂದ ಕಥೆಗಳನ್ನೋದಿ ಸಂತೋಷಪಡಿಸುವುದರಲ್ಲಿಯೂ ಕಾಲವನ್ನು ತಳ್ಳಿದನು.

ಹನ್ನೊಂದನೆಯ ತಾರೀಖಿನದಿನ ಅವನನ್ನು ಎದುರುಗೊಳ್ಳಲು ಜನರು ಗುಂಪುಗುಂಪಾಗಿ ವೈಟ್‌ಹೌಸಿಗೆ ಬಂದರು. ಲಿಂಕನ್ನನು ದಕ್ಷಿಣದಲ್ಲಿ ಮಾಡಬೇಕಾಗಿದ್ದ ಏರ್ಪಾಡುಗಳನ್ನು ಕುರಿತು ಬಂದಿದ್ದವರೆದುರಿಗೆ ಒಂದು ಉಪನ್ಯಾಸವನ್ನು ಮಾಡಿದನು. ಆ ಸಮಯದಲ್ಲಿ ಲೂಸಿಯಾನದಲ್ಲಿ ನಡೆಯುತ್ತಿದ್ದ ಏರ್ಪಾಡನ್ನು

ವಿವರಿಸಿ ಹೇಳಿದನು. ದಕ್ಷಿಣದ ಪ್ರಜೆಗಳು ತಮಗೆ ಅನುಕೂಲವಾದ ರೀತಿಯಲ್ಲಿ ಸರ್ಕಾರವನ್ನು ಏರ್ಪಡಿಸಿಕೊಂಡು ಸಂಯೋಗವನ್ನು ಅಂಗೀಕರಿಸುತ್ತಿರುವ ಈ ಸಮಯದಲ್ಲಿ ಉತ್ತರವು ಅಹಂಕಾರದ ಮಾತುಗಳನ್ನಾಡಿ ಅವರ ಮನಸ್ಸನ್ನು ನೋಯಿಸುವುದೂ, ನೋಯಿಸಿ ಇಷ್ಟುದಿನಗಳಿಂದ ಮಾಡಿದ ಕೆಲಸವನ್ನು ಕೆಡಿಸುವುದೂ ನ್ಯಾಯವಾಗಿರಲಿಲ್ಲ. ದಾಸ್ಯವು ತಮಗೆ ಬೇಡವೆಂದು ಅವರು ಹೇಳುತ್ತಿದ್ದರು. ಇಂತಹ ಪ್ರಯತ್ನಗಳಿಗೆ ಉತ್ತೇಜನವನ್ನು ಕೊಟ್ಟು ಹೆಚ್ಚಿಸಬೇಕೆಂದು ಲಿಂಕನ್ನನು ಹೇಳಿದನು. ವಿದ್ಯಾವಂತರಾಗಿಯೂ ಸೈನಿಕರಾಗಿಯೂ ಇದ್ದ ನೀಗ್ರೋಗಳಿಗೆ ಚೀಟಿಹಾಕುವ ಅಧಿಕಾರವನ್ನು ಕೊಡಬೇಕೆಂದು ಅವನಿಗೆ ಇಷ್ಟವಿದ್ದಿತು. ನಡೆಯಲಿಲ್ಲ. ಆದರೆ ಸ್ಕೂಲುಗಳಿಗೆ ಹೋಗಿ ವಿದ್ಯೆಯನ್ನು ಕಲಿಯಲು ನೀಗ್ರೋಗಳಿಗೆ ಅವಕಾಶವಿದ್ದಿತು. ಲೂಸಿಯಾನದಲ್ಲಿ ಇಷ್ಟು ಆಗಿರುವಂತೆ ಇತರ ಸಂಸ್ಥಾನಗಳಲ್ಲಿಯೂ ಆಗಬೇಕೆಂದು ಅವನು ಹಾರೈಸಿದನು.

ಹದಿನಾಲ್ಕನೆಯ ತಾರೀಖಿನ ದಿನ ಜನರಲ್ ಆಂಡರ್ಸನ್ನನು ಸಮ್‌ಟರ್ ದುರ್ಗದಲ್ಲಿ ವಿಧಿವತ್ತಾಗಿ ಸಂಯೋಗದ ಬಾವುಟವನ್ನೇರಿಸಿದನು. ನಾಲ್ಕುವರುಷಗಳ ಹಿಂದೆ ಅದೇ ದಿನ ಬಾವುಟವು ಅಪಮಾನಹೊಂದಿ ನೆಲಕ್ಕುರುಳಿದ್ದಿತು. ಆದಿನ ಬೆಳಗಿನಲ್ಲಿ ವಾಷಿಂಗ್ಟನ್ನಿನಲ್ಲಿ ಮಂತ್ರಿಗಳ ಸಭೆಯು ನಡೆಯಿತು. ಸಿವರ್ಡನಿಗೆ ಸ್ವಲ್ಪ ಪೆಟ್ಟಾಗಿದ್ದಿತು; ಅವನು ಸಭೆಗೆ ಬಂದಿರಲಿಲ್ಲ. ಗ್ರಾಂಟನು ಅಲ್ಲಿದ್ದನು. ಆದರೆ ಅವನ ಮನಸ್ಸು ಸ್ವಸ್ಥವಾಗಿರಲಿಲ್ಲ—ಷೆರ್ಮನ್ನನ ಕಡೆಯಿಂದ ಸಮಾಚಾರವು ಬರದೆ ಕಳವಳ ಹೊಂದಿದ್ದಿತು. ಲಿಂಕನ್ನನು ಮಾತ್ರ ಸಂತುಷ್ಟಚಿತ್ತನಾಗಿದ್ದನು. ಷೆರ್ಮನ್ನನಿಂದ ಸಮಾಚಾರವು ಬರುತ್ತಿದೆಯೆಂದು ಸಭೆಯವರೊಡನೆಯೂ ಗ್ರಾಂಟನೊಡನೆಯೂ ಹೇಳಿದನು. ಅದು ಹೇಗೆ? ಎಂದು ಎಲ್ಲರೂ ಪ್ರಶ್ನೆಮಾಡಿದರು. ''ನನಗೆ ಗೊತ್ತಿದೆ. ಹಿಂದಿನ ರಾತ್ರಿ ನನಗೆ ಕನಸಾಯಿತು. ಅಂತಹ ಕನಸು ಹಿಂದೆ ಎಷ್ಟೋ ತಡವೆ ಆಗಿರುವುದು. ಅದರಲ್ಲಿ ವಿಜಾತೀಯವಾಗಿ ಕಟ್ಟಲ್ಪಟ್ಟಿದ್ದ ಹಡಗೊಂದರಲ್ಲಿ ಕುಳಿತು ನಾನು ಪ್ರಯಾಣ ಹೊರಟೆನು. ಅದರ ಆಕಾರವಿಂತಹದೆಂಬುದನ್ನು ವರ್ಣಿಸಲಾಗುವುದಿಲ್ಲ. ಹಡಗು ಅತ್ಯಂತವೇಗದಿಂದ ಹರಿದು ನನ್ನನ್ನು ಕತ್ತಲಾಗಿ ಅವ್ಯಕ್ತವಾದೊಂದು ತೀರದ ಕಡೆಗೆ ಕರೆದುಕೊಂಡು ಹೋಗುತ್ತಿದ್ದಿತು. ಜಯವಾಗುವುದಕ್ಕೆ ಮೊದಲು ಪ್ರತಿಸಲವೂ ಇದೇ ಕನಸುಂಟಾಗಿರುವುದು. ಅಂಟಿಯಟಮ್, ಮುರ್ ಫ್ರೀಸ್‌ಬರೊ, ಗೆಟ್ಟಿಸ್‌ಬರ್ಗ್, ವಿಕ್ಸ್‌ಬರ್ಗ್‌ಗಳಲ್ಲಿ ಯುದ್ಧವಾಗುವುದಕ್ಕೆ ಮೊದಲು ಅದು ತಪ್ಪದೆ ಬಂದಿತು'' ಎಂದು ಪ್ರತ್ಯುತ್ತರವು ಹೊರಟಿತು. ಆದಾದ ಮೇಲೆ ಸಣ್ಣ ಸಣ್ಣ ವಿಚಾರಗಳು ಕೆಲವನ್ನು ವ್ಯವಸ್ಥೆಮಾಡಿ ಅವರು ದಕ್ಷಿಣದಲ್ಲಿ ಸ್ಥಾಪಿಸಬೇಕಾಗಿದ್ದ ಶಾಸನವಿನ್ಯಾಸವನ್ನು ಚರ್ಚಿಸಿದರು. ಆದರೆ ಕಾಂಗ್ರೆಸ್ ಸಭೆಯಲ್ಲಿ ಪ್ರತಿಕೂಲರಾದವರು ಅಡ್ಡಿಯನ್ನು ತರುವುದರಿಂದ ಲಿಂಕನ್ನನು, ಸಭೆಯು ಮುಂದಿನ ತಡವೆ ಸೇರುವುದರೊಳಗಾಗಿ ಸಂಸ್ಥಾನಗಳಲ್ಲಿ ಸರ್ಕಾರವು ಏರ್ಪಾಡಾಗಿ ಕೆಲಸವನ್ನು ನಡೆಯಿಸುತ್ತಿರುವಂತೆ ಮಾಡಬೇಕೆಂದು ಸೂಚಿಸಿದನು. ಬಳಿಕ ದಂಗೆಕೋರರ ಪರಿಣಾಮವೇನೆಂದು ಪ್ರಶ್ನೆಯು ಬಂದಿತು. ಲಿಂಕನ್ನನು ಹೀಗೆಂದನು:

"ಈ ಜನಗಳನ್ನು ಶೂಲಕ್ಕೇರಿಸುವುದಾಗಲೀ ಕೊಲ್ಲುವುದಾಗಲೀ ನನಗೆ ಸಮ್ಮತವಿಲ್ಲ. ದಿಗಿಲನ್ನು ಹುಟ್ಟಿಸಿ ಬಿಟ್ಟರೆ ಅವರು ತಾವೇ ರಾಜ್ಯವನ್ನು ಬಿಟ್ಟು ಓಡಿಹೋಗುತ್ತಾರೆ. ಅಗಣಿಯನ್ನು ಅರುಗಿಸಿ ಬಾಗಿಲುಗಳನ್ನು ತೆಗೆದುಬಿಟ್ಟರಾಯಿತು." ಕುರಿಗಳನ್ನು ಬೆದರಿಸುವ ಹಾಗೆ ಬೆದರಿಸಿಬಿಟ್ಟರೆ ಅವರ ತೊಂದರೆಯು ತಪ್ಪಿಹೋಗುತ್ತಿದ್ದಿತು. ಐಕಮತ್ಯವೂ ಸ್ನೇಹಬುದ್ಧಿಯೂ ಉಂಟಾಗಬೇಕಾದಲ್ಲಿ ನಾವು ಪರಸ್ಪರ ತಿರಸ್ಕಾರವನ್ನು ತ್ಯಜಿಸಬೇಕು. ದಕ್ಷಿಣದವರನ್ನು ನಮ್ಮಂತೆಯೂ ನಮಗೆ ಸಮಾನರಂತೆಯೂ ಭಾವಿಸಲು ಕೆಲವರಿಗೆ ಇಷ್ಟವಿಲ್ಲ. ಅವರ ಮೇಲೆ ಅಧಿಕಾರವನ್ನು ತೋರಿಸಬೇಕೆಂದೂ ಅಪಮಾನಮಾಡಬೇಕೆಂದೂ ಅಂಥವರ ಮನಸ್ಸಿನಲ್ಲಿದೆ....... ಆದರೆ ನಾನು ಅದನ್ನು ಎಂದಿಗೂ ಒಪ್ಪಲಾರೆನು."

ಸಂಜೆಯಲ್ಲಿ ಲಿಂಕನ್ನನೂ ಅವನ ಹೆಂಡತಿಯೂ ಗಾಡಿಯಲ್ಲಿ ಕುಳಿತು ಸಂಚಾರ ಮಾಡಿದರು. ಅಧಿಕಾರವು ಮುಗಿದು ಅವಧಿಯು ಪೂರೈಸಿದ ಮೇಲೆ ತಾನು ನಡೆಯಿಸಬೇಕೆಂದಿದ್ದ ಜೀವನದ ವಿಚಾರಗಳನ್ನು ಲಿಂಕನ್ನನು ಹೆಂಡತಿಗೆ ವರ್ಣಿಸಿದನು. ಆದಿನ ರಾತ್ರಿ ಇಬ್ಬರೂ ನಾಟಕಶಾಲೆಗೆ ಹೋದರು. ಜೊತೆಯಲ್ಲಿ ಮೇಜರ್ ರಾತ್ ಬೋನ್ ಎಂಬಾತನೂ ಆತನಲ್ಲಿ ಅನುರಕ್ತೆಯಾಗಿದ್ದ ಸ್ತ್ರೀಯೂ ಇದ್ದರು. ನಾಟಕಶಾಲೆಯು ಜನರಿಂದ ದಟ್ಟವಾಗಿ ತುಂಬಿದ್ದಿತು. ಯುದ್ಧದಿಂದ ಹಿಂದಿರುಗಿ ಮನೆಗೆ ಬಂದಿದ್ದ ಎಷ್ಟೋಮಂದಿ ಅಧಿಕಾರಿಗಳು ಅಲ್ಲಿಗೆ ಬಂದಿದ್ದರು. ಸುಮಾರು ಹತ್ತು ಗಂಟೆಯಾಯಿತು. ಯಾವುದೋ ಒಂದು ನಾಟಕವು ಅಭಿನಯಿಸಲ್ಪಟ್ಟು, ಆಟವು ಸಾಗುತ್ತಿದ್ದಿತು. ಆ ಸಮಯದಲ್ಲಿ ನಾಟಕಶಾಲೆಯೊಳಗೆ ಗುಂಡುಹೊಡೆದ ಶಬ್ದವು ಕೇಳಿಸಿತು. ಲಿಂಕನ್ನನು ತಾನು ಕುಳಿತಿದ್ದ ಸ್ಥಳದಿಂದ ಮುಂದಕ್ಕೆ ಬಿದ್ದು ಮೂರ್ಛೆ ಹೊಂದಿದನು. ಮರಣವು ಸಮೀಪಿಸಿತು. ಯಾರಿಗೂ ಕಾಣಿಸಿಕೊಳ್ಳದಂತೆ ಮನುಷ್ಯನೊಬ್ಬನು ಅವನ ಕುಳಿತಿದ್ದ ಸ್ಥಳದ ಹಿಂಭಾಗಕ್ಕೆ ಬಂದು ಈ ಕೆಲಸವನ್ನು ಮಾಡಿದ್ದನು. ಅವನ ಚರ್ಯೆಯನ್ನು ನೋಡಿ ಮೇಜರನು ಹಿಡಿದುಕೊಳ್ಳಲೆದ್ದನು. ಆದರೆ ದುಷ್ಟನು ಚೂರಿಯೊಂದನ್ನು ತೆಗೆದು ಆತನ ಎದೆಗೆ ಚುಚ್ಚಿ ಬಳಿಕ ರಂಗಸ್ಥಳಕ್ಕೆ ಹಾರಿದನು. ಹಾರುವಾಗ ಒಂದು ಕಬ್ಬಿಣದ ಮೊಳಗೆ ಕಾಲು ಬಡಿದು ಮುಗ್ಗರಿಸಿದನು. ಪೆಟ್ಟು ಬಹಳವಾದರೂ ಅವನು ಲಕ್ಷಿಸದೆ ಎದ್ದುನಿಂತು "Sic semper tyrannis" ಎಂದು ಕೂಗಿ ಸಂದೆಗಳ ಹಿಂದಿನಿಂದ ನುಗ್ಗಿ ಹಿಂದಿನ ಬಾಗಿಲಿಗೆ ಹೋದನು. ಅಲ್ಲಿ ಕುದುರೆಯು ಸಿದ್ಧನಾಗಿದ್ದಿತು. ಅದನ್ನು ಹತ್ತಿಕೊಂಡು ಪಲಾಯನ ಮಾಡಿದನು.

ಜಾರ್ಜ್ ವಿಲ್ಕಿಸ್ ಬೂತನು (John Wilkes Booth—ಇದು ಆ ಕೊಲೆಗಾರನ ಹೆಸರು) ಅದೇ ನಾಟಕದ ಸಂಘದಲ್ಲಿ ಒಬ್ಬನಾಗಿದ್ದನು. ಅವನು ದಕ್ಷಿಣದವನು. ಜೊತೆಗೆ ಮದ್ಯಪಾನವು ಸೇರಿ ಬುದ್ಧಿಯನ್ನೂ ನಡತೆಯನ್ನೂ ಕೆಡಿಸಿಬಿಟ್ಟಿದ್ದಿತು. ಅವನದೊಂದು ದೊಡ್ಡ ಪಿತೂರಿಯಾಗಿದ್ದಿತು. ಲಿಂಕನ್ನನೊಬ್ಬನಲ್ಲದೆ ಇನ್ನು ಕೆಲವರೂ ಸಾಯಬೇಕೆಂದು ಬೂತನು ಸಂಕಲ್ಪಿಸಿದ್ದನು. ವೈಸ್ ಪ್ರೆಸಿಡೆಂಟನಾದ ಆಂಡ್ರೂ ಜಾನ್ಸನ್ನನೂ ಸಿವರ್ಡನೂ ಸಾಯಬೇಕೆಂದು ಗೊತ್ತಾಗಿದ್ದಿತು.

ಅದೇ ರಾತ್ರಿ ಮನುಷ್ಯನೊಬ್ಬನು ಸಿವರ್ಡನ ಮನೆಗೆ ನುಗ್ಗಿ ಕಾವಲಿದ್ದ ಇಬ್ಬರು ಆಳುಗಳನ್ನು ಹೊಡೆದು ಗಾಯಮಾಡಿ ಸಿವರ್ಡನಿದ್ದ ಕೊಠಡಿಗೆ ನುಗ್ಗಿದನು. ಸಿವರ್ಡನು ರೋಗಗ್ರಸ್ತನಾಗಿ ಹಾಸಿಗೆಹತ್ತಿ ಮಲಗಿದ್ದನು. ಅವನಿಗೂ ನಾಲ್ಕೈದು ಪೆಟ್ಟು ಬಿದ್ದಿತು. ಆದರೆ ಜಾನ್ಸನ್ನನಾಗಲೀ ಸಿವರ್ಡನಾಗಲೀ ಪೆಟ್ಟುತಿಂದ ಇತರರಾಗಲೀ ಸಾಯಲಿಲ್ಲ. ಪಿತೂರಿಗಾರರು ಸೆರೆಸಿಕ್ಕಿದರು. ಅವರಲ್ಲಿ ಒಬ್ಬ ಹೆಂಗಸೂ ಸೇರಿದ್ದಳು. ಎಲ್ಲರನ್ನೂ ಶೂಲಕ್ಕೇರಿಸಿದರು. ಬೂತನು ಎಲ್ಲೆಲ್ಲಿಯೋ ನುಗ್ಗಿ, ಬಹಳ ಸಾಹಸದಿಂದ ತಪ್ಪಿಸಿಕೊಂಡು ಹೋಗಿ ಕೊನೆಗೆ ಒಂದು ಹುಲ್ಲು ಮೆದೆಯಲ್ಲಿ ಅವಿತುಕೊಂಡನು. ಅವನನ್ನು ಹಿಂಬಾಲಿಸಿ ಬರುತ್ತಿದ್ದ ಸಿಪಾಯಿಗಳು ಅದರ ಸುಳಿವನ್ನು ತಿಳಿದು ಮೆದೆಗೆ ಬೆಂಕಿಹಚ್ಚಿದರು. ಬೂತನು ಹೊರಗೆ ಬಂದು ನಿಸ್ಸಹಾಯನಾಗಿ ನಿಂತನು. ಸಿಪಾಯಿಗಳು ಅವನನ್ನು ಗುಂಡಿನಿಂದ ಹೊಡೆದುಹಾಕಿದರು. ಓಡಿಹೋಗುತ್ತಿರುವ ಕಾಲದಲ್ಲಿ ಬೂತನು ಬಹಳ ನೊಂದುಕೊಂಡನು. ತಾನು ಮಾಡಿದ ಕೆಲಸಕ್ಕಾಗಿ ಯಾರೂ ಅವನನ್ನು ಶ್ಲಾಘಿಸಿ, ಸಹಾಯಕ್ಕೆ ಬಂದಿರಲಿಲ್ಲ.

ಲಿಂಕನ್ನನನ್ನು ಕಂಡರಾಗದೆ ದ್ವೇಷಿಸುತ್ತ ಅವನ ಮರಣದಲ್ಲಿ ಸಂತೋಷಗೊಳ್ಳುತ್ತಿದ್ದಂತಹ ಜನರು ದಕ್ಷಿಣದಲ್ಲಿಯೂ ವಾಷಿಂಗ್ಟನ್ನಿನ ಯೂ ಕೆಲವರಿದ್ದರು. ಅಂಥವರೇಕೆ ಬೂತನ ಕೆಲಸವನ್ನು ಶ್ಲಾಘಿಸಿ ಬೆಂಬಲಕ್ಕೆ ಬರಲಿಲ್ಲವೆಂದು ಕೇಳಬಹುದು. ಅದು ಅತಿಶಯದ ಕೆಲಸವಲ್ಲ. ಲಿಂಕನ್ನನು ಮೈಗಾವಲಿಗೆ ಜನರನ್ನಿಟ್ಟುಕೊಳ್ಳುತ್ತಿರಲಿಲ್ಲ; ಶತ್ರುಗಳಿದ್ದ ಸ್ಥಳಗಳಲ್ಲಿಯೂ ಇತರ ಪ್ರದೇಶಗಳಲ್ಲಿಯೂ ತಿರುಗುತ್ತ ಒಂಟಿಯಾಗಿರುತ್ತಿದ್ದನು. ಆದಕಾರಣ ಅವನನ್ನು ಕೊಲ್ಲುವುದು ಕಷ್ಟವಾಗುತ್ತಿರಲಿಲ್ಲ. ಕೆಲಸವೆಲ್ಲಾ ಕೊನೆಮುಟ್ಟಿತು. ಇನ್ನು ಅದನ್ನು ಯಾವರೀತಿಯಲ್ಲಿಯೂ ತಿರುಗಿಸುವುದಕ್ಕಾಗುತ್ತಿರಲಿಲ್ಲ. ಲಿಂಕನ್ನನೂ ಗ್ರಾಂಟನೂ ಮಂತ್ರಿಸಭೆಯಲ್ಲಿ ಯೋಚಿಸುತ್ತಿದ್ದ ಕಾಲದಲ್ಲಿ ಷೆರ್ಮನ್ನನು ರಾಲೆಯ ಬಳಿಯಲ್ಲಿರುತ್ತ, ಶರಣಾಗತನಾಗಲು ಒಪ್ಪಿ ಜಾನ್ಸ್ಟನ್ನನು ಬರೆದಿದ್ದ ಕಾಗದಕ್ಕೆ ಉತ್ತರವನ್ನು ಬರೆದನು. ಮೂರುದಿನಗಳ ತರುವಾಯ ಅವನು ಜಾನ್ಸ್ಟನ್ನನಿರುವ ಸ್ಥಳಕ್ಕೆ ಹೋಗಲು ರೈಲನ್ನು ಹತ್ತಿದನು. ಅಷ್ಟರಲ್ಲಿ, ಮುಖ್ಯವಾದೊಂದು ತಂತಿಯ ಸಮಾಚಾರವು ಬಂದಿರುವುದರಿಂದ ತತ್ಕ್ಷಣವೇ ಬರಬೇಕೆಂದು ಸ್ಟೇಷನ್ನಿನಲ್ಲಿ ಸುದ್ದಿಬಂದಿತು. ಷೆರ್ಮನ್ನನು ಇಳಿದು ಅಲ್ಲಿಗೆ ಹೋದನು. ಹೋಗಿ ಸಮಾಚಾರವನ್ನು ಕೇಳಿದನು. ಕೂಡಲೇ ಅಲ್ಲಿದ್ದ ಗುಮಾಸ್ತನಿಂದ ವಿಚಾರವನ್ನು ಯಾರಿಗೂ ತಿಳಿಸಕೂಡದೆಂದು ಮಾತು ತೆಗೆದುಕೊಂಡು ರೈಲುಗಾಡಿಯನ್ನು ಹತ್ತಿ ಹೊರಟನು. ಆ ಸುದ್ದಿಯು ಬಹಿರಂಗವಾಗಿದ್ದ ಪಕ್ಷದಲ್ಲಿ ಅನಾಹುತವು ನಡೆಯುತ್ತಿದ್ದಿತು. ಅದು ಮುಂದೆ ತಿಳಿಯದಿರಲಿಲ್ಲ. ಆದರೆ ತಿಳಿದಾಗ ಸೈನಿಕರು ಕಣ್ಣೀರು ಸುರಿಸಿದರು. ಬಹಳ ಕಾಲದವರೆಗೆ ಸಂತೋಷಾದಿಗಳು ತಪ್ಪಿಹೋದುವು. ಷೆರ್ಮನ್ನನು ಜಾನ್ಸ್ಟನ್ನನನ್ನು ಸಂಧಿಸಿ ಪ್ರತ್ಯೇಕವಾದೊಂದು ಸ್ಥಳಕ್ಕೆ ಕರೆದುಕೊಂಡುಹೋಗಿ ಸುದ್ದಿಯನ್ನು ಹೇಳಿದನು. ಜಾನ್ಸ್ಟನ್ನನ ಹಣೆಯ ಮೇಲೆ ಬೆವರಿನ ಹನಿಗಳು ಕಾಣಿಸಿಕೊಂಡುವು. ಈ ಕಾಲದಲ್ಲಿ ಇದು ತೀರ ಹೇಯವಾದುದೆಂದು ಅವನು ನುಡಿದನು. ಆಮೇಲೆ, ದಕ್ಷಿಣದ ಅಧಿಕಾರಿಗಳು ಯಾರಾದರೂ

ಕೊಲೆಯನ್ನು ಮಾಡಿಸಿದರೆಂದು ನಿಮ್ಮ ಭಾವನೆಯೆ, ಎಂದು ಷೆರ್ಮನ್ನನನ್ನು ಕೇಳಿದನು. ಷೆರ್ಮನ್ನನಿಗೆ ಅಂತಹ ಸಂದೇಹವೇನೂ ಇರಲಿಲ್ಲ; ಆದರೂ ಜೆಫರ್‌ಸನ ಡೇವಿಸ್ಸನನ್ನೂ ಅವನ ಪರಿವಾರದವರನ್ನೂ ನಂಬಲಾಗುವುದಿಲ್ಲವೆಂದು ಹೇಳಿದನು. ವ್ಯವಹಾರವು ಪ್ರಾರಂಭಿಸಿತು. ಆದರೆ ಮುಗಿಯುವುದು ಸ್ವಲ್ಪ ತಡವಾಯಿತು. ಸೈನ್ಯವು ಆಯುಧಗಳನ್ನು ಒಪ್ಪಿಸಿ ಮರೆಹೊಕ್ಕಿತು. ಇಪ್ಪತ್ತು ವರುಷಗಳ ತರುವಾಯ ಷೆರ್ಮನ್ನನು ಪ್ರಾಣವನ್ನು ಬಿಟ್ಟನು. ಅವನ ಮರಣಕಾಲದಲ್ಲಿ ಜಾನ್‌ಸ್ಟನ್ನನೂ ಬಂದಿದ್ದನು. ಆದರೆ ತೀರ ಮುದುಕನಾಗಿ ಶಕ್ತಿಯೆಲ್ಲಾ ಉಡುಗಿಹೋಗಿದ್ದಿತು. ಜಾನ್‌ಸ್ಟನ್ನನಿಗೆ ಆಸಮಯದಲ್ಲಿ ಕಾಯಿಲೆಯಾಗಿ ಕೆಲವು ದಿವಸಗಳೊಳಗೆ ಅವನು ಪ್ರಾಣವನ್ನು ಬಿಟ್ಟನು. ದಳಪತಿಗಳಿಬ್ಬರೂ ಇಹಲೋಕವನ್ನು ತ್ಯಜಿಸಿದರು. ಡೇವಿಸ್ಸನು ಫ್ಲಾರಿಡರಾಜ್ಯದ ಗಡಿಪ್ರದೇಶದಲ್ಲಿ ಮೇ ತಿಂಗಳ ಹತ್ತರಲ್ಲಿ ಸೆರೆಸಿಕ್ಕಿದನು. ಲಿಂಕನ್ನನ ಕೊಲೆಯು ಅವನ ಚಿತಾವಣೆಯಿಂದ ನಡೆಯಿತೆಂದು ಕೆಲವರಿಗೆ ಸಂದೇಹವಿದ್ದಿತು. ಆದರೆ ಪ್ರಮಾಣವಿರಲಿಲ್ಲ. ಆದಕಾರಣ ಡೇವಿಸ್ಸನು ಸ್ವಲ್ಪಕಾಲ ಸೆರೆಯನ್ನನುಭವಿಸಿ ಬಿಡುಗಡೆ ಹೊಂದಿದನು. ಅವನು ಮಿಸಿಸಿಪ್ಪಿಗೆ ಹೋಗಿ ವಾಸಮಾಡುತ್ತ ಬಹಳ ಕಾಲ ಬದುಕಿ ಅನೇಕ ಗ್ರಂಥಗಳನ್ನು ಬರೆದನು. ಮುಂದೆ ದಕ್ಷಿಣದಲ್ಲಿ ಕೆಲವು ಪಟ್ಟಣಗಳು ಸ್ವಾಧೀನವಾಗಿ ಕೆಲವು ಅಲ್ಪಸೈನ್ಯಗಳು ಆಯುಧವನ್ನೊಪ್ಪಿಸಿದುವು. ನಾಲ್ಕು ವರುಷವೂ ನಾಲ್ವತ್ತುನಾಲ್ಕು ದಿನಗಳೂ ಕಳೆದಮೇಲೆ ಯುದ್ಧವು ಸಂಪೂರ್ಣವಾಗಿ ನಿಂತಿತು.

ಮೂರ್ಛೆಹೊಂದಿದ ಲಿಂಕನ್ನನನ್ನು ನಾಟಕಶಾಲೆಗೆ ಹತ್ತಿರದಲ್ಲಿದ್ದೊಂದು ಮನೆಗೆ ಕರೆದುಕೊಂಡು ಹೋದರು. ಅವನ ಮಕ್ಕಳೂ ಸ್ನೇಹಿತರೂ ಅಲ್ಲಿಗೆ ಓಡಿ ಬಂದರು. ಲಿಂಕನ್ನನಿಗೆ ಜ್ಞಾನವು ಬರಲೇ ಇಲ್ಲ. ಕಳೆಗುಂದಿದ್ದ ಆ ಮುಖದಲ್ಲಿ ಅನಿರ್ವರ್ಣನೀಯವಾದ ಶಾಂತಿಯಾವರಿಸಿದಂತೆ ತೋರಿತು. ಹತ್ತಿರದಲ್ಲಿಯೇ ಇದ್ದು ನೋಡಿಕೊಳ್ಳುತ್ತಿದ್ದ ಸ್ಟಾಂಟನ್ನನು ಮಾರನೆಯ ದಿನ ಬೆಳಗಿನ ಏಳುಗಂಟೆಯೂ ಇಪ್ಪತ್ತೆರಡು ನಿಮಿಷಗಳ ಹೊತ್ತಿನಲ್ಲಿ "ಇನ್ನು ಅವನು ಪೂರ್ವಿಕರ ಸಂತತಿಗೆ ಸೇರಿದನು" ಎಂದು ಸುದ್ದಿ ಹೇಳಿದನು.

ಜೀವನನಾಟಕವು ಮುಗಿದುಹೋಯಿತು.
ಪ್ರಜೆಗಳ ದುಃಖವನ್ನಂತೂ ಹೇಳಿತೀರದು.

ಶವವನ್ನು ಆ ನಗರದಲ್ಲಿಯೇ ಸಮಾಧಿಮಾಡಲಿಲ್ಲ. ಒಂದು ಪೆಟ್ಟಿಗೆಯಲ್ಲಿರಿಸಿ ಅದನ್ನು ಸ್ಪ್ರಿಂಗ್‌ಫೀಲ್ಡಿಗೆ ತೆಗೆದುಕೊಂಡು ಹೋದರು. ಮಾರ್ಗದಲ್ಲಿ ಬಾಲ್ಟಿಮೋರಿನಲ್ಲಿಯೂ ನ್ಯೂಯಾರ್ಕಿನಲ್ಲಿಯೂ ನಿಲ್ಲಿಸಿದರು. ಜನರು ಗುಂಪುಗುಂಪಾಗಿ ಬಂದು ತಮಗೆ ಅಷ್ಟೊಂದು ಉಪಕಾರಮಾಡಿ ಹೊರಟುಹೋದ ಲಿಂಕನ್ನನನ್ನು ಕೊನೆಯಾವೃತ್ತಿ ನೋಡಿಕೊಂಡು ಬಂದರು. ನ್ಯೂಯಾರ್ಕಿನಲ್ಲಿ ವೃದ್ಧ ಜನರಲ್ ಸ್ಕಾಟನು ಶವದ ಬಳಿಗೆ ಬಂದು ಕಣ್ಣೀರನ್ನು ಸುರಿಸಿದನು. ಪ್ರಯಾಣಮಾಡುತ್ತಿದ್ದ ಶವವನ್ನು ನಿಲ್ಲಿಸಿ ಜನರು ಮರ್ಯಾದೆ ಮಾಡದಿದ್ದ ಸ್ಥಳವೇ ಇರಲಿಲ್ಲ. ಮೇ

ತಿಂಗಳ ನಾಲ್ಕನೆಯ ತಾರೀಖಿನ ದಿನ ಶವವು ಸ್ಪ್ರಿಂಗ್‌ಫೀಲ್ಡನ್ನು ತಲಪಿ ಭೂತಲವನ್ನು ಸೇರಿತು. ಸಮಾಧಿಯಾದ ಮೇಲೆ ಅವನ ಎರಡನೆಯ 'ಪ್ರಥಮಭಾಷಣ' ವನ್ನು ಸಮಾಧಿಸ್ಥಳದಲ್ಲಿ ನಿಂತು ಜನರು ಓದಿದರು. ಅವನಲ್ಲಿ ದುರ್ಭಾವನೆಯನ್ನಿಟ್ಟಿದ್ದವರು ಈಗ ಸ್ತೋತ್ರಮಾಡಲಾರಂಭಿಸಿದರು. ಇಂಗ್ಲೆಂಡಿನಲ್ಲಿ ಪ್ರಚಾರದಲ್ಲಿದ್ದ ಪಂಚ್ (Punch) ಎಂಬ ಪತ್ರಿಕೆಯು ಲಿಂಕನ್ನನನ್ನು ಜೀವಿತಕಾಲದಲ್ಲಿ ಅಪಹಾಸ್ಯಕ್ಕೆ ಗುರಿಮಾಡಿ ದೂರಿದ್ದಿತು. ಅದು ಈಗ ತನ್ನ ಹಿಂದಿನ ಅವಿವೇಕಕ್ಕಾಗಿ ನಾಚಿಕೆಗೊಂಡು ಕೊರಗಿತು. ವಿಕ್ಟೋರಿಯ ರಾಣಿಯು ಬಹಳ ದುಃಖದಿಂದ ಲಿಂಕನ್ನನ ಹೆಂಡತಿಗೆ ಕಾಗದವನ್ನು ಬರೆದು, "ಒಬ್ಬ ವಿಧವೆಯು ಮತ್ತೊಬ್ಬ ವಿಧವೆಗೆ" ಬರೆಯುತ್ತಿರುವುದಾಗಿ ಹೇಳಿದಳು. ಲಿಂಕನ್ನನೆಂಥವನೆಂಬುದು ಆಗ ಹೆಚ್ಚಾಗಿ ಗೊತ್ತಿರಲಿಲ್ಲ, ಅವನು ಪುಣ್ಯಪುರುಷನೆಂದು ಈಗ ತಿಳಿಯುವರು.

ಯುದ್ಧಕಾಲದಲ್ಲಿ ಅನೇಕ ಕೆಲಸಗಳು ನಡೆದುವು. ಅವುಗಳಲ್ಲಿ ಕಾರ್ಯಕಾರಣಗಳು ಕಲೆತು ಅಸ್ಪಷ್ಟವಾಗಿದ್ದ ಈ ಯುದ್ಧಕಾಲದಲ್ಲಿ ಉತ್ತರವನ್ನು ಒಗ್ಗಟ್ಟಿನಿಂದ ಇಟ್ಟಿರುವುದು ಅತ್ಯಂತ ಮುಖ್ಯವಾದುದು, ಅತ್ಯಂತ ಕಷ್ಟವಾದುದು. ಲಿಂಕನ್ನನು ಅದನ್ನು ನೆರವೇರಿಸಿದನು ; ಇತರರಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಅದನ್ನು ಮಾಡುವುದಕ್ಕಾಗಿ ಇತರರಿಂದ ಹೊರಲಾಗದ ಹೊರೆಯನ್ನು ತಾನೊಬ್ಬನೇ ಹೆಗಲ ಮೇಲೆ ಹೊತ್ತನು. ಅವನು ಹೊರಟುಹೋದ ಮೇಲೆ ಜನಗಳು, ತಮ್ಮ ಮನಸ್ಸಿನ ಯೋಚನೆಗಳನ್ನು ಯೋಚಿಸಿ, ತಾವು ಮಾಡಬೇಕಾಗಿದ್ದುದನ್ನು ಅವನು ತಮಗೋಸ್ಕರವಾಗಿ ಮಾಡಿದನೆಂದು ತಿಳಿದರು. ಲಿಂಕನ್ನನು ತನ್ನ ಜನಾಂಗವನ್ನು ಉದ್ಧಾರ ಮಾಡಿದನು. ಅದಕ್ಕೆ ಈಗಿನ ಅಮೆರಿಕದ ಪ್ರಜೆಗಳು ಸಾಕ್ಷಿಯಾಗಿರುವರು. ಗುಲಾಮರಾಗಿದ ವರಿಗೆಲ್ಲಾ ಸ್ವಾತಂತ್ರ್ಯವನ್ನುಂಟುಮಾಡಿಕೊಟ್ಟನು. ಅದಕ್ಕೆ ಈಗಿನ ಅಮೆರಿಕದ ನೀಗ್ರೋ ಪ್ರಜೆಗಳು ಸಾಕ್ಷಿಯೆಂದು ಹೇಳಬಹುದು. ಅವನ ಕಾಲದಲ್ಲಿ ಎರಡು ವಿಚಾರಗಳೂ ಒಟ್ಟಾಗಿ ಬಂದುವು. ಅವನು ಎರಡುಮನಸ್ಸು ಮಾಡಲಿಲ್ಲ. ಸಂಯೋಗವನ್ನು ರಕ್ಷಿಸಬೇಕಾದುದು ಗುರುತರವಾದುದರಿಂದ ಅದನ್ನು ಮೊದಲು ಪ್ರಾರಂಭಿಸಿ ಅದಕ್ಕೆ ಹೆಚ್ಚಿನ ಗಮನವನ್ನು ಕೊಟ್ಟನು. ದಕ್ಷಿಣವು ಪ್ರತ್ಯೇಕವಾಗುವುದನ್ನು ಅವನು ಸರ್ವವಿಧದಲ್ಲಿಯೂ ನಿಷೇಧಿಸಿದನು. ಆದರೆ ಆ ಪ್ರಯತ್ನವನ್ನು ಮಾಡಿದರೆಂದು ದಕ್ಷಿಣದ ಪ್ರಜೆಗಳಲ್ಲಿ ತಿರಸ್ಕಾರವನ್ನಾಗಲೀ ದ್ವೇಷವನ್ನಾಗಲೀ ಕೋಪವನ್ನಾಗಲೀ ತೋರಿಸಲಿಲ್ಲ. ಹಾಗೆ ನಿರ್ಮಲಚಿತ್ತನಾಗಿದ್ದವನು ಇಡೀರಾಜ್ಯದಲ್ಲಿ ಅವನೊಬ್ಬನು. ದಕ್ಷಿಣದವರೂ ಅದನ್ನು ತಿಳಿದರು. ಅವನ ಇತರ ಗುಣಗಳನ್ನೂ ಕಾರ್ಯಗಳನ್ನೂ ಮರೆತುಬಿಡಬಹುದು. ಆದರೆ ಈ ಗುಣವನ್ನು ಮರೆಯಲಾಗುವುದಿಲ್ಲ. ಅವನನ್ನು ಅಧಿಕರಿಸಿ ಎಷ್ಟೋ ಇತಿಹಾಸಗಳು ಕಲ್ಪಿತವಾಗಿರುವುವು. ಅವುಗಳಲ್ಲಿ ಸುಳ್ಳೇ ಹೆಚ್ಚಾಗಿರಲಿ, ನಿಜವೇ ಹೆಚ್ಚಾಗಿರಲಿ, ಪ್ರಜೆಗಳಿಗೆ ಅವನಲ್ಲಿ ಗೌರವವು ಬಹಳವಾಗಿದ್ದಿತೆಂಬ ಅಂಶವನ್ನು ಅವು ನಿಸ್ಸಂಶಯವಾಗಿ ಸೂಚಿಸುವುವು. ಇದರಲ್ಲಿ ಉತ್ತರ ದಕ್ಷಿಣಗಳೆಂಬ ಭೇದವಿಲ್ಲ. ದಕ್ಷಿಣವಂತೂ ಅತ್ಯಂತ ಕೃತಜ್ಞತೆಯಿಂದಿರುವುದು. ಸೈನ್ಯವನ್ನು ತೆಗೆದುಕೊಂಡು ಹೋಗಿ ಜಯಿಸಿದವನಾಗಲೀ

ಅಥವಾ ಆಡಳಿತವನ್ನು ಕೈಯಲ್ಲಿಟ್ಟುಕೊಂಡು ವ್ಯವಹರಿಸುತ್ತಿದ್ದವನಾಗಲೀ ಲಿಂಕನ್ನನ ಹಾಗೆ, ದ್ರೋಹಾಚರಣೆಯಲ್ಲೆಸಗಿದ್ದರೂ ಕೂಡ, ಪರಾಜಯಹೊಂದಿ ಸಂಕಟಕ್ಕೆ ಗುರಿಯಾಗಿದೆಯೆಂದು ದಕ್ಷಿಣವನ್ನು ಕ್ಷಮಿಸಿ ಅದಕ್ಕೆ ದಯೆಯನ್ನು ತೋರಿಸುತ್ತಿರಲಿಲ್ಲ. ಯುದ್ಧವು ನಿಲ್ಲದೆ ಸಾಗುತ್ತ ಸಾಗುತ್ತ ಕೆಲವರ ಮನಸ್ಸು ಕಲ್ಲಿನಂತಾಯಿತು. ಆದರೆ ತೊಂದರೆಯೂ ಶ್ರಮವೂ ಹೆಚ್ಚಿದಹಾಗೆ ಲಿಂಕನ್ನನ ಮನಸ್ಸು ಹೆಚ್ಚು ಹೆಚ್ಚಾಗಿ ಮೃದುಲನಾಯಿತು.

ದೇಶಾಂತರಗಳಲ್ಲಿಯೂ ಅವನಲ್ಲಿ ಜನರ ಗೌರವಕ್ಕೆ ಕೊರತೆಯಿಲ್ಲ. ಪ್ರಜಾಪ್ರಭುತ್ವದ ಸಂಬಂಧದಲ್ಲಿ ಲಿಂಕನ್ನನ ಹೆಸರು ಬರದಿರುವುದಿಲ್ಲ. ಆ ಅಂಶವನ್ನು ಕುರಿತು ಅವನು ಯಾವ ನಿಯಮವನ್ನೂ ವಿಸ್ತರಿಸಿ ಹೇಳಲಿಲ್ಲ. ಅವನ ದೇಶದಲ್ಲಿ ಪ್ರಜಾಪ್ರಭುತ್ವವು ಮೊದಲಿಂದಲೂ ನೆಲೆಗೊಂಡಿದ್ದಿತು. ಲಿಂಕನ್ನನು ಹುಟ್ಟಿದನು. ಹುಟ್ಟಿ, ಅಂತಹ ಪ್ರಭುತ್ವದಿಂದ ಪಡೆಯಬಹುದಾದ ಅನುಕೂಲಗಳನ್ನೆಲ್ಲಾ ಪಡೆದನು. ದೊಡ್ಡವನಾಗಿ ಪ್ರಭುತ್ವದ ವೈಶದ್ಯಗಳನ್ನೆಲ್ಲಾ ಪರಿಶೀಲಿಸಿದನು. ಕೆಲವು ನ್ಯೂನತೆಗಳಿದ್ದುವು. ಅವುಗಳನ್ನು ನೋಡಿ ಅವಮಾನ ಹೊಂದಲಿಲ್ಲ. ತನ್ನ ಕೈಗೆ ಅಧಿಕಾರ ದೊರೆತರೆ ಅವುಗಳನ್ನು ಸರಿಪಡಿಸುವುದಾಗಿ ಹೇಳಿಕೊಂಡನು. ಅಧಿಕಾರವು ಬಂದಿತು. ಆದರೆ ಏಕಾಏಕಿಯಾಗಿ ತಿದ್ದುಪಾಟುಗಳನ್ನು ಮಾಡಲಾಗಲಿಲ್ಲ. ಅಂತಹ ಪ್ರಯತ್ನವು ಅಸಾಧ್ಯವೆಂಬುದನ್ನು ಅವನು ಅರಿತಿದ್ದನು. ಕಾಲದೇಶಗಳನ್ನು ಮೊದಲು ಸರಿಪಡಿಸಿಕೊಂಡು ಬಳಿಕ ನ್ಯೂನತೆಗಳನ್ನು ಪರಿಹಾರ ಮಾಡಬೇಕಾಗಿದ್ದಿತು. ಹಾಗೆಯೇ ಮಾಡಿದನು. ತನ್ನ ದೇಶದಲ್ಲಿ ಪ್ರಚಾರದಲ್ಲಿದ್ದ ರಾಜ್ಯವಿಧಾನವು ಸರ್ವೋತ್ತಮವೆಂದು ಅವನು ಭಾವಿಸಿದ್ದನೋ ಇಲ್ಲವೋ ಹೇಳುವುದಕ್ಕಾಗುವುದಿಲ್ಲ. ಆದರೆ ಅವನ ಮನೋಗತವನ್ನು ಈ ಕೆಳಗಿನ ವಾಕ್ಯಗಳಿಂದ ತಿಳಿಯಬಹುದಾಗಿದ್ದಿತು: "As I would not be a slave, so I would not be a master. This expresses my idea of democracy. Whatever differs from this, to the extent of the difference, is no democracy.—*A. Lincoln.*"

———o———

# ಶುದ್ಧಾಶುದ್ಧ ಪತ್ರ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 3 | 28 | ಆವರು | ಅವರು |
| 6 | 14 | ನೈರ್ಮಲ್ಯವೆಂತಹದೆಂಬುದನ್ನೂ | ......ನ್ನು |
| 8 | 28 | ಎಲ್ಲರನ್ನು | ಎಲ್ಲರನ್ನೂ |
| 11 | 6 | ಮುಗಿದನು | ಮಲಗಿದನು |
| 15 | 20 | ತತ್ವಗಳನ್ನೂ | ತತ್ವಗಳನ್ನು |
| 16 | 19 | ಡಾಲರನ್ನೂ | ಡಾಲರನ್ನು, |
| 19 | 7 | ಆವಕಾಶವು | ಅವಕಾಶವು |
| 21 | 26 | ಅಬ್ರಮನಿಗೆ | ಅಬ್ರಹಾಮನಿಗೆ |
| ,, | 30 | ಒಪ್ಪಿಕೊಂಡನು | ಒಪ್ಪಿಕೊಂಡರು |
| 22 | 17 | ಸಾಹಸಕ್ಕೆಗಿ | ಸಾಹಸಕ್ಕೆ |
| 23 | 29 | ಹೂರಡುತ್ತಿದ್ದ | ಹೊರಡುತ್ತಿದ್ದ |
| 31 | 10 | ಸಹಾವಾಸದಲ್ಲಿರು | ಸಹವಾಸದಲ್ಲಿರು |
| 32 | 6 | ಎರಡನೆಯದ್ದು | ಎರಡನೆಯದು |
| ,, | 7 | ಆದ | ಆದ್ದ |
| ,, | 12 | ಜಾಕ್ಸನ್ನನ್ನ | ಜಾಕ್ಸನ್ನನ |
| 47 | 24 | ಹೆಚ್ಚಿನೆ | ಹೆಚ್ಚಿನ |
| 53 | 23 | ವ್ಯತ್ಯಸ್ಥ | ವ್ಯತ್ಯಸ್ತ |
| 55 | 7 | ವ್ಹಿಗ್ಗರು | ವ್ಹಿಗ್ಗರ |
| 58 | 23 | ಅಂತಃಕಲಹವೂ | ಅಂತಃಕಲಹವು |
| ,, | 25 | ನೋಡಿಗೂಳ್ಳುತ್ತ | ನೋಡಿಕೊಳ್ಳುತ್ತ |
| ,, | 33 | ಮತ್ತೂ | ಮತ್ತು |
| 59 | 29 | ಸಂಭವಿಸುದಕ್ಕೆ | ಸಂಭವಿಸುವುದಕ್ಕೆ |
| 62 | 6 | ಅಪ್ಪುರೊಳಗೆ | ಅಪ್ಪರೊಳಗೆ |
| 64 | 25 | ಮತ್ತೂ | ಮತ್ತು |
| 67 | 15 | god | God |
| 70 | 34 | priere | pine |
| 72 | 14 | ವ್ಯಾಜ್ಯವನ್ನೂ | ವ್ಯಾಜ್ಯವನ್ನು |
| ,, | 18 | ಗುಲಾಮನು | ಗುಲಾಮನೂ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 72 | 31 | ತಿಳಿದಿದ್ದರೂ | ತಿಳಿದಿದ್ದರು. |
| 74 | 11 | ಮಕ್ಕಳಿಬ್ಬರೂ | ಮಕ್ಕಳಿಬ್ಬರು |
| ,, | 17 | ಬಿಳಿಯಾವರಣವನ್ನೂ | ಬಿಳಿಯಾವರಣವನ್ನು |
| 76 | 16 | ಹತ್ತೂ | ಹತ್ತು |
| ,, | 17 | ,, | ,, |
| 78 | 3 | ದ್ಯಾಸ್ಯವನ್ನು | ದಾಸ್ಯವನ್ನು |
| ,, | 18 | ಸಲಿಸಿದರೋ | ಕಲಿಸಿದರೋ |
| ,, | 19 | ಗುಲಾಮನಾಗಿರ | ಗುಲಾಮಳಾಗಿರ |
| 79 | 5 | ಶಾಶ್ವಿತವಾಗಿ | ಶಾಶ್ವತವಾಗಿ |
| ,, | 6 | ....ಸುವುದು | ....ಸುವುದೂ |
| 80 | 20 | ತೋರಿಸುತ್ತಿದ್ದಾರೆಂದು | ತೋರಿಸುತ್ತಿದ್ದಾರೆಂದೂ |
| ,, | 21 | ವಹಿಸುವರೆಂದು | ವಹಿಸುವರೆಂದೂ |
| ,, | 25 | ಹತ್ತೂ | ಹತ್ತು |
| 81 | 21 | ವಲ್ಲದಂತೆ | ಇಲ್ಲದಂತೆ |
| 86 | 20 | ಆದರೂ | ಆದರೆ |
| 87 | 34 | ಸರ್ವೋಚಿತವ | ಸರ್ವೋಚಿತವಾ |
| 88 | 22 | ತರಬೇಕಾದವರೆಂತಲೇ | ತರಬೇತಾದವರೆಂತಲೇ |
| ,, | 30 | ಲಿಂಕನ್ನನು | ಲಿಂಕನ್ನನು |
| 89 | 2 | ಮತ್ತೂ | ಮತ್ತು |
| ,, | 15 | ವ್ಯತ್ಯಾಸ ಹೆಚ್ಚಾಗಿ | ಹೆಚ್ಚಾಗಿ ವ್ಯತ್ಯಾಸ |
| 99 | 26 | ಮತ್ತೂ | ಮತ್ತು |
| ,, | 29 | ,, | ,, |
| 103 | 11 | ಕೆಲಸ ಮಾಡಿ | ಕೆಲಸ ಮಾಡಿದ |
| 107 | 12 | ದೇಶಕಾಲವನ್ನು | ದೇಶಕಾಲಗಳನ್ನು |
| 108 | 3 | ಚಿತ್ತವೈಷಮ್ಯವು | ಚಿತ್ತವೈಷಮ್ಯವು |
| 119 | 26 | ದಕ್ಷಿಣ ದಂಗೆ.... | ದಕ್ಷಿಣದ ದಂಗೆ.... |
| 123 | 4 | ಸಂಸಾನಗಳಲ್ಲಿರುವ | ಸಂಸ್ಥಾನಗಳಲ್ಲಿರುವ |
| 139 | 1 | ಮಾರ್ಗವೂಂದನ್ನು | ಮಾರ್ಗವೊಂದನ್ನು |
| 140 | 22 | ನಿಶಯವೂ | ನಿಶ್ಚಯವೂ |
| 142 | 21 | ಒಳ್ಳೆಯ ನೆಂಬ | ಒಳ್ಳೆಯವನೆಂಬ |
| 147 | 6 | ತಾರೀಖಿನ | ತಾರೀಖು |
| 165 | 21 | ತಡೆವೆಯೂ | ತಡವೆಯೂ |
| 172 | 18 | ಬೋಗಾರ್ಡನಿಗೆ | ಬೋರ್ಗಾರ್ಡನಿಗೆ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 187 | 24 | ಸುರಿಕ್ಷಿತವಾಗಿ | ಸುರಕ್ಷಿತವಾಗಿ |
| 188 | 7 | ಅದರಂತಯೇ | ಅದರಂತೆಯೇ |
| 223 | 12 | ಪಶಿಮದ | ಪಶ್ಚಿಮದ |
| 225 | 2 | ತನ್ನ | ತನ್ನಲ್ಲಿ |
| 240 | 30 | ಹುಣೆದ್ದರೆ | ಹುಣ್ಣೆದ್ದರೆ |
| 244 | 24 | ನ್ಯಾಯಮಾರ್ಗ | ನ್ಯಾಯಮಾರ್ಗವ |
| 250 | 10 | ಹೊಗಿ | ಹೋಗಿ |
| 266 | 9 | ಸೈನ್ಯಿಕರಿಗೂ | ಸೈನಿಕರಿಗೂ |
| 267 | 20 | ಆವನ | ಅವನ |
| 276 | 11 | ತಿದು ಪಾಟು | ತಿದ್ದುಪಾಟು |
| 277 | 32 | ನಮ್ಮನೆ ಲ್ಲಾ | ನಮ್ಮನ್ನೆಲ್ಲಾ |
| 290 | 14 | ವಾಷಿಂಗ್ಟನ್ನಿನಯೂ | ವಾಷಿಂಗ್ಟನ್ನಿನಲ್ಲಿಯೂ |

